


# ಭೂ ವಿ ವ ರ ಣೆ

## ಎರಡನೆಯ ಪುಸ್ತಕ

ಮೈಸೂರು ಸಂಸ್ಥಾನದ ವಿದ್ಯಾ ಇಲಾಖೆಯ
ಡೆಪ್ಯುಟಿ ಡೈರೆಕ್ಟರವರಾದ
**ಕೆ. ಶ್ರೀನರಸಿಂಹಯ್ಯ, ಎಂ.ಎ., ಎಲ್.ಟಿ.**
ಅವರಿಂದ ರಚಿಸಲ್ಪಟ್ಟುದು

...ಮುದ್ರಣ, ೧೦,೦೦೦ ಪ್ರತಿಗಳು

...ಂಗಳೂರು ಸಿಟಿ:
... ಪ್ರೆಸ್, ಮೈಸೂರು ರೋಡ್
1928



959—28.

ಕ್ರಯ:



ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್
ಜಿ.ಸಿ.ಎಸ್.ಐ., ಜಿ.ಬಿ.ಇ. ಯವರು

B. M. Appa Reddy

Department of Public Instruction in Mysore

# GEOGRAPHY OF THE WORLD

## BOOK II

BY
K. SRINARASIMHAIYA, M.A., L.T.
Deputy Director of Public Instruction, Mysore



# ಭೂವಿವರಣೆ

## ಎರಡನೆಯ ಪುಸ್ತಕ

ಮೈಸೂರು ಸಂಸ್ಥಾನದ ವಿದ್ಯಾ ಇಲಾಖೆಯ
ಡೆಪ್ಯುಟಿ ಡೈರೆಕ್ಟರವರಾದ
**ಕೆ. ಶ್ರೀನರಸಿಂಹಯ್ಯ, ಎಂ.ಎ., ಎಲ್.ಟಿ.,**
ಅವರಿಂದ ರಚಿಸಲ್ಪಟ್ಟುದು

ಮೂರನೆಯ ಮುದ್ರಣ, ೧೦,೦೦೦ ಪ್ರತಿಗಳು

ಬೆಂಗಳೂರು ಸಿಟಿ:

ಬೆಂಗಳೂರು ಪ್ರೆಸ್, ಮೈಸೂರು ರೋಡ್

1928

## ಮುನ್ನುಡಿ

ಈ ಪುಸ್ತಕವನ್ನು ಬರೆದು ಏಳು ವರ್ಷಗಳಾದುವು. ಅಂದಿನಿಂದೀಚೆಗೆ ಯೂರೋಪ್ ಮತ್ತು ಆಫ್ರಿಕಾ ಖಂಡಗಳ ರಾಜಕೀಯ ವಿಭಾಗಗಳಲ್ಲಿ ಅನೇಕ ಬದಲಾವಣೆಗಳಾಗಿರುವುವು. ಅವುಗಳನ್ನೆಲ್ಲಾ ಮುಂದಣ ಮುದ್ರಣದಲ್ಲಿ ಕ್ರಮಪಡಿಸುವ ಏರ್ಪಾಡುಗಳು ನಡೆಯುತ್ತಿವೆ.

12–5–1928.

A. N. NARASIMHIA,
*Kannada Translator.*

# GENERAL PREFACE

If it has been felt long that there are no suitable Geographical text-books in Kannada, it is no wonder when the nature of the English books themselves are considered. Though the number of English books available is great, many of the older books contain long lists of names and unconnected and isolated facts which were "dry as dust" to the school boys of old who had to learn them merely by heart, while most of the modern books contain mathematical problems, tables of statistics and long lists of figures dealing with products, imports, exports, etc., together with numerous names which are drier still to the modern school boys. Even among the modern books written on a concentric plan, like those of Herbertson, many contain too numerous details of the geography of Europe and too few of the geography of India to be of real interest to the average Indian school-boy.

Geography as a subject of study is of very high scientific and practical value, and if it is taught to the school boys on a concentric plan with a judicious selection of material and simple style, it is bound to be productive of great cultural and practical benefit. But it has to be admitted, at the same time, that Geography is one of the driest subjects as taught in our schools at present.

To make up for this deficiency to a little extent, I have attempted to write a series of Geographical text-books in Kannada on a concentric plan, the first book dealing with the barest and simplest elements of the subject in outline, the second with more details, and the third with details sufficiently full to meet the needs of an educated man. In the exposition adopted in this series, great stress is laid on the cultural part of the subject and only such names as are really important are introduced in correlation with ideas so that there may be close links of association between the names and ideas. The stress laid on the cultural part may make these books appear difficult to the pupils, especially in the vernacular schools where no good text-books have been used so far and the teachers themselves have very little knowledge of the subject, but the use of this series would, it is hoped, render this

fear groundless and set up a fair standard of Geographical knowledge in our schools.

These books have been written on up-to-date lines. In each book, the introductory part deals with the general principles that underlie the Geographical description of the continents and the subsequent pages deal with the general description of each continent making use of these general principles. The description of the most important countries of the world and of the British possessions has been given sufficient prominence, while the rest has been generally slurred over with a mention of only such striking points as an educated man usually remembers. Further the description of each continent and country has been so presented as can be orally taught by an earnest teacher quite intelligently from maps without resorting to book teaching. The matter has been presented all-through in as simple and natural a manner as possible, and it is expected that the teaching of Geography from these books would place its teaching in schools on an efficient basis. The proposed introduction of science into the Middle School curriculum, consultation of modern English books by the teachers and geographical excursions would indeed make Geography the most popular subject of the class room.

The books of this series may perhaps be considered to be a little too bulky, but my experience of teaching this subject in all classes from the Infant Class to the Sixth Form emboldens me to feel confident that it is not really so. Book I presents the simplest elements of principles and includes only a very few names. Book II written on the same plan, presents the same principles a little more elaborated and includes only a few additional names. Repetition has often been risked in order to emphasize the scientific connection of the various parts of the description of each continent. Hence the student of second book would meet with familiar ideas and names at almost every turn and similar would be the case with the third book also.

These books are in no place a translation or an adaptation of any English book. All the latest books available on the subject have been freely consulted and the matter carefully selected and presented on a scientific basis in a manner easily intelligible to the readers.

Maps are not embodied in these books on account of the difficulties of the present condition of map printing in Kannada and it is intended to publish early a Companion Kannada Atlas on up-to-date lines. However a number of pictures and diagrams have been inserted in the introductory part of each book. As regards the pronunciation of names, I have considered it best to use the most familiar forms and those best adapted to the Kannada language. Some exercises and questions are given in Book I to indicate to the teachers the lines on which they might generally frame them. Foot-notes are also given to suggest to the teachers the special methods of teaching they might follow in dealing with several topics.

Book I is intended to be taught in the third and fourth year primary classes, following the teaching of the subject from "A Child's Geography" in the first and second year primary classes in the Kindergarten method. Such portions of the introduction as are not marked with an asterisk and the description of Asia may be taught in the third year class and the rest in the fourth year class. Book II is to be taught in the Middle School classes, according to the syllabuses laid down by the Department. Book III is intended for the use of the Kannada Upper Secondary classes, and it will contain statistics and figures required for higher study and avoided in the first two books advisedly. Book II may be used for consultation by the teachers of the Primary classes and Book III by the teachers of the Middle School classes.

While I have set a high ideal before me in writing this series, I am quite aware of its short-comings, specially as I had to do this work in the leisure hours that I could snatch during the years 1917—20 and crave the indulgence of the critics to condone my faults and to favour me with their constructive suggestions for the improvement of these books.

Bangalore,
29-10-1924.

K. SRINARASIMHAIYA.

# ಪೀಠಿಕೆ

ಈ ಎರಡನೆಯ ಪುಸ್ತಕವು ಮಿಡಲ್ ಸ್ಕೂಲ್ ತರಗತಿಗಳ ಉಪಯೋಗಕ್ಕಾಗಿ ಬರೆಯಲ್ಪಟ್ಟಿದೆ. ಪ್ರೈಮರಿ 3 ಮತ್ತು 4ನೆಯ ತರಗತಿಗಳಲ್ಲಿ ಮೊದಲನೆಯ ಪುಸ್ತಕದಿಂದ ಸ್ಥೂಲವಾಗಿ ಬೋಧಿಸಿರುವ ಸಾಮಾನ್ಯ ವಿವರಣೆಯು ಇಲ್ಲಿ ತಕ್ಕಷ್ಟು ವಿಶದವಾಗಿ ಕೊಡಲ್ಪಟ್ಟಿದೆ. ಈ ಪುಸ್ತಕವು ಸ್ವಲ್ಪ ದೊಡ್ಡದಾಗಿ ಕಂಡುಬಂದರೂ, ಅನೇಕ ವಿಷಯುಗಳೂ ಅನೇಕ ಹೆಸರುಗಳೂ ವಿದ್ಯಾರ್ಥಿಗಳಿಗೆ ಮೊದಲನೆಯ ಪುಸ್ತಕದಿಂದ ಪರಿಚಿತವಾಗಿರುವುವು. ಇಲ್ಲಿ ಹೊಸದಾಗಿ ಕೊಟ್ಟಿರುವ ವಿಷಯುಗಳೂ ಹೆಸರುಗಳೂ ಮೊದಲೇ ತಿಳಿದಿರುವುವುಗಳಿಗೆ ಸಂಬಂಧಿಸಲ್ಪಟ್ಟಿರುವುವು. ಈ ಪುಸ್ತಕದಲ್ಲಿ ಕೊಟ್ಟಿರುವ ಅಂಶಗಳನ್ನು ಇಲಾಖೆಯ ಪಾಠನಿಯಾಮಕ ಪಟ್ಟಿಯನ್ನನುಸರಿಸಿ ಮಿಡಲ್ ಸ್ಕೂಲಿನ ನಾಲ್ಕು ತರಗತಿಗಳಲ್ಲಿಯೂ ಹಂಚಿಕೊಳ್ಳಬಹುದು.

ಭೂವಿವರಣೆಯನ್ನು ಕ್ರಮವರಿತು ಬೋಧಿಸಿದರೆ ಲೋಕವ್ಯವಹಾರಕ್ಕೆ ಉಪಯುಕ್ತವಾದ ವಿಷಯುಗಳು ತಿಳಿಯುವುದಲ್ಲದೆ ವಿಶೇಷವಾಗಿ ಬುದ್ಧಿಸಂಸ್ಕಾರವೂ ಉಂಟಾಗುವುದು. ಪಾಶ್ಚಾತ್ಯ ದೇಶಗಳಲ್ಲಿ ಭೂವಿವರಣೆಯನ್ನು ಒಂದು ಶಾಸ್ತ್ರವನ್ನಾಗಿ ವಿಶ್ವವಿದ್ಯಾಲಯುಗಳಲ್ಲಿಯೂ ಬೋಧಿಸುವರು. ಆದರೆ ಈಗ ಸಾಮಾನ್ಯವಾಗಿ ನಮ್ಮಲ್ಲಿ ವಾಡಿಕೆಯುಲ್ಲಿರುವಂತೆ ಪ್ರತಿಯೊಂದು ಖಂಡದ ಅಥವಾ ದೇಶದ ಬೆಟ್ಟ, ನದಿ, ಪಟ್ಟಣ ಮೊದಲಾದುವುಗಳ ಹೆಸರುಗಳಲ್ಲಿ ಅನೇಕವನ್ನು ನೆನಪಿಟ್ಟರೆ ಬುದ್ಧಿ ಸಂಸ್ಕಾರವುಂಟಾಗಲಾರದು. ಭೂವಿವರಣೆಯನ್ನು ಶಾಸ್ತ್ರ ಕ್ರಮದಲ್ಲಿ, ಅಂದರೆ ಕಾರ್ಯಕಾರಣಗಳ ಪರಸ್ಪರ ಸಂಬಂಧವು ಚೆನ್ನಾಗಿ ತಿಳಿಯುವಂತೆ ಎಲ್ಲಾ ತರಗತಿಗಳಲ್ಲಿಯೂ ಬೋಧಿಸುವುದು ಆವಶ್ಯಕವು.

ಈ ಕ್ರಮವನ್ನನುಸರಿಸಿ ಭೂಪಟಗಳ ಸಹಾಯದಿಂದ ಮುಖ್ಯತಃ ಬೋಧಿಸಲು ಅನುಕೂಲಿಸುವ ರೀತಿಯುಲ್ಲಿ ಮೊದಲನೆಯ ಪುಸ್ತಕದಂತೆಯೇ ಈ ಪುಸ್ತಕವೂ ಬರೆಯಲ್ಪಟ್ಟಿದೆ. ಬುದ್ಧಿ ಸಂಸ್ಕಾರವನ್ನುಂಟುಮಾಡುವ ವಿಷಯುಗಳಿಗೆ ಹೆಚ್ಚು ಪ್ರಾಮುಖ್ಯವನ್ನು ಕೊಟ್ಟಿದೆ. ಈಗಿನ ಪುಸ್ತಕಗಳಲ್ಲಿ ಸಾಮಾನ್ಯವಾಗಿ ಕೊಟ್ಟಿರುವಂತೆ ಅನೇಕ ಹೆಸರುಗಳನ್ನು ಕೊಡದೆ ಬಹು ಮುಖ್ಯವಾದ ಹೆಸರುಗಳನ್ನು ಮಾತ್ರ ಕೊಟ್ಟಿದೆ. ಆದುದರಿಂದ ಈ ಪುಸ್ತಕವನ್ನು ಅನುಸರಿಸಿ ಭೂವಿವರಣೆಯನ್ನು ಬೋಧಿಸಿದರೆ ಈಗ ಲೋವರ್ ಸೆಕೆಂಡರಿ ಪರೀಕ್ಷೆಗೆ ಬರುವ ಅನೇಕ ವಿದ್ಯಾರ್ಥಿಗಳು ಈ ಪಾಠ ವಿಷಯದಲ್ಲಿ ತೋರಿಸುವ ಆಶ್ಚರ್ಯಕರವಾದ ಅಜ್ಞತೆಯು

ತಪ್ಪುವುದೆಂದು ನಿರೀಕ್ಷಿಸಲ್ಪಟ್ಟಿದೆ. ಕೈಗಾರಿಕೆ, ವ್ಯಾಪಾರಗಳೂ ಜನಗಳಿಗೆ ರಾಜಕೀಯ ವಿಷಯಗಳಲ್ಲಿ ಜವಾಬ್ದಾರಿಯೂ ಹೆಚ್ಚುತ್ತಿರುವ ಈಗಿನ ಕಾಲದಲ್ಲಿ ಭೂವಿವರಣೆಯ ಜ್ಞಾನವೂ ಅದರಿಂದುಂಟಾಗುವ ಬುದ್ಧಿಸಂಸ್ಕಾರವೂ ಅಗತ್ಯ ಬೇಕಾಗುವುವು.

ಈ ಪುಸ್ತಕವನ್ನು ಬೋಧಿಸುವಾಗ ಇನ್ನೂ ಹೆಚ್ಚು ವಿಷಯಗಳನ್ನು ತಿಳಿದಿರುವುದು ಉಪಾಧ್ಯಾಯರಿಗೆ ಆವಶ್ಯಕವು. ಮೂರನೆಯ ಪುಸ್ತಕವನ್ನೂ, ಇಂಗ್ಲಿಷು ಪುಸ್ತಕಗಳನ್ನೂ ಅವರು ಓದಿಕೊಂಡರೆ ಈ ಹೆಚ್ಚು ವಿಷಯಗಳು ತಿಳಿಯುವುವು.

ಈ ಪುಸ್ತಕದಲ್ಲಿ ಕೊಟ್ಟಿರುವ ವಿಷಯಗಳನ್ನು ಹುಡುಗರಿಂದ ಕಂಠಪಾಠ ಮಾಡಿಸದೆ ಭೂಪಟಗಳ ಸಹಾಯದಿಂದ ಶಾಸ್ತ್ರದ ಕ್ರಮದಲ್ಲಿ ಮುಖತಃ ಬೋಧಿಸುವುದು ಅತ್ಯಾವಶ್ಯಕವೆಂಬುದನ್ನು ಉಪಾಧ್ಯಾಯರು ಮುಖ್ಯವಾಗಿ ಮನಸ್ಸಿನಲ್ಲಿಡಬೇಕು. ತರಗತಿಯಲ್ಲಿ ಬೋಧಿಸಿದ ವಿಷಯಗಳನ್ನು ವಿದ್ಯಾರ್ಥಿಗಳೇ ಮನೆಯಲ್ಲಿ ಪುನರಾವರ್ತನೆ ಮಾಡಲು ಅನುಕೂಲಿಸುವುದಕ್ಕೋಸ್ಕರ ಈ ಪುಸ್ತಕವು ಸುಲಭವಾದ ಶೈಲಿಯಲ್ಲಿ ಬರೆಯಲ್ಪಟ್ಟಿದೆ.

ಈ ಪುಸ್ತಕದಲ್ಲಿ ಕೊಟ್ಟಿರುವ ವಿಷಯಗಳನ್ನು ಬೋಧಿಸುವುದರಲ್ಲಿ ಈಗ ಪಾಠಶಾಲೆಗಳಲ್ಲಿ ದೊರೆಯುವ ಭೂಪಟಗಳು ತಕ್ಕಮಟ್ಟಿಗೆ ಸಹಕಾರಿಗಳಾಗುವುವು. ಆದರೆ ಪ್ರತಿಯೊಂದು ಖಂಡದ ಬೆಳೆಗಳು, ಕೈಗಾರಿಕೆಗಳು, ಜನಸಾಂದ್ರತೆ ಮೊದಲಾದ ವಿಷಯಗಳನ್ನು ತೋರಿಸುವ ಭೂಪಟಗಳು ದೊರೆತರೆ ಮತ್ತಷ್ಟು ಅನುಕೂಲವಾಗುವುದು. ಆದುದರಿಂದ ಈ ಪಟಗಳನ್ನು ಒಳಗೊಂಡಿರುವ ಪುಸ್ತಕವೊಂದು ಜಾಗ್ರತೆಯಾಗಿ ಪ್ರಕಟಿಸಲ್ಪಡುವುದು. ಅದುವರೆಗೂ ಈಗ ದೊರೆಯುವ ಇಂಗ್ಲಿಷ್ ಪಟಗಳನ್ನು ಉಪಯೋಗಿಸಬಹುದು. ಒಂದು ಖಂಡದ ಅಥವಾ ದೇಶದ ಮೇಲ್ಮೈಯ್ಯ ಲಕ್ಷಣ, ಬೆಳೆಗಳು, ಕೈಗಾರಿಕೆಗಳು ಮೊದಲಾದುವನ್ನು ಬೋಧಿಸುವಾಗ ಉಪಾಧ್ಯಾಯರು ಆ ಪ್ರದೇಶದ ಆಕಾರವನ್ನು ಕಪ್ಪುಹಲಗೆಯಮೇಲೆ ಬರೆದು ವಿಷಯಗಳನ್ನು ಬೋಧಿಸಿದಹಾಗೆ ಒಂದೊಂದನ್ನಾಗಿ ಅದರಲ್ಲಿ ಗುರುತಿಸಿ ತೋರಿಸುವುದು. ಬೋಧಿಸಿದ ವಿಷಯಗಳು ವಿದ್ಯಾರ್ಥಿಗಳಿಗೆ ಚೆನ್ನಾಗಿ ತಿಳಿದು ನೆನಪಿನಲ್ಲಿ ನಿಲ್ಲಲು ಬಹು ಸಹಕಾರಿಯಾಗುವುದು. ವಿದ್ಯಾರ್ಥಿಗಳು ತಮ್ಮ ಪುಸ್ತಕಗಳಲ್ಲಿ ಆಕಾರವನ್ನು ಬರೆದುಕೊಂಡು ವಿಷಯಗಳನ್ನು ಗುರುತುಮಾಡಿಕೊಳ್ಳುವಂತೆ ಮಾಡಬೇಕು. ಸಾಮಾನ್ಯ ವಿವರಣೆಯಲ್ಲಿ ಕೊಟ್ಟಿರುವ ಆಕೃತಿಗಳನ್ನು ಕೂಡ ಕಪ್ಪುಹಲಗೆಯಮೇಲೆ ಬರೆಯುವುದು ಉತ್ತಮವು.

ಬೆಂಗಳೂರು,<br>29–10–1924.

ಕೆ. ಶ್ರೀನರಸಿಂಹಯ್ಯ.

# ವಿಷಯ ಸೂಚಿಕೆ



# ಚಿತ್ರಗಳು

ABBREVIATIONS:—

B.B. = ಬಾಲಭೂವಿವರಣೆ.

B.I. = Mr. Raghunatha Rao's ಭೂವಿವರಣೆ—Part I.

Sk. = My own sketches.

p. = page.

# ಭೂವಿವರಣೆ

---

## ಎರಡನೆಯ ಪುಸ್ತಕ

---

### ಸಾಮಾನ್ಯ ವಿವರಣೆ

### ಭೂವಿವರಣೆ

1. **'ಭೂವಿವರಣೆ' ಎಂದರೇನು?**—ಪ್ರಪಂಚದಲ್ಲಿರುವ ನಾನಾ ಪ್ರದೇಶಗಳು ಒಂದೇ ಬಗೆಯಾದ ಲಕ್ಷಣಗಳುಳ್ಳವುಗಳಾಗಿಲ್ಲ; ಅವುಗಳ ಮೇಲ್ಮೈಯ್ಯ ಲಕ್ಷಣಗಳಲ್ಲಿಯೂ, ವಾಯುಗುಣ ಮತ್ತು ಮಳೆಗಳ ಸ್ಥಿತಿಗಳಲ್ಲಿಯೂ, ಸನ್ನಿವೇಶ, ಖನಿಜ, ಜಲಮಾರ್ಗ ಮೊದಲಾದುವುಗಳ ಸಂಪತ್ತಿನಲ್ಲಿಯೂ ವ್ಯತ್ಯಾಸಗಳು ಕಂಡುಬರುವುವು; ಆಯಾ ಪ್ರದೇಶಗಳಲ್ಲಿರುವ ಜನಗಳು ಅಲ್ಲಿನ ಈ ಸ್ವಾಭಾವಿಕವಾದ ಆನುಕೂಲ್ಯ ಪ್ರಾತಿಕೂಲ್ಯಗಳನ್ನು ಅನುಸರಿಸಿ ಕೃಷಿ, ಕೈಗಾರಿಕೆ ಮತ್ತು ವ್ಯಾಪಾರ ಮೊದಲಾದ ಉದ್ಯೋಗಗಳನ್ನು ಕಲ್ಪಿಸಿಕೊಂಡು ತಮ್ಮ ವಿದ್ಯಾಭ್ಯಾಸಕ್ಕೂ ಕುಶಲತೆಗೂ ತಕ್ಕಂತೆ ತಮ್ಮ ನಾಗರಿಕತೆಯನ್ನು ವೃದ್ಧಿಪಡಿಸಿಕೊಂಡು ವಾಸಮಾಡುತ್ತಲಿರುವರು. ಪ್ರಪಂಚದ ನಾನಾ ಪ್ರದೇಶಗಳಲ್ಲಿ ಹೀಗೆ ತೋರಿಬರುವ ಸ್ವಾಭಾವಿಕ ಲಕ್ಷಣಗಳನ್ನೂ ಮತ್ತು ಅಲ್ಲಿ ವಾಸಮಾಡುವ ಜನರ ಉದ್ಯೋಗ, ಐಶ್ವರ್ಯ, ನಾಗರಿಕತೆ ಮೊದಲಾದ ವಿಷಯಗಳನ್ನೂ ಸಕಾರಣವಾಗಿ ವಿವರಿಸುವ ಶಾಸ್ತ್ರಕ್ಕೆ **'ಭೂವಿವರಣೆ'** ಎಂದು ಹೆಸರು.

ಪ್ರಕೃತಿಯ ವಿಷಯದಲ್ಲಿ ಅಥವಾ ಜನಗಳ ವಿಷಯದಲ್ಲಿ ತೋರಿಬರುವ ಕೆಲವು ಸಾಮಾನ್ಯ ವಿಷಯಗಳನ್ನು ಕಾರ್ಯಕಾರಣಗಳು ಚೆನ್ನಾಗಿ ತೋರಿಬರುವಂತೆ ಕ್ರಮಪಡಿಸಿ ವಿವರಿಸುವುದೇ ಶಾಸ್ತ್ರವು. ಭೂವಿವರಣೆಯು ಇಂತಹ ಶಾಸ್ತ್ರಗಳಲ್ಲಿ ಒಂದಾಗಿರುವುದು. ಒಂದು ಪ್ರದೇಶದ ಸಾಮಾನ್ಯ ಲಕ್ಷಣಗಳು ಯಾವುವು? ಅವುಗಳಿಂದ ಅಲ್ಲಿನ ಜನಗಳಿಗೆ ಆನುಕೂಲ್ಯ ಪ್ರಾತಿಕೂಲ್ಯಗಳೇನಿರಬಹುದು? ಆ ಜನರ ತಿಳುವಳಿಕೆಯೂ ಕುಶಲತೆಯೂ ಹೇಗಿರಬಹುದು? ಅವರು ಎಷ್ಟರ ಮಟ್ಟಿಗೆ ಈ ಅನುಕೂಲಗಳನ್ನು ಉಪಯೋಗಿಸಿಕೊಂಡು ಪ್ರತಿಕೂಲಗಳನ್ನು ನಿವಾರಿಸಿಕೊಂಡು ಹೇಗೆ ಜೀವಿಸುತ್ತಲಿರುವರು? ಇವೇ ಮೊದಲಾದ

ವಿಷಯಗಳನ್ನು ಶಾಸ್ತ್ರ ಕ್ರಮದಲ್ಲಿ ವಿವರಿಸುವುದೇ ಭೂವಿವರಣೆಯ ಉದ್ದೇಶವಾಗಿರುವುದು.

**2. ಭೂವಿವರಣೆಯನ್ನು ಓದುವುದರ ಆವಶ್ಯಕತೆ.**—ಈಗಿನ ಕಾಲದಲ್ಲಿ ವಿಜ್ಞಾನ ಶಾಸ್ತ್ರಗಳ ಜ್ಞಾನವು ಜನಗಳಲ್ಲಿ ಹೆಚ್ಚಿ ಹಡಗು, ರೈಲುಗಾಡಿಗಳು, ವಿಮಾನ, ಟೆಲಿಗ್ರಾಫ್, ತಂತಿಯಿಲ್ಲದ ಟೆಲಿಗ್ರಾಫ್ ಮೊದಲಾದ ಸಾಧನಗಳು ಕಲ್ಪಿತವಾಗಿರುವುದರಿಂದ ನಮ್ಮ ದೇಶಕ್ಕೂ ಇತರ ದೇಶಗಳಿಗೂ ವಿಶೇಷವಾಗಿ ವ್ಯಾಪಾರವು ನಡೆಯುವುದಲ್ಲದೆ ಇತರ ದೇಶೀಯರು ಇಲ್ಲಿಗೆ ಬರುವುದೂ ನಮ್ಮ ದೇಶೀಯರು ಇತರ ದೇಶಗಳಿಗೆ ಹೋಗುವುದೂ ರೂಢಿಯಾಗಿದೆ. ನಮ್ಮ ದೇಶವು ಬ್ರಿಟಿಷ್ ಜನಗಳಿಂದ ಆಳಲ್ಪಡುತ್ತಲಿರುವುದರಿಂದ ಇಂಗ್ಲಿಷ್ ಭಾಷೆಯೂ ಪಾಶ್ಚಾತ್ಯ ಶಾಸ್ತ್ರಗಳೂ ನಮ್ಮ ವಿಶ್ವವಿದ್ಯಾಲಯಗಳಲ್ಲಿಯೂ ಸ್ಕೂಲುಗಳಲ್ಲಿಯೂ ಬೋಧಿಸಲ್ಪಟ್ಟು ಪ್ರಚಾರಕ್ಕೆ ಬರುತ್ತಿರುವುವು. ಇತರ ದೇಶದವರ ಸಂಬಂಧದಿಂದ ನಮ್ಮ ದೇಶೀಯರಲ್ಲಿ ಉದ್ಯೋಗ, ವ್ಯಾಪಾರ, ನಡೆನುಡಿ ಮತ್ತು ನಾಗರಿಕತೆಗಳಲ್ಲಿ ಅನೇಕ ಬದಲಾವಣೆಗಳುಂಟಾಗುತ್ತಿರುವುವು. ಆದುದರಿಂದ ನಾವು ನಮ್ಮ ದೇಶದ ವಿಷಯಗಳನ್ನಲ್ಲದೆ ಇತರ ದೇಶಗಳ ವಿಷಯಗಳನ್ನು ಕೂಡ ತಿಳಿಯುವುದು ಆವಶ್ಯಕವಾಗಿದೆ. ಈ ತಿಳುವಳಿಕೆಯಿಲ್ಲದೆ ನಾವು ಐಶ್ವರ್ಯದಲ್ಲಿಯಾಗಲಿ ನಾಗರಿಕತೆಯಲ್ಲಿಯಾಗಲಿ ಉಚ್ಛ್ರಾಯ ಸ್ಥಿತಿಗೆ ಬರುವುದು ಕಷ್ಟ. ಇದಲ್ಲದೆ ತಕ್ಕಮಟ್ಟಿಗೆ ಭೂವಿವರಣೆಯನ್ನು ತಿಳಿಯದಿದ್ದರೆ ನಾವು ಓದುವ ಪುಸ್ತಕಗಳಲ್ಲಿಯೂ ವರ್ತಮಾನ ಪತ್ರಿಕೆಗಳಲ್ಲಿಯೂ ಇರುವ ಅನೇಕ ವಿಷಯಗಳನ್ನು ತಿಳಿಯುವುದೂ ಕೂಡ ನಮಗೆ ಕಷ್ಟವಾಗುವುದು.

## II. ಭೂಮಿಯ ಆಕಾರ, ಪರಿಮಾಣ ಮತ್ತು ಚಲನೆಗಳು

**3. ಭೂಮಿಯ ಆಕಾರ.**—ಭೂಮಿಯು ಗೋಳಾಕಾರವಾಗಿದೆ ಎಂಬುದನ್ನು ತಿಳಿಯಲು ನಾಲ್ಕು ಕಾರಣಗಳು ನಮಗೆ ತಿಳಿದಿರುವುವು.

(1) ನಾವು ಸಮುದ್ರ ತೀರದಲ್ಲಿ ನಿಂತು ಒಂದು ಹಡಗು ಬರುವುದನ್ನು ನೋಡುತ್ತಿದ್ದರೆ, ಮೊದಲು ಅದರ ಮೇಲ್ಭಾಗವು ಮಾತ್ರ ಕಾಣಿಸುವುದು; ಅದು ಸಮೀಪಕ್ಕೆ ಬಂದಹಾಗೆಲ್ಲ, ಮೊದಲು ಮಧ್ಯ ಭಾಗವೂ ಕೊನೆಗೆ ಅದರ ಕೆಳಭಾಗವೂ ಕಾಣಿಸುವುವು.

(2) ಚಂದ್ರಗ್ರಹಣ ಕಾಲದಲ್ಲಿ ಚಂದ್ರನ ಮೇಲೆ ಬೀಳುವ ಭೂಮಿಯ ನೆರಳು ಗುಂಡಾಗಿರುವುದನ್ನು ನಾವು ನೋಡಬಹುದು.

(3) ನಾವು ಒಂದೂರಿನಿಂದ ಹೊರಟು ಒಂದೇ ದಿಕ್ಕನ್ನು ಹಿಡಿದು ದಾರಿಯಲ್ಲಿ ಅಡ್ಡವಾಗಿ ಸಿಕ್ಕುವ ಬೆಟ್ಟ, ನದಿ, ಸಮುದ್ರ ಮೊದಲಾದುವನ್ನು ದಾಟಿಕೊಂಡು ಹೋಗುತ್ತಿದ್ದರೆ, ಕೊನೆಗೆ ಮೊದಲು ಹೊರಟ ಸ್ಥಳಕ್ಕೆ ಬಂದು

ಸೇರುವೆವು. ನಮ್ಮ ದೇಶದವರು ಕೆಲವರು ಬೊಂಬಾಯಿಂದ ಪಶ್ಚಿಮಾಭಿ ಮುಖವಾಗಿ ಹೊರಟು, ಸೂಯಜ್ ಕಾಲುವೆ, ಜಿಬ್ರಾಲ್ಟರ್ ಜಲಸಂಧಿಗಳ ಮಾರ್ಗವಾಗಿ ಇಂಗ್ಲೆಂಡನ್ನು ಸೇರಿ, ಅಲ್ಲಿಂದ ಮುಂದೆ ಪ್ರಯಾಣ ಮಾಡಿ ಅಮೆರಿಕ ಖಂಡದ ನ್ಯೂಯಾರ್ಕ್ ಅಥವಾ ಕ್ವಿಬೆಕ್ ಪಟ್ಟಣವನ್ನು ಸೇರಿ, ಅಲ್ಲಿಂದ ಸಾನ್‌ಫ್ರಾನ್‌ಸಿಸ್ಕೊ ಅಥವಾ ವಾನ್‌ಕೂವರ್‌ನಿಂದ ಪಶ್ಚಿಮಕ್ಕೆ ಹೊರಟು, ಜಪಾನನ್ನು ಸೇರಿ, ಅಲ್ಲಿಂದ ಕಲ್ಕತ್ತ ಅಥವಾ ಮದರಾಸಿಗೆ ಬಂದು ತಲಪಿರುವುದನ್ನು ನೀವು ಕೇಳಿರಬಹುದಲ್ಲವೆ? ಭೂಮಿಯು ಚಪ್ಪಟೆಯಾಗಿದ್ದ ಪಕ್ಷದಲ್ಲಿ ಅವರಿಗೆ ಅದರ ಕೊನೆಯು ಕಂಡುಬಂದು ಮುಂದಕ್ಕೆ ಹೋಗಲು ಮಾರ್ಗ ತೋರದಂತೆ ಆಗುತ್ತಿತ್ತು. ಆದುದರಿಂದ ಭೂಮಿಯು ನಿಜವಾಗಿಯೂ ಗುಂಡಾಗಿದೆ ಎಂದು ತಿಳಿಯಬಹುದು.

(4) ಆಕಾಶದಲ್ಲಿ ನಮಗೆ ಕಾಣುವ ನಕ್ಷತ್ರಗಳೂ ಗ್ರಹಗಳೂ ಗುಂಡಾಗಿರುವುವು; ಆದುದರಿಂದ ಭೂಗ್ರಹವೂ ಗುಂಡಾಗಿಯೇ ಇರಬಹುದು.

(5) ಈಗ ಮತ್ತೊಂದು ಕಾರಣವನ್ನು ನೆನಪಿನಲ್ಲಿಡಬಹುದು. ಸೂರ್ಯನು ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ಏಕಕಾಲದಲ್ಲಿ ಉದಯಿಸುವುದಿಲ್ಲ. ಇದು ರೇಖಾಂಶಗಳಿಗನುಗುಣವಾಗಿ ಬದಲಾಯಿಸುವುದು. ಭೂಮಿಯು ಚಪ್ಪಟೆಯಾಗಿದ್ದರೆ ಎಲ್ಲಾ ಸ್ಥಳಗಳಿಗೂ ಒಂದೇ ಹೊತ್ತಿನಲ್ಲಿ ಸೂರ್ಯೋದಯವು ಆಗುತ್ತಿತ್ತು.

ಭೂಮಿಯ ಮೇಲೆ ಎತ್ತರವಾದ ಪರ್ವತಗಳೂ ಆಳವಾದ ಸಮುದ್ರಗಳೂ ಇದ್ದರೂ ಭೂಮಿ ಗ್ರಹದ ಗೋಳಾಕಾರವು ವ್ಯತ್ಯಾಸವಾಗುವುದಿಲ್ಲ. ಪ್ರಪಂಚದಲ್ಲೆಲ್ಲಾ ಎತ್ತರವಾದ ಮೌಂಟ್ ಎವರೆಸ್ಟು, 29,002 ಅಡಿ, ಅಂದರೆ ಸುಮಾರು 5½ ಮೈಲಿ ಎತ್ತರವಿರುವುದು; ಅತ್ಯಂತ ಆಳವಾದ ಸಮುದ್ರ ಭಾಗವು ಪೆಸಫಿಕ್ ಸಾಗರದಲ್ಲಿ ಲೆಡ್ರೋನ್ ದ್ವೀಪಗಳ ಬಳಿಯಲ್ಲಿರುವ ಚಾಲೆಂಜರ್ ಡೀಪ್ ಎಂಬುದು; ಇದು 31,600 ಅಡಿ, ಅಂದರೆ ಸುಮಾರು 6 ಮೈಲಿ ಆಳವಿರುವುದು. ಆದರೆ ಭೂಮಿಯ ವ್ಯಾಸರೇಖೆಯು 7,926 ಮೈಲಿಗಳಷ್ಟು ಉದ್ದವಾಗಿರುವುದು. ಆದುದರಿಂದ ಇವುಗಳ ಪ್ರಮಾಣವು 1 : 1,300ಕ್ಕೆ ಹೆಚ್ಚಿಲ್ಲದೆ ಇರುವುದು. ನೀವು ಒಂದು ರಸ್ತೆಯಲ್ಲಿ 1,300 ಅಡಿ ದೂರ ಹೋಗುವಾಗ ರಸ್ತೆಯು ಒಂದು ಅಡಿ ಮಾತ್ರ ತಗ್ಗಾದರೆ ಅಥವ ಎತ್ತರವಾದರೆ ರಸ್ತೆಯು ಇಳಿಜಾರಾಗಿರುವಂತೆ ತೋರುವುದೇ ಇಲ್ಲವೆಂಬ ನಿಮ್ಮ ಅನುಭವದಿಂದ ಭೂಮಿಯ ಮೇಲ್ಮೈಯ ತಗ್ಗು ದಿಣ್ಣೆಗಳಿಂದ ಅದರ ಗೋಳಾಕಾರವು ವ್ಯತ್ಯಾಸವಾಗುವುದಿಲ್ಲವೆಂಬ ವಿಷಯವನ್ನು ಸುಲಭವಾಗಿ ಊಹಿಸಬಹುದು.

**4. ಭೂಮಿಯ ಪರಿಮಾಣ.**—ಸರ್ವೇ ಇಲಾಖೆಯವರು ನಮ್ಮ ಜಮೀನುಗಳನ್ನು ಸರಪಣಿಗಳಿಂದ ಅಳೆಯುವ ಹಾಗೆಯೇ ದೇಶಗಳನ್ನೂ ಅಳತ್ತೆ

ಮಾಡಿರುವರು. ಆದರೆ ಅಗಾಧವಾದ ಭೂಭಾಗಗಳನ್ನೂ ಸಾಗರಗಳನ್ನೂ ಹೀಗೆಯೇ ಅಳತೆಮಾಡಲು ಸಾಧ್ಯವಿಲ್ಲ. ಆದುದರಿಂದ ಶಾಸ್ತ್ರಜ್ಞರು ಖಗೋಳ ಶಾಸ್ತ್ರದ ಸಹಾಯದಿಂದ ಭೂಮಿಯ ಸುತ್ತಳತೆ, ಅಡ್ಡಳತೆ, ವಿಸ್ತೀರ್ಣ ಇವು ಗಳನ್ನು ಕಂಡುಹಿಡಿಯುವರು. ಭೂಮಿಯ ಅಡ್ಡಳತೆ, ಭೂಗರ್ಭದ ಮಧ್ಯದಳತೆ ಅಥವಾ **ವ್ಯಾಸರೇಖೆಯು** 7,926 ಮೈಲಿಗಳು, ಸುತ್ತಳತೆ ಅಥವಾ **ಪರಿಧಿಯು** 24,900 ಮೈಲಿಗಳು, ಮೇಲ್ಮೈಯ್ಯ **ವಿಸ್ತೀರ್ಣವು** 19,70,00,000 ಚದರ ಮೈಲಿಗಳು. ಒಂದು ಘಂಟೆಗೆ 40 ಮೈಲಿ ಹೋಗುವ ಎಕ್ಸ್‌ಪ್ರೆಸ್ ರೈಲು ಗಾಡಿಯು ಅಹೋರಾತ್ರವೂ ಎಡೆಬಿಡದೆ ಭೂಮಿಯ ಸುತ್ತಲೂ ನೇರವಾಗಿ ಹೋಗಬಹುದಾದರೆ, ಅದು ಭೂಮಿಯನ್ನು ಒಂದು ಸಲ ಪ್ರದಕ್ಷಿಣೆ ಮಾಡಿಕೊಂಡು ಬರಲು 27 ದಿನಗಳಾಗುವುವು. ಲಂಡನ್ ಪಟ್ಟಣದಿಂದ ಕನಡಾ ರಾಜ್ಯಕ್ಕೆ ಸಮುದ್ರದ ಮೇಲೆ ಪ್ರಯಾಣಮಾಡಿ ಕ್ವಿಬೆಕ್ಕಿಗೆ ಹೋಗಿ, ಅಲ್ಲಿಂದ ರೈಲಿನಲ್ಲಿ ಪಶ್ಚಿಮ ತೀರವನ್ನು ಸೇರಿ, ವಾನ್‌ಕೂವರ್‌ನಿಂದ ಸಮುದ್ರ ಮಾರ್ಗ ವಾಗಿ ಜಪಾನ್ ದೇಶದ ಆಚೆ ವ್ಲಾಡಿವೊಸ್ಟಾಕ್ ಪಟ್ಟಣಕ್ಕೆ ಹೋಗಿ, ಅಲ್ಲಿಂದ ರೈಲಿನಲ್ಲಿ ಮಾಸ್ಕೋ ಮಾರ್ಗವಾಗಿ ಕೆಲೇ ಪಟ್ಟಣಕ್ಕೆ ಬಂದು, ಅಲ್ಲಿಂದ ಸಮುದ್ರ ಮಾರ್ಗವಾಗಿ ಲಂಡನ್ನಿಗೆ ಮೆಯಿಲ್ ಜಹಜುಗಳಲ್ಲಿ ಮತ್ತು ಮೆಯಿಲ್ ರೈಲುಗಾಡಿಗಳಲ್ಲಿಯೆ ಜಾಗ್ರುತೆಯಾಗಿ ಪ್ರಯಾಣಮಾಡಿ ಹಿಂದಿರುಗಿ ಬರುವುದಕ್ಕೆ ಸುಮಾರು 44 ದಿನಗಳಾಗುವುವು. ನಮ್ಮ ಇಂಡಿಯಾ ದೇಶದಷ್ಟು ವಿಸ್ತೀರ್ಣವುಳ್ಳ 125 ದೇಶಗಳನ್ನು ಒಂದರ ಸಮೀಪದಲ್ಲಿ ಒಂದರಂತೆ ಇಟ್ಟರೆ ಭೂಮಿಯ ಮೇಲ್ಮೈಯ್ಯ ವಿಸ್ತಾರದಷ್ಟಾಗುವುದು.

ಭೂಮಿಯು ಸಂಪೂರ್ಣವಾಗಿ ಗೋಳಾಕಾರವಾಗಿಲ್ಲ. ದಕ್ಷಿಣೋತ್ತರ ಮೇರುಗಳ ಸಮೀಪದಲ್ಲಿ ಸ್ವಲ್ಪ ಚಪ್ಪಟೆಯಾಗಿಯೂ ಮಧ್ಯಭಾಗದಲ್ಲಿ ಸ್ವಲ್ಪ ಉಬ್ಬಿಕೊಂಡು ಸ್ವಲ್ಪ ಮಟ್ಟೆಗೆ ಆಕಾರದಲ್ಲಿ **ಕಿತ್ತಳೆಹಣ್ಣಿನಂತೆಯೂ** ಇರುವುದು. ಇದರಿಂದ ಇದರ ವ್ಯಾಸರೇಖೆಯು ಮೇರುವಿನಿಂದ ಮೇರುವಿಗೆ 7,899 ಮೈಲಿ ಗಳು ಮಾತ್ರವಿರುವುದು ; ಮಧ್ಯ ಭಾಗದಲ್ಲಿ 27 ಮೈಲಿಗಳು ಹೆಚ್ಚಾಗಿರುವುದು. ಈ 27 ಮೈಲಿಗಳ ವ್ಯತ್ಯಾಸದಿಂದ ಭೂಮಿಯ ಗೋಳಾಕಾರವು ಕಂಡಹಾಗೆ ವ್ಯತ್ಯಾಸವಾಗುವುದಿಲ್ಲವೆಂಬುದನ್ನು ನೀವೆ ಊಹಿಸಬಲ್ಲಿರಿ.

### 5. ಭೂಮಿಯು ಸೂರ್ಯನಿಗೂ ಇತರ ಗ್ರಹಗಳಿಗೂ ಹೇಗೆ ಸಂಬಂಧಿಸಿರುವುದು?

ಭೂಮಿಯೂ ಇತರ ಅನೇಕ ಗ್ರಹಗಳೂ ಸೂರ್ಯನ ಆಕರ್ಷಣ ಶಕ್ತಿಯಿಂದ ಸೂರ್ಯನ ಸುತ್ತಲೂ ತಮ್ಮ ತಮ್ಮ ಪಥಗಳಲ್ಲಿ ಸುತ್ತುತ್ತಲಿರುವುವು. ಸೂರ್ಯನು ಭೂಮಿಗೆ ಸುಮಾರು 9 ಕೋಟಿ 30 ಲಕ್ಷ ಮೈಲಿಗಳ ದೂರದಲ್ಲಿರುವನು. ಸೂರ್ಯನು ಭೂಮಿಗಿಂತ ಗಾತ್ರದಲ್ಲಿ 13 ಲಕ್ಷ ಪಾಲೂ, ಭಾರದಲ್ಲಿ 3 ಲಕ್ಷ

ಪಾಲೂ ಅಧಿಕನಾಗಿದ್ದಾನೆ. ಸೂರ್ಯಮಂಡಲದಲ್ಲಿ ವಿಪರೀತ ಶಾಖವಿರುವುದು; ಕಲ್ಲು ಮಣ್ಣುಗಳೂ ಕೂಡ ಕರಗಿ ವಾಯು ರೂಪದಲ್ಲಿರುವುವು. ಆದುದರಿಂದ ಸೂರ್ಯನು ಸ್ವಯಂಪ್ರಕಾಶಮಯನಾಗಿ ಭೂಮಿಗೂ ಇತರ ಗ್ರಹಗಳಿಗೂ ಪ್ರಕಾಶವನ್ನುಂಟುಮಾಡುವನು.




ಚಿತ್ರ 1

ಸೂರ್ಯನ ಸುತ್ತಲೂ ಸುತ್ತುವ ಗ್ರಹಗಳಲ್ಲಿ ಭೂಮಿ, ಅಂಗಾರಕ, ಬುಧ, ಬೃಹಸ್ಪತಿ, ಶುಕ್ರ, ಶನಿ, ಯೂರನಸ್ ಮತ್ತು ನೆಪ್ಚ್ಯೂನ್ ಇವು ಮುಖ್ಯವಾದುವು. ಇವುಗಳೆಲ್ಲ ಭೂಮಿಯಂತೆಯೇ ಗುಂಡಾಗಿರುವುವು. ಸೂರ್ಯನಿಂದ ಪ್ರಕಾಶವನ್ನು ಪಡೆಯುವುವು. ಸೂರ್ಯನ ಸುತ್ತಲೂ ಇವು ಹೋಗುವ ಮಾರ್ಗ ಅಥವಾ ಪಥಗಳನ್ನು ಈ ಹಿಂದಿನ ಚಿತ್ರದಲ್ಲಿ ತೋರಿಸಿರುವುದು. ಗ್ರಹದ ಹೆಸರಿನ ಪಕ್ಕದಲ್ಲಿ ಸೂಚಿಸಿರುವ ಸಂಖ್ಯೆಯು ಅದು ಸೂರ್ಯನನ್ನು ಒಂದು ಸಲ ಸುತ್ತುವುದಕ್ಕೆ ಹಿಡಿಯುವ ಕಾಲವನ್ನು ಸೂಚಿಸುತ್ತದೆ.

ಚಂದ್ರ ಗ್ರಹವು ಭೂಮಿಯ ಸುತ್ತಲೂ ಸುತ್ತುವುದು ; ಇದು ಗಾತ್ರದಲ್ಲಿ ಭೂಮಿಯ $\frac{1}{೪೮}$ ರಷ್ಟು ಮಾತ್ರವಿರುವುದು. ಇದು ಭೂಮಿಗೆ ಉಪಗ್ರಹವು. ಹೀಗೆಯೇ ಇತರ ಗ್ರಹಗಳಿಗೂ ಕೆಲವು ಉಪಗ್ರಹಗಳಿರುವುವು.

ಗ್ರಹಗಳು ತಮ್ಮ ತಮ್ಮ ಪಥಗಳಲ್ಲಿ ಸೂರ್ಯನ ಸುತ್ತಲೂ ಸುತ್ತುವುದಕ್ಕೆ ಸೂರ್ಯನ ಆಕರ್ಷಣ ಶಕ್ತಿಯೇ ಕಾರಣವಾಗಿದೆ. ಒಂದು ಪದಾರ್ಥವು ಮತ್ತೊಂದು ಪದಾರ್ಥವನ್ನು ತನ್ನ ಕಡೆಗೆ ಎಳೆಯುವುದು ಸಹಜವಾಗಿರುವುದು ; ಹೀಗೆ ಪದಾರ್ಥಗಳು ಒಂದನ್ನೊಂದು ಆಕರ್ಷಿಸುವುದರಲ್ಲಿ ಯಾವ ಪದಾರ್ಥವು ದೊಡ್ಡದೋ ಅದರ ಶಕ್ತಿಯೇ ಪ್ರಬಲವಾಗಿ ತೋರುವುದು. ಸೂರ್ಯನಿಗೂ ಗ್ರಹಗಳಿಗೂ ಸಹಜವಾದ ಆಕರ್ಷಣ ಶಕ್ತಿಯುಂಟು; ಸೂರ್ಯನು ಗ್ರಹಗಳಿಗಿಂತ ವಿಪರೀತ ದೊಡ್ಡವನಾಗಿರುವುದರಿಂದ ಅವುಗಳನ್ನು ಆಕರ್ಷಿಸಿ ಅವುಗಳ ಪಥಗಳಲ್ಲಿ ಹಿಡಿದಿರುವನು ; ಗ್ರಹಗಳಿಗೂ ಆಕರ್ಷಣ ಶಕ್ತಿ ಇರುವುದರಿಂದ ಅವುಗಳ ಗಾತ್ರವು ಹೆಚ್ಚಾದಷ್ಟು ಅವುಗಳ ಪಥವು ಸೂರ್ಯನಿಗೆ ದೂರವಾಗಿರುವುದು. ಹೀಗೆಯೆ ಗ್ರಹಗಳು ತಮಗಿಂತ ಬಹಳ ಚಿಕ್ಕದಾಗಿರುವ ತಮ್ಮ ಉಪಗ್ರಹಗಳನ್ನು ಆಕರ್ಷಿಸುವುವು.

**ನಕ್ಷತ್ರಗಳು,** ಗ್ರಹ ಮತ್ತು ಉಪಗ್ರಹಗಳಂತೆ ಸೂರ್ಯನಿಂದ ಪ್ರಕಾಶವನ್ನು ಪಡೆಯುವುದಿಲ್ಲ; ಆದರೆ ಸೂರ್ಯನಂತೆ ಸ್ವಯಂಪ್ರಕಾಶಮಯಗಳಾಗಿವೆ. ಇವು **ಸೌರವ್ಯೂಹಕ್ಕೆ,** ಅಂದರೆ ಸೂರ್ಯ ಮತ್ತು ಗ್ರಹಗಳಿಗೆ ಬಹುದೂರದಲ್ಲಿರುವುವು. ನಕ್ಷತ್ರಗಳ ಸಂಖ್ಯೆಯನ್ನು ನಿಷ್ಕರ್ಷಿಸುವುದು ಅಸಾಧ್ಯ; ಸಾಧಾರಣವಾಗಿ ಐದಾರು ಸಾವಿರ ನಕ್ಷತ್ರಗಳು ಕಣ್ಣಿಗೆ ಕಾಣುವುವೆಂದು ಹೇಳುವರು; ದೊಡ್ಡ ದುರ್ಬೀನು(ದೂರದರ್ಶಕ ಯಂತ್ರ, ಟೆಲೆಸ್ಕೋಪ್)ಗಳ ಸಹಾಯದಿಂದ ನೋಡಿದರೆ ಸುಮಾರು 2½ ಲಕ್ಷ ನಕ್ಷತ್ರಗಳು ಕಾಣಬರುವುವು.

ಆಕಾಶದಲ್ಲಿ ಚೆನ್ನಾಗಿ ನೋಡಿದರೆ ಅಲ್ಲಲ್ಲಿ ನಕ್ಷತ್ರಗಳ ಗುಂಪುಗಳು ಕಾಣಬರುತ್ತವೆ. ಪೂರ್ವದಿಂದ ಪಶ್ಚಿಮದವರೆಗೂ ನೋಡುತ್ತಾ ಹೋದರೆ ಮುಖ್ಯವಾಗಿ 27 ಗುಂಪುಗಳು ಕಾಣುವುವು. ಇವುಗಳಿಗೆ ಅಶ್ವಿನಿ ಭರಣಿ ಮೊದಲಾದ ಹೆಸರುಗಳನ್ನು ಅವುಗಳ ಆಕಾರಗಳಿಗನುಸಾರವಾಗಿ ನಮ್ಮ ಶಾಸ್ತ್ರಜ್ಞರು

ಕೊಟ್ಟಿರುವರು. ಈ ನಕ್ಷತ್ರಗಳನ್ನು ಸಮವಾಗಿ (ಅಂದರೆ 2¼ ನಕ್ಷತ್ರಗಳಿಗೆ ಒಂದು ರಾಶಿಯಂತೆ) 12 **ರಾಶಿ**ಗಳಾಗಿ ವಿಭಾಗಿಸಿರುವರು. ಭೂಮಿಯಿಂದ ಯಾವ ರಾಶಿಯ ಕಡೆಗೆ ಸೂರ್ಯನು ಒಂದೊಂದು ತಿಂಗಳು ಕಾಣಿಸುವನೊ ಆಗ ಆ ತಿಂಗಳೆಂದು ಹೇಳುವರು. ಹೀಗೆ ಸೌರಮಾನದ ಲೆಕ್ಕಾಚಾರದಲ್ಲಿ ಮೇಷ ಮಾಸ, ವೃಷಭ ಮಾಸ ಮೊದಲಾದ 12 ತಿಂಗಳುಗಳಾಗುವುವು.

6. **ಭೂಮಿಯ ದೈನಂದಿನ ಚಲನೆ, ಅಹೋರಾತ್ರಿಗಳಾಗುವ ಬಗೆ.**— ಭೂಮಿಯು ತನ್ನ ಅಕ್ಷದ (ದಿಂಡಿನ) ಮೇಲೆ ಪಶ್ಚಿಮದಿಂದ ಪೂರ್ವಕ್ಕೆ 24 ಗಂಟೆಗಳಿಗೊಂದಾವೃತ್ತಿ ತಿರುಗುವುದು ; ಈ ಚಲನೆಯಿಂದ ಭೂಮಿಯ ಎಲ್ಲಾ ಪ್ರದೇಶಗಳಿಗೂ ಕ್ರಮವಾಗಿ ಅಹೋರಾತ್ರಿಗಳಾಗುವುವು.

7. **ಕೃತಕ ಭೂಗೋಳ ಮತ್ತು ಅದರ ಮೇಲಿರುವ ಗೆರೆಗಳು.**— ಅಹೋರಾತ್ರಿಗಳಾಗುವ ಬಗೆಯನ್ನು ಇನ್ನೂ ವಿಶದವಾಗಿ ತಿಳಿಯುವುದಕ್ಕೂ, ಮುಂದೆ ಇತರ ಅನೇಕ ವಿಷಯಗಳನ್ನು ತಿಳಿಯುವುದಕ್ಕೂ, ಈಗ ಕೃತಕ ಭೂಗೋಳದ ಮತ್ತು ಅದರ ಮೇಲೆ ಎಳೆದಿರುವ ಗೆರೆಗಳ ಅರ್ಥವನ್ನು ತಿಳಿಯಬೇಕಾದುದು ಆವಶ್ಯಕವಾಗಿದೆ.

ಭೂವಿವರಣೆಯ ಅನೇಕ ವಿಷಯಗಳನ್ನು ಸುಲಭವಾಗಿ ತಿಳಿಸಲು ಶಾಸ್ತ್ರಜ್ಞರು ಮರದಿಂದ ಮಾಡಿದ ಗೋಳಗಳನ್ನು ಏರ್ಪಡಿಸಿರುವರು. ಇವುಗಳ ಮೇಲೆ ಭೂಭಾಗ ಜಲಭಾಗಗಳೂ ಅಕ್ಷಾಂಶ ರೇಖಾಂಶ ವೃತ್ತಗಳೂ ಗುರುತುಮಾಡಲ್ಪಟ್ಟಿರುವುವು. ಇಂತಹ ಗೋಳಗಳನ್ನು '**ಕೃತಕ ಭೂಗೋಳ**'ಗಳೆಂದು ಕರೆಯಬಹುದು.

**ಅಕ್ಷಾಂಶ ವೃತ್ತಗಳು.**—ಅಕ್ಷಾಂಶ ರೇಖಾಂಶ ವೃತ್ತಗಳು ಭೂಮಿಯ ಮೇಲೆ ಸ್ವಭಾವಸಿದ್ಧವಾಗಿ ಇಲ್ಲದಿದ್ದರೂ ಸ್ಥಾನ ನಿರ್ದೇಶಕ್ಕೋಸ್ಕರ ಅವುಗಳಿವೆಯೆಂದೇ ನಾವು ಭಾವಿಸಬೇಕು. ಉತ್ತರ ದಕ್ಷಿಣ ಮೇರು ಅಥವಾ **ಅಕ್ಷ**ಗಳನ್ನು ಕೂಡಿಸುವ ನೆಟ್ಟಗಿರುವ ರೇಖೆಗೆ **ಅಕ್ಷರೇಖೆ**ಯೆಂದು ಹೆಸರು. ಎರಡು ಅಕ್ಷಗಳಿಗೂ ಮಧ್ಯಕ್ಕೆ ಸರಿಯಾಗಿ ಗೋಳದ ಸುತ್ತಲೂ ಇರುವ ವೃತ್ತಾಕಾರವಾದ ಗೆರೆಗೆ ಭೂಮಧ್ಯರೇಖೆ, ಸಮಭಾಜಕ ವೃತ್ತ ಅಥವಾ **ವಿಷುವದ್ರೇಖೆ** ಎಂದು ಹೆಸರು. ಈ ವೃತ್ತಕ್ಕೆ ದಕ್ಷಿಣೋತ್ತರ ಭಾಗಗಳಲ್ಲಿ ಇದರಂತೆ ಅನೇಕ ಗೆರೆಗಳನ್ನು ಕಲ್ಪಿಸಿರುವರು. ಇವುಗಳಿಗೆ **ಸಮಾನಾಂತರ ಅಕ್ಷಾಂಶ ವೃತ್ತ**ಗಳೆಂದು ಹೆಸರು. ಏಕೆಂದರೆ, ಗೋಳದ ಸುತ್ತಲೂ ವೃತ್ತಾಕಾರವಾಗಿ ಸುತ್ತಿಕೊಂಡಿರುವ ಈ ರೇಖೆಗಳಲ್ಲಿ ಪಕ್ಕದಲ್ಲಿರುವ ಯಾವ ಎರಡು ಗೆರೆಗಳ ದೂರವಾದರೂ (ಅಥವಾ ಅಂತರವು) ಒಂದೇ ಸಮವಾಗಿರುವುದು. ಈ ವೃತ್ತಗಳನ್ನು ನಿರ್ದೇಶಿಸುವುದಕ್ಕೋಸ್ಕರ ಅವುಗಳಿಗೆ ಸಂಖ್ಯೆಯನ್ನು ಕೊಟ್ಟಿರುವರು.

ಪ್ರತಿಯೊಂದು ವೃತ್ತದ ಕೇಂದ್ರಸ್ಥಾನದಲ್ಲಿ 4 ಸಮಕೋಣಗಳಿರುವುವು; ಒಂದೊಂದು ಸಮಕೋಣವನ್ನು 90 ಡಿಗ್ರಿ ಅಥವಾ ಅಂಶಗಳಾಗಿ ವಿಭಾಗಿಸಿರುವರು. ಕೇಂದ್ರದಲ್ಲಿರುವ 360 ಡಿಗ್ರಿಗಳಿಗೆ ಅನುಗುಣವಾಗಿ ವೃತ್ತದ ಪರಿಧಿಯನ್ನು 360 ಡಿಗ್ರಿಗಳಾಗಿ ವಿಭಾಗಿಸಬಹುದು. ಆದುದರಿಂದ ಸಮಭಾಜಕ ವೃತ್ತದಿಂದ ಉತ್ತರ ಮೇರುವಿಗೆ 90 ಡಿಗ್ರಿಗಳೂ ದಕ್ಷಿಣ ಮೇರುವಿಗೆ 90 ಡಿಗ್ರಿಗಳೂ ಇರುವುವು. ಇವುಗಳನ್ನನುಸರಿಸಿ ಪ್ರತಿಯೊಂದು ಅಕ್ಷಾಂಶ ವೃತ್ತವನ್ನೂ ಭೂಮಧ್ಯರೇಖೆಗೆ ಉತ್ತರದ ಅಥವಾ ದಕ್ಷಿಣದ ಇಷ್ಟನೆಯ ಡಿಗ್ರಿ ಎಂದು ನಿರ್ದೇಶಿಸಬಹುದು.

ಈ ವೃತ್ತಗಳಲ್ಲಿ ಕೆಲವಕ್ಕೆ ಬೇರೆ ಬೇರೆ ಹೆಸರುಗಳನ್ನು ಕೊಟ್ಟಿದ್ದಾರೆ. ಸಮಭಾಜಕ ವೃತ್ತಕ್ಕೆ ಉತ್ತರದಲ್ಲಿ $23\frac{1}{2}$ ಡಿಗ್ರಿ ದೂರದಲ್ಲಿರುವ ವೃತ್ತಕ್ಕೆ **ಕರ್ಕಾಟಕ ಸಂಕ್ರಾಂತಿವೃತ್ತ**ವೆಂದೂ, $66\frac{1}{2}$ ಡಿಗ್ರಿ ದೂರದಲ್ಲಿರುವುದಕ್ಕೆ **ಉತ್ತರ ಮೇರು ವೃತ್ತ**ವೆಂದೂ, ವಿಷುವದ್ರೇಖೆಗೆ ದಕ್ಷಿಣದಲ್ಲಿ $23\frac{1}{2}$ ಡಿಗ್ರಿ ದೂರದಲ್ಲಿರುವ ವೃತ್ತಕ್ಕೆ **ಮಕರ ಸಂಕ್ರಾಂತಿ ವೃತ್ತ**ವೆಂದೂ, $66\frac{1}{2}$ ಡಿಗ್ರಿ ದೂರದಲ್ಲಿರುವುದಕ್ಕೆ **ದಕ್ಷಿಣ ಮೇರು ವೃತ್ತ**ವೆಂದೂ ಹೆಸರು.




ಚಿತ್ರ 2

ಅಕ್ಷಾಂಶ ವೃತ್ತಗಳು ಮೇರುಗಳ ಸಮೀಪಕ್ಕೆ ಹೋದಹಾಗೆಲ್ಲಾ ಚಿಕ್ಕವಾಗುವುವು; ಆದರೆ ಒಂದು ವೃತ್ತದಿಂದ ಅದರ ಪಕ್ಕದ ವೃತ್ತಕ್ಕೆ ದೂರವು ಒಂದೇ ಆಗಿರುವುದು. ಒಂದು ಡಿಗ್ರಿಯು ದೂರಕ್ಕೆ [24,900 ಮೈಲಿಗಳು

(ಭೂವಿು ಪರಿಧಿ)÷360 (ಡಿಗ್ರಿಗಳು) ಎಂದರೆ] ಸುಮಾರು 69 ಮೈಲಿಗಳಾಗುವುವು.

ಒಂದು ಸ್ಥಳದ ಅಕ್ಷಾಂಶವನ್ನು ಕೃತಕ ಭೂಗೋಳದ ಸಹಾಯವಿಲ್ಲದೆ ಕಂಡುಹಿಡಿಯಬೇಕಾದರೆ ಒಂದು ಉಪಾಯವಿರುವುದು. ಧ್ರುವನಕ್ಷತ್ರವು ಉತ್ತರ ದಿಕ್ಕಿನಲ್ಲಿ ನೆಲೆಯಾಗಿ ಒಂದೇ ಸ್ಥಳದಲ್ಲಿ ಕಾಣಿಸುವುದೆಂಬುವುದನ್ನು ನೀವು ತಿಳಿದಿರುವಿರಿ. ಭೂಮಧ್ಯರೇಖೆಯ ಬಳಿ ನಿಂತು ನೋಡಿದರೆ ಈ ನಕ್ಷತ್ರವು **ಕ್ಷಿತಿಜ**ದಲ್ಲಿ (ಅಥವಾ ಆಕಾಶವು ನೆಲವನ್ನು ಸೋಕುವಂತೆ ತೋರುವ ಕಡೆಯಲ್ಲಿ) ಕಾಣುವುದು, ಉತ್ತರ ಧ್ರುವದ ಬಳಿಯಲ್ಲಿ ನೆತ್ತಿಯ ಮೇಲೆ ಕಾಣುವುದು, ಭೂಮಧ್ಯರೇಖೆಯಿಂದ ಉತ್ತರ ಧ್ರುವದ ಕಡೆಗೆ ಹೋದಹಾಗೆಲ್ಲಾ ಇದು ಕ್ಷಿತಿಜದಿಂದ ಮೇಲಕ್ಕೆ ಏರುವುದು. ಆದುದರಿಂದ ಈ ನಕ್ಷತ್ರವು ಕ್ಷಿತಿಜದಿಂದ ಎಷ್ಟು ಎತ್ತರದಲ್ಲಿದೆ ಎಂಬುದನ್ನು ತಿಳಿದರೆ, ಆ ಸ್ಥಳದ ಅಕ್ಷಾಂಶವನ್ನು ಸುಲಭವಾಗಿ ಕಂಡುಹಿಡಿಯಬಹುದು.

**ರೇಖಾಂಶ ವೃತ್ತಗಳು.**—ಮೇರುಗಳ ಮಾರ್ಗವಾಗಿ ಭೂಮಿಯ ಸುತ್ತಲೂ ಎಳೆದಿರುವ ವೃತ್ತಗಳಿಗೆ ರೇಖಾಂಶ ವೃತ್ತಗಳೆಂದು ಹೆಸರು. ಈ ವೃತ್ತಗಳು ಅಕ್ಷಾಂಶ ವೃತ್ತಗಳಂತೆ ಉದ್ದದಲ್ಲಿ ಹೆಚ್ಚು ಕಡಿಮೆಯಾಗದೆ ಒಂದೇ ಸಮವಾಗಿರುವುವು; ಆದರೆ ಇವುಗಳಲ್ಲಿ ಪಕ್ಕದ ಎರಡು ರೇಖೆಗಳ ದೂರವು ಸಮಭಾಜಕ ವೃತ್ತದಿಂದ ಮೇರುಗಳ ಕಡೆಗೆ ಹೋದ ಹಾಗೆಲ್ಲಾ ಕಡಿಮೆಯಾಗುತ್ತಾ ಬಂದು ಮೇರುಗಳಲ್ಲಿ ಎಲ್ಲಾ ವೃತ್ತಗಳೂ ಕಲೆತುಹೋಗುವುವು. ಪ್ರತಿಯೊಂದು ರೇಖಾಂಶ ವೃತ್ತದ ಅರ್ಧ ಭಾಗಕ್ಕೆ, ಅಂದರೆ ಒಂದು ಮೇರುವಿನಿಂದ ಇನ್ನೊಂದು ಮೇರುವಿನವರೆಗೆ ಇರುವ ದೂರದ ಅರ್ಧ ಭಾಗಕ್ಕೆ **ಮಧ್ಯಾಹ್ನ ರೇಖೆ** ಎಂಬ ಹೆಸರನ್ನು ಕೊಟ್ಟಿದ್ದಾರೆ; ಏಕೆಂದರೆ, ಇಂತಹ ಒಂದು ರೇಖೆಯ ಮೇಲಿರುವ ಸ್ಥಳಗಳಿಗೆಲ್ಲಾ ಏಕಕಾಲದಲ್ಲಿ ಮಧ್ಯಾಹ್ನವಾಗುವುದು.

**ರೇಖಾಂಶ ವೃತ್ತಗಳು**



ಚಿತ್ರ 3

ಈ ಮಧ್ಯಾಹ್ನ ರೇಖೆಯನ್ನು ನಿರ್ದೇಶಿಸುವುದು ಹೇಗೆ? ವೃತ್ತದ ಪರಿಧಿಯು 360 ಡಿಗ್ರಿಗಳಾಗಿ ವಿಭಾಗವಾಗುವುದರಿಂದ, ಯಾವುದಾದರೂ ಒಂದು ಮಧ್ಯಾಹ್ನ ರೇಖೆಯಿಂದ ಪ್ರಾರಂಭಿಸಿ ಲೆಕ್ಕಮಾಡಿದರೆ ಅದರ ಪೂರ್ವಕ್ಕೆ 180 ಡಿಗ್ರಿಗಳೂ ಪಶ್ಚಿಮಕ್ಕೆ 180 ಡಿಗ್ರಿಗಳೂ ಇರುವುವು. ಆದರೆ ಯಾವ ಮಧ್ಯಾಹ್ನ ರೇಖೆಯಿಂದ ಪ್ರಾರಂಭಿಸಿ ಲೆಕ್ಕ ಮಾಡಬೇಕು? ಪೂರ್ವಕಾಲದಲ್ಲಿ ನಮ್ಮ ದೇಶದ ಜ್ಯೋತಿಷ್ಕರು ಉಜ್ಜಯಿನಿ ಪಟ್ಟಣದಿಂದ ಮೊದಲುಮಾಡಿ ಲೆಕ್ಕ ಮಾಡುತ್ತಿದ್ದರು. ಈಗ ಇಂಗ್ಲಿಷ್ ಜನರು ರೇಖಾಂಶಗಳನ್ನು ಲಂಡನ್ನಿನ ಬಳಿ ಇರುವ ಗ್ರೀನಿಚ್ಚೆಂಬ ಪಟ್ಟಣದಿಂದ ಲೆಕ್ಕ ಮಾಡುತ್ತಾರೆ. ಈ ವಾಡಿಕೆಗೆ ಅನುಸಾರವಾಗಿಯೇ ಕೃತಕ ಭೂಗೋಳದ ಮೇಲೆ ಈ ರೇಖೆಗಳಿಗೆಲ್ಲ ಸಂಖ್ಯೆಗಳನ್ನು ಕೊಟ್ಟಿರುವರು.

ಭೂಮಿಯು ತನ್ನ ಅಕ್ಷದ ಮೇಲೆ 24 ಗಂಟೆಗಳಿಗೊಂದಾವೃತ್ತಿ ತಿರುಗುತ್ತಿರುವುದರಿಂದ ಪ್ರತಿಯೊಂದು ಮಧ್ಯಾಹ್ನ ರೇಖೆಯ ಮೇಲೂ 24 ಗಂಟೆಗಳಿಗೊಂದಾವೃತ್ತಿ ಸೂರ್ಯನು ನೆಟ್ಟಗೆ ತಲೆಯಮೇಲೆ ಕಾಣಬರುವನು; ಅಂದರೆ ಭೂಮಿಯು 24 ಗಂಟೆಗಳಲ್ಲಿ 360 ಮಧ್ಯಾಹ್ನ ರೇಖೆಗಳಷ್ಟು ದೂರ ತಿರುಗುವುದು. ಆದುದರಿಂದ ಭೂಮಿಯು ಒಂದು ಮಧ್ಯಾಹ್ನ ರೇಖೆಯಷ್ಟು ದೂರ ತಿರುಗುವುದಕ್ಕೆ 24÷360 ಗಂಟೆ ಅಥವಾ 4 ನಿಮಿಷಗಳು ಬೇಕಾಗುವುದು. ಭೂಮಿಯು ಪಶ್ಚಿಮದಿಂದ ಪೂರ್ವಕ್ಕೆ ತಿರುಗುವುದರಿಂದ, ಒಂದು ಸ್ಥಳದಲ್ಲಿ ಮಧ್ಯಾಹ್ನವಾಗಿರುವಾಗ ಅದಕ್ಕೆ ಪೂರ್ವದಿಕ್ಕಿನಲ್ಲಿ ಒಂದು ಡಿಗ್ರಿಯ ದೂರದಲ್ಲಿರುವ ಸ್ಥಳದಲ್ಲಿ ಮಧ್ಯಾಹ್ನವಾಗಿ 4 ನಿಮಿಷಗಳಾಗಿರುವುದು; ಅದರ ಪಶ್ಚಿಮದಲ್ಲಿ ಒಂದು ಡಿಗ್ರಿಯ ದೂರದಲ್ಲಿರುವ ಸ್ಥಳದಲ್ಲಿ ಇನ್ನು 4 ನಿಮಿಷಗಳಾದ ಮೇಲೆ ಮಧ್ಯಾಹ್ನವಾಗುವುದು. ಗ್ರೀನಿಚ್ಚಿನ ಅಥವಾ ಲಂಡನ್ನಿನ ರೇಖಾಂಶವು O ಡಿಗ್ರಿ, ಮೈಸೂರಿನದು 77 ಡಿಗ್ರಿ ಪೂ., ನ್ಯೂಯಾರ್ಕಿನದು 77 ಡಿಗ್ರಿ ಪ. ಲಂಡನ್ ಪಟ್ಟಣದಲ್ಲಿ ಮಧ್ಯಾಹ್ನವಾಗಿರುವಾಗ ಮೈಸೂರಿನಲ್ಲಿ ಮಧ್ಯಾಹ್ನವಾಗಿ 77 × 4 ನಿಮಿಷಗಳು ಅಥವಾ 5 ಗಂಟೆ 8 ನಿಮಿಷಗಳಾಗಿರುವುದು, ಅಂದರೆ ಸಾಯಂಕಾಲ 5 ಗಂಟೆ 8 ನಿಮಿಷವಾಗುವುದು. ನ್ಯೂಯಾರ್ಕ್ ಪಟ್ಟಣದಲ್ಲಿ ಮಧ್ಯಾಹ್ನವಾಗುವುದಕ್ಕೆ ಇನ್ನೂ 5 ಗಂಟೆ 8 ನಿಮಿಷಗಳಾಗಬೇಕು, ಅಂದರೆ ಅಲ್ಲಿ ಬೆಳಗಣ 6 ಗಂಟೆ 52 ನಿಮಿಷಗಳಾಗಿರುವುದು.*

---

* ಷರಾ.—(ಹುಡುಗರಿಗೆ) ಭೂಗೋಳವನ್ನು ನೋಡಿ ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರವನ್ನು ಹೇಳಿ:—

(1) ಲಂಡನ್ ಪಟ್ಟಣದಲ್ಲಿ ಮಧ್ಯಾಹ್ನವಾಗಿರುವಾಗ ಕಲ್ಕತ್ತಾ ಪಟ್ಟಣದಲ್ಲಿ ಎಷ್ಟು ಹೊತ್ತಾಗಿರುವುದು? ಬೊಂಬಾಯಿ ಪಟ್ಟಣದಲ್ಲಿ ಎಷ್ಟು ಹೊತ್ತಾಗಿರುವುದು? ಏಡನ್ ಪಟ್ಟಣದಲ್ಲಿ ಎಷ್ಟು ಹೊತ್ತಾಗಿರುವುದು?

**8. ಭೂಮಿಯ ಸಾಂವತ್ಸರಿಕ ಪರಿವರ್ತನೆ.**—ಭೂಮಿಯು ತನ್ನ ಅಕ್ಷದ ಮೇಲೆ ದಿನಕ್ಕೊಂದಾವರ್ತಿ ತಿರುಗುವುದಲ್ಲದೆ ಸೂರ್ಯನ ಸುತ್ತಲೂ ಸುತ್ತುತ್ತಲೂ ಇರುವುದು. ಭೂಮಿಯು ಸೂರ್ಯನನ್ನು ಒಂದು ಸಲ ಸುತ್ತಿಕೊಂಡು ಪುನಃ ಹೊರಟ ಸ್ಥಾನಕ್ಕೆ ಬರುವುದಕ್ಕೆ $365\frac{1}{4}$ ದಿನಗಳು ಅಥವಾ ಒಂದು ಸಂವತ್ಸರವಾಗುವುದು. ಈ ಚಲನೆಯನ್ನು ಭೂಮಿಯ “**ಸಾಂವತ್ಸರಿಕ ಪರಿವರ್ತನವೆಂದು**” ಕರೆಯಬಹುದು.

1 ಸೂರ್ಯೋದಯ ಕಾಲದಲ್ಲಿ ಆಗಲಿ ಸೂರ್ಯಾಸ್ತಮಯ ಕಾಲದಲ್ಲಿ ಆಗಲಿ ದಿನಂಪ್ರತಿ ಒಂದು ವರ್ಷದವರೆಗೆ ನಕ್ಷತ್ರ ಸ್ಥಾನಗಳನ್ನು ಪರೀಕ್ಷಿಸಿ ನೋಡಿದರೆ ಸೂರ್ಯನು ಹುಟ್ಟುವ ಅಥವ ಮುಳುಗುವ ಸ್ಥಾನಗಳ ಸಮೀಪದಲ್ಲಿ ಬೇರೆ ಬೇರೆ ಮಾಸಗಳಲ್ಲಿ ಬೇರೆ ಬೇರೆ ನಕ್ಷತ್ರ ಪುಂಜಗಳು ಕಾಣುವುವು. ಆದುದರಿಂದ ಸೂರ್ಯನು ಪ್ರತಿದಿನವೂ ಪೂರ್ವದಿಂದ ಪಶ್ಚಿಮಕ್ಕೆ ಹೋದಂತೆ ಕಾಣುವುದಲ್ಲದೆ ಪ್ರತಿ ಮಾಸದಲ್ಲಿಯೂ ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಹೋದಂತೆ ಕಾಣುವನು. ಅಂದರೆ, ಸೂರ್ಯನು ಕೆಲವು ಕಾಲ ಆಕಾಶದಲ್ಲಿ ಉಚ್ಚಸ್ಥಾನಕ್ಕೆ ಉತ್ತರಕ್ಕೆ ಹೋದಹಾಗೂ ಕೆಲವು ಕಾಲ ದಕ್ಷಿಣಕ್ಕೆ ಹೋದಹಾಗೂ ಕಾಣುವನು. ಹೀಗೆ ಸೂರ್ಯನು ಅಂತರಿಕ್ಷದಲ್ಲಿ ಒಂದು ಪಕ್ಕದಿಂದ ಮತ್ತೊಂದು ಪಕ್ಕಕ್ಕೆ ಸಂಚರಿಸುತ್ತಿರುವಂತೆ ಕಾಣುವ ಮಾರ್ಗಕ್ಕೆ **ಕ್ರಾಂತಿವೀಥಿ** ಅಥವಾ **ಕ್ರಾಂತಿಚಕ್ರ** (Ecliptic) ವೆಂಬ ಹೆಸರನ್ನು ಕೊಟ್ಟಿದ್ದಾರೆ. ಸೂರ್ಯನು ಕಟಕ ರಾಶಿಯಲ್ಲಿ ಕಾಣಲ್ಪಟ್ಟಾಗ **ದಕ್ಷಿಣಾಯನ** ಪ್ರಾರಂಭವಾಗುವುದು ; ಅಂದರೆ ಸೂರ್ಯನು ಬರಬರುತ್ತಾ ದಕ್ಷಿಣಕ್ಕೆ ಹೋದ ಹಾಗೆ ಕಾಣುವನು. ಸೂರ್ಯನು ಮಕರ ರಾಶಿಯಲ್ಲಿ ಕಾಣಲ್ಪಟ್ಟಾಗ **ಉತ್ತರಾಯನ** ಪ್ರಾರಂಭವಾಗುವುದು ; ಅಂದರೆ ಸೂರ್ಯನು ಅಂದಿನಿಂದ ಉತ್ತರಕ್ಕೆ ಹೋಗುವ ಹಾಗೆ ಕಾಣುವನು.

---

(2) ಅಡಿಲೇಡ್ ಪಟ್ಟಣದಲ್ಲಿ ಬೆಳಗಿನಲ್ಲಿ 9 ಗಂಟೆ 14 ನಿಮಿಷವಾಗಿರುವಾಗ ಪರ್ತ್ ಪಟ್ಟಣದಲ್ಲಿ ಎಷ್ಟು ಹೊತ್ತಾಗಿರುವುದು ? ಸಿಂಗಪೂರಿನಲ್ಲಿ ಎಷ್ಟು ಹೊತ್ತಾಗಿರುವುದು ?

[ಲಂಡನ್ 0° ; ಬೊಂಬಾಯಿ 73° ಪೂ. ; ಕಲ್ಕತ್ತಾ 88° ಪೂ. ; ಏಡನ್ 45° ಪೂ. ; ಅಡಿಲೇಡ್ 139° ಪೂ. ; ಪರ್ತ್ 116° ಪೂ. ; ಸಿಂಗಪೂರ್ 103° ಪೂ.]

(ಉಪಾಧ್ಯಾಯರಿಗೆ) ಕೃತಕ ಭೂಗೋಳ ಅಥವಾ ಭೂಪಟದಲ್ಲಿ ಹುಡುಗರಿಂದ ಮಧ್ಯಾಹ್ನ ರೇಖೆಗಳ ಡಿಗ್ರಿಗಳನ್ನು ಓದಿಸಿ ಈ ಲೆಕ್ಕಗಳನ್ನು ಮಾಡಿಸಬೇಕು. ಇಂತಹ ಕೆಲವು ಲೆಕ್ಕಗಳನ್ನು ಮಾಡಿಸಿ ಮಧ್ಯಾಹ್ನ ರೇಖೆಗಳಿಗನುಗುಣವಾಗಿ ಕಾಲ ವ್ಯತ್ಯಾಸವಾಗುವುದನ್ನು ಸ್ಪಷ್ಟಪಡಿಸಬೇಕು.

1 ಈ ಗುರುತು ಮಾಡಿರುವ ಅಧ್ಯಾಯಗಳನ್ನೂ ಪ್ಯಾರಾಗಳನ್ನೂ ನಾಲ್ಕನೆಯ ತರಗತಿಯಲ್ಲಿ ಬಿಟ್ಟು, ಐದನೆಯ ತರಗತಿಯಲ್ಲಿ ಸಾಮಾನ್ಯ ವಿವರಣೆಯನ್ನು ಪುನರಾವರ್ತನೆ ಮಾಡುವಾಗ ಬೋಧಿಸುವುದು ಉತ್ತಮ.

ಹೀಗೆ ಮಧ್ಯಾಹ್ನದ ಸೂರ್ಯನು ವರ್ಷಕ್ಕೆ ಆರು ತಿಂಗಳು ದಕ್ಷಿಣದಿಂದ ಉತ್ತರಕ್ಕೂ ಉಳಿದ ಆರು ತಿಂಗಳು ಉತ್ತರದಿಂದ ದಕ್ಷಿಣಕ್ಕೂ ಹೋಗುವ ಹಾಗೆ ಕಾಣುವನಷ್ಟೆ. ಆದರೆ ಭೂಮಿಯ ಪ್ರತಿದಿನದ ಚಲನೆಯಲ್ಲಿ ಸೂರ್ಯನೇ ಪೂರ್ವದಿಂದ ಪಶ್ಚಿಮಕ್ಕೆ ಸಂಚರಿಸಿದಂತೆ ನಮಗೆ ತೋರಿದರೂ ನಿಜವಾಗಿ ಭೂಮಿಯೇ ಹೇಗೆ ಪಶ್ಚಿಮದಿಂದ ಪೂರ್ವಕ್ಕೆ ತಿರುಗುತ್ತಲಿದೆಯೋ ಹಾಗೆ ಭೂಮಿಯ ಸಾಂವತ್ಸರಿಕ ಪರಿವರ್ತನೆಯಲ್ಲಿ ಸೂರ್ಯನೇ ಉತ್ತರ ದಕ್ಷಿಣಗಳಿಗೆ ಸಂಚರಿಸುವಂತೆ ತೋರಿದರೂ ಭೂಮಿಯೇ ಸೂರ್ಯನ ಸುತ್ತಲೂ ತಿರುಗುತ್ತ ಲಿರುವುದು. ಭೂಮಿಯು ಹೀಗೆ ಸೂರ್ಯನ ಸುತ್ತಲೂ ತಿರುಗುತ್ತಿರುವ ಮಾರ್ಗಕ್ಕೆ **ಭೂಪಥ**ವೆಂದು ಹೆಸರು. ಈ ಪಥವು ವೃತ್ತಾಕಾರವಾಗಿಲ್ಲ. ಈ ಮುಂದಿನ ಚಿತ್ರದಲ್ಲಿ ತೋರಿಸಿರುವಂತೆ ಅಂಡಾಕಾರವಾಗಿರುವುದು.




ಚಿತ್ರ 4

9. **ಋತುಗಳು.**—ಸೂರ್ಯನು ಪ್ರತಿದಿನವೂ ಮಧ್ಯಾಹ್ನ 12 ಗಂಟೆಗೆ ಆಕಾಶದಲ್ಲಿ ಅತ್ಯುಚ್ಚನಾಗಿ ಕಾಣುವನು. ಆದರೆ ಪ್ರತಿ ಮಧ್ಯಾಹ್ನವೂ ನೇರವಾಗಿ ನಮ್ಮ ತಲೆಯ ಮೇಲೆಯೆ ಕಾಣುವುದಿಲ್ಲ; ವರ್ಷಕ್ಕೆ ಎರಡು ದಿನಗಳು ಮಾತ್ರ ಹಾಗೆ ಕಾಣುವನು. ಸ್ವಲ್ಪ ಹೆಚ್ಚು ಕಡಿಮೆ ನೆಟ್ಟಗೆ ತಲೆಯ ಮೇಲೆ ಸೂರ್ಯನು ಕಾಣುವಾಗ ಅವನ ಕಿರಣಗಳು ನೇರವಾಗಿ ಬೀಳುವುವು. ಆಗ ಕಿರಣಗಳಲ್ಲಿ ಶಾಖವು ಹೆಚ್ಚು; ಹಗಲಿನ ಪ್ರಮಾಣವೂ ಹೆಚ್ಚಾಗಿರುವುದು. ಇದರಿಂದ ಭೂಮಿಯು ಹೆಚ್ಚು ಹೊತ್ತು ಕಾಯುವುದು. ಹಗಲು ಹೆಚ್ಚಿದಷ್ಟೂ ರಾತ್ರಿಯು ಕಡಿಮೆಯಾಗುವುದರಿಂದ ಭೂಮಿಯು ಹಗಲಿನಲ್ಲಿ ಕಾದಷ್ಟು ರಾತ್ರಿಯಲ್ಲಿ ಆರು

ವುದಿಲ್ಲ. ಇದರಿಂದ ಭೂಮಿಯಲ್ಲಿ ಒಟ್ಟು ಶಾಖವು ದಿನೇ ದಿನೇ ಹೆಚ್ಚಾಗುವುದು. ಈ ಕಾಲಕ್ಕೆ ಬೇಸಗೆಯೆಂದು ಹೆಸರು.

ಮಧ್ಯಾಹ್ನದಲ್ಲಿ ಸೂರ್ಯನು ನೆಟ್ಟಗೆ ತಲೆಯ ಮೇಲೆ ಕಾಣದೆ ದಕ್ಷಿಣಕ್ಕಾಗಲಿ ಉತ್ತರಕ್ಕಾಗಲಿ ಓರೆಯಾಗಿ ಕಾಣುವಾಗ ಅವನ ಕಿರಣಗಳು ಓರೆಯಾಗಿ ಭೂಮಿಯ ಮೇಲೆ ಬೀಳುವುವು. ಆಗ ಕಿರಣಗಳ ಶಾಖವೂ ಕಡಿಮೆ, ಹಗಲಿನ ಪ್ರಮಾಣವೂ ಕಡಿಮೆ. ಇದರಿಂದ ಭೂಮಿಯು ಹಗಲಿನಲ್ಲಿ ಕಾಯುವುದಕ್ಕಿಂತಲೂ ರಾತ್ರಿಯಲ್ಲಿ ಆರುವುದು ಹೆಚ್ಚು. ಹೀಗೆ ದಿನೇ ದಿನೇ ಭೂಮಿಯಲ್ಲಿ ಶಾಖವು ಕಡಿಮೆಯಾಗುತ್ತಾಬರುವುದು. ಈ ಕಾಲಕ್ಕೆ ಚಳಿಗಾಲವೆಂದು ಹೆಸರು. ಬೇಸಗೆ ಚಳಿಗಾಲಗಳ ವ್ಯತ್ಯಾಸವು ನಿಮ್ಮ ಅನುಭವದಿಂದಲೇ ನಿಮಗೆ ಚೆನ್ನಾಗಿ ತಿಳಿದಿರುವುದು.

ಹೀಗೆಯೇ ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ಶೀತೋಷ್ಣಗಳ ವ್ಯತ್ಯಾಸಗಳನ್ನು ತೋರಿಸುವ ಕಾಲಭೇದಗಳಿರುವುವು. ಇವುಗಳಿಗೆ **ಋತು**ಗಳೆಂದು ಹೆಸರು. ಇಂಗ್ಲೆಂಡ್ ದೇಶದವರು ಶೀತೋಷ್ಣಗಳ ವ್ಯತ್ಯಾಸಗಳನ್ನು ಅನುಸರಿಸಿ ವರ್ಷವನ್ನು 4 ಋತುಗಳಾಗಿ ವಿಂಗಡಿಸುವರು. ಮೇಷ, ಕಟಕ, ತುಲಾ, ಮಕರ ಸಂಕ್ರಮಣಗಳನ್ನು ಮೊದಲು ಮಾಡಿಕೊಂಡು ಮೂರು ಮೂರು ತಿಂಗಳುಗಳನ್ನು ಒಂದೊಂದು ಋತುವನ್ನಾಗಿ ಭಾಗಿಸಿರುವರು. ನಮ್ಮ ದೇಶದವರು ವರ್ಷವನ್ನು ವಸಂತಋತು ಮೊದಲಾದ 6 ಋತುಗಳಾಗಿ ವಿಭಾಗಿಸಿರುವರು.*

ಭೂಮಿಯು ಸೂರ್ಯನ ಸುತ್ತಲೂ ಸುತ್ತುತ್ತದೆಯಷ್ಟೆ. ಹೀಗೆ ಸುತ್ತುವಾಗ ಅದರ ಅಕ್ಷವು ತನ್ನ ದಿಕ್ಕನ್ನು ಬದಲಾಯಿಸದೆ ಒಂದೇ ಮುಖವಾಗಿರುವುದು. ಅಕ್ಷದ ಉತ್ತರದ ಕೊನೆಯು ಯಾವಾಗಲೂ ಧ್ರುವನಕ್ಷತ್ರಾಭಿಮುಖವಾಗಿರುವುದು. ಇದಲ್ಲದೆ ಈ ಅಕ್ಷವು ಭೂಪಥದ ಸರಳಕ್ಷೇತ್ರಕ್ಕೆ ಸಮಕೋಣದಲ್ಲಿರದೆ ಆ ಸಮಕೋಣದ ಸರಳರೇಖೆಗೆ 23½ ಡಿಗ್ರಿಗಳ ಕೋಣದಲ್ಲಿರುವುದು. ಭೂಮಿಯ ಪಥಕ್ಕೆ ಹೇಗೆ ನಾಲ್ಕು ಋತುಗಳಲ್ಲಿಯೂ ಭೂಮಿಯ ಅಕ್ಷವು ಬಾಗಿರುವುದೆಂಬುದನ್ನು 5ನೆಯ ಚಿತ್ರದಲ್ಲಿ ನೋಡಿ. ಆ ಚಿತ್ರದಲ್ಲಿ 1 ಮತ್ತು 3ನೆಯ ಸ್ಥಾನಗಳಲ್ಲಿ ಸೂರ್ಯನ ಕಿರಣಗಳು ಉತ್ತರ ಮೇರುವಿನಿಂದ ದಕ್ಷಿಣ ಮೇರುವಿನವರೆಗೂ ಎಲ್ಲಾ ಭಾಗಗಳಿಗೂ ಏಕಕಾಲದಲ್ಲಿ ಬೀಳುವುವು. ಆದುದರಿಂದ ಆಗ ಭೂಮಿಯ ಎಲ್ಲಾ ಭಾಗಗಳಲ್ಲಿಯೂ ಹಗಲು ರಾತ್ರಿ

* ಇಂಗ್ಲೆಂಡು ದೇಶದಲ್ಲಿ ವಿಭಾಗ ಮಾಡಿರುವಂತೆ ವರ್ಷದಲ್ಲಿ 4 ಋತುಗಳಿವೆಯೆಂದು ಇಲ್ಲಿ ಕೊಟ್ಟಿರುವ ವಿವರಣೆಯಲ್ಲಿ ಭಾವಿಸಿದೆ. ಸಾಮಾನ್ಯವಾಗಿ ಪಾಶ್ಚಾತ್ಯದೇಶಗಳಲ್ಲೆಲ್ಲಾ ಇದೇ ರೂಢಿಯಾಗಿರುವುದರಿಂದಲೂ ಎಲ್ಲಾ ಪ್ರದೇಶಗಳ ಋತು ಭೇದಗಳಿಗೂ ಸಾಮಾನ್ಯ ಕಾರಣಗಳನ್ನು ತಿಳಿಯಲು ಈ ವಿಭಾಗವು ಅನುಕೂಲವಾಗಿರುವುದರಿಂದಲೂ ಹೀಗೆ ಭಾವಿಸಿದೆ.

ಗಳ ಪ್ರಮಾಣವು ಸಮವಾಗಿರುವುದು. 1ನೆಯ ಸ್ಥಾನವು ಮೇಷ ಸಂಕ್ರಮಣ ಕಾಲದಲ್ಲಿ (ಮಾರ್ಚಿ 21) ಭೂಮಿಯ ಸ್ಥಿತಿಯನ್ನೂ, 3ನೆಯ ಸ್ಥಾನವು ತುಲಾ ಸಂಕ್ರಮಣ ಕಾಲದಲ್ಲಿ (ಸೆಪ್ಟೆಂಬರ್ 21) ಭೂಮಿಯ ಸ್ಥಿತಿಯನ್ನೂ, ತೋರಿಸುವುದು. 2ನೆಯ ಸ್ಥಾನವು ಕರ್ಕಾಟಕ ಸಂಕ್ರಮಣ ಕಾಲ(ಜೂನ್ 21)ದಲ್ಲಿ ಭೂಮಿಯ ಸ್ಥಿತಿಯನ್ನೂ, 4ನೆಯ ಸ್ಥಾನವು ಮಕರ ಸಂಕ್ರಮಣ ಕಾಲ(ಡಿಸೆಂಬರ್ 21)ದಲ್ಲಿನ ಭೂಮಿಯ ಸ್ಥಿತಿಯನ್ನೂ ತೋರಿಸುವುದು. 2ನೆಯ ಸ್ಥಾನದಲ್ಲಿ ಉತ್ತರ ಮೇರುವಿಗೆ ಮತ್ತು ಅದರ ಸಮೀಪದಲ್ಲಿರುವ ಪ್ರದೇಶಗಳಿಗೆ ಹೆಚ್ಚು ಬೆಳಕೂ 4ನೆಯ ಸ್ಥಾನದಲ್ಲಿ ದಕ್ಷಿಣ ಮೇರುವಿಗೆ ಮತ್ತು ಅದರ ಸಮೀಪದಲ್ಲಿರುವ ಸ್ಥಳಗಳಿಗೆ ಹೆಚ್ಚು ಬೆಳಕೂ ಬೀಳುವುದು. ಎಂದರೆ ಭೂಮಿಯ ಉತ್ತರಾರ್ಧಕ್ಕೆ ಬೇಸಗೆ ಆದಾಗ ದಕ್ಷಿಣಾರ್ಧಕ್ಕೆ ಚಳಿಗಾಲವೂ ಉತ್ತರಾರ್ಧಕ್ಕೆ ಚಳಿಗಾಲವಾದಾಗ ದಕ್ಷಿಣಾರ್ಧಕ್ಕೆ ಬೇಸಗೆಗಾಲವೂ ಆಗುವುವು. ಈ ನಾಲ್ಕು ಸಂಕ್ರಮಣಗಳಲ್ಲಿ ಭೂಮಿಯ ಭಾಗಗಳಲ್ಲಿ ಬೆಳಕು ಬೀಳುವ ರೀತಿಯು ಈ ಕೆಳಗಿನ ಚಿತ್ರದಿಂದಲೂ ಸ್ಪಷ್ಟವಾಗುವುದು.*




ಚಿತ್ರ 5

* ಗ್ಲೋಬಿನ ಪೀಠವನ್ನು ಕೈಯಲ್ಲಿ ಹಿಡಿದುಕೊಂಡು ಗ್ಲೋಬನ್ನು ಅಕ್ಷದ ಮೇಲೆ ತಿರುಗಿಸುತ್ತ ದೀಪದ ಸುತ್ತಲೂ ಸುತ್ತಿಸಿ ಬೆಳಕು ಬೀಳುವ ಬಗೆಯನ್ನು ತೋರಿಸಿ ಈ ವಿಷಯಗಳನ್ನು ವಿವರಿಸಿ. ಟೆಲ್ಯೂರಿಯಮ್ ಎಂಬ ಯಂತ್ರವು ನಿಮ್ಮ ಪಾಠಶಾಲೆಯಲ್ಲಿದ್ದರೆ ಅದನ್ನು ಉಪಯೋಗಿಸಿ ವಿವರಿಸಿ.

* ಈ ಸಂಕ್ರಮಣಗಳ ವಿಚಾರವನ್ನು ಈಗ ಸ್ವಲ್ಪ ವಿಶದವಾಗಿ ಪರೀಕ್ಷಿಸೋಣ.




ಚಿತ್ರ 6

ಮೇಷ ಮತ್ತು ತುಲಾ ಸಂಕ್ರಮಣಗಳ ಕಾಲದಲ್ಲಿ ಸೂರ್ಯನ ಕಿರಣಗಳು ಭೂಮಿಯ ಬೇರೆ ಬೇರೆ ಭಾಗಗಳಲ್ಲಿ ಹೇಗೆ ಬೀಳುವುವೆಂಬುದನ್ನು ತೋರಿಸುವ ಈ ಚಿತ್ರದಲ್ಲಿ 'ಉ–ದ' ಎಂಬ ರೇಖೆಯಿಂದ ಅಕ್ಷವನ್ನೂ 'ಮ' ಎಂಬ ಅಕ್ಷರದಿಂದ ಸಮಭಾಜಕವೃತ್ತದ ಮಧ್ಯ ಭಾಗ ಅಥವಾ ಭೂಮಿಯ ಮಧ್ಯ ಬಿಂದುವನ್ನೂ ಗುರುತಿಸಿದೆ.

ಈ ಚಿತ್ರದಲ್ಲಿ ಭೂಮಿಯ ಮಧ್ಯ ಬಿಂದುವನ್ನೂ ಸೂರ್ಯನ ಮಧ್ಯ ಬಿಂದುವನ್ನೂ ಸೇರಿಸುವ ಸರಳರೇಖೆಗೆ ಭೂಮಿಯ ಅಕ್ಷವು ('ಉ–ದ') ಸಮಕೋಣದಲ್ಲಿರುವುದರಿಂದ ಅಕ್ಷವು ಪ್ರತಿಯೊಂದು ಅಕ್ಷಾಂಶ ವೃತ್ತವನ್ನೂ ಸರಿಯಾಗಿ ಎರಡು ಭಾಗಗಳಾಗಿ ವಿಂಗಡಿಸುವುದು. ಈ ಪ್ರತಿಯೊಂದು ವೃತ್ತದಲ್ಲಿಯೂ ಸೂರ್ಯನ ಕಡೆಯ ಅರ್ಧ ಭಾಗದಲ್ಲಿ ಬೆಳಕೂ ಮಿಕ್ಕ ಅರ್ಧ ಭಾಗದಲ್ಲಿ ಕತ್ತಲೆಯೂ ಆಗುವುದು. ಆದರೆ ಭೂಮಿಯು ತನ್ನ ಅಕ್ಷದ ಮೇಲೆ 24 ಗಂಟೆಗಳಿಗೊಂದಾವೃತ್ತಿ ತಿರುಗುವುದರಿಂದ ಅದರ ಮೇಲಿನ ಎಲ್ಲಾ ಭಾಗಗಳೂ ಈ ಸಂಕ್ರಮಣ ಕಾಲಗಳಲ್ಲಿ 12 ಗಂಟೆಗಳ ಕಾಲ ಬೆಳಕಿನಲ್ಲಿಯೂ 12 ಗಂಟೆಗಳ ಕಾಲ ಕತ್ತಲಲ್ಲಿಯೂ ಇರುವುವು. ಆದರೆ ಆ ಕಾಲಗಳಲ್ಲಿ ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ಅಹೋರಾತ್ರಿಗಳ ಪರಿಮಾಣವು ಸಮವಾಗಿರುವುದು. ಹೀಗೆ ಅಹೋರಾತ್ರಿ

* ಇಲ್ಲಿಂದ ಮುಂದೆ ಈ ಅಧ್ಯಾಯ ಭಾಗದಲ್ಲಿ ವಿವರಿಸುವ ವಿಷಯಗಳಲ್ಲಿ ಮುಖ್ಯವಾದ ಅಂಶಗಳನ್ನು ಮಾತ್ರ ಅಲ್ಲಿ ಕೊಟ್ಟಿರುವ ಚಿತ್ರಗಳನ್ನು ಉಪಯೋಗಿಸಿಕೊಂಡು 4ನೆಯ ತರಗತಿಯಲ್ಲಿ ಸ್ಥೂಲವಾಗಿ ತಿಳಿಸಬೇಕು; ವಿವರಗಳನ್ನು 5ನೆಯ ತರಗತಿಯಲ್ಲಿ ಬೋಧಿಸಬೇಕು.

ಗಳು ಸಮವಾಗಿರುವುದರಿಂದ ಈ ಸಂಕ್ರಮಣಗಳಿಗೆ **ವಿಷುವತ್ಪುಣ್ಯಕಾಲ** (Equinoxes)ಗಳೆಂದು ಹೆಸರುಂಟು.

ಆದರೆ ಮೇಷ ಸಂಕ್ರಮಣವಾದ ಮೇಲೆ (ಮಾರ್ಚಿ 21ರಿಂದ) ಆಚೆಗೆ ಉತ್ತರಾರ್ಧ ಗೋಳದಲ್ಲಿ ಹಗಲು ಹೆಚ್ಚುತ್ತಲೂ ದಕ್ಷಿಣಾರ್ಧ ಗೋಳದಲ್ಲಿ ರಾತ್ರಿ ಹೆಚ್ಚುತ್ತಲೂ ಹೋಗುವುವು. ದಿನೇ ದಿನೇ ಸೂರ್ಯನು ಉತ್ತರಕ್ಕೆ ಹೋದಹಾಗೆ ಕಾಣುವನು. ಕೊನೆಗೆ ಜೂನ್ 21ಕ್ಕೆ ಅಂದರೆ ಕರ್ಕಾಟಕ ಸಂಕ್ರಮಣಕ್ಕೆ, ಸೂರ್ಯನು ಅತ್ಯಂತ ಉತ್ತರಕ್ಕೆ ಹೋಗಿ ಕರ್ಕಾಟಕ ಸಂಕ್ರಾಂತಿ ವೃತ್ತದ ಮೇಲೆ ಉಚ್ಚನಾಗಿ ಪ್ರಕಾಶಿಸುವನು. ಆಗ ಉತ್ತರಾರ್ಧ ಗೋಳಕ್ಕೆ ಹಗಲು ಅತ್ಯಂತ ಹೆಚ್ಚಾಗಿ ನಡುಬೇಸಗೆಯಾಗಿರುವುದು. ಆ ಕಾಲದಲ್ಲಿ ದಕ್ಷಿಣಾರ್ಧ ಗೋಳದಲ್ಲಿ ರಾತ್ರಿಯು ಪರಿಮಾಣವು ಬಹಳ ಹೆಚ್ಚು; ಅಲ್ಲಿ ನಡುಚಳಿಗಾಲವಾಗಿರುವುದು. ಈ ಕರ್ಕಾಟಕ ಸಂಕ್ರಮಣ ಕಾಲದಲ್ಲಿ ಆಗುವ ಭೂಮಿಯ ಸ್ಥಿತಿಯನ್ನು ಕೆಳಗಿನ ಚಿತ್ರವು ತೋರಿಸುವುದು.




ಚಿತ್ರ 7

ಈ ಚಿತ್ರದಲ್ಲಿ ಭೂಮಿಯ ಅಕ್ಷವು ('ಉ–ದ') ಸೂರ್ಯನಿಗೆ ಸಮವಾಗಿ ಇದಿರಾಗಿಲ್ಲದೆ ಬಾಗಿರುವುದು. ಸೂರ್ಯನ ಮಧ್ಯ ಭಾಗವನ್ನೂ ಭೂಮಿಯ ಮಧ್ಯ ಭಾಗವನ್ನೂ ಸೇರಿಸುವ ರೇಖೆ('ಸೂ–ಮ')ಗೆ ಭೂಮಿಯ ಅಕ್ಷವು ('ಉ–ದ') ಸಮಕೋಣದಲ್ಲಿಲ್ಲ; 'AB' ಎನ್ನುವ ರೇಖೆಯು ಸಮಕೋಣದಲ್ಲಿ ರುವುದು. ಭೂಮಿಯ ಅಕ್ಷವು ಈ 'AB' ಎನ್ನುವ ರೇಖೆಗೆ 23½ ಡಿಗ್ರಿಗಳಷ್ಟು ಓರೆಯಾಗಿ ಬಾಗಿದೆ.

ಇದರಿಂದ 'AB' ಎಂಬ ರೇಖೆಯು ಒಂದು ಪಾರ್ಶ್ವಕ್ಕೆ (ಅಂದರೆ ಸೂರ್ಯನ ಕಡೆಗಿರುವ ಅರ್ಧ ಭಾಗಕ್ಕೆ) ಬೆಳಕೂ ಇನ್ನೊಂದು ಪಾರ್ಶ್ವಕ್ಕೆ ಕತ್ತಲೂ ಆಗಿರುವುದು.

ಉತ್ತರ ಮೇರುವಿನಿಂದ ಉತ್ತರ ಮೇರು ವೃತ್ತದವರೆಗೆ ಇರುವ ಎಲ್ಲಾ ಪ್ರದೇಶಗಳೂ ಬೆಳಕಿನ ಭಾಗದಲ್ಲಿಯೇ ಇರುವುವು. ಭೂಮಿಯು 24 ಗಂಟೆಗಳಿಗೊಂದು ಸಾರಿ ತನ್ನ ಅಕ್ಷದ ಮೇಲೆ (ಅಂದರೆ 'ಉ–ದ' ಎನ್ನುವ ರೇಖೆಯ ಮೇಲೆ) ಸುತ್ತುವಾಗ ಈ ಪ್ರದೇಶವೆಲ್ಲ ಸೂರ್ಯನಿಗೆ ಅಭಿಮುಖವಾಗಿಯೇ ಇರುವುದು. ಈ ಕಾರಣದಿಂದ ಜೂನ್ 21ರಲ್ಲಿ ಉತ್ತರ ಮೇರು ವೃತ್ತಕ್ಕೆ ಉತ್ತರದಲ್ಲಿರುವ ಪ್ರದೇಶಗಳಿಗೆ 24 ಗಂಟೆಗಳ ಕಾಲವೂ ಅಹಸ್ಸಾಗಿಯೇ ಇರುವುದು; ರಾತ್ರಿಯೇ ಇಲ್ಲ.



ಕರ್ಕಾಟಕ ಸಂಕ್ರಾಂತಿ ವೃತ್ತದ ಮೇಲಿರುವ ಪ್ರದೇಶಗಳಲ್ಲಿ ಕರ್ಕಾಟಕ ಸಂಕ್ರಮಣದ ದಿನದಲ್ಲಿ ಸೂರ್ಯನು ಮಧ್ಯಾಹ್ನದ ವೇಳೆ ನೆಟ್ಟಗೆ ತಲೆಯಮೇಲೆ ಕಾಣುವನು. ಆ ವೃತ್ತದ ಹೆಚ್ಚು ಭಾಗವು ಬೆಳಕಿನಲ್ಲಿಯೂ ಕಡಿಮೆ ಭಾಗವು ಕತ್ತಲಲ್ಲಿಯೂ ಇರುವುದು. ಅಂದರೆ, ಭೂಮಿಯ ದೈನಂದಿನ ಚಲನೆಯಲ್ಲಿ ಈ ವೃತ್ತದ ಮೇಲಿನ ಪ್ರದೇಶಗಳು 12 ಗಂಟೆಗಳಿಂತ ಹೆಚ್ಚು ಹೊತ್ತು ಸೂರ್ಯನಿಗೆ ಅಭಿಮುಖವಾಗಿಯೂ 12 ಗಂಟೆಗಳಿಗಿಂತ ಕಡಿಮೆ ಹೊತ್ತು ಸೂರ್ಯನಿಗೆ ವಿಮುಖವಾಗಿಯೂ ಇರುವುದು; ಅಂದರೆ ಅಹಸ್ಸು ಹೆಚ್ಚು, ರಾತ್ರಿ ಕಡಿಮೆ. ಸಮಭಾಜಕ ವೃತ್ತದ ಉತ್ತರದ ಪ್ರದೇಶಗಳಲ್ಲೆಲ್ಲಾ ಹೀಗೆಯೇ ಹಗಲು ಹೆಚ್ಚು ರಾತ್ರಿ ಕಡಿಮೆ; ಸಮಭಾಜಕ ವೃತ್ತದಿಂದ ಉತ್ತರಕ್ಕೆ ಹೋದ ಹಾಗೆಲ್ಲ ಈ ವ್ಯತ್ಯಾಸವು ಹೆಚ್ಚು ಹೆಚ್ಚಾಗಿ ತೋರುವುದು.

ಸಮಭಾಜಕ ವೃತ್ತದ ಬಳಿ ಅಹೋರಾತ್ರಿಗಳು ಹೆಚ್ಚು ಕಡಿಮೆಯಿಲ್ಲದೆ ಒಂದೇ ಸಮವಾಗಿರುವುವು.

ಸಮಭಾಜಕ ವೃತ್ತದ ದಕ್ಷಿಣಕ್ಕೆ ಹೋದಹಾಗೆಲ್ಲಾ, ಅಕ್ಷಾಂಶ ವೃತ್ತಗಳ ಹೆಚ್ಚು ಭಾಗವು ಕತ್ತಲಲ್ಲಿಯೂ ಅಲ್ಪ ಭಾಗವು ಬೆಳಕಿನಲ್ಲಿಯೂ ಇರುವುದು; ಅಂದರೆ ಹಗಲು ಕಡಿಮೆ ರಾತ್ರಿ ಹೆಚ್ಚು. ದಕ್ಷಿಣಕ್ಕೆ ಹೋದಹಾಗೆಲ್ಲ ಈ ಈ ವ್ಯತ್ಯಾಸವು ಹೆಚ್ಚಾಗಿ ತೋರುವುದು. ದಕ್ಷಿಣ ಮೇರು ವೃತ್ತಕ್ಕೆ ದಕ್ಷಿಣದಲ್ಲಿರುವ ಪ್ರದೇಶಗಳು ಈ ಕಾಲದಲ್ಲಿ ಸೂರ್ಯನಿಗೆ ವಿಮುಖಗಳಾಗಿಯೇ ಇರುವುವು; ಇದರಿಂದ ಅಲ್ಲಿ 24 ಗಂಟೆಗಳೂ ಕತ್ತಲಾಗಿಯೆ ಇರುವುದು, ಹಗಲೇ ಆಗುವುದಿಲ್ಲ.

ಜೂನ್ 21ರಿಂದ ಸೆಪ್ಟೆಂಬರ್ 21ರ ವರೆಗೆ ಅಂದರೆ ಕರ್ಕಾಟಕ ಸಂಕ್ರಮಣದಿಂದ ತುಲಾ ಸಂಕ್ರಮಣದವರೆಗೆ ಉತ್ತರಾರ್ಧ ಗೋಳದಲ್ಲಿ ಹಗಲು ಕಡಿಮೆಯಾಗುತ್ತಲೂ ದಕ್ಷಿಣಾರ್ಧ ಗೋಳದಲ್ಲಿ ಹಗಲು ಹೆಚ್ಚಾಗುತ್ತಲೂ ಬಂದು, ತುಲಾ ಸಂಕ್ರಮಣದಲ್ಲಿ ಹಿಂದೆ ವಿವರಿಸಿರುವಂತೆ ಸೂರ್ಯನು ವಿಷುವದ್ರೇಖೆಯ

ಮೇಲೆ ನೆತ್ತಿಯಮೇಲೆ ಕಂಡುಬಂದು, ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ಅಹೋರಾತ್ರಿಗಳ ಪರಿಮಾಣವು ಸಮವಾಗಿರುವುದು.

ಅನಂತರ ಸೆಪ್ಟೆಂಬರ್ 21ರಿಂದ ಡಿಸೆಂಬರ್ 21ರ ವರೆಗೆ ಅಂದರೆ ತುಲಾ ಸಂಕ್ರಮಣದಿಂದ ಮಕರ ಸಂಕ್ರಮಣದವರೆಗೆ ಉತ್ತರಾರ್ಧ ಗೋಳದಲ್ಲಿ ಹಗಲು 12 ಗಂಟೆಗಳಿಗಿಂತ ಕಡಿಮೆಯಾಗುತ್ತಲೂ ದಕ್ಷಿಣಾರ್ಧ ಗೋಳದಲ್ಲಿ ಹೆಚ್ಚುತ್ತಲೂ ಹೋಗುವುದು. ಡಿಸೆಂಬರ್ 21ರಲ್ಲಿ ಸೂರ್ಯನು ಮಕರ ಸಂಕ್ರಾಂತಿ ವೃತ್ತದ ಮೇಲೆ ಮಧ್ಯಾಹ್ನದಲ್ಲಿ ನೆತ್ತಿಯ ಮೇಲೆ ಕಾಣುವನು. ಆಗ ದಕ್ಷಿಣಾರ್ಧ ಗೋಳದಲ್ಲಿ ಅಹೋರಾತ್ರಿಗಳ ಸ್ಥಿತಿಯು ಉತ್ತರಾರ್ಧ ಗೋಳದಲ್ಲಿ ಜೂನ್ 21ರಲ್ಲಿ ಇದ್ದಂತೆ ಇರುವುದು. ಅಂದರೆ, ಆಗ ಇಲ್ಲಿ ನಡುಬೇಸಗೆಯು, ಉತ್ತರಾರ್ಧ ಗೋಳದಲ್ಲಿ ನಡುಚಳಿಗಾಲವು. ಮಕರ ಸಂಕ್ರಮಣ ಕಾಲದಲ್ಲಿ ಭೂಮಿಯ ಯಾವ ಯಾವ ಭಾಗಗಳಲ್ಲಿ ಸೂರ್ಯನ ಸ್ಥಿತಿ ಮತ್ತು ಅಹೋರಾತ್ರಿಗಳ ಪರಿಮಾಣಗಳು ಹೇಗೆ ಹೇಗಿರುವುವೆನ್ನುವುದನ್ನು ಈ ಸಾಮಾನ್ಯ ವಿಷಯವನ್ನು ನೆನಪಿಡುವುದರಿಂದಲೂ ಈ ಕೆಳಗಿನ ಚಿತ್ರದ ಸಹಾಯದಿಂದಲೂ ಸುಲಭವಾಗಿ ತಿಳಿಯಬಹುದು.




ಚಿತ್ರ 8

ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ವೃತ್ತಗಳಲ್ಲಿ ಸೂರ್ಯನು ಮಧ್ಯಾಹ್ನದಲ್ಲಿ ಎಷ್ಟು ಎತ್ತರವಾಗಿ ಅಥವಾ ತಗ್ಗಾಗಿ ಕಾಣುವನೆನ್ನುವುದನ್ನು ಸುಲಭವಾಗಿ ತಿಳಿಯಬಹುದು. ಇದನ್ನು ತಿಳಿಯಲು ಒಂದು ಉದಾಹರಣೆಯನ್ನು ಕೊಟ್ಟಿದೆ. ಕರ್ಕಾಟಕ ಸಂಕ್ರಮಣ ಕಾಲದಲ್ಲಿ ಕರ್ಕಾಟಕ ಸಂಕ್ರಾಂತಿ ವೃತ್ತದ ಮೇಲೆ ಸೂರ್ಯನು ನೆತ್ತಿಯಮೇಲೆ ಕಾಣುವನೆನ್ನುವುದು ಈಗ ನಿಮಗೆ ತಿಳಿದಿದೆಯಷ್ಟೆ; ಅಂದರೆ ಈ ಮುಂದಿನ ಚಿತ್ರದಂತೆ ಅಲ್ಲಿ ಸೂರ್ಯನು ಕ್ಷಿತಿಜದಿಂದ 90 ಡಿಗ್ರಿ ಎತ್ತರವಾಗಿ ಕಾಣುವನು.




ಚಿತ್ರ 9

ಕರ್ಕಾಟಕ ಸಂಕ್ರಮಣ ಕಾಲದಲ್ಲಿ ಭೂಮಿಯ ಸ್ಥಿತಿಯನ್ನು ತೋರಿಸುವ ಚಿತ್ರದಲ್ಲಿ 'AB' ಎನ್ನುವ ರೇಖೆಗೆ ಉತ್ತರ ಮೇರು 23½ ಡಿಗ್ರಿಗಳ ಕೋಣದಲ್ಲಿರುವುದರಿಂದ ಆ ದಿನ ಉತ್ತರ ಮೇರುವಿನ ಬಳಿ ಸೂರ್ಯನು ಆಕಾಶದಲ್ಲಿ ಕ್ಷಿತಿಜದಿಂದ 23½ ಡಿಗ್ರಿಗಳ ಎತ್ತರದಲ್ಲಿ ಕಾಣುವನು. ಅಂದರೆ, ಆ ಪ್ರದೇಶದಲ್ಲಿ ಆಗ ಮಧ್ಯಾಹ್ನದಲ್ಲಿ ಸೂರ್ಯನು ನಮ್ಮ ದೇಶದಲ್ಲಿ ಬೆಳಗಣ 7½ ಗಂಟೆಯಲ್ಲಿ ಎತ್ತರವಾಗಿರುವಷ್ಟು ಎತ್ತರದಲ್ಲಿ ಮಾತ್ರ ಇರುವನು, ಅವನ ಕಿರಣಗಳೂ ಅಷ್ಟು ಓರೆಯಾಗಿಯೇ ಬೀಳುವುವು; ಅವುಗಳ ಶಾಖವೂ ಬಹಳ ಕಡಿಮೆ. ಉತ್ತರ ಮೇರುವಿನಿಂದ ದಕ್ಷಿಣಕ್ಕೆ ಬಂದಹಾಗೆಲ್ಲ ಮಧ್ಯಾಹ್ನದ ಸೂರ್ಯನ ಎತ್ತರವು ಹೆಚ್ಚಿ ಅವನ ಕಿರಣಗಳ ತೀಕ್ಷ್ಣತೆಯೂ ಹೆಚ್ಚುವುದು. ಕರ್ಕಾಟಕ ಸಂಕ್ರಾಂತಿ ವೃತ್ತದಲ್ಲಿ ಸೂರ್ಯನು ನೇರವಾಗಿ ತಲೆಯಮೇಲೆ ಕಾಣುವನು. ಅಲ್ಲಿಂದ ದಕ್ಷಿಣಕ್ಕೆ ಹೋದಹಾಗೆಲ್ಲ ಈ ಕಾಲದಲ್ಲಿ ಮಧ್ಯಾಹ್ನದ ಸೂರ್ಯನ ಎತ್ತರವು ಕಡಿಮೆಯಾಗುತ್ತಾ ಹೋಗುವುದು. ಸಮಭಾಜಕ ವೃತ್ತದಲ್ಲಿ ಸೂರ್ಯನು $90°—23\frac{1}{2}°=66\frac{1}{2}°$ ಗಳಷ್ಟು ಎತ್ತರವಾಗಿರುವನು. ಮಕರ ಸಂಕ್ರಾಂತಿ ವೃತ್ತದಲ್ಲಿ $66\frac{1}{2}°—23\frac{1}{2}°=43°$ಗಳಷ್ಟು ಎತ್ತರವಾಗಿರುವನು; ದಕ್ಷಿಣ ಮೇರು ವೃತ್ತದಲ್ಲಿ $66\frac{1}{2}°—66\frac{1}{2}°=0°$ ಯಲ್ಲಿ ಅಥವಾ ಕ್ಷಿತಿಜದಲ್ಲಿರುವುದು; ದಕ್ಷಿಣ ಮೇರು ವೃತ್ತದ ದಕ್ಷಿಣ ಭಾಗಗಳಲ್ಲೆಲ್ಲಾ ಕ್ಷಿತಿಜದ ಕೆಳಗೆ ಇರುವುದು, ಅಂದರೆ ಅಲ್ಲಿ ಸೂರ್ಯೋದಯವೇ ಇಲ್ಲ. ಹೀಗೆಯೇ ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ಮಧ್ಯಾಹ್ನದ ಸೂರ್ಯನ ಎತ್ತರವನ್ನು ಇತರ ಕಾಲಗಳಲ್ಲಿಯೂ ಕಂಡುಹಿಡಿಯಬಹುದು.*

ಮೇಲೆ ವಿವರಿಸಿರುವ ಋತುಭೇದಗಳು ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ಕಂಡುಬರುವುವು. ಆದರೆ ಮುಖ್ಯವಾಗಿ ಸಮಶೀತೋಷ್ಣವಲಯಗಳಲ್ಲಿ ಇವು ಸ್ಪಷ್ಟವಾಗಿ ತೋರಿಬರುವುವು. ಶೀತವಲಯಗಳಲ್ಲಿ ಸೂರ್ಯನು ಬಹು ತಗ್ಗಿನಲ್ಲಿರುವುದರಿಂದ ಶಾಖವು ಬಹು ಕಡಿಮೆ; ಶೀತವು ಸ್ವಲ್ಪ ಕಡಿಮೆಯಾಗಿರುವ ಬೇಸಗೆಯೂ ವಿಪರೀತ ಶೀತವಾಗಿರುವ ಚಳಿಗಾಲವೂ ಮಾತ್ರ ಇಲ್ಲಿ ತೋರಿ

* ಇನ್ನು ಕೆಲವು ಉದಾಹರಣೆಗಳನ್ನು ಕೊಟ್ಟು ಹುಡುಗರಿಂದ ಲೆಕ್ಕಮಾಡಿಸಿ ಹೇಳಿಸಿ.

ಬರುವುದು. ಉಷ್ಣವಲಯದಲ್ಲಿ ಎಲ್ಲಾ ಕಾಲದಲ್ಲಿಯೂ ಸೂರ್ಯನು ಸುಮಾರಾಗಿ ತಲೆಯಮೇಲೆಯೇ ಕಾಣುವುದರಿಂದ ಶಾಖವು ಬಹಳ ಹೆಚ್ಚು. ಬೇಸಗೆಗೂ ಚಳಿಗಾಲಕ್ಕೂ ಹೆಚ್ಚಾಗಿ ವ್ಯತ್ಯಾಸವು ಕಾಣುವುದಿಲ್ಲ.

**10. ಮೈಸೂರು ಸೀಮೆಯಲ್ಲಿ ಕಾಣಬರುವ ಋತುಭೇದಗಳು.**— ಹಿಂದೆ ಹೇಳಿರುವ ಸಾಮಾನ್ಯ ವಿಷಯಗಳಿಗೆ ಒಂದು ಉದಾಹರಣೆಯಾಗಿ ನಮ್ಮ ಸೀಮೆಯ ಋತುಭೇದಗಳನ್ನು ವಿಶದವಾಗಿ ತಿಳಿದುಕೊಳ್ಳಬಹುದು. ನಮ್ಮ ಮೈಸೂರು ಸೀಮೆಯು ಉತ್ತರ ಅಕ್ಷಾಂಶ 12ರಿಂದ 15 ಡಿಗ್ರಿಗಳವರೆಗೆ ಪ್ರಸರಿಸಿದೆ. ಸಮಭಾಜಕ ವೃತ್ತಕ್ಕೂ ಸಂಕ್ರಾಂತಿ ವೃತ್ತಕ್ಕೂ ಮಧ್ಯೆ ಇರುವ ಪ್ರದೇಶಗಳಲ್ಲಿ ಸೂರ್ಯನು ವರ್ಷಕ್ಕೆ ಎರಡುಸಲ ನೆಟ್ಟಗೆ ತಲೆಯಮೇಲೆ ಕಾಣಿಸುವನು; ಇಲ್ಲಿ ಅಹೋರಾತ್ರಿಗಳ ವ್ಯತ್ಯಾಸಗಳೂ ಕಡಿಮೆ. ಆದುದರಿಂದ ನಮ್ಮ ಸೀಮೆಯಲ್ಲಿ ಋತುಭೇದಗಳು ಸಮಶೀತೋಷ್ಣವಲಯದಲ್ಲಿರುವ ದೇಶಗಳಂತೆ ಚೆನ್ನಾಗಿ ಕಾಣಿಸುವುದಿಲ್ಲ.

ಮೇಷ ಸಂಕ್ರಮಣದಲ್ಲಿ ಸಮಭಾಜಕವೃತ್ತದಲ್ಲಿ ಸೂರ್ಯನು ನೆಟ್ಟಗೆ ನೆತ್ತಿಯ ಮೇಲೆ ಕಾಣುವನಷ್ಟೆ; ಆಗ ನಮ್ಮ ಸೀಮೆಯಲ್ಲಿ ಸ್ವಲ್ಪ ಓರೆಯಾಗಿ ದಕ್ಷಿಣಕ್ಕೆ ಕಾಣುವನು. ಆಗ ಹಗಲೂ ರಾತ್ರಿಯೂ ಸಮವಾಗಿ 12 ಗಂಟೆಗಳಾಗಿರುವುವು. ಮುಂದೆ ದಿನೇ ದಿನೇ ಸೂರ್ಯನು ಉಚ್ಚನಾಗುತ್ತಾ ಸುಮಾರು ಮೇ 5ನೆಯ ತಾರೀಖಿನಲ್ಲಿ ನೆಟ್ಟಗೆ ತಲೆಯಮೇಲೆ ಕಾಣುವನು. ಜೂನ್ 21ರಲ್ಲಿ ಅಂದರೆ ಕರ್ಕಾಟಕ ಸಂಕ್ರಮಣದಲ್ಲಿ ಅಹಸ್ಸು ಪರಮಾವಧಿಯನ್ನು ಹೊಂದುವುದು. ಆಗ ಹಗಲು 12 ಗಂಟೆ 51 ನಿಮಿಷಗಳೂ, ರಾತ್ರಿಯು 11ಗಂಟೆ 9 ನಿಮಿಷಗಳೂ ಆಗಿ ಇರುವುವು. ಜೂನ್ 21ರಲ್ಲಿ ಸೂರ್ಯನು ಕರ್ಕಾಟಕ ಸಂಕ್ರಾಂತಿ ವೃತ್ತಕ್ಕೆ ಅಭಿಮುಖವಾಗಿರುವುದರಿಂದಲೂ ಆಮೇಲೆ ಸೂರ್ಯನು ಸಮಭಾಜಕ ವೃತ್ತದ ಕಡೆಗೆ ಹಿಂದಿರುಗಿದಂತೆ ಕಾಣುವುದರಿಂದಲೂ ಸೂರ್ಯನ ಕಿರಣಗಳು ಜೂನ್, ಜುಲೈ, ಆಗಸ್ಟು ತಿಂಗಳುಗಳಲ್ಲಿ ಬಹಳ ತೀಕ್ಷ್ಣವಾಗಿರುವುವು. ಆದರೆ ಈ ತಿಂಗಳುಗಳಲ್ಲಿ ಮುಂಗಾರು ಗಾಳಿಯು ಬೀಸಿ ಪದೇ ಪದೇ ಮಳೆಯನ್ನು ತರುವುದರಿಂದಲೂ, ಈ ಗಾಳಿಯಲ್ಲಿ ತೇವವೂ ಶೀತವೂ ಇರುವುದರಿಂದಲೂ ಸೆಕೆಯು ಸದಾ ಅಷ್ಟು ಹೆಚ್ಚಾಗಿ ತೋರುವುದಿಲ್ಲ; ಏಪ್ರೆಲ್, ಮೇ ತಿಂಗಳುಗಳಿಗಿಂತ ಕಡಿಮೆಯಾಗಿಯೇ ತೋರುವುದು.

ಸೆಪ್ಟೆಂಬರ್ 21ಕ್ಕೆ ಸರಿಯಾಗಿ ಸೂರ್ಯನು ಸಮಭಾಜಕ ವೃತ್ತಕ್ಕೆ ಅಭಿಮುಖನಾಗುವನು. ಆ ತಿಂಗಳಲ್ಲಿ ನಮ್ಮ ಸೀಮೆಯಲ್ಲಿ ಸೂರ್ಯನು ಹೆಚ್ಚು ಓರೆಯಾಗದಿರುವುದರಿಂದಲೂ, ಹಗಲು ಸುಮಾರು 12 ಗಂಟೆಗಳ ಕಾಲ ಇರುವುದರಿಂದಲೂ ಹಗಲು ಸೆಕೆಯಾಗಿಯೂ ರಾತ್ರಿ ಚಳಿಯಾಗಿಯೂ ಇರುವುದು. ಮುಂಗಾರು ಗಾಳಿಯ ವೇಗವು ಕಡಿಮೆಯಾಗುವುದು. ಅಕ್ಟೋಬರ್ ತಿಂಗ

ಳಲ್ಲಿಯೂ ಸುಮಾರು ಹೀಗೆಯೇ ಇರುವುದು; ಹಿಂಗಾರು ಗಾಳಿಯು ಪ್ರಾರಂಭವಾಗಿ ಆಗಾಗ ದೊಡ್ಡ ಮಳೆಗಳಾಗುವುವು.

ನವಂಬರ್, ಡಿಸೆಂಬರ್, ಜನವರಿ ತಿಂಗಳುಗಳಲ್ಲಿ ಸೂರ್ಯನು ಹೆಚ್ಚು ಓರೆಯಾಗುತ್ತಾ ಬರುವನು; ಡಿಸೆಂಬರ್ 21ರಲ್ಲಿ ಮಕರ ಸಂಕ್ರಾಂತಿ ವೃತ್ತಕ್ಕೆ ಅಭಿಮುಖವಾಗಿರುವುದರಿಂದ ಆಗ ನಡುಚಳಿಗಾಲವಾಗಿರುವುದು. ಈ ತಿಂಗಳುಗಳಲ್ಲಿ ಅಹಃಪ್ರಮಾಣವು ಕಡಿಮೆಯಾಗಿ 11 ಗಂಟೆ 9 ನಿಮಿಷಗಳವರೆಗೂ ಇದ್ದು ಚಳಿಯು ಜಾಸ್ತಿಯಾಗುವುದು. ಪ್ರಾತಃಕಾಲದಲ್ಲಿ ಇಬ್ಬನಿಯು ಬೀಳುವುದು. ಸೂರ್ಯನು ತಡವಾಗಿ ಹುಟ್ಟಿದಂತೆಯೂ ಜಾಗ್ರತೆ ಮುಳುಗಿದಂತೆಯೂ ಕಾಣುವನು.

ಫೆಬ್ರುವರಿ, ಮಾರ್ಚಿ ತಿಂಗಳುಗಳಲ್ಲಿ ಪುನಃ ಅಹಃಪ್ರಮಾಣವು ಹೆಚ್ಚುತ್ತಾ ಮಾರ್ಚಿ 21ರಲ್ಲಿ ಅಹೋರಾತ್ರಿಗಳು ಸಮವಾಗಿರುವುವು. ಸೆಪ್ಟೆಂಬರಿನಂತೆ ಈಗಲೂ ಹಗಲು ಸೆಕೆಯೂ ರಾತ್ರಿ ಚಳಿಯೂ ಹೆಚ್ಚಾಗಿ ತೋರುವುದು.

ಈ ಮೇರೆ ಪ್ರತಿವರ್ಷವೂ ಸಾಮಾನ್ಯವಾಗಿ ಮಾರ್ಚಿಯಿಂದ ಸೆಪ್ಟೆಂಬರ್‌ವರೆಗೆ ಬೇಸಗೆಯಾಗಿಯೂ, ಸೆಪ್ಟೆಂಬರಿಂದ ಮಾರ್ಚಿಯವರೆಗೆ ಚಳಿಗಾಲವಾಗಿಯೂ, ಮಾರ್ಚಿ ಸೆಪ್ಟೆಂಬರುಗಳಲ್ಲಿ ಮಧ್ಯಸ್ಥವಾಗಿಯೂ ಇರುವುದು.*




ಚಿತ್ರ 10

* ಸೂಚನೆ.—ಋತುಭೇದಗಳನ್ನೂ ಅವುಗಳಿಗೆ ಕಾರಣಗಳನ್ನೂ ಸ್ಪಷ್ಟವಾಗಿ ಹುಡುಗರಿಗೆ ತಿಳಿಸುವುದು ಕಷ್ಟ; ಆದರೆ ಅವುಗಳ ತಿಳಿವಳಿಕೆಯು ದೇಶಗಳ ವಾಯುಗುಣ, ಬೆಳೆ, ಜನ, ಉದ್ಯೋಗ ಮೊದಲಾದುವನ್ನು ಸಕಾರಣವಾಗಿ ತಿಳಿಯುವುದಕ್ಕೆ ಆವಶ್ಯಕವಾಗಿರುವುದರಿಂದ ಚಿತ್ರಪಟಗಳು, ಕಪ್ಪುಹಲಗೆಯ ಚಿತ್ರಗಳು, ಕೃತಕ ಭೂಗೋಳ, ದೀಪ, ಟೆಲ್ಯೂರಿಯಮ್ ಮೊದಲಾದ ಉಪಕರಣಗಳ ಸಹಾಯದಿಂದ ಉಪಾಧ್ಯಾಯರು ಮೇಲಿನ ವಿಷಯಗಳನ್ನು ನಿಧಾನವಾಗಿ ಬೋಧಿಸಬೇಕು.

**11. ವಲಯಗಳು.**—ಋತುಗಳ ವಿಷಯದಲ್ಲಿ ಮೇಲೆ ಹೇಳಿರುವ ಅಂಶಗಳಿಂದ ಪಂಚವಲಯಗಳಲ್ಲಿನ ಶಾಖ ಮತ್ತು ಅಹಃ ಪ್ರಮಾಣಗಳ ವ್ಯತ್ಯಾಸಗಳು ಸ್ಪಷ್ಟವಾಗುವುವು. ಪ್ರತಿಯೊಂದು ವಲಯದಲ್ಲಿಯೂ ವಾಯುಗುಣಕ್ಕನುಗುಣವಾಗಿ ಬೆಳೆಗಳಲ್ಲಿಯೂ ಪ್ರಾಣಿಗಳಲ್ಲಿಯೂ ತೋರಿಬರುವ ವ್ಯತ್ಯಾಸಗಳು ಮುಂದಿನ ಅಧ್ಯಾಯಗಳಲ್ಲಿ ವಿವರಿಸಲ್ಪಡುವುವು. ಈ ವಲಯಗಳನ್ನು ನೆನಪಿನಲ್ಲಿಡಲು ಈ 10ನೆಯ ಚಿತ್ರವನ್ನು ಕೊಟ್ಟಿದೆ.

**12. ಚಂದ್ರನು ಮತ್ತು ಅವನ ಕಿರಣಗಳು; ಗ್ರಹಣಗಳು.**—ಹಗಲು ಭೂಮಿಗೆ ಸೂರ್ಯನಿಂದ ಬೆಳಕೂ ಶಾಖವೂ ಉಂಟಾಗುವುದಲ್ಲದೆ ರಾತ್ರಿಯ ಕಾಲದಲ್ಲಿ ಚಂದ್ರನಿಂದಲೂ ಸ್ವಲ್ಪ ಬೆಳಕು ಬರುವುದು. ಚಂದ್ರನು ಭೂಮಿಯ ಸುತ್ತಲೂ ಸುತ್ತುತ್ತಿರುವ ಒಂದು ಉಪಗ್ರಹ. ಚಂದ್ರನು ಸೂರ್ಯನಂತೆ ಸ್ವಯಂಪ್ರಕಾಶವುಳ್ಳವನಲ್ಲ; ಸೂರ್ಯನ ಬೆಳಕು ಚಂದ್ರನಮೇಲೆ ಬಿದ್ದು ಅದರಿಂದ ಪ್ರತಿಬಿಂಬಿಸಿದ ಕಿರಣಗಳು ಭೂಮಿಯಮೇಲೆ ಬಿದ್ದು ಬೆಳದಿಂಗಳಾಗುವುದು. ಚಂದ್ರಗ್ರಹವು ಭೂಮಿಗಿಂತ ಬಹು ಚಿಕ್ಕದು; ಅದರ $\frac{1}{೫೦}$ ಅಥವಾ 1÷50 ಭಾಗದಷ್ಟು ಮಾತ್ರವಿರುವುದು. ಆದರೆ ಚಂದ್ರನು ಭೂಮಿಗೆ ಬಹು ಸಮೀಪವಾಗಿರುವುದರಿಂದ ನಮಗೆ ಸೂರ್ಯನಷ್ಟು ದೊಡ್ಡವನಾಗಿಯೇ ಕಾಣಿಸುವನು. ಸೂರ್ಯನು ಭೂಮಿಗೆ 9 ಕೋಟಿ 30 ಲಕ್ಷ ಮೈಲಿಗಳ ದೂರದಲ್ಲಿರುವನು; ಆದರೆ ಚಂದ್ರನು ಭೂಮಿಗೆ 2,40,000 ಮೈಲಿಗಳಷ್ಟು ದೂರ ಮಾತ್ರ; ಅಂದರೆ ಸೂರ್ಯನ ದೂರದಲ್ಲಿ ಸುಮಾರು 1÷4,000ರಷ್ಟು ದೂರದಲ್ಲಿ ಇರುವನು.






ಚಿತ್ರ 11

ಚಂದ್ರನು 27 ದಿನ $7\frac{3}{4}$ ಗಂಟೆಗಳಲ್ಲಿ ತನ್ನ ಅಕ್ಷದಮೇಲೆ ಒಂದು ಸಾರಿ ತಿರುಗುವನಲ್ಲದೆ ಭೂಮಿಯನ್ನು ಒಂದು ಸಲ ಸುತ್ತಿಕೊಂಡು ಬರುವನು.

ಭೂಪಥವೂ ಚಂದ್ರಪಥವೂ ಬೇರೆ ಬೇರೆ ಸರಳಕ್ಷೇತ್ರ(Plane)ಗಳಲ್ಲಿರುವುದರಿಂದ ಸೂರ್ಯ ಭೂಮಿಗಳಿಗಿಂತ ಚಂದ್ರನ ಸ್ಥಿತಿಯು ದಿನ ದಿನಕ್ಕೆ ಬದಲಾಯಿಸುವುದು. ನಮಗೆ ತೋರಿಬರುವ ಚಂದ್ರನ ಸ್ಥಿತಿಯನ್ನು ಅಥವಾ ಕಲೆಗಳನ್ನು ಈ 11ನೆಯ ಚಿತ್ರದಲ್ಲಿ ತೋರಿಸಿದೆ.

1ನೆಯ ಸ್ಥಿತಿಯಲ್ಲಿ ಚಂದ್ರನು ಸೂರ್ಯನಿಗೂ ಭೂಮಿಗೂ ಮಧ್ಯೆ ಇರುವನು; ಆಗ ಭೂಮಿಯ ಕಡೆಯ ಪಾರ್ಶ್ವದಲ್ಲಿರುವ ಚಂದ್ರನ ಅರ್ಧ ಭಾಗವು ಕತ್ತಲೆಯಾಗಿರುವುದರಿಂದ ನಮಗೂ ಕತ್ತಲೆಯಾಗಿ ಅಮಾವಾಸ್ಯೆಯಾಗುವುದು. 2, 3, 4ನೆಯ ಸ್ಥಿತಿಗಳಲ್ಲಿ ಬರುಬರುತ್ತಾ ಭೂಮಿಯ ಕಡೆಯ ಪಾರ್ಶ್ವದಲ್ಲಿ ಚಂದ್ರನ ಹೆಚ್ಚು ಭಾಗವು ಬೆಳಕನ್ನು ಹೊಂದುವುದರಿಂದ ಚಂದ್ರನು ದೊಡ್ಡವನಾಗುತ್ತಾ ಬರುವನು. ಆಗಲೇ ಶುಕ್ಲಪಕ್ಷ. 5ನೆಯ ಸ್ಥಿತಿಯಲ್ಲಿ ಭೂಮಿಗೆ ಚಂದ್ರನು ಒಂದು ಪಾರ್ಶ್ವದಲ್ಲಿಯೂ ಸೂರ್ಯನು ಇನ್ನೊಂದು ಪಾರ್ಶ್ವದಲ್ಲಿಯೂ ಇರುವುದರಿಂದ ಸೂರ್ಯನ ಬೆಳಕು ಭೂಮಿಯ ಕಡೆಯ ಪಾರ್ಶ್ವದ ಚಂದ್ರನ ಮೇಲೆ ಸಂಪೂರ್ಣವಾಗಿ ಬಿದ್ದು ಚಂದ್ರನು ನಮಗೆ ಪೂರ್ತಿಯಾಗಿ ಕಂಡುಬಂದು ಹುಣ್ಣಿಮೆಯಾಗುವುದು. 6, 7, 8ನೆಯ ಸ್ಥಿತಿಗಳಲ್ಲಿ ಪುನಃ ಭೂಮಿಯ ಕಡೆಯ ಚಂದ್ರನ ಭಾಗಕ್ಕೆ ಬೆಳಕು




ಚಿತ್ರ 11 (a)




ಚಿತ್ರ 11 (b)

ಕಡಿಮೆಯಾಗುತ್ತಾ ಬರುವುದರಿಂದ, ಚಂದ್ರನು ಚಿಕ್ಕವನಾಗುತ್ತಾ ಬರುವನು. ಆಗಲೇ ಕೃಷ್ಣಪಕ್ಷ. 27 ದಿನ $7\frac{3}{4}$ ಗಂಟೆಗಳಿಗೆ ಒಂದಾವೃತ್ತಿ ಈ ಮೇರೆ ಚಂದ್ರನ ಕಲೆಗಳು ಬದಲಾಯಿಸುತ್ತ ಬರುವುವು.

ಸೂರ್ಯ ಚಂದ್ರಗ್ರಹಣಗಳಾಗುವ ಬಗೆಯನ್ನು ನೀವು ಕೆಳಗಿನ ತರಗತಿಯಲ್ಲಿಯೇ ತಿಳಿದಿರುವಿರಿ. ಭೂಮಿಗೂ ಸೂರ್ಯನಿಗೂ ಮಧ್ಯೆ ಚಂದ್ರನಿರುವಾಗ (1ನೆಯ ಸ್ಥಿತಿಯಲ್ಲಿ) ಅಮಾವಾಸ್ಯೆಯಾಗುವುದಷ್ಟೆ. ಆಗ ಚಂದ್ರನು ಭೂಪಥದ ಸರಳಕ್ಷೇತ್ರದಲ್ಲಿದ್ದರೆ, ಅಂದರೆ ಭೂಮಿಯೂ, ಚಂದ್ರನೂ, ಸೂರ್ಯನೂ ಒಂದೇ ಸರಳರೇಖೆಯಲ್ಲಿದ್ದರೆ ಸೂರ್ಯಗ್ರಹಣವಾಗುವುದು. ಹೀಗೆಯೇ ಚಂದ್ರನಿಗೂ ಸೂರ್ಯನಿಗೂ ಮಧ್ಯೆ ಭೂಮಿಯಿರುವ ಹುಣ್ಣಿಮೆಯಲ್ಲಿ (5ನೆಯ ಸ್ಥಿತಿಯಲ್ಲಿ) ಚಂದ್ರನು ಭೂಪಥದ ಸರಳಕ್ಷೇತ್ರದಲ್ಲಿದ್ದರೆ ಚಂದ್ರಗ್ರಹಣವಾಗುವುದು. ಭೂಪಥ ಮತ್ತು ಚಂದ್ರಪಥಗಳು ಬೇರೆಬೇರೆ ಸರಳಕ್ಷೇತ್ರಗಳಲ್ಲಿರುವುದರಿಂದ ವಿಶೇಷವಾಗಿ ಗ್ರಹಣಗಳಾಗುವುದಿಲ್ಲ; ಅವು ಒಂದೇ ಸರಳಕ್ಷೇತ್ರದಲ್ಲಿದ್ದರೆ ಪ್ರತಿಹುಣ್ಣಿಮೆ ಅಮಾವಾಸ್ಯೆಗಳಲ್ಲಿಯೂ ಗ್ರಹಣಗಳಾಗುತ್ತಿದ್ದುವು.

ಭೂಗ್ರಹವು ಚಂದ್ರನಿಗಿಂತ 50 ಪಾಲು ದೊಡ್ಡದಾಗಿರುವುದರಿಂದ ಚಂದ್ರಗ್ರಹಣವು ಹೆಚ್ಚು ಕಾಲವಿರುವುದು ಮತ್ತು ಹೆಚ್ಚು ಭೂಭಾಗಕ್ಕೆ ಕಾಣಬರುವುದು. ಚಂದ್ರಗ್ರಹವು ಸೂರ್ಯನಿಗಿಂತ ಬಹು ಚಿಕ್ಕದಾಗಿರುವುದರಿಂದ ಸೂರ್ಯಗ್ರಹಣವು ಸ್ವಲ್ಪ ಕಾಲ ಮಾತ್ರವೇ ಇರುವುದು ಮತ್ತು ಸ್ವಲ್ಪ ಭೂಭಾಗಕ್ಕೆ ಮಾತ್ರವೇ ಕಾಣಬರುವುದು. ಚಂದ್ರಗ್ರಹಣವು ಸಾಮಾನ್ಯವಾಗಿ ಪ್ರತಿವರ್ಷವೂ ಒಂದೆರಡು ಸಲ ಬರುವುದು. ಅನೇಕವೇಳೆ ಪೂರ್ಣಚಂದ್ರಗ್ರಹಣವೂ ಆಗುವುದು; ಸೂರ್ಯಗ್ರಹಣವು 2 ಅಥವಾ 3 ವರ್ಷಗಳಿಗೊಂದಾವೃತ್ತಿ ಬರುವುದು. ಪೂರ್ಣಸೂರ್ಯಗ್ರಹಣವು ಆಗುವುದೇ ಬಹು ಅಪೂರ್ವ.

## III. ಭೂಪಟಗಳು

**13. ಕೃತಕ ಭೂಗೋಳ ಮತ್ತು ಭೂಪಟಗಳು.**— ಭೂವಿವರಣೆಯನ್ನು ಕಲಿಯುವುದಕ್ಕೆ ಉಪಯುಕ್ತವಾದ ಉಪಕರಣಗಳಲ್ಲಿ ಕೃತಕ ಭೂಗೋಳಗಳೂ, ಹಳ್ಳ ದಿಣ್ಣೆಗಳನ್ನು ತೋರಿಸುವ ಮಾದರಿ (ರಿಲೀಫ್ ಮಾಡಲ್)ಯು ಭೂಪಟಗಳೂ ಮುಖ್ಯವಾದುವಾಗಿವೆ. ಭೂಮಿಯ ಆಕಾರ ಮತ್ತು ಚಲನೆಗಳು, ಅಕ್ಷಾಂಶರೇಖಾಂಶ ವೃತ್ತಗಳು ಮೊದಲಾದುವನ್ನು ಕಲಿಯುವುದಕ್ಕೆ ಮಾತ್ರ ಕೃತಕ ಭೂಗೋಳಗಳು ಉಪಯೋಗವಾಗುವುವು. ಖಂಡಗಳ ಅಥವಾ ದೇಶಗಳ ವಿವರಣೆಯನ್ನು ಕಲಿಯಲು ಇವುಗಳಿಗಿಂತ ಭೂಪಟಗಳು ಹೆಚ್ಚು ಉಪಯೋಗಕರಗಳಾಗಿವೆ. ಕೃತಕ ಭೂಗೋಳದಲ್ಲಿ ಒಂದು ಕಡೆಯಿಂದ ಅದರ ಒಂದು ಭಾಗ ಮಾತ್ರವೇ ಕಾಣುವುದು. ಒಂದೊಂದು ದೇಶವನ್ನೂ ದೊಡ್ಡ ಆಕಾರದಲ್ಲಿ

ತೋರಿಸುವುದಕ್ಕೆ ಆಗುವುದೇ ಇಲ್ಲ. ಆದುದರಿಂದ ನೀವು ನೋಡಿರುವ ಸಿಮ್ಮ ಹಳ್ಳಿ, ಡಿಸ್ಟ್ರಿಕ್ಟ್, ಮೈಸೂರು, ಇಂಡಿಯ—ಇವುಗಳ ಪಟಗಳನ್ನು ದೊಡ್ಡದಾಗಿ ಬರೆದು ಅವುಗಳಲ್ಲಿ ಬೇಕಾದ ವಿಷಯಗಳನ್ನು ಗುರ್ತುಮಾಡಿರುವರು; ಹೀಗೆ ಭೂಪಟಗಳಲ್ಲಿ ಒಂದು ಖಂಡದ ಅಥವಾ ದೇಶದ ಆಕಾರವನ್ನು ಸಾಕಾದಷ್ಟು ದೊಡ್ಡದಾಗಿ ಬರೆದು ಬೇಕಾದಷ್ಟು ವಿಷಯಗಳನ್ನು ಗುರುತುಮಾಡಿ ಏಕ ಕಾಲದಲ್ಲಿ ಕಣ್ಣಿಗೆ ಕಾಣುವಂತೆ ತೋರಿಸಬಹುದು.

ಚಂಡಿನ ಆಕಾರವಾಗಿರುವ ಭೂಮಿಯನ್ನು ಚಪ್ಪಟೆಯಾದ ಕಾಗದದ ಮೇಲೆ ತೋರಿಸುವುದು ಹೇಗೆ ಸಾಧ್ಯವೆಂದು ನೀವು ಕೇಳಬಹುದು. ಒಂದು ನಿಂಬೆ ಹಣ್ಣನ್ನು ನಮ್ಮ ಇದಿರಿಗೆ ಇಟ್ಟುಕೊಂಡರೆ ನಮಗೆ ಅದರ ಮುಂಭಾಗ ಮಾತ್ರ ಕಾಣಬರುವುದು. ಆದರೆ ನಿಂಬೆಹಣ್ಣಿನ ಆಕಾರವಾಗಿರುವ ಭೂಮಿಯ ಎಲ್ಲಾ ಭಾಗಗಳನ್ನೂ ಒಟ್ಟಿಗೆ ತೋರಿಸುವುದು ಹೇಗೆ? ಈ ತೊಂದರೆಯನ್ನು ತಪ್ಪಿ ಸ್ಸುವುದಕ್ಕಾಗಿ ಭೂಗೋಳ ಶಾಸ್ತ್ರಜ್ಞರು ಭೂಮಿಯನ್ನು ಎರಡು ಹೋಳುಗಳಾಗಿ ಭಾಗಿಸಿದಂತೆ ಭಾವಿಸಿ ಅವುಗಳನ್ನು ಭೂಮಂಡಲದ ಭೂಪಟದಲ್ಲಿ ಬೇರೆ ಬೇರೆಯಾಗಿ ತೋರಿಸಿರುವರು; ಇವುಗಳನ್ನು ಪೂರ್ವಾರ್ಧಗೋಳ ಮತ್ತು ಪಶ್ಚಿಮಾರ್ಧ ಗೋಳ ಎಂದು ಕರೆಯಬಹುದು.

ಆದರೆ ನಿಂಬೆಹಣ್ಣಿನ ಅರ್ಧ ಭಾಗವು ಚಪ್ಪಟೆಯಾಗಿರುವುದಿಲ್ಲ. ಹಾಗಾದರೆ ಭೂಮಿಯ ಅರ್ಧ ಭಾಗವನ್ನಾದರೂ ಚಪ್ಪಟೆಯಾದ ಕಾಗದದಮೇಲೆ ತೋರಿ ಸುವುದು ಹೇಗೆ? ಒಂದು ಟೊಳ್ಳಾದ ರಬ್ಬರ್ ಚಂಡನ್ನು ತೆಗೆದುಕೊಂಡು ಎರಡು ಸಮಭಾಗಗಳಾಗಿ ಕೊಯಿದು, ಅದರ ಅರ್ಧ ಭಾಗವನ್ನು ತೆಗೆದುಕೊಂಡು ಚಪ್ಪಟೆಯಾಗಿ ಹರಡೋಣ. ಹೀಗೆ ಬಲವಂತದಿಂದ ಹರಡುವಾಗ ಅದರ ಮಧ್ಯ ಭಾಗವು ಸ್ವಲ್ಪವೂ ಕೆಡುವುದಿಲ್ಲ, ಆದರೆ ತುದಿಗಳು ಮಾತ್ರ ಹಿಗ್ಗಿಸಲ್ಪಡುವುವು. ಹೀಗೆಯೇ ಭೂಮಿಯ ಮೇಲ್ಮೈಯ್ಯನ್ನು ಹಿಗ್ಗಿಸಿ ಹರಡಿದಂತೆ ಭಾವಿಸಿ ಭೂಪಟ ಗಳನ್ನು ನಿರ್ಮಿಸಿರುವರು. ಈ ರೀತಿಯಲ್ಲಿ ಮರ್ಕೇಟರ್ ಎಂಬ ಭೂಗೋಳ ಶಾಸ್ತ್ರಜ್ಞನು ನಿರ್ಮಿಸಿದ ಭೂಪಟಗಳು ನಮ್ಮಲ್ಲಿ ವಾಡಿಕೆಯಾಗಿರುವುವು. ಮರ್ಕೇಟರಿನ ಭೂಮಂಡಲದ ಭೂಪಟವನ್ನೂ ಕೃತಕ ಭೂಗೋಳವನ್ನೂ ಹೋಲಿಸಿ ನೋಡಿದರೆ, ಸಮಭಾಜಕ ವೃತ್ತದ ಬಳಿಯಲ್ಲಿರುವ ಭಾಗಗಳು ಅಳತೆಯಲ್ಲಿ ಒಂದೇ ಸಮವಾಗಿ ಕಾಣುವುವು; ಆದರೆ ಉತ್ತರ ದಕ್ಷಿಣದಲ್ಲಿರುವ ಭಾಗಗಳು ವ್ಯತ್ಯಾಸ ವನ್ನು ಹೊಂದಿರುವುವು. ಉದಾಹರಣೆಗಾಗಿ ಗ್ರೀನ್‌ಲೆಂಡನ್ನು ಎರಡರಲ್ಲಿಯೂ ಹೋಲಿಸಿ ನೋಡಿ. ಗೋಳಾಕಾರವಾಗಿರುವ ಕೃತಕ ಭೂಗೋಳದಲ್ಲಿ ಉತ್ತರ ದಕ್ಷಿಣಕ್ಕೆ ಹೋದಷ್ಟೂ ಅಕ್ಷಾಂಶ ವೃತ್ತಗಳು ಚಿಕ್ಕವಾಗುತ್ತಾ ಬಂದು ಮೇರು ಗಳಲ್ಲಿ ಒಂದು ಬಿಂದುವಿನಷ್ಟಾಗುವುದು; ಆದರೆ ಮರ್ಕೇಟರಿನ ಪಟದಲ್ಲಿ ಯಾದರೋ ಅಕ್ಷಾಂಶಗಳೆಲ್ಲವೂ ಒಂದೇ ಪ್ರಮಾಣವುಳ್ಳವುಗಳಾಗಿರುವುವು.

ಈ ಕಾರಣದಿಂದ ಈ ಪಟದಲ್ಲಿ ಉತ್ತರ ದಕ್ಷಿಣ ಮೇರುಗಳ ಸಮೀಪದಲ್ಲಿರುವ ಭಾಗಗಳು ಅಷ್ಟು ದೊಡ್ಡದಾಗಿ ಕಾಣುವುವು. ಆದರೆ ಈ ಪಟದಲ್ಲಿ ದಿಕ್ಕುಗಳು ಸರಿಯಾಗಿ ತೋರಿಬರುವುದರಿಂದ ಇದು ನಾವಿಕರಿಗೆ ಬಹು ಉಪಯೋಗಕರ ವಾಗಿದೆ. ಪರಿಮಾಣಗಳಲ್ಲಿ ತೋರುವ ಈ ವ್ಯತ್ಯಾಸಗಳನ್ನು ಸಾಧ್ಯವಾದ ಮಟ್ಟಿಗೆ ನಿವಾರಿಸಲು, ಶಾಸ್ತ್ರಜ್ಞರು ಇತರ ರೀತಿಯಾದ ಹೊಸ ಪಟಗಳನ್ನು ಸಿದ್ಧಪಡಿಸಿರುವರು.

**14. ಭೂಪಟಗಳ ಬಗೆಗಳು.**—ಸಾಧಾರಣವಾಗಿ ಪಾಠಶಾಲೆಗಳಲ್ಲಿ ಉಪಯೋಗಿಸುವ ಭೂಪಟಗಳಲ್ಲಿ ಎರಡು ವಿಧಗಳಿರುವುವು:—ಸ್ವಾಭಾವಿಕ ಲಕ್ಷಣಗಳನ್ನು ತೋರಿಸುವ ಪಟಗಳು (Physical) ಮತ್ತು ರಾಜಕೀಯ ವಿಷಯಗಳನ್ನು ತೋರಿಸುವ ಪಟಗಳು (Political) ಮೊದಲನೆಯ ಬಗೆಯ ಪಟಗಳಲ್ಲಿ ಖಂಡ ಅಥವಾ ದೇಶಗಳ ಎತ್ತರದಲ್ಲಿರುವ ಭೇದಗಳನ್ನು ಬೇರೆ ಬೇರೆ ಬಣ್ಣಗಳಿಂದ ಅಥವಾ ಬಿಳುಪು ಕೆಂಪು ಬಣ್ಣಗಳ ಬೇರೆ ಬೇರೆ ಛಾಯೆಗಳಿಂದ ಸ್ಪಷ್ಟವಾಗಿ ತೋರಿಸುವುದಲ್ಲದೆ, ಅಲ್ಲಿರುವ ಪರ್ವತ, ನದಿ, ಸರೋವರ ಮೊದಲಾದ ಪ್ರಕೃತಿ ನಿರ್ಮಿತವಾದ ವಿಷಯಗಳನ್ನೂ ತೋರಿಸುವರು. ಎರಡನೆಯ ಬಗೆಯ ಪಟಗಳಲ್ಲಿ ಸರ್ಕಾರದವರು ವ್ಯವಸ್ಥೆಮಾಡಿರುವ ಡಿಸ್ಟ್ರಿಕ್ಟು ಮೊದಲಾದ ಬೇರೆ ಬೇರೆ ಭಾಗಗಳನ್ನು ಬೇರೆ ಬೇರೆ ಬಣ್ಣಗಳಿಂದಲಾಗಲಿ ದಪ್ಪವಾದ ಎಲ್ಲೆಯ ಗೆರೆಗಳನ್ನು ಸುತ್ತಲೂ ಎಳೆದಿರುವುದರಿಂದಲಾಗಲಿ ತೋರಿಸಿರುವರು; ಈ ಪಟಗಳಲ್ಲಿ ನಿರ್ಮಿತ ವಾದ ಪಟ್ಟಣಗಳು, ರಸ್ತೆಗಳು, ಕಾಲುವೆಗಳು ಮೊದಲಾದ ಜನರಿಂದ ಏರ್ಪಡಿಸಿರುವ ವಿಷಯಗಳನ್ನು ತೋರಿಸಿರುವರು.

ಈ ಎರಡು ಬಗೆಯ ಪಟಗಳಲ್ಲಿಯೂ ಒಂದು ಮುಖ್ಯವಾದ ವ್ಯತ್ಯಾಸ ವಿರುವುದು. ಮೊದಲನೆಯ ಬಗೆಯ ಪಟಗಳು ಸಾಧಾರಣವಾಗಿ ಕಾಲಕಾಲಕ್ಕೆ ಬದಲಾವಣೆಯಾಗುವುದಿಲ್ಲ; ಎರಡನೆಯ ಬಗೆಯ ಪಟಗಳಾದರೋ ಯುದ್ಧ, ಜನಗಳ ಸಂಪದಭಿವೃದ್ಧಿ ಮೊದಲಾದ ಕಾರಣಗಳಿಂದ ಕಾಲ ಕಾಲಕ್ಕೆ ವ್ಯತ್ಯಾಸ ವನ್ನು ಹೊಂದುವುವು. ಈಚೆಗೆ ಯೂರೊಪ್ ಖಂಡದಲ್ಲಿ ನಡೆದ ಘೋರ ಯುದ್ಧದಿಂದ ಯೂರೊಪ್, ಏಷ್ಯ, ಆಫ್ರಿಕ ಖಂಡಗಳ ರಾಜಕೀಯ ವಿಭಾಗ ಗಳನ್ನು ತೋರಿಸುವ ಪಟಗಳಲ್ಲಿ ಉಂಟಾಗಿರುವ ಬದಲಾವಣೆಗಳು ಇದಕ್ಕೆ ನಿದರ್ಶನವಾಗಿವೆ.

**15. ಭೂಪಟಗಳ ಉಪಯೋಗ.**—ಭೂವಿವರಣೆಯನ್ನು ಕಲಿಯ ಬೇಕಾದರೆ ಭೂಪಟಗಳಂತಹ ಸಹಕಾರಿಯಾದ ಉಪಕರಣಗಳು ಮತ್ತಾವುವೂ ಇಲ್ಲ. ಆದುದರಿಂದ ಹುಡುಗರು ಗೋಡೆಗೆ ತಗಲುಹಾಕುವ ಭೂಪಟಗಳನ್ನು ಪಾಠಕಾಲದಲ್ಲಿ ಉಪಯೋಗಿಸುವುದರ ಜೊತೆಗೆ, ಮನೆಯಲ್ಲಿ ವ್ಯಾಸಂಗಮಾಡು ವಾಗ ಭೂಪಟಗಳ ಪುಸ್ತಕ(ಅಟ್ಲಾಸ್)ವನ್ನು ಉಪಯೋಗಿಸುವುದು ಅತ್ಯಂತ

ಆವಶ್ಯಕ. ಚರಿತ್ರೆಯನ್ನೂ ವರ್ತಮಾನ ಪತ್ರಿಕೆಗಳನ್ನೂ ಓದುವಾಗಲೂ ಸಹ ಹುಡುಗರು ಈ ಪುಸ್ತಕವನ್ನು ಉಪಯೋಗಿಸಬೇಕು.

ಸ್ವಾಭಾವಿಕವಾದ ಮತ್ತು ಮಾನುಷಕೃತವಾದ ಅನೇಕ ವಿಷಯಗಳನ್ನು ಭೂಪಟದಿಂದಲೇ ಚೆನ್ನಾಗಿ ಊಹಿಸಿ ತಿಳಿಯಬಹುದು. ಭೂಪಟದ ಒಂದು ಮೂಲೆಯಲ್ಲಿ ಕೊಟ್ಟಿರುವ ಪ್ರಮಾಣದ ಸಹಾಯದಿಂದ ಆ ಪಟದಲ್ಲಿ ತೋರಿಸಿರುವ ಖಂಡದ ಅಥವಾ ಅದರ ಯಾವುದೋ ಒಂದು ಭಾಗದ ವಿಸ್ತೀರ್ಣವನ್ನೂ ಅದರಲ್ಲಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕಿರುವ ದೂರವನ್ನೂ ಸುಲಭವಾಗಿ ಕಂಡುಹಿಡಿಯಬಹುದು. ಒಂದು ದೇಶದ ಭೂಪಟದಲ್ಲಿ ಆ ದೇಶದ ತೀರದ ಲಕ್ಷಣವನ್ನು ಪರಿಶೀಲಿಸಿ, ಅದರಿಂದ ಅಲ್ಲಿನ ವಾಯುಗುಣವು ಹೇಗೆ ಬದಲಾಯಿಸುತ್ತಿರಬಹುದು, ಒಳ್ಳೆಯ ಬಂದರುಗಳಿರಬಹುದೆ? ಎಂಬೀ ವಿಷಯಗಳನ್ನು ತಿಳಿಯಬಹುದು. ಆ ದೇಶದ ಎಲ್ಲೆಯ ಮತ್ತು ಸುತ್ತಲೂ ಇರುವ ಭೂಪ್ರದೇಶ ಜಲಪ್ರದೇಶಗಳ ಲಕ್ಷಣಗಳನ್ನು ಪರಿಶೀಲಿಸಿ ಆ ದೇಶದವರು ಇತರ ದೇಶದವರೊಂದಿಗೆ ಎಷ್ಟರಮಟ್ಟಿಗೆ ಬಳಕೆಮಾಡಿಕೊಂಡಿರಬಹುದೆಂಬುದನ್ನು ತಿಳಿದುಕೊಳ್ಳಬಹುದು. ಅಕ್ಷಾಂಶದ ಎತ್ತರ ಮತ್ತು ತೀರದ ಲಕ್ಷಣಗಳನ್ನು ನೋಡಿ, ಆ ದೇಶದ ವಾಯುಗುಣವನ್ನೂ ಬೆಳೆಗಳನ್ನೂ ತಿಳಿಯಬಹುದು. ನದಿಗಳು ಹರಿಯುವ ದಿಕ್ಕುಗಳನ್ನು ನೋಡಿ ಆ ದೇಶವು ಯಾವ ಕಡೆಗೆ ಇಳಿಜಾರಾಗಿದೆ ಎಂಬುದನ್ನು ತಿಳಿಯಬಹುದು. ಮುಖ್ಯವಾದ ಪಟ್ಟಣಗಳ ಸನ್ನಿವೇಶವನ್ನು ಗಮನಿಸಿ ಅವುಗಳ ಪ್ರಾಮುಖ್ಯಕ್ಕೆ ಕಾರಣಗಳೇನಿರಬಹುದೆಂಬುದನ್ನು ಊಹಿಸಬಹುದು. ಹೀಗೆ ಅನೇಕ ವಿಷಯಗಳನ್ನು ಭೂಪಟದ ಸಹಾಯದಿಂದಲೇ ಕಲಿಯಬಹುದು.

**16. ನಕ್ಷೆ ಬರೆಯುವುದು.**—ಭೂವಿವರಣೆಯನ್ನು ಕಲಿಯುವಾಗ ಭೂಪಟಗಳನ್ನು ನೋಡುವುದು ಮಾತ್ರವೇ ಸಾಲದು; ಅವುಗಳ ನಕ್ಷೆಗಳನ್ನು ತಕ್ಕಮಟ್ಟಿಗೆ ಚೆನ್ನಾಗಿ ಬರೆಯುವುದನ್ನು ಕಲಿತರೆ ವಿಷಯಗಳು ಚೆನ್ನಾಗಿ ಮನಸದಟ್ಟಾಗುವುವು. ಒಂದು ದೇಶದ ನಕ್ಷೆ ಬರೆಯುವುದನ್ನು ಕಲಿಯುವಾಗ, ಮೊದಲು ಭೂಪಟದಲ್ಲಿ ಆ ದೇಶದ ಆಕಾರದ ಅಥವ ಎಲ್ಲೆಯ ಮುಖ್ಯ ಲಕ್ಷಣಗಳನ್ನು ಗಮನಿಸಿ, ಭೂಪಟವನ್ನು ನೋಡಿಕೊಂಡು ಪದೇ ಪದೇ ಆಕಾರವನ್ನು ಬರೆದು ಅಭ್ಯಾಸಮಾಡಬೇಕು. ಎಣ್ಣೆಯ ಕಾಗದ ಅಥವಾ ಟ್ರೇಸಿಂಗ್ ಪೇಪರನ್ನು ಉಪಯೋಗಿಸಿ ಆಕಾರವನ್ನು ಬೇರೊಂದು ಕಾಗದದ ಮೇಲೆ ಬರೆದುಕೊಂಡು ತಿದ್ದಿ ಅಭ್ಯಾಸಮಾಡಬೇಕು; ಕೆಲವು ಸಂದರ್ಭಗಳಲ್ಲಿ ಬೇರೆ ಬೇರೆ ಅಳತೆಯ ಸರಳರೇಖೆಗಳನ್ನು ಕ್ಲ್ಪಪ್ತರೂಪಗಳಲ್ಲಿ ಕಲ್ಪಿಸಿಕೊಂಡು ಅವುಗಳ ಸಹಾಯದಿಂದ ಆಕಾರವನ್ನು ಬರೆಯಬೇಕು. ಅಂತೂ ಕೊನೆಗೆ ನೆನಪಿನಿಂದಲೇ ಆಕಾರಗಳನ್ನು ತಕ್ಕಮಟ್ಟಿಗೆ ಚೆನ್ನಾಗಿ ಬರೆಯುವುದನ್ನು ಅಭ್ಯಾಸಮಾಡುವುದು ಆವಶ್ಯಕ.

ಆಕಾರವನ್ನು ತೋರಿಸುವ ನಕ್ಷೆಗಳನ್ನು ಬರೆದುಕೊಂಡು ಒಂದೊಂದು ನಕ್ಷೆಯಲ್ಲಿ ಒಂದೊಂದು ಬಗೆಯ ವಿಷಯಗಳನ್ನು ಗುರುತುಮಾಡುವುದರಿಂದ, ಆ ವಿಷಯಗಳು ಚೆನ್ನಾಗಿ ಮನದಟ್ಟಾಗುವುದು. ಒಂದು ದೇಶದ ಮೇಲ್ಮೈಯ್ಯ ಲಕ್ಷಣ, ಮಳೆ, ಬೆಳೆಗಳು, ಖನಿಜಗಳು, ರಸ್ತೆಗಳು, ಪಟ್ಟಣಗಳು, ರಾಜಕೀಯ ವಿಭಾಗಗಳು, ಜನಸಾಂದ್ರತೆ ಮೊದಲಾದ ವಿಷಯಗಳಲ್ಲಿ ಒಂದೊಂದನ್ನು ಒಂದೊಂದು ನಕ್ಷೆಯಲ್ಲಿ ಗುರುತುಮಾಡಬೇಕು. ಇಂತಹ ನಕ್ಷೆಗಳನ್ನು ಬರೆಯುವುದರಿಂದ ವಿಷಯಗಳು ಮನದಟ್ಟಾಗುವಹಾಗೆ ಭೂಪಟಗಳಲ್ಲಿ ನೋಡಿದ ಮಾತ್ರದಿಂದಲೇ ಎಂದಿಗೂ ಮನದಟ್ಟಾಗಲಾರವು.

ಹೀಗೆ ನಕ್ಷೆ ಬರೆಯುವುದರಿಂದ ಚರಿತ್ರೆಯ ಪಾಠಗಳಿಗೂ ವಿಶೇಷ ಸಹಕಾರಿಯಾಗುವುದು.

## IV. ಭೂಮಿಯ ಮೇಲ್ಮೈಯ್ಯ ಕೆಲವು ಸ್ವಾಭಾವಿಕ ಲಕ್ಷಣಗಳು

**17. ಭೂಭಾಗ ಮತ್ತು ಜಲಭಾಗಗಳು.**—ಭೂಮಿಯ ಮೇಲ್ಮೈಯ್ಯಲ್ಲಿ ಮುಕ್ಕಾಲುಪಾಲು ನೀರೂ ಕಾಲುಪಾಲು ನೆಲವೂ ಇರುವುದು. ಭೂಮಿಯನ್ನು ಭೂಪಟದಲ್ಲಿ ಪೂರ್ವಾರ್ಧ ಗೋಳ ಪಶ್ಚಿಮಾರ್ಧ ಗೋಳಗಳಾಗಿ ಸಾಮಾನ್ಯವಾಗಿ ತೋರಿಸುವುದಲ್ಲದೆ ಮತ್ತೊಂದು ರೀತಿಯಲ್ಲಿಯೂ ತೋರಿಸುವುದುಂಟು; ಸಾಧ್ಯವಾದ ಮಟ್ಟಿಗೂ ನೀರಿನ ಭಾಗವು ಒಂದು ಕಡೆಗೂ, ನೆಲದ ಭಾಗವು ಇನ್ನೊಂದು ಕಡೆಗೂ ಬರುವಂತೆ ಭೂಮಿಯನ್ನು ಎರಡು ಅರ್ಧ ಗೋಳಗಳಾಗಿ ವಿಂಗಡಿಸಿ ಈ ಕೆಳಗೆ ಬರೆದಿರುವಂತೆ ತೋರಿಸುವರು.




ಚಿತ್ರ 12 (a)



ಚಿತ್ರ 12 (b)

ಇವುಗಳಲ್ಲಿ ಲಂಡನ್ ಪಟ್ಟಣವೇ ಕೇಂದ್ರುವಾಗುಳ್ಳ ಭೂಮಿಯ ಅರ್ಧ ಗೋಳವೇ ಒಂದು, ನ್ಯೂಜಿಲೆಂಡ್ ದ್ವೀಪದ ಹತ್ತಿರದ ಒಂದು ಬಿಂದುವನ್ನು ಕೇಂದ್ರುವಾಗುಳ್ಳ ನೀರಿನ ಅರ್ಧ ಗೋಳವೇ ಇನ್ನೊಂದು; ಇವುಗಳಲ್ಲಿ ಮೊದಲ ನೆಯದನ್ನು ಸ್ಥಳಾರ್ಧಗೋಳವೆಂದೂ ಎರಡನೆಯದನ್ನು ಜಲಾರ್ಧಗೋಳವೆಂದೂ ಕರೆಯಬಹುದು. ಸ್ಥಳಾರ್ಧಗೋಳದಲ್ಲಿ ಸಾಮಾನ್ಯವಾಗಿ ಪೃಥ್ವಿಯ ನೆಲದ ಭಾಗವೆಲ್ಲ ಅಡಕವಾಗಿದೆ; ಜಲಾರ್ಧಗೋಳದಲ್ಲಿ ಶೇಕಡ 92 ಪಾಲು ನೀರೇ ಅಡಕವಾಗಿದೆ.

ಭೂಪ್ರದೇಶ, ಜಲಪ್ರದೇಶಗಳೆಲ್ಲ ಸ್ವಾಭಾವಿಕವಾಗಿ ಒಂದೇ ರೀತಿಯಾಗಿಲ್ಲ. ಆಕಾರ ಪರಿಮಾಣಾದಿ ಲಕ್ಷಣಗಳಲ್ಲಿ ಇವು ವ್ಯತ್ಯಾಸಗಳನ್ನು ಹೊಂದಿವೆ. ನೆಲವು ಎತ್ತರದಲ್ಲಿ ಹೆಚ್ಚು ಕಡಿಮೆಯಾಗಿರುವುದು. ನೆಲದಮೇಲೆ ನೀರು ನಿಲ್ಲುವುದು. ನೀರಿನ ಮಧ್ಯದಲ್ಲಿ ನೆಲವಿರುವುದು. ಇಂತಹ ವಿಶೇಷ ಲಕ್ಷಣಗಳುಳ್ಳ ಭೂಭಾಗ ಜಲಭಾಗಗಳಿಗೆ ಬೇರೆ ಬೇರೆ ಸಾಮಾನ್ಯ ನಾಮಗಳನ್ನು ಅಥವಾ ಸಂಕೇತಗಳನ್ನು ಕೊಟ್ಟಿರುವರು. ಈ ಸಂಕೇತ ಪದಗಳನ್ನು ನೀವು ಪ್ರೈಮರಿ ತರಗತಿಗಳಲ್ಲಿಯೇ ಓದಿರುವಿರಾದುದರಿಂದ ಅವುಗಳ ವ್ಯಾಖ್ಯೆಗಳನ್ನು ಪುನಃ ಇಲ್ಲಿ ಹೇಳುವುದು ಅನಾವಶ್ಯಕ. ಖಂಡ, ಸಾಗರ, ನದಿಗಳ ಕೆಲವು ಸಾಮಾನ್ಯ ಲಕ್ಷಣಗಳನ್ನು ಹೆಚ್ಚು ವಿಶದವಾಗಿ ಇಲ್ಲಿ ತಿಳಿಯಬಹುದು.

**18. ಖಂಡಗಳು.**—ಪೃಥ್ವಿಯಲ್ಲಿರುವ ಒಟ್ಟು ನೆಲವನ್ನು ಏಷ್ಯ, ಯುರೋಪ್, ಆಫ್ರಿಕ, ಉತ್ತರ ಅಮೆರಿಕ, ದಕ್ಷಿಣ ಅಮೆರಿಕ, ಓಷಿಯೇನಿಯ ಎಂಬ ಆರು ಖಂಡಗಳಾಗಿ ವಿಭಾಗಿಸಿರುವರು.

ವಿಸ್ತೀರ್ಣಕ್ಕನುಸಾರವಾಗಿ ಇವುಗಳನ್ನು ಹೀಗೆ ವಿಂಗಡಿಸಬಹುದು :— ಏಷ್ಯ (ಅತಿ ದೊಡ್ಡದು), ಆಫ್ರಿಕ, ಉ. ಅಮೆರಿಕ, ದ. ಅಮೆರಿಕ, ಯೂರೋಪ್, ಓಷಿಯೇನಿಯ (ಅತಿ ಚಿಕ್ಕದು), ಪೆಸಫಿಕ್‌ಸಾಗರದಲ್ಲಿರುವ ದ್ವೀಪಗಳಿಗೆಲ್ಲಾ ಒಟ್ಟು ಓಷಿಯೇನಿಯ ಎಂಬ ಹೆಸರನ್ನು ಕೊಟ್ಟು ಅದನ್ನು ಮೊದಲು ಒಂದು ಖಂಡ ವಾಗಿ ಭಾವಿಸಿದ್ದರು; ಆಸ್ಟ್ರೇಲಿಯಾ ದ್ವೀಪವೊಂದನ್ನೇ ಒಂದು ಖಂಡವಾಗಿ ಭಾವಿಸುವುದು ಈಗ ವಾಡಿಕೆಯಾಗಿದೆ.

ಆಫ್ರಿಕ, ಏಷ್ಯ ಖಂಡಗಳು ಸೂಯುಸ್ ಕಾಲುವೆಯಿಂದ ಪ್ರತ್ಯೇಕಿಸಲ್ಪಟ್ಟಿವೆ; ಉತ್ತರ ಮತ್ತು ದಕ್ಷಿಣ ಅಮೆರಿಕಗಳು ಪೆನಾಮ ಕಾಲುವೆಯಿಂದ ಪ್ರತ್ಯೇಕಿಸ ಲ್ಪಟ್ಟಿವೆ.

ಏಷ್ಯ ಯೂರೋಪುಗಳಲ್ಲಿ ಉತ್ತರ ಭಾಗವು ಬಹು ಅಗಲವಾಗಿರುವುದು, ದಕ್ಷಿಣ ಭಾಗವು 3 ಪರ್ಯಾಯದ್ವೀಪಗಳುಳ್ಳುದಾಗಿರುವುದು. ಇವೆರಡರಲ್ಲಿಯೂ ಪರ್ವತಗಳೂ ಮೈದಾನಗಳೂ ಪೂರ್ವಪಶ್ಚಿಮವಾಗಿ ಹಬ್ಬಿವೆ. ಉತ್ತರ ಮತ್ತು ದಕ್ಷಿಣ ಅಮೆರಿಕಗಳಲ್ಲಿಯೂ ಆಫ್ರಿಕದಲ್ಲಿಯೂ ಉತ್ತರ ಭಾಗವು ಹೆಚ್ಚು ಅಗಲ ವಾಗಿರುವುದು, ದಕ್ಷಿಣ ಭಾಗವು ಅಗಲದಲ್ಲಿ ಕಡಿಮೆಯಾಗಿರುವುದು. ಉತ್ತರ ಮತ್ತು ದಕ್ಷಿಣ ಅಮೆರಿಕಗಳಲ್ಲಿ ಪರ್ವತಗಳೂ ಮೈದಾನಗಳೂ ಉತ್ತರ ದಕ್ಷಿಣ ವಾಗಿ ಹಬ್ಬಿವೆ. ಆಫ್ರಿಕ, ಆಸ್ಟ್ರೇಲಿಯ ಖಂಡಗಳಲ್ಲಿ ಮರುಭೂಮಿಗಳೂ ಪ್ರಸ್ಥ ಭೂಮಿಗಳೂ ಹೆಚ್ಚು.

ಯೂರೋಪಿನಲ್ಲಿ ಸಮುದ್ರತೀರವು ಬಹು ಉದ್ದವಾಗಿರುವುದು; ಆಫ್ರಿಕ ದಲ್ಲಿ ತೀರದ ಉದ್ದ ಬಹು ಕಡಿಮೆ. ಉತ್ತರ ಅಮೆರಿಕ, ಯೂರೋಪ್ ಖಂಡಗಳಲ್ಲಿ ದ್ವೀಪಗಳೂ, ಪರ್ಯಾಯದ್ವೀಪಗಳೂ, ಕೊಲ್ಲಿಗಳೂ ಹೇರಳವಾಗಿವೆ. ಏಷ್ಯ, ಯೂರೋಪ್, ಉತ್ತರ ಅಮೆರಿಕ ಖಂಡಗಳಲ್ಲಿ ಬಹು ಹೆಚ್ಚು ಭಾಗವು ಉತ್ತರ ಸಮಶೀತೋಷ್ಣ ವಲಯದಲ್ಲಿರುವುದು; ಆಫ್ರಿಕ, ದಕ್ಷಿಣ ಅಮೆರಿಕಗಳಲ್ಲಿ ಬಹು ಹೆಚ್ಚು ಭಾಗವು ಉಷ್ಣವಲಯದಲ್ಲಿರುವುದು; ಆಸ್ಟ್ರೇಲಿಯದ ಅರ್ಧ ಭಾಗವು ಉಷ್ಣವಲಯದಲ್ಲಿಯೂ, ಉಳಿದ ಅರ್ಧ ಭಾಗವು ದಕ್ಷಿಣ ಸಮಶೀತೋಷ್ಣವಲಯ ದಲ್ಲಿಯೂ ಇರುವುದು.

ಪ್ರಾಣಿವರ್ಗ ಸಸ್ಯ ವರ್ಗಗಳ ವಿಷಯವಾಗಿ ಈ ಖಂಡಗಳನ್ನು 3 ವರ್ಗಗಳಾಗಿ ವಿಂಗಡಿಸಬಹುದು:—(1) ಏಷ್ಯ, ಯೂರೋಪ್, ಆಫ್ರಿಕಗಳು ಪರಸ್ಪರ ಸಂಬಂಧಿ ಸಿರುವುದರಿಂದ ಇವುಗಳಲ್ಲಿ ಸಸ್ಯಗಳೂ ಪ್ರಾಣಿಗಳೂ ಸಾಮಾನ್ಯವಾಗಿ ಒಂದೇ ಬಗೆ ಯಾಗಿವೆ; (2) ಉತ್ತರ ಮತ್ತು ದಕ್ಷಿಣ ಅಮೆರಿಕಗಳು ಪಶ್ಚಿಮಾರ್ಧಗೋಳ ದಲ್ಲಿ ಬೇರೆಯಾಗಿರುವುದರಿಂದ ಅಲ್ಲಿನ ಸ್ವಾಭಾವಿಕವಾದ ಸಸ್ಯ ಮತ್ತು ಪ್ರಾಣಿಗಳು ಇನ್ನೊಂದು ಬಗೆಯವಾಗಿವೆ; (3) ಆಸ್ಟ್ರೇಲಿಯ ಮತ್ತು ಅದರ ಬಳಿಯ ದ್ವೀಪ ಗಳು, ಈಸ್ಟಿಂಡಿಯಾ ದ್ವೀಪಗಳಿಂದಲೂ, ಆಳವಾದ ಬಾಂಡ ಮೊದಲಾದ ಸಮುದ್ರ

ಗಳಿಂದಲೂ ಪ್ರತ್ಯೇಕಿಸಲ್ಪಟ್ಟಿರುವುದರಿಂದ, ಅಲ್ಲಿನ ಸ್ವಾಭಾವಿಕವಾದ ಸಸ್ಯ ಮತ್ತು ಪ್ರಾಣಿಗಳು ಮತ್ತೊಂದು ಬಗೆಯವಾಗಿವೆ.*

**19. ಸಾಗರಗಳು.**—ಭೂಮಿಯ ಮೇಲಿರುವ ನೀರಿನ ಭಾಗವನ್ನು ಐದು ಸಾಗರಗಳಾಗಿ ಭಾಗಿಸಿದ್ದಾರೆ. ಈ ಸಾಗರಗಳು ಒಂದಕ್ಕೊಂದು ಸೇರಿರುವುದರಿಂದಲೂ ಯಾವಾಗಲೂ ಒಂದೇ ಮಟ್ಟದಲ್ಲಿ ನಿಲ್ಲುವುದು ನೀರಿಗೆ ಸಹಜ ಲಕ್ಷಣವಾಗಿರುವುದರಿಂದಲೂ ಸಾಗರಗಳ ನೀರೆಲ್ಲ ಒಂದೇ ಮಟ್ಟದಲ್ಲಿ ನಿಂತಿರುವುದು, ಅಂದರೆ ಸಮುದ್ರ ಮಟ್ಟವು ಎಲ್ಲಾ ಕಡೆಯೂ ಒಂದೇ ಆಗಿರುವುದು ಈ ಕಾರಣದಿಂದಲೇ. ಪರ್ವತ, ಪ್ರಸ್ಥಭೂಮಿ ಮತ್ತು ಮೈದಾನ ಮೊದಲಾದವುಗಳ ಎತ್ತರವನ್ನು ಸಮುದ್ರ ಮಟ್ಟದಿಂದ ಇಷ್ಟು ಅಡಿ ಎತ್ತರವಿದೆಯೆಂದು ಲೆಕ್ಕಮಾಡಿ ಹೇಳುವರು. ಈ ಸಾಗರಗಳ ವಿಷಯವನ್ನು ಈಗ ಸ್ವಲ್ಪ ವಿಚಾರಮಾಡಿ ನೋಡೋಣ.

**ಪೆಸಿಫಿಕ್ ಸಾಗರ.**—ಇದು ಏಷ್ಯ ಖಂಡದಿಂದ ಅಮೆರಿಕ ಖಂಡದವರೆಗೂ ಉತ್ತರ ಸಾಗರದಿಂದ ದಕ್ಷಿಣ ಸಾಗರದವರೆಗೂ ಪ್ರಸರಿಸಿಕೊಂಡಿದೆ. ಇದರ ಬಹು ಹೆಚ್ಚಾದ ಉದ್ದ ಬೆಹರಿಂಗ್ ಜಲಸಂಧಿಯಿಂದ ದಕ್ಷಿಣ ಸಾಗರದವರೆಗೆ 9,000 ಮೈಲಿಗಳು. ಹಾಗೆಯೇ ಇದರ ಬಹು ಹೆಚ್ಚಾದ ಅಗಲ ಸಮಭಾಜಕ ವೃತ್ತದ ಬಳಿ 10,000 ಮೈಲಿಗಳು; ಇದರ ವಿಸ್ತೀರ್ಣ ಸುಮಾರು 5½ ಕೋಟಿ ಚದರ ಮೈಲಿಗಳು, ಅಂದರೆ ಇದರ ವಿಸ್ತೀರ್ಣವು ಭೂಮಿಯ ಮೇಲ್ಮೈಯ್ಯ ವಿಸ್ತೀರ್ಣದಲ್ಲಿ ಕಾಲುಪಾಲಿಗಿಂತ ಸ್ವಲ್ಪ ಹೆಚ್ಚಾಗಿರುವುದು. ಏಷ್ಯ ಖಂಡದ ವಿಸ್ತೀರ್ಣಕ್ಕೆ 3ರಷ್ಟಾಗುವುದು. ಈ ಸಾಗರದಲ್ಲಿ ಅನೇಕ ದ್ವೀಪಸ್ತೋಮಗಳಿರುವುವು; ಆದರೆ ನದೀಮುಖಗಳೂ ಸಮುದ್ರ ಶಾಖೆಗಳೂ ಕಡಿಮೆ. ಜಪಾನ್, ಚೀಣಾ ದೇಶಗಳಿಗೂ, ಉತ್ತರ ಮತ್ತು ದಕ್ಷಿಣ ಅಮೆರಿಕ ಖಂಡಗಳಿಗೂ ಈ ಸಾಗರದ ಮಾರ್ಗವಾಗಿ ವ್ಯಾಪಾರವು ನಡೆಯುತ್ತಿರುವುದು. ಈ ದೇಶಗಳ ಜನರಿಗೆ ಕೈಗಾರಿಕೆಗಳಲ್ಲಿ ಕುಶಲತೆಯು ಹೆಚ್ಚಾಗಿರುವ ಹಾಗೆ ವ್ಯಾಪಾರವೂ ವಿಶೇಷವಾಗಿ ಹೆಚ್ಚಿರುವುದರಿಂದ ಈ ಸಾಗರದ ಪ್ರಾಮುಖ್ಯವೂ ಹೆಚ್ಚಾಗಿರುವುದು.

**ಹಿಂದೂಸಾಗರ.**—ಇದು ಏಷ್ಯ ಖಂಡಕ್ಕೆ ದಕ್ಷಿಣದಲ್ಲಿ ದಕ್ಷಿಣ ಸಾಗರದವರೆಗೂ ಹರಡಿ ವಿಸ್ತಾರದಲ್ಲಿ ಪೆಸಿಫಿಕ್ ಸಾಗರದ ⅓ ರಷ್ಟಿರುವುದು. ಹಿಂದೂ ಚೀಣ ಪರ್ಯಾಯದ್ವೀಪ, ಮಲಯದ್ವೀಪಸ್ತೋಮ, ಆಸ್ಟ್ರೇಲಿಯ, ಯೂರೋಪ್‌ಗಳಿಗೆ ವ್ಯಾಪಾರವೂ ಸಂಚಾರವೂ ಮುಖ್ಯವಾಗಿ ಈ ಸಾಗರ ಮಾರ್ಗವಾಗಿ ನಡೆಯುವುದು.

**ಅಟ್ಲಾಂಟಿಕ್ ಸಾಗರ.**—ಇದರ ವಿಸ್ತೀರ್ಣವು ಪೆಸಿಫಿಕ್ ಸಾಗರದ ವಿಸ್ತೀರ್ಣದಲ್ಲಿ ಅರ್ಧಕ್ಕಿಂತ ಹೆಚ್ಚಿರುವುದು. ಈ ಸಾಗರವು ಬಹು ಸಂಪದ್ಯುಕ್ತ

---

* ಮೊದಲನೆಯ ಪುಸ್ತಕದಲ್ಲಿ ಹುಡುಗರು ಓದಿರುವ ವಿಷಯಗಳನ್ನು ಅನುಸರಿಸಿಕೊಂಡು ಖಂಡಗಳ ಇಂತಹ ಕೆಲವು ಮುಖ್ಯ ಲಕ್ಷಣಗಳನ್ನು ಉಪಾಧ್ಯಾಯರು ಹೇಳಿಕೊಡಬೇಕು.

ವಾದ ಯೂರೋಪ್ ಮತ್ತು ಅಮೆರಿಕ ಖಂಡಗಳ ಮಧ್ಯದಲ್ಲಿರುವುದರಿಂದಲೂ, ಇದರ ತೀರದಲ್ಲಿ ಅನೇಕ ಸಮುದ್ರಶಾಖೆಗಳೂ ಉತ್ತಮವಾದ ಬಂದರುಗಳೂ ಇರುವುದರಿಂದಲೂ, ಇದಕ್ಕೆ ಬಂದುಸೇರುವ ಅನೇಕ ನದಿಗಳು ಹಡಗಿನ ಸಂಚಾರಕ್ಕೆ ಅನುಕೂಲವಾಗಿರುವುದರಿಂದಲೂ, ಈ ಸಾಗರದ ಮಾರ್ಗವಾಗಿ ನಡೆಯುವಷ್ಟು ವ್ಯಾಪಾರವು ಇನ್ನು ಯಾವ ಸಾಗರದ ಮಾರ್ಗವಾಗಿಯೂ ನಡೆಯುವುದಿಲ್ಲ.

**ಉತ್ತರ ಸಾಗರ.**—ಇದು ಉತ್ತರ ಶೀತವಲಯದಲ್ಲಿದೆ. ಇದರ ನೀರು ಸಾಮಾನ್ಯವಾಗಿ ಯಾವಾಗಲೂ ಗಡ್ಡೆ ಕಟ್ಟಿಕೊಂಡಿರುವುದು. ಆದುದರಿಂದ ಇದರಲ್ಲಿ ಕೆಲವು ದ್ವೀಪಗಳೂ ನದೀಮುಖಗಳೂ ಇದ್ದರೂ ವ್ಯಾಪಾರಕ್ಕೂ ಜನಗಳ ಸಂಚಾರಕ್ಕೂ ಅವು ಪ್ರಯೋಜನಕರವಾಗಿಲ್ಲ. ಬಹು ದೊಡ್ಡದಾದ ತಿಮಿಂಗಿಲ, ಮೀನು ಮೊದಲಾದ ಜಲಚರಗಳು ಇದರಲ್ಲಿ ವಾಸಮಾಡುವುದರಿಂದ, ಇವುಗಳನ್ನು ಹಿಡಿಯುವುದು ಅನೇಕರಿಗೆ ಲಾಭಕರವಾದ ಕೆಲಸವಾಗಿದೆ.

**ದಕ್ಷಿಣ ಸಾಗರ.**—ಇದು ದಕ್ಷಿಣ ಶೀತವಲಯದಲ್ಲಿದೆ. ಇದರಲ್ಲಿಯೂ ಸಾಮಾನ್ಯವಾಗಿ ಯಾವಾಗಲೂ ನೀರು ಗಡ್ಡೆಯಾಗಿರುವುದರಿಂದಲೂ, ಇದು ಭೂಖಂಡಗಳಿಗೆ ಬಹು ದೂರದಲ್ಲಿರುವುದರಿಂದಲೂ ಜನರಿಗೆ ಇದರಿಂದ ಪ್ರಯೋಜನವೇನೂ ಇಲ್ಲ. ಇದರ ದಕ್ಷಿಣ ಭಾಗದಲ್ಲಿ ಅಂಟಾರ್ಕ್‌ಟಿಕ್ ಲ್ಯಾಂಡ್ ಎಂಬ ದೊಡ್ಡ ಭೂಪ್ರದೇಶವಿರುವುದೆಂದು ಈಚೆಗೆ ಕಂಡುಹಿಡಿದಿರುವರು.

**20. ಸಾಗರಗಳ ಕೆಲವು ಸಾಮಾನ್ಯ ಲಕ್ಷಣಗಳು; ಸಾಗರದ ನೀರಿನ ಲಕ್ಷಣ.**—ಸಾಗರದ ನೀರು ಸಾಮಾನ್ಯವಾಗಿ ಮಾಸಲು ನೀಲಿಯ ಬಣ್ಣವಾಗಿರುವುದು; ಕುಡಿದರೆ ಉಪ್ಪಾಗಿ ಅಥವಾ ಸ್ವಲ್ಪ ಕಹಿಯಾಗಿ ಇರುವುದು, ಈ ನೀರಿನಲ್ಲಿ ಸುಮಾರು ಶೇಕಡ 3½ಯಷ್ಟು ಲವಣಗಳು ಮಿಶ್ರವಾಗಿರುವುದೇ ಇದಕ್ಕೆ ಕಾರಣ. ಈ ನೀರನ್ನು ಒಂದು ಪಾತ್ರೆಯಲ್ಲಿ ಹಾಕಿ ಕುದಿಸಿದರೆ ನೀರೆಲ್ಲ ಆವಿಯಾಗಿ ಹೋಗಿ ಪಾತ್ರೆಯ ತಳದಲ್ಲಿ ಲವಣ ಮಾತ್ರ ನಿಲ್ಲುವುದು. ಈ ಉಪ್ಪಿನಲ್ಲಿ ಮುಖ್ಯವಾದುವು ಅಡಿಗೆಯ ಉಪ್ಪು ಮತ್ತು ಸೀಮೆಯ ಸುಣ್ಣ. ಈ ಉಪ್ಪುಗಳಲ್ಲದೆ ಈ ನೀರಿನಲ್ಲಿ ಆಮ್ಲಜನಕ ಮೊದಲಾದ ವಾಯುಗಳೂ ಬೆರೆತಿರುವುವು. ಸಾಗರದಲ್ಲಿರುವ ಸಸ್ಯ ಮತ್ತು ಪ್ರಾಣಿಗಳು ಈ ವಾಯುಗಳ ಸಹಾಯದಿಂದಲೇ ಜೀವಿಸುತ್ತವೆ. ಕೆಲವು ವೇಳೆ ಒಂದೊಂದು ಬಣ್ಣದ ಮಣ್ಣು ಸಮುದ್ರದ ನೀರಿನಲ್ಲಿ ಬೆರೆತಿರುವುದರಿಂದ ನೀರು ಆ ಬಣ್ಣವಾಗಿರುವುದು; ಚೀಣ ದೇಶಕ್ಕೆ ಪೂರ್ವದಲ್ಲಿರುವ ಹಳದಿ ಸಮುದ್ರದ ನೀರು ಈ ಕಾರಣದಿಂದಲೇ ಹಳದಿಯಾಗಿರುವುದು.

ಸಾಗರದ ನೀರಿನಲ್ಲಿ ಲವಣಾಂಶವು ಇಷ್ಟು ಹೆಚ್ಚಾಗಿ ಇರಲು ಕಾರಣವೇನು? ಅನೇಕ ನದಿಗಳು ಸಾಗರಗಳಿಗೂ ಅವುಗಳ ಭಾಗಗಳಾದ ಸಮುದ್ರ

ಗಳಿಗೂ ಬಂದು ಬೀಳುವುವು. ನದಿಗಳು ನೆಲದಮೇಲೆ ಹರಿಯುವಾಗ ನೆಲದಲ್ಲಿರುವ ಲವಣಗಳು ನೀರಿನಲ್ಲಿ ಸೇರಿಹೋಗುವುವು. ಆದರೆ ನದಿಯ ನೀರಿನಲ್ಲಿ ಈ ಲವಣಾಂಶವು ಬಹು ಕಡಿಮೆಯಾಗಿರುವುದರಿಂದ, ಆ ನೀರು ನಮ್ಮ ನಾಲಗೆಗೆ ಉಪ್ಪಾಗಿ ತೋರುವುದಿಲ್ಲ. ಆದರೂ ನದಿಯ ನೀರನ್ನು ಶೋಧಿಸಿ ಕಾಯಿಸಿ ನೋಡಿದರೆ ಪಾತ್ರೆಯ ತಳದಲ್ಲಿ ಸ್ವಲ್ಪ ಉಪ್ಪು ನಿಲ್ಲುವುದನ್ನು ನಾವು ನೋಡಬಹುದು. ಹೀಗೆ ಸ್ವಲ್ಪ ಸ್ವಲ್ಪವಾಗಿಯೇ ನದಿಗಳಿಂದ ಸಾಗರಕ್ಕೆ ಬಂದು ಸೇರಿದ ಲವಣಗಳು ಹೊರಗೆ ಹೋಗಲು ಅವಕಾಶವಿಲ್ಲದಕಾರಣ ಸಾಗರವು ಅತ್ಯಂತ ವಿಸ್ತಾರವಾಗಿರುವುದರಿಂದ ಅದರ ನೀರು ಯಾವಾಗಲೂ ವಿಶೇಷವಾಗಿ ಆವಿಯಾಗಿ ಮೇಲಕ್ಕೇರುತ್ತಲೂ ಇರುವುದು. ಅಲ್ಲದೆ ಮಳೆಯ ನೀರು ಭೂಮಿಗೆ ಬಿದ್ದು ನದಿಯ ರೂಪದಲ್ಲಿ ಸಾಗರವನ್ನು ಸೇರುವಾಗ ಪುನಃ ಲವಣವನ್ನು ತರುವುದು. ಈ ಮೇರೆ ಸಾಗರಕ್ಕೆ ಕೋಟ್ಯಾನುಕೋಟಿ ವರ್ಷಗಳಿಂದ ಸ್ವಲ್ಪವಾಗಿ ಲವಣಗಳು ನೆಲದ ಮಾರ್ಗವಾಗಿ ಬಂದು ಸೇರುತ್ತಲೇ ಇರುವುವು. ಈ ಕಾರಣದಿಂದಲೇ ಸಾಗರದ ನೀರು ಬಹಳ ಉಪ್ಪಾಗಿರುವುದು.

ಸಾಗರದ ನೀರಿಗಿಂತ ಅದರ ಶಾಖೆಗಳಾದ ಕೆಲವು ಸಮುದ್ರಗಳ ನೀರು ಇನ್ನೂ ಹೆಚ್ಚು ಉಪ್ಪಾಗಿರುವುದು. (ಉದಾ. ಕೆಂಪು ಸಮುದ್ರ, ಮೆಡಿಟರೇನಿಯನ್ ಸಮುದ್ರ) ಏಕೆಂದರೆ, ಈ ಸಮುದ್ರಗಳಿಗೆ ನದಿಗಳ ಮೂಲಕ ಬಂದು ಸೇರುವ ಸಿಹಿನೀರು ಬಹಳ ಕಡಿಮೆ; ಅಲ್ಲದೆ ಅವುಗಳ ನೀರು ಹೆಚ್ಚಾಗಿ ಆವಿಯಾಗಿ ಹೋಗುವುದು.

**ಸಾಗರದ ಆಳ.**—ಆಳವಿಲ್ಲದ ಸ್ವಲ್ಪ ನೀರಿನಿಂದ ಮುಚ್ಚಲ್ಪಟ್ಟಿರುವ ಬಂಡೆಗಳಿಂದ ಹಡಗುಗಳಿಗೆ ಬಹು ಅಪಾಯವಿರುವುದರಿಂದ, ಹಡಗು ನಡೆಯಿಸುವವರಿಗೆ ಸಾಗರದ ಆಳವನ್ನು ತಿಳಿಯಬೇಕಾದುದು ಅತ್ಯಾವಶ್ಯಕ. ಆದುದರಿಂದ ಒಂದು ಉದ್ದವಾದ ತಂತಿಯ ಕೊನೆಗೆ ಭಾರವಾದ ಗುಂಡನ್ನು ಕಟ್ಟಿ ಸಾಗರದ ಅನೇಕ ಕಡೆಗಳಲ್ಲಿ ಅದನ್ನು ನೀರಿನೊಳಕ್ಕೆ ಇಳಿಯಬಿಟ್ಟು ಆಳವನ್ನು ಕಂಡುಹಿಡಿಯುವರು. ಭೂಖಂಡಗಳ ಸಮೀಪದಲ್ಲಿಯೂ ಅವುಗಳ ಪಕ್ಕಗಳಲ್ಲಿರುವ ದ್ವೀಪಗಳ ಸಮೀಪದಲ್ಲಿಯೂ ಸಾಗರದ ನೀರಿನ ಆಳ ಕಡಿಮೆ; ಸಾಧಾರಣವಾಗಿ 100 ಮಟ್ಟ(ಅಥವಾ ಆಳುದ್ದ)ದೊಳಗೆ ಇರುವುದು; ಖಂಡಗಳಿಗೆ ಆಚೆ ಆಳ ಹೆಚ್ಚುತ್ತಾ ಹೋಗುವುದು. ಭೂಖಂಡದಲ್ಲಿ ಅಲ್ಲಲ್ಲಿ ಎತ್ತರವಾದ ಪ್ರದೇಶಗಳೂ ತಗ್ಗಾದ ಪ್ರದೇಶಗಳೂ ಹೇಗೆ ಇರುವುವೋ, ಹಾಗೆಯೇ ಸಾಗರದಲ್ಲಿಯೂ ಅದರ ತಳದಲ್ಲಿರುವ ನೆಲವು ಅಲ್ಲಲ್ಲಿ ಎತ್ತರವಾಗಿಯೂ ತಗ್ಗಾಗಿಯೂ ಇರುವುದು. ಪೆಸಿಫಿಕ್ ಸಾಗರದಲ್ಲಿ ಫಿಲಿಪೈನ್ ದ್ವೀಪಗಳಿಗೆ ಪೂರ್ವದಲ್ಲಿರುವ ಲಡ್ರೋನ್ ದ್ವೀಪಗಳ ಬಳಿ ಸಾಗರದ ಆಳ 31,600 ಅಡಿ ಇರುವುದು. ಇದುವರೆಗೂ ಕಂಡುಹಿಡಿ

ದಿರುವ ಆಳವಾದ ಸಾಗರ ಭಾಗಗಳಲ್ಲಿ ಇದೇ ಅತ್ಯಂತ ಆಳವಾದುದು. ನೆಲದ ಮೇಲೆ ಅತ್ಯಂತ ಎತ್ತರವಾಗಿರುವ ಪರ್ವತಶಿಖರವಾದ ಎವರೆಸ್ಟಿನ ಎತ್ತರವೂ ಈ ಸಾಗರದ ಒಳಭಾಗದ ಆಳವೂ ಸ್ವಲ್ಪ ಹೆಚ್ಚು ಕಡಿಮೆ ಒಂದೇ ಎಂದು ಹೇಳ ಬಹುದು.

**ಸಾಗರದ ನೀರಿನ ಶೀತೋಷ್ಣಗಳು.**—ಭೂಮಿಗೆ ಹೇಗೋ ಹಾಗೆ ಸಾಗರಕ್ಕೂ ಶಾಖವು ಸೂರ್ಯನಿಂದಲೇ ಬರುವುದರಿಂದ ಅಕ್ಷಾಂಶಗಳಿಗೂ ಋತು ಗಳಿಗೂ ಅನುಸಾರವಾಗಿ ಸಾಗರದ ನೀರು ಉಷ್ಣವಾಗುವುದು. ಆದರೆ ನೆಲದಲ್ಲಿ ಕೆಳಕ್ಕೆ ಹೋದಹಾಗೆಲ್ಲ ಶಾಖವು ಹೆಚ್ಚುವುದು, ಸಾಗರದಲ್ಲಿ ಕೆಳಕ್ಕೆ ಹೋದಷ್ಟೂ ನೀರು ತಣ್ಣಗಾಗುತ್ತಾ ಬರುವುದು; ಉಷ್ಣವಲಯದಲ್ಲಿಯೂ ಕೂಡ ಬಹಳ ಆಳವಾದ ಕಡೆಗಳಲ್ಲಿ ಸಾಗರದ ತಳದಲ್ಲಿರುವ ನೀರು ಮಂಜಿನಗಡ್ಡೆಯ ಹಾಗೆ ಶೀತವಾಗಿರುವುದು. ಬಹು ನಿಧಾನವಾಗಿ ಕಾಯುವ ನೀರಿನ ಸಹಜಲಕ್ಷಣವೂ ಸಾಗರದ ಪ್ರವಾಹಗಳೂ ಇದಕ್ಕೆ ಮುಖ್ಯ ಕಾರಣಗಳಾಗಿವೆ.

**ಸಾಗರದಲ್ಲಿರುವ ಜಲಚರ ಪ್ರಾಣಿಗಳು.**—ಸಾಗರದಲ್ಲಿ ಅನೇಕ ಬಗೆಯ ಮೀನುಗಳೂ ಜಲಜಂತುಗಳೂ ವಾಸಮಾಡುವುವು. ಒಂದೊಂದು ಭಾಗದ ಅಕ್ಷಾಂಶಕ್ಕೂ ಆಳಕ್ಕೂ ಅನುಸಾರವಾಗಿ ಅಲ್ಲಿನ ಜಲಜಂತುಗಳು ಬೇರೆ ಬೇರೆ ಬಗೆಯಾಗಿರುವುವು. ಉತ್ತರ ಸಾಗರದಲ್ಲಿ ಬಹು ದೊಡ್ಡದಾದ ತಿಮಿಂಗಿಲ, ಸೀಲ್ ಎಂಬ ಜಲಜಂತುಗಳು ವಾಸಮಾಡುವುವು; ಜನಗಳಿಗೆ ಇವುಗಳ ಮಾಂಸದಿಂದ ಆಹಾರವೂ ಕೊಬ್ಬಿನಿಂದ ಎಣ್ಣೆಯೂ ದೊರೆಯುವುದು. ಸಮಶೀತೋಷ್ಣವಲಯ ಮತ್ತು ಉಷ್ಣವಲಯಗಳಲ್ಲಿ ಆಹಾರದ ಮೀನುಗಳು ವಿಶೇಷವಾಗಿ ದೊರೆಯು ವುವು. ಸಾಗರದ ನೀರಿನಲ್ಲಿ ಕೆಲವು ಬಗೆಯ ಸಸ್ಯಗಳೂ ಬೆಳೆಯುವುವು; ಈ ಸಸ್ಯಗಳು ಕೆಲವು ಜಲಜಂತುಗಳಿಗೆ ಆಹಾರವಾಗಿರುವುವು.

ಉಷ್ಣವಲಯದಲ್ಲಿ ವಿಶೇಷ ಆಳವಿಲ್ಲದ ಕಡೆಗಳಲ್ಲಿ ಮುತ್ತಿನ ಚಿಪ್ಪಿನ ಹುಳುಗಳು ವಾಸಮಾಡುವುವು. ಈ ಹುಳುಗಳಿಂದ ಮುತ್ತುಗಳು ಆಗುವುವು. ಇಂತಹ ಕಡೆಗಳಲ್ಲಿಯೇ ಇನ್ನೊಂದು ಬಗೆಯ ಹುಳುಗಳು (ಹವಳದ ಹುಳು) (ಕಾರಲ್ ಹುಳುಗಳು) ಉಷ್ಣವಾಗಿರುವ ಉಪ್ಪು ನೀರಿನಲ್ಲಿ ಚಿಪ್ಪುಗಳನ್ನು ಕಟ್ಟಿಕೊಂಡು ವಾಸಮಾಡುವುವು. ಈ ಹುಳುಗಳು ಸತ್ತಮೇಲೆ ಇವುಗಳ ಚಿಪ್ಪುಗಳು ಅಸಂಖ್ಯಾತವಾಗಿ ಸೇರಿ ಸಣ್ಣ ಸಣ್ಣ ದ್ವೀಪಗಳಾಗುವುವು. ಇಂಡಿಯಾ ದೇಶದ ಸಮೀಪದಲ್ಲಿರುವ ಲಕ್ಷ ದ್ವೀಪಗಳೂ ಮಾಲ್ಡಿವ್ ದ್ವೀಪಗಳೂ ಹೀಗೆಯೇ ಉಂಟಾದುವು.

**ಸಾಗರದಲ್ಲಿರುವ ನೀರ್ಗಲ್ಲು (ಐಸ್) ಮತ್ತು ನೀರ್ಗಲ್ಲಿನ ಗುಡ್ಡ ಗಳು.**—ಉತ್ತರ ಮತ್ತು ದಕ್ಷಿಣ ಸಾಗರಗಳಲ್ಲಿ ಶೀತವು ವಿಪರೀತವಾಗಿರುವು

ದರಿಂದ, ಅಲ್ಲಿ ಸಾಮಾನ್ಯವಾಗಿ ವರ್ಷದಲ್ಲೆಲ್ಲ ನೀರು ಗಡ್ಡೆ ಕಟ್ಟಿಕೊಂಡೆ ಇರುವುದು ; ನಡುಚಳಿಗಾಲದಲ್ಲಿ ಇದು ಬಹಳ ಹೆಚ್ಚು.




ಚಿತ್ರ 13



ಚಿತ್ರ 14

ಈ ಸಾಗರಗಳ ತೀರದಲ್ಲಿ ಎತ್ತರವಾದ ನೆಲದ ಮೇಲೆ ಹಿಮವು ಬೀಳುವುದು ; ಇದು ಒಟ್ಟುಗೂಡಿ ಗಟ್ಟಿಯಾಗಿ ನೀರ್ಗಲ್ಲಿನ ಪ್ರವಾಹವಾಗಿ ನಿಧಾನವಾಗಿ

ಸಾಗರದ ಕಡೆಗೆ ಹರಿಯುತ್ತಾ ತನ್ನ ದಾರಿಯಲ್ಲಿರುವ ಕಲ್ಲುಬಂಡೆಗಳನ್ನು ಕೊಚ್ಚಿಕೊಂಡು, ತಗ್ಗಿನಲ್ಲಿರುವ ಸಾಗರಕ್ಕೆ ಅಥವಾ ಸಮುದ್ರಕ್ಕೆ ಹರಿಯುವುದು. ಈ ಪ್ರವಾಹವು ತನ್ನ ನಾಲಗೆಯನ್ನು ಚಾಚಿದಂತೆ ಸಮುದ್ರದ ನೀರಿನ ಮೇಲೆ ಚಾಚಿಕೊಳ್ಳುವುದು; ಇದರ ಮುಖಭಾಗವು ಅಲೆಗಳ ಹೊಡೆತದಿಂದ ಸಡಲಿಸಲ್ಪಟ್ಟು ಸಮುದ್ರದ ಮೇಲೆ ತೇಲಿಹೋಗುವುದು; ಹೀಗೆ ತೇಲಿಹೋಗುವ ನೀರ್ಗಲ್ಲಿನ ತುಂಡುಗಳು ದೊಡ್ಡದಾದ ಗುಡ್ಡಗಳಂತೆ ಕಾಣುವುವು. ಈ ನೀರ್ಗಲ್ಲಿನ ಗುಡ್ಡಗಳಲ್ಲಿ ಕಲ್ಲೂ ಮಣ್ಣೂ ವಿಶೇಷವಾಗಿ ಸೇರಿರುವುದರಿಂದ ಇವುಗಳ ಹೆಚ್ಚು ಭಾಗವು ನೀರಿನಲ್ಲಿ ಮುಳುಗಿಕೊಂಡಿರುವುದು; ಸ್ವಲ್ಪ ಭಾಗ ಮಾತ್ರ ಮೇಲುಗಡೆಗೆ ಕಾಣುವುದು. ಇವು ಹೀಗೆ ತೇಲಿಕೊಂಡು ಬಂದು ಉಷ್ಣವಾದ ಭಾಗಗಳಲ್ಲಿ ಕರಗಿಹೋಗುವುವು; ಆಗ ಕಲ್ಲೂ ಮಣ್ಣೂ ಸಮುದ್ರದ ತಳಕ್ಕೆ ಹೋಗುವುದು. ಉತ್ತರ ಸಾಗರದಲ್ಲಿ ಗ್ರೀನ್‌ಲೆಂಡ್ ಬಳಿಯಿಂದ ಅನೇಕ ನೀರ್ಗಲ್ಲಿನ ಗುಡ್ಡಗಳು ಪ್ರತಿವರ್ಷವೂ ನ್ಯೂಫೌಂಡ್‌ಲೆಂಡ್ ದ್ವೀಪದ ಸಮೀಪಕ್ಕೆ ಬಂದು ಅಲ್ಲಿ ಕರಗುವುದರಿಂದ ಅಲ್ಲಿ ಸಮುದ್ರದ ಆಳವು ಬಹು ಕಡಿಮೆಯಾಗಿರುವುದು ಎಂದರೆ ಸಮುದ್ರದ ತಳವು ದಿಣ್ಣೆಯಾಗಿರುವುದು. ಕೆಲವು ವೇಳೆ ಹಡಗುಗಳು ಮಂಜಿನಲ್ಲಿ ಈ ನೀರ್ಗಲ್ಲಿನ ಗುಡ್ಡಗಳನ್ನು ಕಾಣದೆ ಅದಕ್ಕೆ ತಗಲಿ ಒಡೆದು ಮುಳುಗಿಹೋಗುವುದೂ ಉಂಟು.

**ಸಾಗರದ ಮೇಲೆ ಬೀಸುವ ಗಾಳಿ ಅಥವಾ ಮಾರುತಗಳು.**— ಈ ವಿಷಯವು ಮುಂದಿನ ಅಧ್ಯಾಯದಲ್ಲಿ ವಿವರಿಸಲ್ಪಡುವುದು.

**ಅಲೆಗಳು.**—ಸಾಗರದ ನೀರು ಯಾವಾಗಲೂ ಚಲಿಸುತ್ತಲೇ ಇರುವುದು; ಈ ಚಲನೆಗಳಲ್ಲಿ ಅಲೆಗಳು, ಉಬ್ಬರವಿಳಿತಗಳು ಮತ್ತು ಪ್ರವಾಹಗಳು ಎಂದು ಮೂರು ಭೇದಗಳಿರುವುವು. ಸಾಗರದಲ್ಲಿ ಅಲೆಗಳು ಸದಾ ಬಡಿಯುತ್ತಲೇ ಇರುವುವು. ಅಲೆಗಳು ಕೆಲವು ತೀರಗಳಲ್ಲಿ 80 ಅಡಿಗಳಷ್ಟು ಎತ್ತರವಾಗಿ ಏಳುವುದು ಉಂಟು; ಇವುಗಳಿಂದ ತೀರದಲ್ಲಿರುವ ಬಂಡೆಗಳು ಒಡೆಯಲ್ಪಟ್ಟು ಮರಳಾಗುವುದು. ಇಂತಹ ಅಗಾಧವಾದ ಅಲೆಗಳಿಗೆ ಗಾಳಿಯೇ ಮುಖ್ಯ ಕಾರಣ. ಬಿರುಗಾಳಿ ಬೀಸುವಾಗ ಅಲೆಗಳು ಬಹು ದೊಡ್ಡದಾಗಿ ಬರುವುದು; ಗಾಳಿ ಶಾಂತವಾಗಿರುವಾಗ ಚಿಕ್ಕವಾಗಿ ಬರುವುವು. ಸಮುದ್ರವು ಉಬ್ಬುವ ಕಾಲದಲ್ಲಿ ಅಲೆಗಳು ಬಹು ದೊಡ್ಡವಾಗುವುವು.

**ಸಮುದ್ರದ ಉಬ್ಬರವಿಳಿತಗಳು.**—24 ಗಂಟೆ 52 ನಿಮಿಷಗಳಿಗೆ ಎರಡಾವೃತ್ತಿ ಸಮುದ್ರವು ಪ್ರತಿಯೊಂದು ತೀರದಲ್ಲಿಯೂ ಉಬ್ಬಿದ ಹಾಗೆ ಕಾಣುವುದು. ಪ್ರತಿಸಲವೂ ಸುಮಾರು 6 ಗಂಟೆಗಳು ಉಬ್ಬುವುದು, ಸುಮಾರು

6 ಗಂಟೆಗಳು ಇಳಿಯುವುದು. ಇದನ್ನು ಸಮುದ್ರದ ಉಬ್ಬರವಿಳಿತಗಳೆಂದು ಕರೆಯಬಹುದು.

ಇಂತಹ ಉಬ್ಬರವಿಳಿತಗಳಿಗೆ ಕಾರಣವೇನು? ಸೂರ್ಯ ಚಂದ್ರರು ಭೂಮಿಯನ್ನು ಆಕರ್ಷಿಸುತ್ತಿರುವರು; ಭೂಮಿಯ ಮೇಲ್ಮೈಯ್ಯ ಮುಕ್ಕಾಲುಪಾಲು ನೀರಿನಿಂದ ಆವರಿಸಲ್ಪಟ್ಟಿರುವುದು; ಸೂರ್ಯ ಚಂದ್ರರ ಆಕರ್ಷಣಶಕ್ತಿಯಿಂದ ಈ ನೀರು ಒಂದು ಕಡೆಗೆ ಎಳೆಯಲ್ಪಟ್ಟು ಉಬ್ಬುವುದು. ಭೂಮಿಯ ದೈನಂದಿನ ಚಲನೆಯಿಂದ ಈ ಉಬ್ಬಿದ ನೀರು ಒಂದು ಕಡೆಗೆ ಹರಿಯುತ್ತಾ ಹೋಗುವುದು. ಇದನ್ನು ಉಬ್ಬರದ ಅಲೆಯೆಂದು ಕರೆಯಬಹುದು.



ಚಿತ್ರ 15

ಈ ಉಬ್ಬರವಿಳಿತಗಳು ಸಾಗರದಲ್ಲಿ ವಿಶೇಷವಾಗಿ ಕಾಣುವುದಿಲ್ಲ. ಸಾಗರದಲ್ಲಿ ನೀರು ಸಾಧಾರಣವಾಗಿ 2–3 ಅಡಿಗಳಿಗಿಂತ ಹೆಚ್ಚಾಗಿ ಉಬ್ಬುವುದಿಲ್ಲ. ಆದರೆ ಉಬ್ಬರದ ಅಲೆಗಳು ಭೂಭಾಗಗಳನ್ನೂ ನದೀಮುಖಗಳನ್ನೂ ಸಂಧಿಸಿದರೆ, ಒಂದರ ಹಿಂದೆ ಒಂದು ನುಗ್ಗಿ ಬಹು ಎತ್ತರವಾಗಿ ಏಳುವುವು. ನದೀಮುಖ ಅಥವಾ ಖಾರಿಯು ಸಮುದ್ರದ ಕಡೆಗೆ ಅಗಲವಾಗಿದ್ದು ಹಿಂದುಗಡೆಗೆ ಇಕ್ಕಟ್ಟಾಗಿದ್ದರೆ, ಅದರೊಳಕ್ಕೆ ಈ ಉಬ್ಬರದ ಅಲೆಗಳು ಎತ್ತರವಾಗಿ ನುಗ್ಗುವುವು. ಕನಡಾ ರಾಜ್ಯದಲ್ಲಿರುವ ಫಂಡಖಾರಿಯಲ್ಲಿ ಉಬ್ಬರದ ಅಲೆಯು 70 ಅಡಿ ಎತ್ತರವಾಗಿ ಏಳುವುದು. ಗಂಗಾ ನದಿಯ ಮುಖವೊಂದರಲ್ಲಿ (ಹೂಗ್ಲಿ) ಉಬ್ಬರದ ಅಲೆಯು ಬಹು ರಭಸದಿಂದ ಹೊಕ್ಕು ನದಿಯಲ್ಲಿ ಬಹಳ ದೂರದವರೆಗೂ ಹರಿಯುವುದು. ಆ ಹೊತ್ತಿನಲ್ಲಿ ಹಡಗುಗಳೆಲ್ಲ ದಡದ ಹತ್ತಿರ ಲಂಗರಿನಲ್ಲಿರುವುವು. ಹಾಗಿಲ್ಲದಿದ್ದರೆ ಅಲೆಗಳ ರಭಸಕ್ಕೆ ಚೂರು ಚೂರಾಗಿ ಹೋಗುವುವು.

**ಉಬ್ಬರವಿಳಿತಗಳಿಂದಾಗುವ ಪ್ರಯೋಜನಗಳು.**— ಉಬ್ಬರವಿಳಿತಗಳಿಂದ ಉಂಟಾದ ಪ್ರಬಲವಾದ ಅಲೆಗಳು, ನದಿಗಳು ಸಮುದ್ರಕ್ಕೆ ತಂದು

ಹಾಕುವ ಮಣ್ಣು ಮೆಕ್ಕಲನ್ನು ದೂರಕ್ಕೆ ಕೊಚ್ಚಿಕೊಂಡುಹೋಗಿ, ನದಿಗಳ ಮುಖಗಳು ಹಡಗುಗಳ ಸಂಚಾರಕ್ಕೆ ತಕ್ಕಂತೆ ಅಗಲವಾಗಿಯೂ ಆಳವಾಗಿಯೂ ಇರುವಂತೆ ಮಾಡುವುವು. ಕೆಲವು ನದಿಗಳ ಮುಖದಲ್ಲಿ ಆಳವು ಹೆಚ್ಚಾಗಿರುವುದಿಲ್ಲ; ಇದರಿಂದ ದೊಡ್ಡ ಹಡಗುಗಳು ಸಮುದ್ರದ ಕಡೆಯಿಂದ ಆ ನದಿಗಳ ದಡದ ಮೇಲಿರುವ ಬಂದರುಗಳಿಗೆ ಹೋಗುವುದಕ್ಕೆ ಅವಕಾಶವಾಗುವುದಿಲ್ಲ; ಆದರೆ ಸಮುದ್ರದ ಉಬ್ಬರ ಕಾಲದಲ್ಲಿ ಉಬ್ಬರದ ಅಲೆಯು ಸಮುದ್ರದ ಕಡೆಯಿಂದ ಆ ನದಿಯ ಮುಖದೊಳಕ್ಕೆ ನುಗ್ಗಿ ಆಳವಾಗುವಂತೆ ಮಾಡುವುದರಿಂದ, ಆ ವೇಳೆಯಲ್ಲಿ ಮಾತ್ರ ಹಡಗುಗಳು ನದಿಯ ಮುಖದಿಂದ ದೇಶದೊಳಕ್ಕೆ ಹೋಗಬಹುದು; ಇಳಿತದ ವೇಳೆಯಲ್ಲಿ ಹಿಂದಿರುಗಿ ಬರಬಹುದು.

**ಸಾಗರದ ನೀರಿನ ಪ್ರವಾಹಗಳು.**—ಸಾಗರದ ನೀರಿನಲ್ಲಿಯೂ ಪ್ರವಾಹಗಳುಂಟು. ಅಂದರೆ ಸಾಗರದ ನೀರು ಒಂದು ಕಡೆಯಿಂದ ಮತ್ತೊಂದು ಕಡೆಗೆ ಹರಿಯುತ್ತಿರುವುದು; ಉಷ್ಣವಲಯದಲ್ಲಿ ಸಾಗರದ ನೀರು ಹೆಚ್ಚಾಗಿ ಕಾದು ಹಗುರವಾಗುವುದು; ಇದರಿಂದ ಈ ನೀರು ಸಾಗರದ ಮೇಲುಭಾಗದಲ್ಲಿ ಶೀತವಾದ ಮೇರುಗಳ ಕಡೆಗೆ ಹರಿಯುತ್ತದೆ. ಶೀತವಲಯದಲ್ಲಿರುವ ಶೀತವಾದ ಮತ್ತು ಭಾರವಾದ ನೀರು ಸಾಗರದ ತಳಭಾಗದಲ್ಲಿ ಸಮಭಾಜಕ ವೃತ್ತದ ಕಡೆಗೆ ನಿಧಾನವಾಗಿ ಪ್ರವಹಿಸುವುದು. ಮೊದಲನೆಯದನ್ನು ಉಷ್ಣೋದಕ ಪ್ರವಾಹವೆಂದೂ ಎರಡನೆಯದನ್ನು ಶೀತೋದಕ ಪ್ರವಾಹವೆಂದೂ ಕರೆಯಬಹುದು. ಇವು ಪ್ರವಹಿಸುವ ಮಾರ್ಗಕ್ಕೆ ಅಡ್ಡವಾಗಿ ಭೂಭಾಗಗಳು ಇರುವುದರಿಂದ ದಿಕ್ಕುಗಳನ್ನು ಬದಲಾಯಿಸಿಕೊಂಡು ಹರಿಯುವುವು. ಈ ಪ್ರವಾಹಗಳಿಗೆ ಒಂದೆರಡು ಉದಾಹರಣೆಗಳನ್ನು ಕೊಡುವುದಾವಶ್ಯಕ.

ಉಷ್ಣೋದಕ ಪ್ರವಾಹಗಳಲ್ಲಿ **ಗಲ್ಫ್ ಸ್ಟ್ರೀಮ್** ಎಂಬುದು ಪ್ರಸಿದ್ಧವಾಗಿದೆ; ಇದು ಮೆಕ್ಸಿಕೋ ಕೊಲ್ಲಿಯಿಂದ ಹೊರಟು ಈಶಾನ್ಯಾಭಿಮುಖವಾಗಿ ಬ್ರಿಟಿಷ್ ದ್ವೀಪಗಳು, ಐರ್ಲೆಂಡ್ ಮತ್ತು ನಾರ್ವೆಗಳ ಕಡೆಗೆ ಹರಿಯುವುದು. ಶೀತೋದಕ ಪ್ರವಾಹಗಳಲ್ಲಿ **ಲಬ್ರಡಾರ್ ಪ್ರವಾಹವು** ಗ್ರೀನ್‌ಲೆಂಡಿನ ಸಮೀಪದಿಂದ ಹೊರಟು ದಕ್ಷಿಣಾಭಿಮುಖವಾಗಿ ಉತ್ತರ ಅಮೆರಿಕ ಖಂಡದ ಪೂರ್ವಕ್ಕೆ ಹರಿಯುವುದು. ಇವೆರಡೂ ನ್ಯೂಫೌಂಡ್‌ಲೆಂಡಿಗೆ ಪೂರ್ವದಲ್ಲಿ ಸಂಧಿಸುವುವು. ಆಗ ಲಬ್ರಡಾರ್ ಪ್ರವಾಹದೊಡನೆ ಬಂದ ನೀರ್ಗಲ್ಲಿನ ಗುಡ್ಡಗಳು ಕರಗುವುವು; ಅಲ್ಲಿ ವಿಶೇಷವಾಗಿ ಮಂಜು ಬೀಳುವುದು; ಆದುದರಿಂದ ನಾವಿಕರು ಹಡಗುಗಳನ್ನು ಅತ್ಯಂತ ಜಾಗರೂಕತೆಯಿಂದ ನಡೆಸಬೇಕಾಗಿರುವುದು.

**ಸಾಗರದಲ್ಲಿರುವ ದ್ವೀಪಗಳು.**—ಪ್ರತಿಯೊಂದು ಸಾಗರದಲ್ಲಿಯೂ ದ್ವೀಪಗಳು ಅನೇಕವಾಗಿರುವುವು; ಮುಖ್ಯವಾಗಿ ಪೆಸಿಫಿಕ್ ಸಾಗರದಲ್ಲಿ ಸಾಗರದ ನಡುವಣ ದ್ವೀಪಗಳು ಅನೇಕವಾಗಿರುವುವು.

ದ್ವೀಪಗಳಲ್ಲಿ ಸಾಮಾನ್ಯವಾಗಿ ಎರಡು ವಿಧ:—ಖಂಡಾವರಣದಲ್ಲಿರುವ ದ್ವೀಪಗಳು ಮತ್ತು (ಸಾಗರದ ನಡುವೆ ಇರುವ) ದ್ವೀಪಗಳು. **ಖಂಡಾವರಣ ದಲ್ಲಿರುವ ದ್ವೀಪಗಳು** (ಉದಾ. ಬ್ರಿಟಿಷ್ ದ್ವೀಪಗಳು) ಖಂಡಗಳಿಗೆ ಸಮೀಪ ವಾಗಿರುವುವು. ಬಹು ಹಿಂದಿನ ಕಾಲದಲ್ಲಿ ಇವು ಖಂಡಗಳಿಗೆ ಸೇರಿದ್ದುವು; ಈಗಲೂ ಈ ದ್ವೀಪಗಳಿಗೂ ಖಂಡಗಳಿಗೂ ಮಧ್ಯೆ ಇರುವ ಸಮುದ್ರ ಅಷ್ಟು ಆಳವಾಗಿಲ್ಲ. ಈ ದ್ವೀಪಗಳಲ್ಲಿರುವ ಬೆಟ್ಟದ ಸಾಲುಗಳು ಸಮೀಪದ ಖಂಡ ದಲ್ಲಿರುವವುಗಳಂತೆಯೇ ಇರುವುವು; ಖಂಡದಲ್ಲಿರುವ ಸಸ್ಯ ಪ್ರಾಣಿಗಳೇ ಇಲ್ಲಿಯೂ ಇರುವುವು. ಆದರೆ **ಸಾಗರದ ನಡುವಣ ದ್ವೀಪಗಳ** (ಉದಾ. ಮಡಗಾಸ್ಕರ್, ಆಸ್ಟ್ರೇಲಿಯ) ಲಕ್ಷಣಗಳು ಬೇರೆ ಬೇರೆಯಾಗಿರುವುವು. ಇವು ಖಂಡಗಳಿಗೆ ದೂರವಾಗಿರುವುವು; ಇವುಗಳಿಗೂ ಖಂಡಗಳಿಗೂ ಮಧ್ಯೆ ಸಮುದ್ರವು ಆಳವಾಗಿರುವುದು; ಇವುಗಳಲ್ಲಿರುವ ಸಸ್ಯಗಳೂ ಪ್ರಾಣಿಗಳೂ ಖಂಡದಲ್ಲಿರುವವು ಗಳಂತಿಲ್ಲ.

ದ್ವೀಪಗಳಿಂದ ಜನರಿಗೆ ಅನೇಕ ಪ್ರಯೋಜನಗಳುಂಟು:—(1) ಕೆಲವು ಸಣ್ಣ ದ್ವೀಪಗಳು ಸಮುದ್ರದ ಬಿರುಗಾಳಿಗಳನ್ನು ತಡೆದು ತಮ್ಮ ಹಿಂದಿರುವ ಬಂದರುಗಳಲ್ಲಿ ನೀರು ಶಾಂತವಾಗಿರುವಂತೆಯೂ ಹಡಗುಗಳು ನಿಲ್ಲಲು ಅನು ಕೂಲವಾಗಿರುವಂತೆಯೂ ಮಾಡುವುವು. (*ಉದಾ.—ಬೊಂಬಾಯಿ ದ್ವೀಪ.)

(2) ಅನೇಕ ದೊಡ್ಡ ದ್ವೀಪಗಳು ಫಲವತ್ತಾಗಿಯೂ ಖನಿಜಗಳುಳ್ಳವು ಗಳಾಗಿಯೂ ಇರುವುದರಿಂದ, ಖಂಡಗಳಲ್ಲಿರುವ ದೇಶಗಳಂತೆಯೇ ಜನರ ವಾಸಕ್ಕೂ ವ್ಯವಸಾಯುವೇ ಮೊದಲಾದ ಕಸಬುಗಳಿಂದ ಅವರ ಏಳಿಗೆಗೂ ಅನು ಕೂಲವಾಗಿರುವುವು. (ಉದಾ.—ಬ್ರಿಟಿಷ್ ದ್ವೀಪಗಳು, ಜಪಾನ್ ದ್ವೀಪಗಳು.)

(3) ಕೆಲವು ದ್ವೀಪಗಳು ಸಾಗರಮಧ್ಯದಲ್ಲಿರುವುದರಿಂದ ವ್ಯಾಪಾರದ ಹಡಗುಗಳು ನಿಲ್ಲುವುದಕ್ಕೂ ಕಲ್ಲಿದ್ದಲು, ಆಹಾರ ಮೊದಲಾದ ಆವಶ್ಯಕವಾದ ಪದಾರ್ಥಗಳನ್ನು ಹಡಗಿನವರು ಒದಗಿಸಿಕೊಳ್ಳುವುದಕ್ಕೂ ಉಪಯೋಗವಾಗಿರು ವುವು. (ಉದಾ. ಹವಯಿ, ಅಜೋರ್ಸ್ ದ್ವೀಪಗಳು.)

(4) ಇಕ್ಕಟ್ಟಾದ ಜಲಸಂಧಿಗಳಲ್ಲಿರುವ ದ್ವೀಪಗಳಲ್ಲಿ ಯುದ್ಧದ ಹಡಗು ಗಳನ್ನೂ ಫಿರಂಗಿಗಳನ್ನೂ ಇಟ್ಟುಕೊಂಡು, ಯುದ್ಧ ಕಾಲದಲ್ಲಿ ಶತ್ರುಗಳು ಆ ಜಲಸಂಧಿಗಳ ಮಾರ್ಗವಾಗಿ ಬಾರದಂತೆ ಸುಲಭವಾಗಿ ತಡೆಯಬಹುದು. (ಉದಾ.—ಬೇಬಲ್ ಮ್ಯಾಂಡೆಬ್ ಜಲಸಂಧಿಯಲ್ಲಿರುವ ಪೆರಿಂ ದ್ವೀಪ.)

---

* ಹೀಗೆ ಉದಾಹರಣೆಗಳನ್ನು ಕೊಟ್ಟಿರುವ ಕಡೆಗಳಲ್ಲಿ ಇಂತಹ ಉದಾಹರಣೆಗಳನ್ನು ಉಪಯೋಗಿಸಿ ಉಪಾಧ್ಯಾಯರು ವಿಷಯಗಳನ್ನು ವಿವರಿಸಬೇಕೆಂಬುದೇ ನಮ್ಮ ಉದ್ದೇಶವಾಗಿದೆ. ಕೊಟ್ಟಿರುವ ಉದಾಹರಣೆಗಳನ್ನು ಮಾತ್ರ ಹುಡುಗರು ಕಂಠಪಾಠ ಮಾಡುವುದರಿಂದ ಸ್ವಲ್ಪವೂ ಪ್ರಯೋಜನವಾಗುವುದಿಲ್ಲ.

**ಸಮುದ್ರದ ಪ್ರಯೋಜನಗಳು.**—ಸಮುದ್ರವು ದೇಶದೊಳಕ್ಕೆ ವಿಶೇಷವಾಗಿ ನುಗ್ಗಿದ್ದರೆ, ವ್ಯಾಪಾರದ ಹಡಗುಗಳಿಗೆ ಅನುಕೂಲವಾದ ಜಲಮಾರ್ಗಗಳೂ ಬಂದರುಗಳೂ ಇರುವುವು. ಒಂದು ಪ್ರದೇಶಕ್ಕೆ ಸಮುದ್ರವು ಸಮೀಪದಲ್ಲಿದ್ದರೆ, ಅಲ್ಲಿ ಬೇಸಗೆಯಲ್ಲಿ ಸೆಕೆಯೂ ಚಳಿಗಾಲದಲ್ಲಿ ಚಳಿಯೂ ಕಡಿಮೆಯಾಗಿರುವುವು; ಮಳೆಯು ಹೆಚ್ಚಾಗಿ ಬೀಳುವುದು. ಅನೇಕ ಸಮುದ್ರಗಳಲ್ಲಿ ಮೀನುಗಳು ವಿಶೇಷವಾಗಿರುವುದರಿಂದ, ಅನೇಕ ಜನರು ಅಲ್ಲಿ ಮೀನುಗಳನ್ನು ಹಿಡಿದು ಜೀವನ ಮಾಡುವರು. ಒಂದು ದೇಶದ ಪಕ್ಕದಲ್ಲಿ ಸಮುದ್ರವಿದ್ದರೆ ಆ ಕಡೆಯಿಂದ ಶತ್ರುಗಳು ಸುಲಭವಾಗಿ ಬರದಂತೆ ತಡೆಯಾಗಿರುವುದು. ಸಮುದ್ರತೀರದ ನಿವಾಸಿಗಳು ಸಾಮಾನ್ಯವಾಗಿ ಸಾಹಸಿಗಳಾಗಿಯೂ ಧೈರ್ಯಶಾಲಿಗಳಾಗಿಯೂ ಅಭಿವೃದ್ಧಿಗೆ ಬರಲು ಅಭಿಲಾಷೆಯುಳ್ಳವರಾಗಿಯೂ ಇರುವರು.

**21. ನದಿಗಳು ಹರಿಯುವ ರೀತಿ.**—ಸಾಮಾನ್ಯವಾಗಿ ನದಿಗಳು:—(1) ಎತ್ತರವಾದ ಪ್ರದೇಶಗಳಲ್ಲಿ ಹುಟ್ಟಿ, (2) ಮೈದಾನಗಳ ಮೇಲೆ ಹರಿದು, (3) ಅನೇಕ ಮುಖವುಳ್ಳವುಗಳಾಗಿ ಸಮುದ್ರವನ್ನು ಅಥವ ಸಾಗರವನ್ನು ಸೇರುತ್ತವೆ.

(1) ಪರ್ವತಗಳ ಮೇಲೆ ಮಳೆಯು ವಿಶೇಷವಾಗಿ ಬೀಳುವುದು. ಕೆಲವು ಕಡೆ ಹಿಮವೂ ಬೀಳುವುದು. ಪರ್ವತದ ಒಂದು ಭಾಗದ ನೀರು ಒಟ್ಟುಗೂಡಿ ಸಣ್ಣ ಪ್ರವಾಹವಾಗುವುದು; ಈ ಸಣ್ಣ ನದಿಯು ಮುಂದಕ್ಕೆ ಹರಿಯುವಾಗ ಆ ಪರ್ವತದ ಇತರ ತೊರೆಗಳು ಇದಕ್ಕೆ ಸೇರುವುವು. ನದಿಯು ಹೀಗೆ ಪರ್ವತದ ತಪ್ಪಲುಗಳಲ್ಲಿ ಹರಿಯುವಾಗ, ಅದರ ನೀರು ಹೆಚ್ಚಾಗಿರುವುದಿಲ್ಲ. ದೊಡ್ಡ ಉಪನದಿಗಳೂ ಸೇರುವುದಿಲ್ಲ; ನೆಲವು ಇಳಿಜಾರಾಗಿರುವುದರಿಂದ ನದಿಯಲ್ಲಿ ಸೆಳವು ಹೆಚ್ಚು, ಕೆಲವು ಕಡೆ ಜಲಪಾತಗಳೂ ಇರುವುವು. ಆದುದರಿಂದ ಈ ಸ್ಥಿತಿಯಲ್ಲಿ ನದಿಯು ವ್ಯವಸಾಯಕ್ಕಾಗಲಿ ದೋಣಿಗಳ ಸಂಚಾರಕ್ಕಾಗಲಿ ಉಪಯೋಗವಾಗುವುದಿಲ್ಲ; ಆದರೆ ಕೆಲವು ಜಲಪಾತಗಳಲ್ಲಿ ವಿದ್ಯುಚ್ಛಕ್ತಿಯನ್ನು ಕಲ್ಪಿಸಿ ಯಂತ್ರಗಳನ್ನು ನಡೆಯಿಸುವುದಕ್ಕೂ ದೀಪಗಳನ್ನು ಉರಿಸುವುದಕ್ಕೂ ಉಪಯೋಗಿಸುವರು. ನೀರಿನ ಶಕ್ತಿಯಿಂದ ಯಂತ್ರಗಳನ್ನೂ ನಡೆಯಿಸುವರು.

(2) ಮೈದಾನದ ಪ್ರದೇಶದಲ್ಲಿ ಇಳಿಜಾರು ಬಹಳ ಕಡಿಮೆಯಾಗಿರುವುದರಿಂದ ನದಿಯು ಅಲ್ಲಿ ಅಗಲವಾಗಿಯೂ ನಿಧಾನವಾಗಿಯೂ ಹರಿಯುವುದು; ಜಲಪಾತಗಳು ಬಹಳ ಕಡಿಮೆ; ಉಪನದಿಗಳು ಹೆಚ್ಚಾಗಿ ಬಂದು ಸೇರುವುದರಿಂದ ನೀರು ಹೆಚ್ಚಾಗಿರುವುದು. ಆದುದರಿಂದ ಈ ಸ್ಥಿತಿಯಲ್ಲಿ ನದಿಯಿಂದ ಕಾಲುವೆಗಳನ್ನು ತೆಗೆದು ಅದರ ನೀರನ್ನು ವ್ಯವಸಾಯಕ್ಕೆ ಉಪಯೋಗಿಸಿಕೊಳ್ಳಬಹುದು; ನದಿಯ ಮೇಲೆ ದೋಣಿಗಳಲ್ಲಿ ಅಥವಾ ಸಣ್ಣ ಹಡಗುಗಳಲ್ಲಿ ವ್ಯಾಪಾರದ ಸರಕುಗಳನ್ನು ತುಂಬಿ ಸಾಗಿಸಬಹುದು; ನದಿಗಳಲ್ಲಿ ಜನರು ವಿಶೇಷ

ವಾಗಿ ಏನಾನು ಹಿಡಿಯುವರು. ಈ ಕಾರಣಗಳಿಂದ ಅನೇಕ ಪಟ್ಟಣಗಳು ದೊಡ್ಡ ದೊಡ್ಡ ನದಿಗಳ ದಡಗಳಲ್ಲಿರುವುವು.

ಪರ್ವತ ಪ್ರದೇಶದಿಂದ ನದಿಯು ವೇಗವಾಗಿ ಹರಿಯುವಾಗ ಮಣ್ಣನ್ನೂ ಮೆಕ್ಕಲನ್ನೂ ವಿಶೇಷವಾಗಿ ತರುವುದು. ಮೈದಾನದ ಮೇಲೆ ನಿಧಾನವಾಗಿ ಹರಿಯುವಾಗ ಈ ಮಣ್ಣೂ ಮೆಕ್ಕಲೂ ನದಿಯ ತಳಕ್ಕೆ ಹೋಗಿ ಕ್ರಮೇಣ ನದಿಯ ಪಾತ್ರವು ಎತ್ತರವಾಗುತ್ತಾ ಬರುವುದು. ಹೀಗೆ ನದಿಯ ಪಾತ್ರವು ಕೆಲವು ಕಡೆ ಬಹು ಎತ್ತರವಾಗಿ ಪ್ರವಾಹ ಕಾಲದಲ್ಲಿ ನೀರು ದಡಗಳ ಮೇಲೆ ಉರುಳುವುದು; ಇದನ್ನು ತಪ್ಪಿಸುವುದಕ್ಕೋಸ್ಕರ ಬಲವಾದ ಏರಿಗಳನ್ನು ಕಟ್ಟುವರು (ಉದಾ. ಮಿಸಿಸಿಪಿ, ಹೊಯಾಂಗ್ಹೊ ನದಿಗಳು.)

(3) ನದಿಯು ಸಮುದ್ರವನ್ನು ಸಂಧಿಸುವಾಗ ಅದರ ವೇಗವು ಬಹು ಕಡಿಮೆಯಾಗುವುದು; ಆದುದರಿಂದ ಅದರಲ್ಲಿ ಉಳಿದಿರುವ ಮಣ್ಣು ಮೆಕ್ಕಲೆಲ್ಲ ತಳಕ್ಕೆ ಹೋಗುವುದು. ಹೀಗೆ ಮೆಕ್ಕಲು ಸೇರುತ್ತಾ ಕ್ರಮೇಣ ನದಿಯ ಮುಖದಲ್ಲಿ ಹೊಸ ಭೂಮಿಯುಂಟಾಗುವುದು. ನದಿಯು ಸಣ್ಣ ಶಾಖೆಗಳಾಗಿ ಒಡೆದು ಈ ಹೊಸ ಭೂಮಿಯ ಮೇಲೆ ಹರಿದು ಸಮುದ್ರವನ್ನು ಸೇರುವುದು. ಈ ಪ್ರತಿಯೊಂದು ಶಾಖೆಯು ಹೊಸ ಭೂಮಿಯನ್ನು ಮಾಡುತ್ತಲೇ ಬರುವುದು. ಹೀಗೆ ನದೀಮುಖಜಭೂಮಿಯು ಯಾವಾಗಲೂ ಹೆಚ್ಚುತ್ತಲೇ ಇರುವುದು. ಕ್ರಮೇಣ ಅಲ್ಲಿ ಮರ ಗಿಡಗಳು ಬೆಳೆದು ಕಾಡುಗಳುಂಟಾಗುವುವು. ಅನೇಕ ಕಡೆ ಶೈತ್ಯವು ಹೆಚ್ಚಾಗಿರುವುದರಿಂದ ಈ ಪ್ರದೇಶವು ಜನವಸತಿಗೆ ಅನಾರೋಗ್ಯ ಕರವಾಗಿರುವುದು; ಗಂಗಾನದಿಯ ನದೀಮುಖಜಭೂಮಿಯೇ ಇದಕ್ಕೆ ದೃಷ್ಟಾಂತವಾಗಿರುವುದು.

ಕೆಲವು ಸಂದರ್ಭಗಳಲ್ಲಿ ಸಮುದ್ರದ ಉಬ್ಬರದಿಂದುಂಟಾದ ಅಲೆಗಳು ನದಿಗಳು ತರುವ ಮೆಕ್ಕಲೆಲ್ಲವನ್ನು ದೂರವಾಗಿ ಒಯ್ಯುವುವು. ಆಗ ನದಿಯ ಮುಖದಲ್ಲಿ ನದೀಮುಖಜಭೂಮಿಗಳಿಗೆ ಬದಲಾಗಿ ಅಳಿವೆಗಳಾಗುವುವು.

---

## V. ವಾಯುಗುಣ ಮತ್ತು ಮಳೆ

### ವಾಯು ಮತ್ತು ವಾಯುಗುಣ

**22. ವಾಯುವು.**—ಭೂಮಿಯು ಎಲ್ಲಾ ಕಡೆಗಳಲ್ಲಿಯೂ ವಾಯುವಿನಿಂದ ಆವರಿಸಲ್ಪಟ್ಟಿದೆ. ಈ ವಾಯುವು ಎಲ್ಲಾ ಬಗೆಯ ಸಸ್ಯಗಳಿಗೂ ಪ್ರಾಣಿಗಳಿಗೂ ಮನುಷ್ಯರಿಗೂ ಎಷ್ಟೋ ಆವಶ್ಯಕವೆಂಬುದು ನಿಮಗೆ ತಿಳಿದೇ ಇದೆ. ವಾಯುವಿನಲ್ಲಿ ಸುಮಾರು $\frac{3}{4}$ ಪಾಲು ಆಮ್ಲಜನಕವೂ $\frac{1}{4}$ ಪಾಲು ಸಸಾರಜನಕವೂ

ಸ್ವಲ್ಪ ಇಂಗಾಲಾಮ್ಲವೂ ಇರುವುದು. ವಾಯುವಿನಲ್ಲಿ ನೀರು ಸ್ವಲ್ಪವಾಗಿ ಆವಿಯ ರೂಪದಲ್ಲಿ ಇದ್ದೇ ಇರುವುದು.

ವಾಯುವು ಭೂಮಿಯ ಮೇಲೆ ಸುಮಾರು 200 ಮೈಲಿ ಎತ್ತರದವರೆಗೂ ಪ್ರಸರಿಸಿಕೊಂಡಿದೆ. ವಾಯುವಿಗೆ ಸೂರ್ಯನಿಂದಲೇ ಹೆಚ್ಚು ಶಾಖ ಬರುವುದಿಲ್ಲ; ಸೂರ್ಯನ ಶಾಖದಿಂದ ಭೂಮಿಯು ಕಾದು ಭೂಮಿಯ ಶಾಖದಿಂದ ವಾಯುವೂ ಬಿಸಿಯಾಗುವುದು.

ಶೀತವಾದ ಗಾಳಿಯು ಸಾಂದ್ರವಾಗಿ ಅಥವಾ ಭಾರವಾಗಿರುವುದು; ಶಾಖವಾದ ಗಾಳಿಯು ವಿರಳವಾಗಿ ಅಥವಾ ಹಗುರವಾಗಿರುವುದು. ಅಕ್ಷಾಂಶಗಳು, ಋತುಗಳು ಮೊದಲಾದುವುಗಳಿಗನುಗುಣವಾಗಿ, ನಾನಾ ಪ್ರದೇಶಗಳ ಶಾಖವು ವ್ಯತ್ಯಸ್ತವಾಗಿರುವುದು. ಈ ವ್ಯತ್ಯಾಸವನ್ನನುಸರಿಸಿ ವಾಯುವು ನೆಲದ ಮೇಲೆ ಶೀತಪ್ರದೇಶದಿಂದ ಉಷ್ಣಪ್ರದೇಶಕ್ಕೂ, ಎತ್ತರದಲ್ಲಿ ಉಷ್ಣಪ್ರದೇಶದಿಂದ ಶೀತಪ್ರದೇಶಕ್ಕೂ ಚಲಿಸುತ್ತಲೇ ಇರುವುದು. ಹೀಗೆ ಚಲಿಸುವ ವಾಯುವನ್ನು ಗಾಳಿಯೆಂದು ಕರೆಯಬಹುದು. ಅಕ್ಕಪಕ್ಕದ ಎರಡು ಪ್ರದೇಶಗಳಲ್ಲಿ ಒಂದರಲ್ಲಿ ಚಳಿ ಹೆಚ್ಚಾಗಿಯೂ ಇನ್ನೊಂದರಲ್ಲಿ ಉಷ್ಣ ಬಹು ಹೆಚ್ಚಾಗಿಯೂ ಇದ್ದರೆ ಗಾಳಿಯು ಬಹು ವೇಗವಾಗಿ ಬೀಸುವುದು. ಇದೇ ಬಿರುಗಾಳಿ.

**23. ವಾಯುಗುಣವೆಂದರೇನು?**—ವಾಯುವಿನಲ್ಲಿ ಶಾಖವು ಎಷ್ಟಿರುವುದು? ಆರ್ದ್ರತೆಯು (ತೇವವು ಅಥವಾ ಜಲಾಂಶವು) ಎಷ್ಟಿರುವುದು? ಅದು ಎಷ್ಟು ಸಾಂದ್ರವಾಗಿರುವುದು? ಅಥವಾ ಗಾಳಿಯು ಎಷ್ಟು ವೇಗವಾಗಿ ಯಾವ ಕಡೆಯಿಂದ ಬೀಸುವುದು? ಎಂಬೀ ವಿಷಯಗಳನ್ನು ತಿಳಿದುಕೊಂಡರೆ ಒಂದು ಪ್ರದೇಶದ ವಾಯುಗುಣವನ್ನು ತಿಳಿದಂತಾಗುವುದು. ಒಂದು ಪ್ರದೇಶದಲ್ಲಿ ಪ್ರತಿಯೊಂದು ದಿನವೂ ವಾಯುವಿನ ಸ್ಥಿತಿಯು ಬದಲಾಯಿಸುತ್ತಿರುವುದು. ಆದರೆ ಅಲ್ಲಿನ ವಾಯುಗುಣವನ್ನು ವಿವರಿಸುವಾಗ, ಅಲ್ಲಿ ಒಂದು ವರ್ಷದಲ್ಲಿ ಕಂಡುಬರುವ ಮುಖ್ಯವಾದ ಬದಲಾವಣೆಗಳನ್ನೂ ಒಂದು ವರ್ಷದ ಸರಾಸರಿಯನ್ನೂ ಗಮನಿಸುವೆವು. ಒಂದು ಪ್ರದೇಶವು ಉಷ್ಣದೇಶ ಅಥವಾ ಶೀತಪ್ರದೇಶವೆಂದು ಹೇಳಿದರೆ, ಆ ಸ್ಥಳದ ಒಂದು ವರ್ಷದ ಶೀತೋಷ್ಣಗಳ ಸರಾಸರಿಯು ಅಲ್ಲಿನ ಹೆಚ್ಚು ಅಥವಾ ಕಡಿಮೆ ಉಷ್ಣವನ್ನು ತೋರಿಸುವುದೆಂದು ಅರ್ಥ.

2. ಒಂದೊಂದು ಪ್ರದೇಶದ ವಾಯುವಿನ ಸ್ಥಿತಿಯನ್ನು ಕಂಡುಹಿಡಿಯುವುದಕ್ಕಾಗಿಯೇ ಏರ್ಪಟ್ಟಿರುವ ಇಲಾಖೆಯವರು ಅನೇಕ ಯಂತ್ರಗಳನ್ನು ಉಪಯೋಗಿಸುವರು. ಇವರು ಪ್ರತಿದಿನವೂ ವಾಯುಮಾಪಕಯಂತ್ರದಿಂದ ವಾಯುವಿನ ಸಾಂದ್ರತೆಯನ್ನೂ ಇತರ ಯಂತ್ರಗಳಿಂದ ಗಾಳಿಯು ಬೀಸುವ ದಿಕ್ಕನ್ನೂ ಅದರ ವೇಗವನ್ನೂ ಕಂಡುಹಿಡಿಯುವರು. ಹೀಗೆ ಪ್ರತಿದಿನವೂ

ಆಗಾಗ ಉಷ್ಣಮಾಪಕಯಂತ್ರದಿಂದ ವಾಯುವಿನ ಉಷ್ಣವನ್ನು ಅಳತೆಮಾಡಿ, ಆ ದಿನದಲ್ಲಿ ಯಾವಾಗ ಉಷ್ಣವು ಬಹಳ ಹೆಚ್ಚಾಗಿರುವುದು, ಯಾವಾಗ ಬಹಳ ಕಡಿಮೆಯಾಗಿರುವುದು ಎಂಬುದನ್ನು ನಿರ್ಧರಿಸಿ, ಆ ದಿನದ ಸರಾಸರಿ ಉಷ್ಣವನ್ನು ಕಂಡುಹಿಡಿಯುವರು. ಈ ಉಷ್ಣಮಾಪಕಯಂತ್ರಗಳು ಕೆಲವು ಬಗೆಯಾಗಿರುವುವು; ಇವುಗಳಲ್ಲಿ ನಮ್ಮ ದೇಶದಲ್ಲಿ ಸಾಮಾನ್ಯವಾಗಿ ಫೆರನ್ ಹೀಟ್ ಉಷ್ಣಮಾಪಕಯಂತ್ರವು ಉಪಯೋಗಿಸಲ್ಪಡುವುದು. ಈ ಯಂತ್ರವು ಕುದಿಯುವ ನೀರಿನ ಶಾಖವನ್ನು 212 ಡಿಗ್ರಿಯಾಗಿಯೂ ಮಂಜುಗಡ್ಡೆಯಲ್ಲಿರುವ ಅತ್ಯಲ್ಪ ಶಾಖವನ್ನು 32 ಡಿಗ್ರಿಯಾಗಿಯೂ ನಮ್ಮ ದೇಹದ ಶಾಖವನ್ನು ಸುಮಾರು 98 ಡಿಗ್ರಿಯಾಗಿಯೂ ತೋರಿಸುವುದು. ಎಲ್ಲಾ ಪದಾರ್ಥಗಳಲ್ಲಿಯೂ ಸ್ವಲ್ಪವಾದರೂ ಶಾಖವಿದ್ದೇ ಇರುವುದು; ಈ ಶಾಖವನ್ನು ಈ ಯಂತ್ರವು ನಿಖರವಾಗಿ ತೋರಿಸುವುದು.

ವಾಯುವು ಉಷ್ಣವಾಗಿ ಅಥವಾ ಶೀತವಾಗಿ ಇದೆ ಎಂದರೆ, ಅದು ಜನರಿಗೆ ಶಾಖವಾಗಿ ಅಥವಾ ಶೀತವಾಗಿ ತೋರುವುದೆಂದು ಸಾಮಾನ್ಯವಾಗಿ ಅರ್ಥ. ಹಿಂದೆ ಕೊಟ್ಟಿರುವ ಭೂವಿವರಣೆಯ ವ್ಯಾಖ್ಯೆಯನ್ನು ನೆನಪಿಗೆ ತಂದುಕೊಂಡರೆ, ವಾಯುಗುಣವನ್ನು ವಿವರಿಸುವಾಗ, ವಾಯುವು ಸಸ್ಯ ಮತ್ತು ಪ್ರಾಣಿಗಳಿಗೂ ಮನುಷ್ಯರಿಗೂ ಎಷ್ಟು ಹಿತಕರವಾಗಿರುವುದೆಂಬುದನ್ನು ಸಾಮಾನ್ಯವಾಗಿ ನಾವು ಗಮನಿಸಬಹುದೆಂಬುದು ಸ್ಪಷ್ಟವಾಗುವುದು.

ಮೇಲೆ ಹೇಳಿದ ಯಂತ್ರಗಳಲ್ಲದೆ ಗಾಳಿಯಲ್ಲಿ ಎಷ್ಟು ತೇವವಿರುವುದೆಂಬುದನ್ನು ಕಂಡುಹಿಡಿಯುವುದಕ್ಕೆ ಇನ್ನೊಂದು ಯಂತ್ರವಿರುವುದು; ಇದಕ್ಕೆ ಆರ್ದ್ರತಾಮಾಪಕಯಂತ್ರವೆಂದು ಹೆಸರು.

ನಿಮ್ಮ ತಾಲ್ಲೂಕು ಕಛೇರಿಯ ಬಳಿಯಲ್ಲಿಟ್ಟಿರುವ ಇನ್ನೊಂದು ಯಂತ್ರವನ್ನು ನೀವು ನೋಡಿರಬಹುದು. ಆ ಯಂತ್ರದಲ್ಲಿ ಮಳೆ ಬೀಳುವಾಗ ನೀರು ಒಂದು ನಳಿಕೆಯಲ್ಲಿ ಬಿದ್ದು ಅದರ ಕೊಳವೆಯ ಮೂಲಕವಾಗಿ ಕೆಳಗಿರುವ ಪಾತ್ರೆಯೊಳಕ್ಕೆ ಬೀಳುವುದು; ಮಳೆಯು ನಿಂತಮೇಲೆ ಈ ನೀರನ್ನು ಅಳತೆ ಮಾಡಿ ಇಷ್ಟು ಅಂಗುಲ ಮಳೆ ಬಿತ್ತೆಂದು ಲೆಕ್ಕಮಾಡುವರು. ಈ ಯಂತ್ರವನ್ನು ವೃಷ್ಟಿಮಾಪಕಯಂತ್ರವೆಂದು ಕರೆಯಬಹುದು.

**24. ವಾಯುಗುಣವನ್ನು ಕಂಡುಹಿಡಿಯುವುದಕ್ಕೆ ಬೇಕಾದ ಮುಖ್ಯ ಆಧಾರಗಳು.**—ಮೇಲೆ ಸೂಚಿಸಿರುವ ಯಂತ್ರಗಳ ಸಹಾಯದಿಂದ ಶಾಸ್ತ್ರಜ್ಞರು ಒಂದು ಪ್ರದೇಶದ ವಾಯುಗುಣವನ್ನು ತಪ್ಶೀಲಾಗಿಯೂ ನಿಖರವಾಗಿಯೂ ನಿರ್ಧರಿಸುವರು. ಆದರೆ ಒಂದು ಪ್ರದೇಶದ ವಾಯುಗುಣವನ್ನು ಭೂಪಟದ ಸಹಾಯದಿಂದಲೇ ಸ್ಥೂಲವಾಗಿ ನಿರ್ಧರಿಸಬಹುದು. ಹೀಗೆ ನಿರ್ಧರಿಸಲು ಮುಖ್ಯವಾದ ಆಧಾರಗಳು ಯಾವುವೆಂದರೆ :—

(1) **ಅಕ್ಷಾಂಶ.**—ಒಂದು ಪ್ರದೇಶವು ಸಮಭಾಜಕ ವೃತ್ತಕ್ಕೆ ದೂರವಾಗಿದ್ದಷ್ಟೂ ಅಂದರೆ ಅದರ ಅಕ್ಷಾಂಶ ಸಂಖ್ಯೆಯು ಹೆಚ್ಚಿದಷ್ಟೂ ಸೆಕೆಯು ಕಡಿಮೆಯಾಗುವುದು. ಇದಕ್ಕೆ ಕಾರಣವನ್ನು ಹಿಂದೆಯೇ ಋತುಗಳ ವಿಷಯ ವನ್ನು ವಿವರಿಸುವಾಗ ಸೂಚಿಸಿದೆ. ಸಮಭಾಜಕ ವೃತ್ತದ ಬಳಿ ಸೂರ್ಯನು ಸ್ವಲ್ಪ ಹೆಚ್ಚುಕಡಿಮೆ ನೆತ್ತಿಯ ಮೇಲೆಯೆ ಕಾಣುವುದರಿಂದ ತಿಂಗಳು ತಿಂಗಳಿಗೂ ವಾಯುಗುಣವು ಅಷ್ಟು ಹೆಚ್ಚಾಗಿ ಬದಲಾಯಿಸುವುದಿಲ್ಲ; ಇಲ್ಲಿಂದ ಉತ್ತರಕ್ಕೆ ಅಥವಾ ದಕ್ಷಿಣಕ್ಕೆ ಹೋದಹಾಗೆಲ್ಲ ಮಧ್ಯಾಹ್ನದ ಸೂರ್ಯನು ಓರೆಯಾಗಿ ಕಾಣುವನು, ಶಾಖವು ಕಡಿಮೆಯಾಗಿರುವುದು. ಅಹೋರಾತ್ರಿಗಳ ಪರಿಮಾಣ ದಲ್ಲಿ ವ್ಯತ್ಯಾಸಗಳೂ ಋತುಭೇದಗಳೂ ಚೆನ್ನಾಗಿ ತೋರಿಬರುವುವು.

(2) **ಎತ್ತರ.**—ಒಂದು ಪ್ರದೇಶವು ಎತ್ತರವಾಗಿದ್ದಷ್ಟು ಅಲ್ಲಿನ ವಾಯುವಿನಲ್ಲಿ ಉಷ್ಣವು ಕಡಿಮೆಯಾಗುವುದು. ಒಂದು ಪರ್ವತವನ್ನು ನಾವು ಹತ್ತತೊಡಗಿದರೆ ಸುಮಾರಾಗಿ ಪ್ರತಿ 300 ಅಡಿಗಳ ಎತ್ತರಕ್ಕೂ ಒಂದು ಡಿಗ್ರಿ ಯಂತೆ ಉಷ್ಣವು ಕಡಿಮೆಯಾಗುತ್ತಾ ಬರುವುದು; ಇಳಿಯತೊಡಗಿದರೆ ಇದೇ ಮೇರೆ ಉಷ್ಣವು ಹೆಚ್ಚುತ್ತಾ ಬರುವುದು. ಸಮುದ್ರದ ಮಟ್ಟದಲ್ಲಿ ಗಾಳಿಯು ಸಾಂದ್ರವಾಗಿ ಅಥವಾ ಒತ್ತಾಗಿ ಇರುವುದು; ಮೇಲಕ್ಕೆ ಹೋದ ಹಾಗೆಲ್ಲ ಗಾಳಿಯು ವಿರಳವಾಗುವುದು. ನೆಲಕ್ಕೆ ಸಮೀಪದಲ್ಲಿರುವ ಸಾಂದ್ರವಾದ ಗಾಳಿಯು ಕಾದ ಭೂಮಿಯಿಂದ ಹೆಚ್ಚು ಶಾಖವನ್ನು ಹೊಂದುವುದು. ನೆಲಕ್ಕೆ ದೂರದಲ್ಲಿರುವ ವಿರಳವಾದ ಗಾಳಿಯು ಹೆಚ್ಚು ಶಾಖವನ್ನು ಹೊಂದುವುದಿಲ್ಲ. ಆದುದರಿಂದ ಸಮುದ್ರ ಮಟ್ಟದಿಂದ ದೂರಕ್ಕೆ ಹೋದಷ್ಟೂ ಗಾಳಿಯಲ್ಲಿ ಶಾಖವು ಕಡಿಮೆಯಾಗಿರುವುದು.

ಹಿಮಾಲಯ ಪರ್ವತಗಳು ಬಹು ಎತ್ತರವಾಗಿರುವುದರಿಂದ, ಅವುಗಳಲ್ಲಿ 17–18 ಸಾವಿರ ಅಡಿಗಳ ಮೇಲಿನ ಭಾಗದಲ್ಲಿ ಎಂತಹ ಬೇಸಗೆಯಲ್ಲಿಯೂ ಹಿಮದಗಡ್ಡೆಗಳು ಸಂಪೂರ್ಣವಾಗಿ ಕರಗುವುದಿಲ್ಲ. ನೀಲಗಿರಿ ಬೆಟ್ಟದ ಮೇಲೆ ನಡುಬೇಸಗೆಯಲ್ಲಿಯೂ ವಾಯುವು ತಂಪಾಗಿಯೇ ಇರುವುದು; ಆದುದ ರಿಂದಲೇ ನಮ್ಮ ಶ್ರೀಮನ್ ಮಹಾರಾಜರವರೂ ಮದರಾಸು ಗೌರ್ನರವರೂ ಬೇಸಿಗೆಯಲ್ಲಿ ನೀಲಗಿರಿಗೆ ದಯಮಾಡಿಸುವರು. ಬೆಂಗಳೂರು ಪಟ್ಟಣವು ಸಮುದ್ರ ಮಟ್ಟಕ್ಕಿಂತ 3,000 ಅಡಿ ಎತ್ತರವಾಗಿರುವುದರಿಂದ ಅಲ್ಲಿ ಬೇಸಿಗೆ ಯಲ್ಲಿಯೂ ರಾತ್ರಿಯ ಹೊತ್ತು ಸ್ವಲ್ಪ ತಂಪಾಗಿರುವುದು.

(3) **ಸಮುದ್ರಕ್ಕಿರುವ ದೂರ.**—ಸಮುದ್ರಕ್ಕೆ ಸಮೀಪದಲ್ಲಿರುವ ಪ್ರದೇಶಗಳಲ್ಲಿ ಶೀತೋಷ್ಣಗಳು ಬಹು ಹೆಚ್ಚಾಗಿರದೆ ಹವ ಸಮಧಾತುವಾಗಿರು ವುದು. ನೆಲಕ್ಕಿಂತಲೂ ನೀರು ಕಾಯುವುದು ನಿಧಾನ, ಆರುವುದೂ ನಿಧಾನ.

ಆದುದರಿಂದ ಇಂತಹ ಪ್ರದೇಶಗಳಲ್ಲಿ ಬೇಸಗೆಯಲ್ಲಿ ನೆಲವು ಹೆಚ್ಚಾಗಿ ಕಾಯುವುದು ; ಆದರೆ ಸಮುದ್ರವು ಅಷ್ಟು ಕಾದಿರುವುದಿಲ್ಲವಾದುದರಿಂದ ಸಮುದ್ರದ ಕಡೆಯಿಂದ ತಂಗಾಳಿಯು ಬೀಸಿ ತೀರದ ಉಷ್ಣವನ್ನು ಕಡಿಮೆಮಾಡುವುದು ; ಚಳಿಗಾಲದಲ್ಲಿ ಸಮುದ್ರವು ತೀರಪ್ರದೇಶಕ್ಕಿಂತಲೂ ನಿಧಾನವಾಗಿ ಆರುವುದು. ಆದುದರಿಂದ ಸಮುದ್ರದ ಕಡೆಯಿಂದ ಬೆಚ್ಚಗಿರುವ ಗಾಳಿಯು ಬೀಸಿ ನೆಲದ ಶೈತ್ಯವನ್ನು ಕಡಿಮೆಮಾಡುವುದು. ಈ ಕಾರಣದಿಂದಲೇ ಸಮುದ್ರ ತೀರದಲ್ಲಿರುವ ಮದರಾಸು ಪಟ್ಟಣದಲ್ಲಿ ಸಮುದ್ರಕ್ಕೆ ದೂರದಲ್ಲಿರುವ ಕಡಪ, ಬಳ್ಳಾರಿ ಮೊದಲಾದ ಪಟ್ಟಣಗಳಿಗಿಂತ ಬೇಸಗೆಯಲ್ಲಿ ಸೆಕೆ ಕಡಿಮೆಯಾಗಿರುವುದು. ಚಳಿಗಾಲದಲ್ಲಿ ಚಳಿ ಕಡಿಮೆಯಾಗಿರುವುದು. ಗ್ರೇಟ್ ಬ್ರಿಟನ್ ದ್ವೀಪದಲ್ಲಿರುವ ಏಡಿನ್ ಬರೋ ಪಟ್ಟಣವೂ ರಷ್ಯದಲ್ಲಿರುವ ಮಾಸ್ಕೋ ಪಟ್ಟಣವೂ ಒಂದೇ ಅಕ್ಷಾಂಶದಲ್ಲಿದ್ದರೂ, ಮಾಸ್ಕೋವಿನಲ್ಲಿ ಏಡಿನ್‌ಬರೋಗಿಂತ ಬೇಸಿಗೆಯಲ್ಲಿ ಉಷ್ಣವು 23 ಡಿಗ್ರಿ ಹೆಚ್ಚಾಗಿಯೂ, ಚಳಿಗಾಲದಲ್ಲಿ ಚಳಿಯು 7 ಡಿಗ್ರಿ ಹೆಚ್ಚಾಗಿಯೂ ಇರುವುದು.

(4) **ಇತರ ಕಾರಣಗಳು.**—(i) **ಸಾಗರದ ಪ್ರವಾಹಗಳು.**—ಸಮುದ್ರದ ಮೇಲಿನಿಂದ ಗಾಳಿಯು ಶೀತಪ್ರದೇಶಗಳ ಮೇಲೆ ಬೀಸುವುದಲ್ಲದೆ ಕೆಲವೆಡೆಗಳಲ್ಲಿ ಸಾಗರ ಪ್ರವಾಹಗಳ ಮೇಲಿನಿಂದಲೂ ಬೀಸುವುದು. ಆದುದರಿಂದ ಈ ಪ್ರವಾಹಗಳಿಂದಲೂ ವಾಯುಗುಣವು ಬದಲಾಯಿಸುವುದುಂಟು. ಬ್ರಿಟಿಷ್ ದ್ವೀಪಗಳಿಗೆ ಪಶ್ಚಿಮದಲ್ಲಿ ಗಲ್ಫ್‌ಸ್ಟ್ರೀಮ್ ಎಂಬ ಉಷ್ಣೋದಕ ಪ್ರವಾಹವು ಹರಿವುದರಿಂದ, ಅದರ ಕಡೆಯಿಂದ ಬೀಸುವ ಗಾಳಿಯು ಈ ದ್ವೀಪಗಳಲ್ಲಿ ಬಹುಮಟ್ಟಿಗೆ ಶೈತ್ಯವನ್ನು ಕಡಿಮೆಮಾಡುವುದು. ಲಬ್ರಡಾರ್ ಪರ್ಯಾಯ ದ್ವೀಪವು ಈ ದ್ವೀಪಗಳ ಅಕ್ಷಾಂಶಗಳಲ್ಲಿಯೇ ಇದ್ದರೂ ಅದರ ಪೂರ್ವಭಾಗದಲ್ಲಿ ಉತ್ತರ ಸಾಗರದ ಶೀತೋದಕ ಪ್ರವಾಹವು ಹರಿಯುವುದರಿಂದ ಅಲ್ಲಿ ಶೈತ್ಯವು ಬಹು ಹೆಚ್ಚಾಗಿರುವುದು.

(ii) **ಮಾರುತಗಳು.**—ಒಂದು ದೇಶದ ಕಡೆಗೆ ಅತಿ ಶೀತವಾದ ಅಥವಾ ಅತ್ಯುಷ್ಣವಾದ ಮಾರುತಗಳು ಬೀಸುತ್ತಿದ್ದರೆ, ಆ ದೇಶದ ವಾಯುಗುಣವು ಬದಲಾಯಿಸುವುದು. ನಮ್ಮ ಸೀಮೆಯಲ್ಲಿ ಚಳಿಗಾಲದಲ್ಲಿ ಕೆಲವು ವೇಳೆ ಉತ್ತರದಿಂದ ಬಹು ಶೀತವಾದ ಗಾಳಿಯು ಬೀಸಿ ಹೆಚ್ಚು ಚಳಿಯನ್ನುಂಟುಮಾಡುವುದು ; ಜೂನ್ ತಿಂಗಳಲ್ಲಿ ಅರಬ್ಬೀಸಮುದ್ರದಿಂದ ಬೀಸುವ ಗಾಳಿಯು ಸ್ವಲ್ಪ ಮಟ್ಟಿಗೆ ಉಷ್ಣವನ್ನು ಕಡಿಮೆಮಾಡುವುದು. ಉತ್ತರ ಅಮೆರಿಕ ಖಂಡದಲ್ಲಿ ಪೂರ್ವ ಪಶ್ಚಿಮವಾಗಿ ಹಬ್ಬಿರುವ ಪರ್ವತಗಳಿಲ್ಲದಿರುವುದರಿಂದ, ಚಳಿಗಾಲದಲ್ಲಿ ಉತ್ತರ ಸಾಗರದ ಕಡೆಯಿಂದ ದಕ್ಷಿಣದಲ್ಲಿರುವ ಫ್ಲೋರಿಡಾ ಪರ್ಯಾಯ ದ್ವೀಪದವರೆಗೂ ಶೀತ ಮಾರುತವು ಬೀಸಿ ಕೆಲವು ವೇಳೆ ಅತ್ಯಂತ ಶೈತ್ಯವನ್ನುಂಟು

ಮಾಡುವುದು ; ಈ ಗಾಳಿಯಿಂದ ಉಷ್ಣ ಪ್ರದೇಶವಾದ ಪ್ಲೋರಿಡಾದಲ್ಲಿ ಬೆಳೆಯುವ ಕಿತ್ತಿಳೆಹಣ್ಣಿನ ಫಸಲು ಕೆಟ್ಟುಹೋಗುವುದೂ ಉಂಟು.

(iii) **ಸುತ್ತಮುತ್ತಿನ ಭೂಜಲ ಪ್ರದೇಶಗಳು.**—ಸಮುದ್ರವು ಸಮೀಪದಲ್ಲಿದ್ದರೆ ದೇಶದ ಹವಾ ಹೇಗೆ ಬದಲಾಯಿಸುವುದೆಂಬುದನ್ನು ಮೇಲೆಯೇ ಹೇಳಿದೆ. ಒಂದು ಪ್ರದೇಶದ ಬಳಿ ಪರ್ವತಗಳು ಅಥವಾ ಬೆಟ್ಟಗಳು ಇದ್ದರೆ ಅಲ್ಲಿನ ವಾಯುಗುಣವು ಬದಲಾಯಿಸುವುದು. ಟಿಬೆಟ್ ದೇಶದ ಅತಿಶೀತ ಮಾರುತಗಳು ಇಂಡಿಯಾದೇಶದ ಮೇಲೆ ಬೀಸದಂತೆ ಹಿಮಾಲಯ ಪರ್ವತಗಳ ಸಾಲು ತಡೆದಿರುವುದು ; ಚಿತ್ರದುರ್ಗದ ಬಳಿ ಗುಡ್ಡವಿರುವುದರಿಂದ ಅದರ ಬಂಡೆಗಳು ಬೇಸಗೆಯಲ್ಲಿ ಕಾದು ಬಹಳ ಉಷ್ಣವಾಗುವುವು; ಚಳಿಗಾಲದಲ್ಲಿ ಆರಿಹೋಗಿ ಬಹು ಶೀತವಾಗುವುವು. ಇದರಿಂದ ಆ ಪಟ್ಟಣದಲ್ಲಿ ಶೀತೋಷ್ಣಗಳ ವ್ಯತ್ಯಾಸವು ಸುತ್ತಮುತ್ತಿನ ಇತರ ಪ್ರದೇಶಗಳಿಗಿಂತ ಹೆಚ್ಚಾಗಿರುವುದು. ಒಂದು ಪ್ರದೇಶಕ್ಕೆ ಸಮೀಪದಲ್ಲಿ ಮರುಭೂಮಿ ಇದ್ದರೆ, ಅದರ ಅತ್ಯುಷ್ಣವಾದ ಅಥವಾ ಅತಿಶೀತವಾದ ಗಾಳಿಯು ಬೀಸಿ ಆ ಪ್ರದೇಶದ ವಾಯುಗುಣವನ್ನು ಕೆಡಿಸುವುದು. ಸಿಂಧುದೇಶದಲ್ಲಿರುವ ಹೈದರಾಬಾದ್ ಪಟ್ಟಣದಲ್ಲಿ ಹಗಲು ಹೊತ್ತು ಕೆಲವು ವೇಳೆ ಬರಿಯ ಕಾಲಿನಲ್ಲಿ ನಡೆದರೆ ಕಾಲುಗಳಲ್ಲಿ ಬೊಬ್ಬೆಗಳೇಳುವುವು. ಪಾತ್ರೆಗಳಲ್ಲಿ ತುಂಬಿದ ನೀರು ರಾತ್ರಿಯಲ್ಲಿ ಶೈತ್ಯದಿಂದ ಘನೀಭೂತವಾಗಿ ಪಾತ್ರೆಗಳು ಒಡೆದುಹೋಗುವುದೂ ಉಂಟು.

(iv) **ಭೂಗುಣ.**—ಒಂದು ಪ್ರದೇಶದಲ್ಲಿ ಕಲ್ಲುನೆಲ ಹೆಚ್ಚಾಗಿದ್ದರೆ ಅಲ್ಲಿ ಬೇಸಗೆಯಲ್ಲಿ ಬಹಳ ಸೆಕೆಯೂ ಚಳಿಗಾಲದಲ್ಲಿ ಬಹಳ ಚಳಿಯೂ ಆಗುವುದು; ಅಂತಹ ಪ್ರದೇಶದ ನೀರು ಬೇಗ ಇಂಗಿಹೋಗುವುದು. ಮರಳು ಭೂಮಿಯೂ ಈ ಲಕ್ಷಣಗಳುಳ್ಳದು; ಆದರೆ ಈ ಎರಡು ತೆರದ ಪ್ರದೇಶಗಳಲ್ಲಿಯೂ ಹವ ಆರೋಗ್ಯಕರವಾಗಿರುವುದು. ನೆಲದಲ್ಲಿ ಜೇಡಿ ಅಥವಾ ಒಂಡು ಮಣ್ಣು ಹೆಚ್ಚಾಗಿದ್ದರೆ, ನೀರು ಇಂಗದೆ ನಿಂತು ನೆಲವು ಕೆಸರಾಗಿ ತರಿ ಸಾಗುವಳಿಗೆ ತುಂಬಾ ಅನುಕೂಲವಾಗುವುದು. ಆದರೆ ಇಂತಹ ಪ್ರದೇಶದಲ್ಲಿ ಹವ ಅನಾರೋಗ್ಯಕರವಾಗಿರುವುದು. ಬೆಂಗಳೂರು ಪಟ್ಟಣದ ಹವ ಆರೋಗ್ಯಕರವಾಗಿರುವುದಕ್ಕೆ ಮೊದಲನೆಯದೆ ಕಾರಣ; ಶ್ರೀರಂಗಪಟ್ಟಣವು ಅನಾರೋಗ್ಯಕರವಾಗಿರುವುದಕ್ಕೆ ಎರಡನೆಯದೆ ಕಾರಣ.

25. **ವಾಯುಗುಣದ ಬದಲಾವಣೆಗಳಲ್ಲಿ ಅಕ್ಷಾಂಶಕ್ಕೂ ಎತ್ತರಕ್ಕೂ ಇರುವ ಹೋಲಿಕೆ.**—ಮೇಲೆ ಹೇಳಿದ ಎಲ್ಲಾ ಆಧಾರಗಳನ್ನು ಒಟ್ಟಿಗೆ ಪರಿಶೀಲಿಸಿ ನೋಡಿದರೆ ಒಂದು ಪ್ರದೇಶದ ವಾಯುಗುಣವು ತಿಳಿಯಬರುವುದು. ಈ ಆಧಾರಗಳಲ್ಲಿ ಅಕ್ಷಾಂಶವು ಅತಿ ಮುಖ್ಯವಾದುದು ; ಆದುದರಿಂದಲೇ

ಅಕ್ಷಾಂಶಗಳನ್ನನುಸರಿಸಿ ಭೂಮಿಯನ್ನು ಪಂಚವಲಯಗಳಾಗಿ ಭಾಗಿಸಿರುವರು. ಎತ್ತರವು ಇದಕ್ಕೆ ಎರಡನೆಯದು. ಉಳಿದ ಕಾರಣಗಳೆಲ್ಲ ಇವೆರಡಕ್ಕೂ ಕಡಿಮೆಯಾಗಿ ಸ್ವಲ್ಪ ಮಟ್ಟಿಗೆ ವಾಯುಗುಣವನ್ನು ಮಾತ್ರ ಬದಲಾಯಿಸುವುವು.

ಅತಿ ಮುಖ್ಯ ಕಾರಣಗಳಾದ ಅಕ್ಷಾಂಶ ಎತ್ತರಗಳಲ್ಲಿ ಹೇಗೆ ಒಂದರಿಂದ ವಾಯುಗುಣವು ಬದಲಾಯಿಸುವುದೋ ಹಾಗೆಯೇ ಮತ್ತೊಂದರಿಂದಲೂ ಬದಲಾಯಿಸುವುದುಂಟು. ಸಮಭಾಜಕ ವೃತ್ತದ ಸಮೀಪದಲ್ಲಿರುವ ಪ್ರದೇಶಗಳಿಂದ ಉತ್ತರಕ್ಕೆ ಅಥವಾ ದಕ್ಷಿಣಕ್ಕೆ ಹೋದ ಹಾಗೆಲ್ಲ ಅಥವಾ ಆ ಪ್ರದೇಶದ ಪರ್ವತಗಳ ಮೇಲೆ ಹೋದರೂ ಒಂದೇ ವಿಧವಾದ ವಾಯುಗುಣದ ವಲಯಗಳು (ಇದರಂತೆಯೇ ಸಸ್ಯ ವಲಯಗಳೂ) ಕಂಡುಬರುವುವು. ಇದನ್ನು ಸ್ಪಷ್ಟಪಡಿಸಲು ಉಷ್ಣವಲಯದಲ್ಲಿರುವ ಒಂದು ಎತ್ತರವಾದ ಪರ್ವತದ ವಾಯುಗುಣವನ್ನು ಪರೀಕ್ಷಿಸಬಹುದು. ಈ ಪರ್ವತದ ಬುಡದಲ್ಲಿ ಸ್ವಲ್ಪ ಎತ್ತರದವರೆಗೆ ಉಷ್ಣವಲಯದ ಲಕ್ಷಣಗಳು (ಅಂದರೆ ಹೆಚ್ಚಾದ ಸೆಕೆಯೂ, ಉಷ್ಣವಲಯದ ಸಸ್ಯಗಳೂ) ಕಂಡುಬರುವುವು. ಇನ್ನು ಹೆಚ್ಚು ಎತ್ತರಕ್ಕೆ ಹೋದರೆ ಸಮಶೀತೋಷ್ಣವಲಯದ ಲಕ್ಷಣಗಳೂ ಕೊನೆಗೆ ಶೀತವಲಯದ ಲಕ್ಷಣಗಳೂ ತೋರಿಬರುವುವು. ಈ ವಲಯದಲ್ಲಿ ಸುಮಾರು 17–18 ಸಾವಿರ ಅಡಿ ಎತ್ತರದ ಮೇಲೆಲ್ಲಾ ಶೀತವು ಬಹು ಹೆಚ್ಚಾಗಿ ನೀರು ಘನೀಭೂತವಾಗುವುದು. ಈ ಹಿಮದ ಗಡ್ಡೆಗಳ ಕೆಳಗಣ ಭಾಗವು ಬೇಸಗೆಯಲ್ಲಿ ಕರಗುವುದು. ಮೇಲಿನ ಭಾಗವು ಯಾವಾಗಲೂ ಕರಗುವುದೇ ಇಲ್ಲ. ಯಾವ ಮಟ್ಟದ ಮೇಲೆ ಹಿಮವು ಯಾವ ಋತುವಿನಲ್ಲಿಯೂ ಕರಗದೆ ಹಾಗೆಯೇ ಇರುವುದೋ, ಆ ಮಟ್ಟಕ್ಕೆ ಅಥವಾ ಎತ್ತರಕ್ಕೆ ಹಿಮಪಙ್ಕ್ತಿ ಎಂದು ಹೆಸರು. ದಖಿನ್ನಿನ ಪರ್ವತಗಳು ಅಷ್ಟು ಎತ್ತರವಾಗಿಲ್ಲವಾದುದರಿಂದ, ಅವುಗಳಲ್ಲಿ ಶೀತವಲಯದ ಲಕ್ಷಣಗಳು ಕಂಡುಬರುವುದಿಲ್ಲ. ಆಫ್ರಿಕ, ದಕ್ಷಿಣ ಅಮೆರಿಕ ಖಂಡಗಳ ಉಷ್ಣವಲಯ ಪ್ರದೇಶಗಳಲ್ಲಿ ಬಹಳ ಎತ್ತರವಾದ ಪರ್ವತಗಳಿರುವುದರಿಂದ, ಅಲ್ಲಿ ಎಲ್ಲಾ ವಲಯಗಳ ಲಕ್ಷಣಗಳೂ ಚೆನ್ನಾಗಿ ಕಂಡುಬರುವುವು.

ಸಮಶೀತೋಷ್ಣವಲಯಗಳಲ್ಲಿರುವ ಎತ್ತರವಾದ ಪರ್ವತಗಳಲ್ಲಿ ಆ ವಲಯದ ಮತ್ತು ಶೀತವಲಯದ ಲಕ್ಷಣಗಳು ಮಾತ್ರ ಕಂಡುಬರುವುವು; ಅವುಗಳಲ್ಲಿ ಹಿಮಪಙ್ಕ್ತಿಯು ಸುಮಾರು 8–9 ಸಾವಿರ ಅಡಿಗಳ ಎತ್ತರದಲ್ಲಿರುವುದು. ಸಾಮಾನ್ಯವಾಗಿ ಅಕ್ಷಾಂಶ ಹೆಚ್ಚಿದ ಹಾಗೆಲ್ಲಾ ಹಿಮಪಙ್ಕ್ತಿಯು ಕಡಿಮೆಯಾದ ಎತ್ತರದಲ್ಲಿ ಸಿಕ್ಕುವುದು; ಶೀತವಲಯದಲ್ಲಿಯಾದರೋ ಬಹು ಸ್ವಲ್ಪ ಎತ್ತರದಲ್ಲಿಯೇ ಹಿಮಪಙ್ಕ್ತಿ ಸಿಕ್ಕುವುದು. ಗ್ರೀನ್‌ಲೆಂಡ್ ದ್ವೀಪದಲ್ಲಿ ನೆಲದ ಮೇಲೆ ಎಲ್ಲೆಲ್ಲಿಯೂ ಮಂಜುಗಡ್ಡೆಗಳಿರುವುವು. ಸಮುದ್ರದ ನೀರೆಲ್ಲ ಬಹುಮಟ್ಟಿಗೆ ಗಡ್ಡೆ ಕಟ್ಟಿಕೊಂಡೇ ಇರುವುದು.

## ನೀರು ಮತ್ತು ಮಳೆ

**26. ನೀರಿನ ರೂಪಗಳು.**—ಶಾಸ್ತ್ರಜ್ಞರು ವಸ್ತುಗಳನ್ನು ಸಾಮಾನ್ಯವಾಗಿ ಘನರೂಪ, ದ್ರವರೂಪ, ವಾಯುರೂಪ ವಸ್ತುಗಳೆಂದು 3 ಭಾಗಗಳಾಗಿ ವಿಂಗಡಿಸುವರು. ನೀರು ಈ ಮೂರು ರೂಪಗಳಲ್ಲಿಯೂ ಇರುವುದು ; ನೀರು ಘನೀಭೂತವಾದಾಗ ಅದು ಹಿಮದ ಗಡ್ಡೆಯಾಗುವುದು. ದ್ರವರೂಪವಾಗಿರುವಾಗ ಅದು ಹರಿಯುವ ನೀರಾಗುವುದು. ವಾಯುರೂಪವಾಗಿರುವಾಗ ಅದು ತೇಲಾಡುವ ಆವಿಯಾಗುವುದು. ಈ ರೂಪಭೇದಗಳಿಗೆ ನೀರಿನಲ್ಲಿರುವ ಉಷ್ಣದ ವ್ಯತ್ಯಾಸವೇ ಕಾರಣ. ನೀರಿನಲ್ಲಿ ಶಾಖವು ಹೆಚ್ಚಾದರೆ ಅದು ಆವಿಯಾಗುವುದು, ಬಹು ಕಡಿಮೆಯಾದರೆ ಮಂಜುಗಡ್ಡೆಯಾಗುವುದು.

**27. ಮಳೆಯಾಗುವ ಬಗೆ.**—ಜಲಪ್ರದೇಶಗಳಲ್ಲಿಯೂ ತೇವವಿರುವ ಎಲ್ಲಾ ಭೂಪ್ರದೇಶಗಳಲ್ಲಿಯೂ ನೀರು ಸೂರ್ಯನ ಶಾಖದಿಂದ ಕಾದು ಆವಿಯ ರೂಪದಿಂದ ವಾಯುವಿನ ಮೂಲಕ ಮೇಲಕ್ಕೆ ಏರುತ್ತಿರುವುದೆಂಬುದನ್ನೂ, ಈ ಆವಿಯು ಮೇಲಕ್ಕೆ ಏರಿದಷ್ಟೂ ತಣ್ಣಗೆ ಆರಿ ಮೋಡಗಳಾಗಿ ನಮಗೆ ಕಾಣಿಸುವುದೆಂಬುದನ್ನೂ, ಈ ಮೋಡಗಳು ಗಾಳಿಯಿಂದ ಸಂಚಾರಮಾಡುತ್ತಾ ಪರ್ವತಗಳಿಂದ ತಡೆಯಲ್ಪಟ್ಟು ಮತ್ತಷ್ಟು ಮೇಲಕ್ಕೇರಿ ತಣ್ಣಗಾಗಿ ಹನಿ ಹನಿಯಾಗಿ ಮಳೆಯ ರೂಪದಲ್ಲಿ ಭೂಮಿಯ ಮೇಲೆ ಬೀಳುವುವೆಂಬುದನ್ನೂ ನೀವು ತಿಳಿದೇ ಇರುವಿರಿ.

ವಾಯುವಿನಲ್ಲಿ ನೀರು ಯಾವಾಗಲೂ ಇದ್ದೇ ಇರುವುದು. ಇದಕ್ಕೆ ಒಂದು ಪರೀಕ್ಷೆಯನ್ನು ಮಾಡಬಹುದು. ಒಂದು ಸೀಸೆಯಲ್ಲಿ ಮಂಜುಗಡ್ಡೆಯ ಚೂರುಗಳನ್ನು ತುಂಬಿ ಇಟ್ಟರೆ, ಸ್ವಲ್ಪ ಹೊತ್ತಿನಲ್ಲಿಯೇ ಆ ಸೀಸೆಯ ಹೊರಭಾಗದಲ್ಲಿ ನೀರಿನ ಹನಿಗಳು ಕಾಣಬರುವುವು. ಸೀಸೆಯಲ್ಲಿರುವ ಮಂಜುಗಡ್ಡೆಯ ಶೈತ್ಯದಿಂದ ಅದರ ಹೊರಭಾಗವೂ ತನುವಾಗುವುದು. ಆವಿಯಿಂದ ಕೂಡಿದ ಗಾಳಿಯು ಆ ಸೀಸೆಯ ಮೇಲೆ ಬೀಸುವುದರಿಂದ ಅದೂ ತಂಪಾಗುವುದು. ಹೀಗೆ ಗಾಳಿಯಲ್ಲಿರುವ ಆವಿಯು ಶೈತ್ಯವನ್ನು ಹೊಂದಿ ನೀರಿನ ಹನಿಗಳಾಗಿ ಸೀಸೆಯ ಹೊರಭಾಗದಲ್ಲಿ ಕಾಣುವುದು.

ತಂಪು ಹೆಚ್ಚಾದಷ್ಟೂ ಗಾಳಿಗೆ ತೇವವನ್ನು ಹೀರಿಕೊಳ್ಳುವ ಅಥವಾ ಜಲಾಂಶವನ್ನು ಧರಿಸುವ ಶಕ್ತಿಯು ಕಡಿಮೆಯಾಗುವುದು. ಇದರಿಂದಲೇ ಮಳೆಗಾಲದಲ್ಲಿಯೂ ಚಳಿಗಾಲದಲ್ಲಿಯೂ ಒದ್ದೆಯ ಬಟ್ಟೆಗಳು ಬೇಗ ಒಣಗುವುದಿಲ್ಲ ; ಬೇಸಗೆಯಲ್ಲಿ ಮಾತ್ರ ಬಹುಬೇಗ ಒಣಗುವುವು. ಆದರೆ ಒಂದೊಂದು ವೇಳೆ ಗಾಳಿ ಶಾಖವಾಗಿದ್ದರೆ ಅದು ನೀರಿನ ಆವಿಯಿಂದ ತುಂಬಿರುವುದರಿಂದ ಇನ್ನು ಹೆಚ್ಚು ತೇವವನ್ನು ಹೀರಲಾರದು. ಆದುದರಿಂದಲೇ ಬೇಸಗೆಯಲ್ಲಿ ಒಂದೊಂದು

ವೇಳೆ ಶಾಖದಿಂದ ನಮ್ಮ ಮೈ ಬೆವರಿದಾಗ ಬೆವರು ಬೇಗನೆ ಆರದೆ—ಅಂದರೆ ಗಾಳಿಯು ಅದನ್ನು ಹೀರಿಕೊಳ್ಳದೆ ನಮಗೆ ದುಸ್ಸಹವಾದ ಸೆಕೆಯುಂಟಾಗುವುದು.

ಉಷ್ಣವು ಹೆಚ್ಚಾದಷ್ಟು ಗಾಳಿಗೆ ತೇವವನ್ನು ಹೀರಿಕೊಳ್ಳುವ ಶಕ್ತಿಯು ಹೆಚ್ಚಾಗುವುದು. ಇದರಿಂದ ಬೇಸಗೆಯಲ್ಲಿ ನದೀ ಸರೋವರ ಮೊದಲಾದುವುಗಳ ನೀರೆಲ್ಲ ಇಂಗಿಹೋಗುವುದು. ವಾಯುವು ಇಷ್ಟು ನೀರನ್ನು ಹೀರಿದರೂ ಇನ್ನೂ ಹೀರುವುದಕ್ಕೆ ಸಿದ್ಧವಾಗಿರುವುದು.

ಉಷ್ಣವು ಹೆಚ್ಚಿದಷ್ಟೂ ಗಾಳಿಯು ಹೆಚ್ಚು ಆವಿಯನ್ನು ಧರಿಸಬಲ್ಲುದು. ಉಷ್ಣವು ಕಡಿಮೆಯಾದಷ್ಟೂ ಸ್ವಲ್ಪ ಆವಿಯನ್ನು ಧರಿಸಬಲ್ಲುದು. ಭೂಮಿಯ ಮೇಲಿನಿಂದ ನೀರು ವಾಯುಮಂಡಲಕ್ಕೆ ಆವಿಯ ರೂಪದಲ್ಲಿ ಹೋಗುವುದೂ, ಪುನಃ ತಣ್ಣಗಾಗಿ ಮಳೆಯ ರೂಪದಲ್ಲಿ ವಾಯುಮಂಡಲದಿಂದ ಭೂಮಿಯ ಮೇಲೆ ಬೀಳುವುದೂ ಹೀಗೆಂಬುದು ಈ ಕಾರಣದಿಂದ ಸ್ಪಷ್ಟವಾಗುವುದು.

ತೇವದಿಂದ ಕೂಡಿದ ಉಷ್ಣವಾದ ಗಾಳಿಯು ತಣ್ಣಗಾಗಲು ಅದಕ್ಕೆ ಅಡ್ಡವಾಗಿ ಎತ್ತರವಾದ ಪರ್ವತಗಳಾಗಲಿ, ಪ್ರಸ್ಥಭೂಮಿಗಳಾಗಲಿ ಇರಬೇಕಾದುದು ಆವಶ್ಯಕ. ಅವುಗಳಿಂದ ತಡೆಯಲ್ಪಟ್ಟಾಗ ಗಾಳಿಯಲ್ಲಿರುವ ಮೋಡಗಳು ಮೇಲಕ್ಕೇರಿ ಮತ್ತಷ್ಟು ತಣ್ಣಗಾಗಿ ಮಳೆಯಾಗಿ ಬೀಳುವುವು. ಅರಬ್ಬೀ ಸಮುದ್ರದಿಂದ ಬೀಸುವ ತೇವದಿಂದ ತುಂಬಿರುವ ಮುಂಗಾರು ಗಾಳಿಯು ರಾಜಪುತ್ರಸ್ಥಾನದಲ್ಲೆಲ್ಲಾ ಬೀಸುವುದು. ಆದರೆ ಆ ದೇಶದ ಮಧ್ಯ ಭಾಗದಲ್ಲಿರುವ ಅರಾವಳಿ ಬೆಟ್ಟಗಳಲ್ಲದೆ ಇನ್ನಾವ ಬೆಟ್ಟಗಳೂ ಗಾಳಿಗೆ ಅಡ್ಡವಾಗಿಲ್ಲವಾದುದರಿಂದ, ಮೋಡಗಳು ಸಾಕಾದಷ್ಟು ಶೈತ್ಯವನ್ನು ಹೊಂದಲು ಅವಕಾಶವಿಲ್ಲದೆ ಮುಂದಕ್ಕೆ ಹೋಗಿ ಸಂಪೂರ್ಣವಾಗಿ ಅಡ್ಡವಾಗಿರುವ ಮತ್ತು ಬಹಳ ಎತ್ತರವಾಗಿರುವ ಹಿಮಾಲಯ ಪರ್ವತಗಳಿಂದ ತಡೆಯಲ್ಪಟ್ಟು, ಅವುಗಳ ತಪ್ಪಲುಗಳಲ್ಲಿ ಬೇಕಾದಷ್ಟು ಮಳೆಯನ್ನು ಸುರಿಸುವುವು.

ವಿಶೇಷ ಮೋಡಗಳುಳ್ಳ ಗಾಳಿಯು ಅಲ್ಲಲ್ಲಿ ಬೆಟ್ಟಗಳಿಂದ ತಡೆಯಲ್ಪಡದೆ ಒಂದೇ ಸಲ ಬಹು ಎತ್ತರವಾದ ಪರ್ವತದಿಂದ ತಡೆಯಲ್ಪಟ್ಟರೆ ಮಳೆಯು ಬಹು ಹೆಚ್ಚಾಗಿ ಬೀಳುವುದು. ಬಂಗಾಳ ಕೊಲ್ಲಿಯಿಂದ ಬೀಸುವ ವಿಪರೀತ ಮೋಡಗಳಿಂದ ಕೂಡಿದ ಮುಂಗಾರು ಗಾಳಿಯು ಬಂಗಾಳ ಮೈದಾನದ ಮೇಲೆ ಬೀಸಿಕೊಂಡು ಹೋಗಿ ಚಿರಾಪುಂಜಿ ಎಂಬ ಸ್ಥಳದಲ್ಲಿ ಕಡಿದಾಗಿರುವ ಪರ್ವತದಿಂದ ತಡೆಯಲ್ಪಟ್ಟು ಒಂದೇ ಸಲ 5,000 ಅಡಿಗಳಷ್ಟು ಎತ್ತರಕ್ಕೆ ಏರುವುದು; ಆದಕಾರಣ ಅಲ್ಲಿ ಪ್ರತಿವರ್ಷವೂ ಸುಮಾರು 450 ಅಂಗುಲ ಮಳೆ (ಅಂದರೆ ನಮ್ಮ ಮೈಸೂರು ಸೀಮೆಯ ವರ್ಷದ ಸರಾಸರಿ ಮಳೆಯ ಹತ್ತರಷ್ಟು ಅಥವಾ

ದಖನ್ನಿನ ಪಶ್ಚಿಮ ತೀರದ ಮಳೆಯ 5ರಷ್ಟು) ಬೀಳುವುದು ; ಅಲ್ಲಿ ಕೆಲವು ವೇಳೆ ಇನ್ನೂ ಹೆಚ್ಚು ಮಳೆ ಬೀಳುವುದೂ ಉಂಟು. ಇಲ್ಲಿ ಒಂದು ಸಲ 840 ಅಂಗುಲ ದಷ್ಟು ಮಳೆಯಾಯಿತು.

ಉಷ್ಣ ಕಡಿಮೆಯಾದಷ್ಟೂ ತೇವವನ್ನು ಹೀರುವ ಶಕ್ತಿಯೂ ಗಾಳಿಗೆ ಕಡಿಮೆಯಾಗುವುದರಿಂದ, ಗಾಳಿಯಲ್ಲಿ ಉಷ್ಣವು ಕಡಿಮೆಯಾಗಿದ್ದರೆ ಮಳೆ ಬೀಳುವುದೂ ಕಡಿಮೆ. ಆದಕಾರಣ ಚಳಿಗಾಲದಲ್ಲಿ ಬೀಸುವ ಹಿಂಗಾರು ಗಾಳಿ ಯಲ್ಲಿ ಮುಂಗಾರಿನಲ್ಲಿರುವಷ್ಟು ತೇವವಿರುವುದಿಲ್ಲವಾದುದರಿಂದ ಮಳೆ ಬೀಳು ವುದೂ ಕಡಿಮೆ. ಉಷ್ಣದೇಶದಲ್ಲಿ ಬೀಳುವಷ್ಟು ಮಳೆಯು ಸಮಶೀತೋಷ್ಣ ವಲಯ ಪ್ರದೇಶದಲ್ಲಿ ಬೀಳುವುದಿಲ್ಲ. ಶೀತವಲಯ ಪ್ರದೇಶಗಳಲ್ಲಿ ಮಳೆ ಬೀಳು ವುದು ಅಪರೂಪವೆಂದೇ ಹೇಳಬಹುದು.

ಪ್ರಪಂಚದ ಬೇರೆ ಬೇರೆ ಪ್ರದೇಶಗಳಲ್ಲಿ ಎಷ್ಟು ಮಳೆಯಾಗುವುದೆಂಬುದು ಮುಂದೆ ಬರುವ ಖಂಡಗಳ ವಿವರಣೆಯಲ್ಲಿ ತಿಳಿಯಬರುವುದು.

**28. ವಾಯುಮಂಡಲದಿಂದ ಭೂಮಿಯಮೇಲೆ ಬೀಳುವ ನೀರಿನ ಇತರ ರೂಪಗಳು.**—ಗಾಳಿಯಲ್ಲಿ ಯಾವಾಗಲೂ ನೀರಿನ ಆವಿಯು ಇರುವು ದಷ್ಟೆ. ಕೆಲವು ವೇಳೆ ಭೂಮಿಯ ಸಮೀಪದಲ್ಲಿರುವ ಗಾಳಿಯು ಶೈತ್ಯವನ್ನು ಹೊಂದಿ ಅದರೊಳಗಿನ ಆವಿಯೆಲ್ಲಾ ಶೈತ್ಯದಿಂದ ಹೊಗೆಯ ಹಾಗೆ ಕಣ್ಣಿಗೆ ಕಾಣಿಸುವುದು. ಇದಕ್ಕೆ ಮಂಜು ಎಂದು ಹೆಸರು. ನಮ್ಮ ಸೀಮೆಯಲ್ಲಿ ಚಳಿ ಗಾಲದಲ್ಲಿ ಬೆಳಗಿನಲ್ಲಿ ಸಾಮಾನ್ಯವಾಗಿ ಮಂಜು ಕವಿದುಕೊಂಡಿರುವುದು. ಕೆಲವು ವೇಳೆ ಗಾಳಿಯಲ್ಲಿರುವ ಆವಿಯು ನಮ್ಮ ಕಣ್ಣಿಗೆ ಕಾಣದಿದ್ದರೂ, ಅದು ಸುಲಭ ವಾಗಿ ಶೈತ್ಯವನ್ನು ಹೊಂದಿ ಹುಲ್ಲು, ಎಲೆ, ಗಾಜು ಮೊದಲಾದ ತಣ್ಣಗಿರುವ ಪದಾರ್ಥಗಳ ಮೇಲೆ ಸಣ್ಣ ಸಣ್ಣ ಹನಿಗಳಾಗಿ ಬೀಳುವುದು. ಇದಕ್ಕೆ ಇಬ್ಬನಿ ಎಂದು ಹೆಸರು.

ಆವಿಯು ಭೂಮಿಯ ಸಮೀಪದಲ್ಲಿ ಶೈತ್ಯವನ್ನು ಪಡೆದರೆ ಹೇಗೆ ಮಂಜಾಗು ವುದೋ ಹಾಗೆಯೇ ಅದು ಆಕಾಶಕ್ಕೆ ಹೋಗಿ ಶೈತ್ಯವನ್ನು ಪಡೆದರೆ ಮೋಡ ವಾಗುವುದು. ಮೋಡಗಳು ಬಹು ಎತ್ತರದಲ್ಲಿದ್ದರೆ ಬೆಳ್ಳಗೆ ಕಾಣುವುವು. ಅವು ಕೆಲವು ವೇಳೆ ಭಾರವಾಗಿ ಕೆಳಕ್ಕಿಳಿದು ಕಪ್ಪಾಗಿಯೂ ಕಾಣುವುವು. ಈ ಕರಿಯ ಮೋಡಗಳು ಮಳೆಗಾಲದಲ್ಲಿ ಹೆಚ್ಚಾಗಿ ಕಾಣುವುವು. ಅವುಗಳಿಂದಲೇ ಮಳೆ ಬೀಳುವುದು ; ಬೇಸಗೆಯಲ್ಲಿ ಬಿಳಿಯ ಮೋಡಗಳೇ ಕಾಣಿಸುವುದು ಹೆಚ್ಚು.

ಶೀತ ದೇಶಗಳಲ್ಲಿ ಮೋಡಗಳಿಂದ ಮಳೆ ಬೀಳುವುದಕ್ಕೆ ಬದಲಾಗಿ ಶೈತ್ಯ ದಿಂದ ಘನೀಭೂತವಾಗಿ ಹಿಮವು ಬೀಳುವುದು. ಇದು ಬೀಳುತ್ತಾ ದಿನೇ ದಿನೇ

 

ನೆಲದ ಮೇಲೆ ಕೆಲವು ಅಡಿಗಳಷ್ಟು ಎತ್ತರವಾಗುವುದೂ ಉಂಟು; ಹೀಗೆ ಒಟ್ಟು ಗೂಡಿದ ಹಿಮವು ಗಟ್ಟಿಯಾಗಿ ಗಡ್ಡೆಯಾದರೆ ಹಿಮದ ಗಡ್ಡೆ ಅಥವಾ ಐಸ್ ಎನ್ನಿಸಿ ಕೊಳ್ಳುವುದು.

ಕೆಲವು ವೇಳೆ ವಾಯುಮಂಡಲದಲ್ಲಿ ಬಹು ಎತ್ತರದ ಮೇಲೆ ಉತ್ಪತ್ತಿಯಾದ ಮಳೆಯ ಹನಿಗಳು ಅಲ್ಲಿನ ಹೆಚ್ಚು ಶೈತ್ಯದಿಂದ ಘನೀಭೂತವಾಗಿ ಆಲಿ ಕಲ್ಲುಗಳ ರೂಪದಲ್ಲಿ ನೆಲದ ಮೇಲೆ ಬೀಳುವುವು; ನೆಲದ ಮೇಲೆ ಬಿದ್ದ ಸ್ವಲ್ಪ ಹೊತ್ತಿನಲ್ಲಿಯೇ ಅವು ಉಷ್ಣದಿಂದ ಕರಗಿ ನೀರಾಗುವುವು.

## VI. ಸಸ್ಯಗಳು ಮತ್ತು ಪ್ರಾಣಿಗಳು

**29. ಸಸ್ಯಗಳ ಬೆಳೆವಳಿಕೆಗೆ ಬೇಕಾದ ಅನುಕೂಲಗಳು.**—ಗಿಡ ಮರಗಳ ಬೆಳೆವಳಿಕೆಗೆ ಫಲವತ್ತಾದ ನೆಲವೂ ಶಾಖವೂ ನೀರೂ ಆವಶ್ಯಕವೆಂಬುದು ನಿಮಗೆ ತಿಳಿದೇ ಇದೆ; ಅದರಂತೆ ಅವುಗಳ ಬೆಳೆವಳಿಕೆಗೆ ಗಾಳಿಯೂ ಬೆಳಕೂ ಸಹ ಆವಶ್ಯಕ. ಗಣಿಗಳಲ್ಲಿಯೂ ಆಳವಾದ ಸಮುದ್ರದ ತಳದಲ್ಲಿಯೂ ಯಾವ ಸಸ್ಯಗಳೂ ಬೆಳೆಯುವುದಿಲ್ಲ; ಅಲ್ಲಿ ಗಾಳಿ ಸಾಲದಿರುವುದೇ ಇದಕ್ಕೆ ಮುಖ್ಯ ಕಾರಣ. ನಮ್ಮ ಮನೆಯ ಒಳಭಾಗದಲ್ಲಿ ಯಾವ ಗಿಡವೂ ಬೆಳೆಯುವುದಿಲ್ಲ; ಅಲ್ಲಿ ಬೆಳಕು ಸಾಲದಿರುವುದೇ ಇದಕ್ಕೆ ಮುಖ್ಯ ಕಾರಣ.

ಈ ಕಾರಣಗಳಲ್ಲಿ ಭೂಗುಣ, ನೀರು, ಶಾಖ ಇವು ಭೂಮಿಯಮೇಲೆ ಬೇರೆ ಬೇರೆ ಪ್ರದೇಶಗಳಲ್ಲಿ ವಿಶೇಷವಾಗಿ ವ್ಯತ್ಯಾಸವಾಗುವುವು; ಗಾಳಿಯೂ ಬೆಳಕೂ ಸಾಮಾನ್ಯವಾಗಿ ನೆಲದ ಮೇಲೆ ಇದ್ದೇ ಇರುವುದು. ಆದುದರಿಂದ ಮೊದಲಿನ ಮೂರು ಕಾರಣಗಳನ್ನು ಮುಖ್ಯವಾಗಿ ಗಮನಿಸಬೇಕಾಗಿದೆ. ಭೂಮಿಯಲ್ಲಿ ಯಾವ ಪ್ರದೇಶಗಳಲ್ಲಿ ಶಾಖ ಹೆಚ್ಚಾಗಿದೆ, ಎಲ್ಲಿ ಕಡಿಮೆಯಾಗಿದೆ? ಎಂಬುದನ್ನು ಹಿಂದಿನ ಅಧ್ಯಾಯದಲ್ಲಿ ವಿವರಿಸಿದೆ. ಭೂಮಿಯಲ್ಲಿ ಯಾವ ಪ್ರದೇಶದಲ್ಲಿ ಮಳೆ ಹೆಚ್ಚಾಗಿ ಬೀಳುವುದು, ಎಲ್ಲಿ ಕಡಿಮೆಯಾಗಿ ಬೀಳುವುದು? ಯಾವ ಪ್ರದೇಶಗಳಲ್ಲಿ ನದಿ ಕೆರೆ ಮೊದಲಾದುವುಗಳ ನೀರಿನ ಸೌಕರ್ಯ ಹೆಚ್ಚಾಗಿದೆ ಎಂಬುದನ್ನು ಮುಂದೆ ಕೊಟ್ಟಿರುವ ಖಂಡಗಳ ಮತ್ತು ದೇಶಗಳ ವಿವರಣೆಯಲ್ಲಿ ತಿಳಿಯಬಹುದು. ಇಲ್ಲಿ ಭೂಗುಣದ ವಿಚಾರವನ್ನು ಮಾತ್ರ ಸ್ವಲ್ಪ ಮಟ್ಟಿಗೆ ತಿಳಿದುಕೊಂಡರೆ ಸಾಕಾಗಿರುವುದು.

**30. ಭೂಗುಣದ ವ್ಯತ್ಯಾಸಗಳು.**—ನೆಲವನ್ನು ಅಗೆದರೆ ಸಾಮಾನ್ಯವಾಗಿ ಮೇಲುಗಡೆ ಮೆತ್ತಗಿರುವ ಮಣ್ಣೂ ಕೆಳಗಡೆ ಗಟ್ಟಿಯಾದ ಬಂಡೆಗಳೂ ಸಿಕ್ಕುವುವು. ಆಳವಾಗಿ ತೋಡುತ್ತಾ ಹೋದರೆ ಗುಳಿಯಲ್ಲಿ ಪಕ್ಕದಿಂದ ಅಥವಾ ಕೆಳಗಿನಿಂದ ನೀರು ಉಕ್ಕಿ ಬರುವುದು. ಮೇಲ್ಭಾಗದ ಮಣ್ಣು ಕೆಲವು ಕಡೆ ಮರಳು ಮಿಶ್ರವಾಗಿರುವುದು, ಇನ್ನು ಕೆಲವು ಕಡೆ ಜಿಗಟಾಗಿರುವುದು;

ಸಾಮಾನ್ಯವಾಗಿ ನೆಲದಲ್ಲಿ ಎಲ್ಲೆಲ್ಲಿಯೂ ಸಸ್ಯಗಳ ಬೇರುಗಳೂ ಕೊಳೆತುಹೋದ ಎಲೆಗಳೂ ಕೊಂಬೆಗಳೂ ಸೇರಿರುವುವು.

ನೆಲವನ್ನು ಸಾಮಾನ್ಯವಾಗಿ ಕಲ್ಲುನೆಲ, ಮರಳುನೆಲ, ಮಣ್ಣುನೆಲವೆಂದು ಮೂರು ಭಾಗಗಳಾಗಿ ವಿಂಗಡಿಸಬಹುದು. ದೊಡ್ಡ ಬಂಡೆಗಳಿಂದ ಅಥವಾ ಸಣ್ಣ ಕಲ್ಲುಗಳಿಂದ ತುಂಬಿರುವ ನೆಲದಲ್ಲಿ ಸಸ್ಯಗಳು ಬೆಳೆಯುವುದು ಬಹು ಕಡಿಮೆ; ಬಂಡೆಗಳ ಕೊರಕಲುಗಳಲ್ಲಿ ಮಾತ್ರ ಗಿಡಗಳು ಅಲ್ಲಲ್ಲಿ ಬೆಳೆಯುವುವು. ಬೆಣಚುಕಲ್ಲು, ಅಮೃತಶಿಲೆ ಮೊದಲಾದ ಕಲ್ಲುಗಳು ಬಲು ಗಟ್ಟಿಯಾಗಿರುವುವು; ಬಳಪದಕಲ್ಲು, ಸುಣ್ಣಕಲ್ಲು, ಹಿಟ್ಟುಗಲ್ಲು ಮೊದಲಾದುವು ಸುಲಭವಾಗಿ ಪುಡಿಯಾಗುವುವು. ಕೆಲವುಕಡೆ ಕಲ್ಲುಗಳಲ್ಲಿ ಚಿನ್ನ, ಕಬ್ಬಿಣ ಮೊದಲಾದ ಲೋಹಗಳ ಅದುರುಗಳು ಸೇರಿರುವುದುಂಟು.

ಕಲ್ಲುನೆಲದಂತೆಯೇ ಮರಳುನೆಲದಲ್ಲಿಯೂ ನೀರು ನಿಲ್ಲುವುದಿಲ್ಲ. ಈ ಎರಡು ಬಗೆಯ ನೆಲಗಳಲ್ಲಿಯೂ ಸಸ್ಯಗಳ ಬೇರುಗಳು ಇಳಿಯುವುದಕ್ಕೆ ಅನುಕೂಲವಿಲ್ಲ; ಆದುದರಿಂದ ಕಲ್ಲುನೆಲ ಅಥವಾ ಮರಳುನೆಲವೇ ಹೆಚ್ಚಾಗಿರುವ ಪ್ರದೇಶಗಳು ಮರುಭೂಮಿಗಳಾಗಿರುವುವು. ಆದರೆ ತಮ್ಮ ಬೆಳವಳಿಕೆಗೆ ವಿಶೇಷವಾಗಿ ನೀರನ್ನು ಬಯಸದ ಮತ್ತು ಮರಳುಗಾಡಿನ ಬಿಸಿಲಿನ ತಾಪವನ್ನು ತಡೆಯಬಲ್ಲ ಕೆಲವು ಜಾತಿಯ ಗಿಡಗಳು ಈ ಮರುಭೂಮಿಗಳಲ್ಲಿ ಅಲ್ಲಲ್ಲಿ ಬೆಳೆಯುವುವು; ಇವುಗಳ ಬೇರುಗಳು ಬಹು ಉದ್ದವಾಗಿರುವುದರಿಂದ ಇವು ನೆಲದಲ್ಲಿ ಬಹಳ ಆಳದ ಕೆಳಗೆ ಇರುವ ನೀರನ್ನೂ ಹೀರಿಕೊಳ್ಳುವುವು.

ಮರಳುಗಾಡಿನ ಎಲ್ಲಾ ಭಾಗಗಳಲ್ಲಿಯೂ ಸಾಮಾನ್ಯವಾಗಿ ಹೀಗೆಯೇ ಸಸ್ಯಗಳೇ ಇಲ್ಲದೆ ಇರುವುದಿಲ್ಲ. ಅಲ್ಲಿ ಅಪರೂಪವಾಗಿ ಮಳೆ ಬರುವುದುಂಟು. ಈ ಮಳೆಯ ನೀರಿನಲ್ಲಿ ಸ್ವಲ್ಪ ಭಾಗ ಆವಿಯಾಗಿ ಹೋಗುವುದು; ಉಳಿದ ಭಾಗವು ನೆಲದ ಮೇಲೆ ನದಿಗಳಾಗಿ ಸ್ವಲ್ಪ ದೂರ ಹರಿದು ಕೊನೆಗೆ ಇಂಗಿ ಹೋಗುವುದು. ಹೀಗೆ ಮಳೆಗಾಲದಲ್ಲಿ ಮಾತ್ರ ಸ್ವಲ್ಪ ದೂರ ಹರಿದು ಇಂಗಿ ಹೋಗುವ ನದಿಗಳನ್ನು (ಗುಪ್ತಗಾಮಿನಿ) **ವಾಡಿ**ಗಳೆಂದು ಕರೆಯುವರು. ಈ ವಾಡಿಗಳು ಹರಿಯುವ ಪ್ರದೇಶಗಳಲ್ಲಿ ವಿಶೇಷವಾಗಿ ಹುಲ್ಲು ಬೆಳೆಯುವುದು.

ಮರಳು ಸಛಿದ್ರವಾದುದರಿಂದ ಹೀಗೆ ಇಂಗಿದ ನೀರು ನೆಲದೊಳಗೆ ಮೆಲ್ಲಗೆ ಹರಿಯುವುದು. ಹೀಗೆ ನೆಲದ ಮೇಲೆ ಬಿದ್ದ ನೀರು ನೆಲದಡಿಯಲ್ಲಿ ನಿಂತಿದ್ದರೆ ಅಥವಾ ಹರಿಯುತ್ತಿದ್ದರೆ ಅದನ್ನು **ಅಂತರ್ಜಲ** (ಅಥವಾ ನೆಲದೊಳಗಿನ ನೀರು) ಎಂದು ಕರೆಯುವರು. ಈ ಅಂತರ್ಜಲವು ಒಳಭಾಗದಲ್ಲಿ ಹರಿಯುವಾಗ ಅಲ್ಲಲ್ಲಿ ನೆಲವು ತಗ್ಗಾಗಿರುವುದರಿಂದಲಾಗಲಿ, ಅಥವಾ ಅಡ್ಡವಾಗಿ ದೊಡ್ಡ ಬಂಡೆಗಳಿರುವುದರಿಂದಲಾಗಲಿ ಇದು ನೆಲದ ಮೇಲ್ಭಾಗದಲ್ಲಿ ಉಕ್ಕಿ ಬಂದು ಸಣ್ಣ **ಚಿಲುಮೆ**

ಗಳಾಗುವುವು. ಈ ನೀರಿನ ಆಸರೆಯಿಂದ ಚಿಲುಮೆಗಳ ಸುತ್ತಲೂ ಮರಗಿಡಗಳು ಬೆಳೆಯುವುವು. ಮರುಭೂಮಿಗಳಲ್ಲಿ ಕೆಲವು ಕಡೆಗಳಲ್ಲಿರುವ ಇಂತಹ ಫಲವತ್ತಾದ ಪ್ರದೇಶಗಳಿಗೆ **"ಓಯಸಿಸ್"** ಎಂದು ಹೆಸರು.

ಮರುಭೂಮಿಗಳಲ್ಲಿ ಮಾತ್ರವೇ ಅಲ್ಲದೆ ಮಳೆ ಹೆಚ್ಚಾಗಿ ಬೀಳುವ ಇತರ ಪ್ರದೇಶಗಳಲ್ಲಿಯೂ ಅಂತರ್ಜಲವಿರುವುದು. ನಾವು ನೆಲದಲ್ಲಿ ಬಾವಿಗಳನ್ನು ತೋಡಿ ಮೇಲಕ್ಕೆ ಸೇದಿಕೊಳ್ಳುವುದೂ ಈ ನೀರೆ. ಕೆರೆ ಕೊಳಗಳ ಆಳವಾದ ಭಾಗಗಳಲ್ಲಿ ಸದಾ ಊರುತ್ತಿರುವ ನೀರೂ ಇದೇ. ಕೆಲವು ಕಡೆಗಳಲ್ಲಿ ಈ ಜಲವು ಹೆಚ್ಚಾಗಿ ಸೇರಿ ಅಡ್ಡವಾಗಿರುವ ಬಂಡೆಗಳಿಂದ ತಡೆಯಲ್ಪಟ್ಟು ನೆಲದ ಮೇಲ್ಭಾಗಕ್ಕೆ ಉಕ್ಕಿಬರುವುದೂ ಉಂಟು. ಹೀಗೆ ಅಂತರ್ಜಲವು ಉಕ್ಕಿಬರುವುದನ್ನು **ಊಟೆ** ಅಥವಾ **ಬುಗ್ಗೆ** ಎಂದು ಕರೆಯುತ್ತಾರೆ. ಮೈಸೂರು ದೇಶದ **ತಲಪರಿಗೆ**ಗಳಿಗೆ ಇದೇ ಕಾರಣ.

ಈ ಅಂತರ್ಜಲವು ಮೇಲಕ್ಕೆ ಉಕ್ಕಿಬರಲು ನೆಲವು ಸಾಕಾದಷ್ಟು ತಗ್ಗಾಗಿದ್ದರೂ, ಕೆಲವು ಕಡೆಗಳಲ್ಲಿ ಅದರ ಮೇಲ್ಭಾಗದಲ್ಲಿ ಗಟ್ಟಿಯಾದ ಬಂಡೆಗಳಿರುವುದರಿಂದ ಈ ನೀರು ಮೇಲಕ್ಕೆ ಉಕ್ಕಿಬರಲು ತಡೆಯಾಗುವುದು. ಇಂತಹ ಕಡೆಗಳಲ್ಲಿ ಯಂತ್ರಗಳ ಸಹಾಯದಿಂದ ಆಳವಾದ ಸಣ್ಣ ರಂಧ್ರಗಳನ್ನು ಕೊರೆಯುವರು. ಆಗ ಒಳಗಿನ ನೀರು ಹೊರಕ್ಕೆ ಉಕ್ಕಿಬರುವುದಕ್ಕೆ ಅವಕಾಶ ಉಂಟಾಗಿ ಅದು ಮೇಲಕ್ಕೆ ಉಕ್ಕುವುದು. ಇಂತಹ ಬಾವಿಗಳನ್ನು **ಆರ್ಟೀಸಿಯನ್** ಬಾವಿಗಳೆಂದು ಕರೆಯುವರು. ಪುದುಚೇರಿಯಲ್ಲಿ ಇಂತಹ ಅನೇಕ ಬಾವಿಗಳನ್ನು ನಾವು ನೋಡಬಹುದು.



ಚಿತ್ರ 16

ಕಲ್ಲು ಮತ್ತು ಮರಳು ನೆಲಗಳಲ್ಲದೆ ಭೂಮಿಯಮೇಲೆ ಅನೇಕ ಕಡೆ ಮೆತ್ತಗೂ ಜಿಗಟಾಗಿಯೂ ಇರುವ ಮಣ್ಣುಳ್ಳ ವಿಸ್ತಾರವಾದ ಪ್ರದೇಶಗಳಿರುವುವು. ನದಿಗಳ ದಡದಲ್ಲಿ ನದಿಯ ಪ್ರವಾಹದಿಂದ ತರಲ್ಪಟ್ಟ ಬಂಡುಮಣ್ಣು ನೆಲೆಗೊಳ್ಳುವುದು. ಗಂಗಾನದಿಯ ಮೈದಾನವೆಲ್ಲ ಇಂತಹ ಮಣ್ಣಿನಿಂದಲೇ

ತುಂಬಿರುವುದು; ಅಲ್ಲಿ ಔಷಧಿಗೆ ಹುಡುಕಿದರೂ ಒಂದು ಕಲ್ಲಾದರೂ ಸಿಕ್ಕುವುದು ಅಪೂರ್ವ. ಕೆಂಪು ಜೇಡಿಯೂ ಎರೆಯ ಮಣ್ಣೂ ಈ ಜಿಗಟಾದ ಮಣ್ಣಿನ ಮುಖ್ಯವಾದ ಭೇದಗಳಾಗಿವೆ.

ಕಲ್ಲು ಮತ್ತು ಮರಳು ನೆಲಗಳಿಗಿಂತ ಜಿಗಟಾದ ಮಣ್ಣುಳ್ಳ ನೆಲವು ಹೆಚ್ಚು ನೀರನ್ನು ಹೀರಿಕೊಳ್ಳಬಲ್ಲುದು. ಮಳೆ ಬಿದ್ದಾಗ ಈ ಮಣ್ಣು ಕೆಸರಾಗುವುದು; ಇದರಲ್ಲಿ ತೇವವು ಜಾಗ್ರತೆಯಾಗಿ ಆರುವುದಿಲ್ಲ. ಆದುದರಿಂದ ಇಂತಹ ಮಣ್ಣಿರುವ ಪ್ರದೇಶಗಳಲ್ಲಿ ಮರ ಗಿಡಗಳು ಬಹು ಚೆನ್ನಾಗಿ ಬೆಳೆಯುವುವು. ಇಲ್ಲಿ ರೈತರು ಬತ್ತ, ಕಬ್ಬು ಮೊದಲಾದ ಬೆಲೆಯಾಗುವ ಪೈರುಗಳನ್ನು ಬೆಳೆಯುವರು. ಆದರೆ ತಕ್ಕಮಟ್ಟಿಗೆ ಮರಳು ಮಿಶ್ರವಾಗಿರುವ ಈ ಮಣ್ಣಿನಲ್ಲಿ ನೀರು ಬೇಗನೆ ಇಂಗಿಹೋಗುವುದರಿಂದ, ಅಲ್ಲಿ ರಾಗಿ, ತೊಗರಿ ಮುಂತಾದ ಪೈರುಗಳನ್ನು ಬೆಳೆಯುವರು. ಈ ಎರಡು ಬಗೆಯ ಕೃಷಿಯನ್ನು ನಮ್ಮ ದೇಶದಲ್ಲಿ ತರಿ ಮತ್ತು ಖುಷ್ಕಿ ಸಾಗುವಳಿಯೆಂದು ಕರೆಯುವರು.

**31. ಸಸ್ಯ ವಲಯಗಳು ಮತ್ತು ಪ್ರಾಣಿ ವಲಯಗಳು.**—ಸಸ್ಯಗಳ ಬೆಳವಳಿಕೆಗೆ ಶಾಖ, ನೀರು, ಭೂಗುಣ ಇವು ಮುಖ್ಯ ಕಾರಣಗಳಾಗಿವೆಯಷ್ಟೆ. ಪ್ರಾಣಿಗಳೂ ಕೂಡ ಇವುಗಳನ್ನೇ ಅನುಸರಿಸಿ ಬದುಕುವುವೆಂದು ಹೇಳಬಹುದು. ಪ್ರಾಣಿಗಳು ಸಸ್ಯಗಳನ್ನಾಗಲಿ ಅಥವಾ ಸಸ್ಯಗಳನ್ನು ತಿನ್ನುವ ಇತರ ಪ್ರಾಣಿಗಳನ್ನಾಗಲಿ ತಿಂದು ಜೀವಿಸುವುವು. ಪ್ರಾಣಿಗಳ ಜೀವವಾಸಕ್ಕೂ ಶಾಖವೇ ಮುಖ್ಯವಾದುದು. ಒಂದೊಂದು ಬಗೆಯ ಪ್ರಾಣಿಗಳಿಗೆ ಒಂದೊಂದು ಬಗೆಯ ವಾಯುಗುಣವು ಆವಶ್ಯಕವಾಗಿರುವುದು. ಆದುದರಿಂದ ಪ್ರಾಣಿಗಳು ಸಸ್ಯಗಳನ್ನನುಸರಿಸಿ ಬೇರೆ ಬೇರೆ ಪ್ರದೇಶಗಳಲ್ಲಿ ವಾಸವಾಗಿರುವುವು. ಯಾವ ಯಾವ ಸಸ್ಯ ಮತ್ತು ಪ್ರಾಣಿಗಳು ಯಾವ ಯಾವ ಪ್ರದೇಶಗಳಲ್ಲಿ ಮುಖ್ಯವಾಗಿ ಇರುವುವೆಂಬುದನ್ನು ವಿಚಾರಿಸುವಾಗ ಭೂಗೋಳ ಶಾಸ್ತ್ರಜ್ಞರು ಭೂಮಿಯನ್ನು ಸಾಮಾನ್ಯವಾಗಿ ಎಂಟು ವಲಯಗಳಾಗಿ ವಿಭಾಗಿಸುವರು.

ಒಂದು ಪ್ರದೇಶದ ಶಾಖವೂ ಮಳೆಯೂ ಬಹುಮಟ್ಟಿಗೆ ಅದರ ಅಕ್ಷಾಂಶಗಳಿಂದಲೇ ನಿರ್ಣಯವಾಗುವುದರಿಂದ, ಈ ವಿಭಾಗಗಳು ಸಾಮಾನ್ಯವಾಗಿ ಅಕ್ಷಾಂಶಗಳನ್ನೇ ಅನುಸರಿಸುವುವು. ಈ ವಿಭಾಗಗಳಲ್ಲಿ ಎರಡು ಶೀತವಲಯದಲ್ಲಿಯೂ, ನಾಲ್ಕು ಸಮಶೀತೋಷ್ಣವಲಯದಲ್ಲಿಯೂ, ಎರಡು ಉಷ್ಣವಲಯದಲ್ಲಿಯೂ ಇರುವುವು. ಸಮಭಾಜಕ ವೃತ್ತಕ್ಕೆ ದಕ್ಷಿಣ ಭಾಗದಲ್ಲಿರುವ ಭೂಪ್ರದೇಶಗಳಲ್ಲಿ ಈ ವೃತ್ತಕ್ಕೆ ಉತ್ತರದಲ್ಲಿರುವ ಭೂಪ್ರದೇಶಗಳಂತೆಯೇ ಸಸ್ಯ ವಲಯಗಳಿರುವುವು. ಆದುದರಿಂದ ಕೆಳಗಿನ ವಿವರಣೆಯಲ್ಲಿ ಪ್ರತಿಯೊಂದು ಸಸ್ಯ ವಲಯದ ಲಕ್ಷಣಗಳನ್ನೂ ವಿವರಿಸುವಾಗ ಈ ವೃತ್ತಕ್ಕೆ ಉತ್ತರ ದಕ್ಷಿಣಗಳಲ್ಲಿರುವ

ಎರಡು ಪ್ರದೇಶಗಳನ್ನೂ ಉದ್ದೇಶಿಸಿರುವುದೆಂದು ತಿಳಿಯಬೇಕು. ಸಸ್ಯ ವಲಯ ಮತ್ತು ಪ್ರಾಣಿ ವಲಯಗಳ ಸಾಮಾನ್ಯ ಲಕ್ಷಣಗಳನ್ನು ಕೆಳಗೆ ವಿವರಿಸಿದೆ:—



ಚಿತ್ರ 17

(1) **ಪಾಚಿ ಮತ್ತು ಶಿಲಾವಲ್ಕಗಳಿಂದ ಕೂಡಿದ ಮೇರುವಲಯ.** ಇದು ಅಕ್ಷಾಂಶ 72 ಡಿಗ್ರಿಗಳಿಂದ ಮೇರುವಿನವರೆಗೂ ಪ್ರಸರಿಸಿರುವುದು. ಏಷ್ಯ, ಯೂರೋಪ್ ಅಮೆರಿಕ ಖಂಡಗಳ ಅತ್ಯಂತ ಉತ್ತರ ಭಾಗದಲ್ಲಿ ಉತ್ತರ ಸಾಗರದ ಸಮೀಪದಲ್ಲಿರುವ ಪ್ರದೇಶಗಳು ಈ ವಲಯಕ್ಕೆ ಸೇರಿವೆ. ಇಲ್ಲಿ ಉಷ್ಣಮಾಪಕಯಂತ್ರವು ಪ್ರತಿವರ್ಷವೂ ಸರಾಸರಿ 15 ಡಿಗ್ರಿಗಳನ್ನು (ಅಂದರೆ ಹಿಮದ ಗಡ್ಡೆಗಿಂತಲೂ 47 ಡಿಗ್ರಿಗಳು ಕಡಿಮೆಯಾದ ಉಷ್ಣವನ್ನು) ತೋರಿಸುವುದು. ಇಲ್ಲಿ ಯಾವಾಗಲೂ ನೆಲದಮೇಲೆ ಹಿಮವೂ ಹಿಮದ ಗಡ್ಡೆಗಳೂ ಬಿದ್ದಿರುವುವು; ಈ ಶೈತ್ಯದಿಂದ ಇಲ್ಲಿ ಯಾವ ಗಿಡಗಳೂ ಬೆಳೆಯುವುದಿಲ್ಲ. ಅದರ ದಕ್ಷಿಣ ಭಾಗಗಳಲ್ಲಿ ಬೇಸಗೆಯ ಕಾಲದಲ್ಲಿ ಪಾಚಿ ಮತ್ತು ಶಿಲಾವಲ್ಕಗಳು ಬೆಳೆಯುವುವು. ಇವುಗಳನ್ನು ತಿನ್ನುವುದಕ್ಕೆ ಬೇಸಿಗೆಯಲ್ಲಿ ಹಿಮಸಾರಂಗಗಳು ಇನ್ನೂ ದಕ್ಷಿಣ ಭಾಗದಿಂದ ಇಲ್ಲಿಗೆ ಬರುವುವು. ಈ ಪ್ರದೇಶಗಳನ್ನು 'ಟಂಡ್ರ' ಗಳೆಂದು ಕರೆಯುವರು. ಇಲ್ಲಿ ಯಾವ ಪ್ರಾಣಿಯೂ ಜೀವಿಸಲಾರದು; ಆದರೆ ಸಮುದ್ರದಲ್ಲಿ ವೇಲ್ ಮತ್ತು ಸೀಲ್ ಎಂಬ ಕೆಲವು ಜಲಚರ ಪ್ರಾಣಿಗಳು ಮಾತ್ರ ಜೀವಿಸುವುವು.

(2) **ಕುರುಚುಗಿಡಗಳು ಬೆಳೆಯುವ ಮೇರುವೃತ್ತದ ಸಮೀಪ ವಲಯ.**—ಈ ವಲಯವು ಮೇರುವೃತ್ತದಿಂದ 72 ಡಿಗ್ರಿಗಳವರೆಗೂ ಪ್ರಸರಿಸಿರುವುದು. ರಷ್ಯ, ಸೈಬೀರಿಯ, ಕೆನಡ ಈ ದೇಶಗಳ ಉತ್ತರ ಭಾಗಗಳು ಈ ವಲಯದಲ್ಲಿವೆ. ಇಲ್ಲಿಯೂ ಸಾಮಾನ್ಯವಾಗಿ ವರ್ಷದಲ್ಲೆಲ್ಲ ನೀರು ಗಡ್ಡೆ ಕಟ್ಟಿಕೊಂಡಿದ್ದರೂ ಮೊದಲನೆಯ ವಲಯಕ್ಕಿಂತ ಶೀತ ಸ್ವಲ್ಪ ಕಡಿಮೆಯಾಗಿರು

ವುದರಿಂದ, ಇಲ್ಲಿ ಪಾಚಿ ಶಿಲಾವಲ್ಕಗಳಲ್ಲದೆ ಹುಲ್ಲು, ಗಿಡ್ಡಾಗಿರುವ ಪೀತದಾರು ಮೊದಲಾದ ಮರಗಳೂ ಬೆಳೆಯುವುವು. ಇಲ್ಲಿನ ಮುಖ್ಯವಾದ ಪ್ರಾಣಿಗಳು ಹಿಮಸಾರಂಗ, ಬಿಳಿಯ ಕರಡಿ, ಶೀತದೇಶದ ನರಿ ಮೊದಲಾದುವು. ಈ ಮೃಗಗಳಿಗೆಲ್ಲಾ ಸ್ವಾಭಾವಿಕವಾಗಿ ದಪ್ಪವಾದ ಚರ್ಮವೂ ಅದರಮೇಲೆ ದಪ್ಪವಾಗಿ ಬೆಳೆದಿರುವ ಉದ್ದವಾದ ಕೂದಲೂ ಇರುವುದರಿಂದ ಅವು ಚಳಿಯನ್ನು ಸಹಿಸಬಲ್ಲವು. ಇಲ್ಲಿನ ಜನರು ಈ ಮೃಗಗಳನ್ನು ಬೇಟೆಯಾಡಿ ಅವುಗಳ ಮಾಂಸವನ್ನು ತಿನ್ನುವರು. ಅವುಗಳ ಚರ್ಮದಿಂದ ಉಡುಪನ್ನು ಮಾಡಿಕೊಳ್ಳುವರು. ಹಿಮಸಾರಂಗವನ್ನು ಪಳಗಿಸಿ ಅದನ್ನು ಚಕ್ರವಿಲ್ಲದ ಜಾರುಬಂಡಿಗಳನ್ನು ಎಳೆಯುವುದಕ್ಕೂ ಉಪಯೋಗಿಸುವರು; ಅಲ್ಲದೆ ಅದರ ಹಾಲನ್ನು ಕುಡಿಯುವರು.

(3) ಮೇಲಿನ ಎರಡು ಸಸ್ಯ ವಲಯಗಳೂ ಶೀತವಲಯದಲ್ಲಿವೆ. ಸಮಶೀತೋಷ್ಣ ವಲಯದಲ್ಲಿ 58 ಡಿಗ್ರಿಗಳಿಂದ ಮೇರುವೃತ್ತದವರೆಗೂ ಪ್ರಸರಿಸಿ ನಾರ್ವೆ, ಸ್ವೀಡನ್, ರಷ್ಯ, ಸೈಬೀರಿಯ, ಕೆನಡ ದೇಶಗಳ ಮಧ್ಯ ಭಾಗಗಳನ್ನು ಒಳಕೊಂಡಿರುವ ಸಸ್ಯ ವಲಯವನ್ನು **ಶೀತವಲಯದ ಸಮೀಪದಲ್ಲಿರುವ ಮೊನೆಯಾದ ಎಲೆಗಳುಳ್ಳ ಮರಗಳಿಂದ ಕೂಡಿದ ವಲಯವೆಂದು** ಕರೆಯುವರು. ಇಲ್ಲಿನ ಶಾಖವು ಸರಾಸರಿ 40 ಡಿಗ್ರಿಗಳು; ಇಲ್ಲಿ ಮಳೆ ಬೀಳುವುದು ಬಹು ಸ್ವಲ್ಪವಾದರೂ ನೀರು ಆವಿಯಾಗಿ ಹೋಗುವುದು ಕಡಿಮೆಯಾಗಿರುವುದರಿಂದ, ಪೀತದಾರು ಮೊದಲಾದ ಮರಗಳು ತಕ್ಕಮಟ್ಟಿಗೆ ಎತ್ತರವಾಗಿ ಬೆಳೆಯುವುವು. ಆದರೆ ಈ ಮರಗಳು ನಮ್ಮ ದೇಶದ ಮರಗಳಂತೆ ವಿಶಾಲವಾಗಿ ಹಬ್ಬಿಕೊಳ್ಳದೆ ಉದ್ದವಾಗಿ ಮೇಲಕ್ಕೆ ಹೋಗುವುವು. ಇವುಗಳ ಎಲೆಗಳು ಮುಳ್ಳು ಮುಳ್ಳಾಗಿರುವುವು. ಈ ವಲಯದ ಕೆಲವು ಭಾಗಗಳಲ್ಲಿ ಜವೆಗೋಧಿ (ಬಾರ್ಲಿ)ಯು ಬೆಳೆಯುವುದು.

ಶೀತವಲಯದ ಪ್ರಾಣಿಗಳೇ ಈ ವಲಯದಲ್ಲಿಯೂ ವಾಸವಾಗಿರುವುವು. ಸ್ವೀಡನ್, ಕೆನಡ ಮೊದಲಾದ ದೇಶದ ಜನರು ಈ ವಲಯದಲ್ಲಿ ಬೆಳೆಯುವ ಪೀತದಾರು (ಪೈನ್), ಭದ್ರದಾರು (ಫರ್) ಮೊದಲಾದ ಉದ್ದವಾದ ಮರಗಳನ್ನು ಕಡಿದು ಹಿಮದಿಂದ ಕೂಡಿದ ನೆಲದಮೇಲೆ ಎಳೆದುಕೊಂಡುಹೋಗಿ ಚಳಿಗಾಲದಲ್ಲಿ ಗಡ್ಡೆಗಟ್ಟಿರುವ ನದಿಗಳ ಸಹಾಯದಿಂದ ಅವುಗಳನ್ನು ಬಂದರುಗಳಿಗೆ ಸಾಗಿಸಿ, ಅಲ್ಲಿಂದ ಹಡಗುಗಳಲ್ಲಿ ಹಡಗು ಕಟ್ಟುವ ಸ್ಥಳಗಳಿಗೆ ರಫ್ತು ಮಾಡುವರು. ಇವುಗಳ ಸಣ್ಣ ಸಣ್ಣ ಕೊಂಬೆಗಳನ್ನು ಪುಡಿಮಾಡಿ ಆ ಪುಡಿಯಿಂದ ಕಾಗದ ಮಾಡುವರು; ಉಳಿದ ತುಂಡುಗಳನ್ನು ದೀಪದ ಕಡ್ಡಿಗಳನ್ನೂ ಸೀಸದ ಕಡ್ಡಿಗಳನ್ನೂ ಮಾಡುವುದಕ್ಕೆ ಉಪಯೋಗಿಸುವರು.

(4) ಅಕ್ಷಾಂಶಗಳು ಸುಮಾರು 45 ಡಿಗ್ರಿಗಳಿಂದ 58 ಡಿಗ್ರಿಗಳವರೆಗೂ ಇರುವ ಪ್ರದೇಶವನ್ನು ಚಳಿಗಾಲದಲ್ಲಿ **ಎಲೆಗಳುದುರುವ ಮರಗಳಿಂದ**

**ಕೂಡಿದ ಸಮಶೀತೋಷ್ಣ ವಲಯದ ಶೀತ ಪ್ರದೇಶವೆಂದು** ಕರೆಯುವರು. ಈ ವಲಯಕ್ಕೆ ಬ್ರಿಟಿಷ್ ದ್ವೀಪಗಳು, ಯೂರೋಪ್, ಏಷ್ಯ ಖಂಡಗಳ ಮಧ್ಯ ಭಾಗಗಳು, ಕೆನಡ ದೇಶದ ದಕ್ಷಿಣ ಭಾಗ, ಪಟಗೋನಿಯ ದೇಶ ಮೊದಲಾದುವು ಸೇರಿವೆ. ಇಲ್ಲಿ ಸರಾಸರಿ ಉಷ್ಣವು 45 ಡಿಗ್ರಿಗಳಿಂದ 52 ಡಿಗ್ರಿಗಳವರೆಗೂ ಇರುವುದು. ತಕ್ಕಮಟ್ಟಿಗೆ ಉಷ್ಣವಿರುವುದರಿಂದ ಇಲ್ಲಿ ಬೀಟ್, ಆಲ್ಡರ್, ಓಕ್ (ಬಾಸವೃಕ್ಷ) ಮೊದಲಾದ ಕೊಂಬೆಗಳುಳ್ಳ ದೊಡ್ಡ ಮರಗಳು ಬೆಳೆಯುವುವು; ಚಳಿಯು ಹೆಚ್ಚಾಗಿರುವುದರಿಂದ ಚಳಿಗಾಲದಲ್ಲಿ ಇವುಗಳ ಎಲೆಗಳು ಉದುರಿಹೋಗಿ ಕೊಂಬೆಗಳು ಬರಲುಬರಲಾಗಿ ಕಾಣಿಸುವುವು. ಈ ಮರಗಳು ಹಡಗುಗಳನ್ನು ಕಟ್ಟುವುದಕ್ಕೂ ಮನೆಗಳನ್ನು ಕಟ್ಟುವುದಕ್ಕೂ ಉಪಯೋಗವಾಗುವುವು.

ಈ ವಲಯದಲ್ಲಿ ಗೋಧಿ, ಜವೆಗೋಧಿ (ಬಾರ್ಲಿ), ತೋಕೆಗೋಧಿ, ಚಿಕ್ಕ ಗೋಧಿ (ರೈ) ಎಂಬ ಧಾನ್ಯಗಳು ವಿಶೇಷವಾಗಿ ಬೆಳೆಯುವುವು. **ಗೋಧಿ**—ಇದು ಒಂದು ಹುಲ್ಲಿನ ಜಾತಿಯ ಸಸ್ಯ. ಇದು ಬೆಳೆಯುವುದಕ್ಕೆ ಗಟ್ಟಿಯಾದ ಮಣ್ಣಿನ ನೆಲವೂ ತಕ್ಕಮಟ್ಟಿಗೆ ಮಳೆಯೂ ತೆನೆ ಬಲಿಯುವ ಸಮಯದಲ್ಲಿ ಹೆಚ್ಚಾಗಿ ಬಿಸಿಲೂ ಬೇಕು. ಚಳಿಯು ಬಹು ಹೆಚ್ಚಾಗಿರಕೂಡದು. ಆದುದರಿಂದ ಇದು ಈ ವಲಯದಲ್ಲಿಯೂ, ಇದಕ್ಕಿಂತ ಶಾಖವು ಹೆಚ್ಚಾಗಿರುವ ಇತರ ವಲಯಗಳ ಕೆಲವು ಭಾಗಗಳಲ್ಲಿಯೂ (ಉದಾ. ಪಂಜಾಬ್) ವಿಶೇಷವಾಗಿ ಬೆಳೆಯುವುದು. ಇದರ ಹಿಟ್ಟನ್ನು ರೊಟ್ಟಿ, ಬಿಸ್ಕತ್ತು ಮೊದಲಾದ ಆಹಾರಪದಾರ್ಥಗಳನ್ನು ಮಾಡುವುದಕ್ಕೆ ಉಪಯೋಗಿಸುವರು. ಇದರ ಹುಲ್ಲಿನಿಂದ ಇಟಲಿ ದೇಶದಲ್ಲಿ ಟೋಪಿಗಳನ್ನು ಹೆಣೆಯುವರು. **ಜವೆಗೋಧಿ**—ಇದು ಗೋಧಿ ಬೆಳೆಯುವ ಕಡೆಗಳಲ್ಲೆಲ್ಲ ಬೆಳೆಯುವುದು; ಆದರೆ ಇದು ಗೋಧಿಗಿಂತಲೂ ಹೆಚ್ಚು ಶೈತ್ಯವನ್ನು ತಡೆಯಬಲ್ಲುದಾದುದರಿಂದ ಮೇರುವೃತ್ತಗಳ ಬಳಿಯಲ್ಲಿರುವ ಪ್ರದೇಶಗಳಲ್ಲಿಯೂ ಬೆಳೆಯುವುದು. ಗೋಧಿಯ ಹಾಗೆಯೇ ಇದರ ಉಪಯೋಗವು; ಇದನ್ನು ಕುದುರೆಗಳಿಗೂ ತಿನ್ನಿಸುವರು; ಇದರಿಂದ ಒಂದು ಬಗೆಯ ಮದ್ಯವನ್ನೂ ಮಾಡುವರು. ತೋಕೆಗೋಧಿ ಮತ್ತು ಚಿಕ್ಕ ಗೋಧಿ ಇವು ಫಲವತ್ತಿನಲ್ಲಿ ಕಡಿಮೆಯಾದ ನೆಲಗಳಲ್ಲಿ ಬೆಳೆಯುವುವು; ಇವು ಗೋಧಿಯಷ್ಟು ಪುಷ್ಟಿಕಾರಿಗಳಲ್ಲ; ಅಷ್ಟು ರುಚಿಯಾಗಿಯೂ ಇಲ್ಲ. ಈ ವಲಯದಲ್ಲಿ ಈ ಧಾನ್ಯಗಳಲ್ಲದೆ ಸೇಬು ಮೊದಲಾದ ಕೆಲವು ಹಣ್ಣುಗಳೂ ಬೆಳೆಯುವುವು.

ಈ ವಲಯದಲ್ಲಿ ಮಧುರವಾಗಿ ಗಾನಮಾಡುವ ಅನೇಕ ಬಗೆಯ ಪಕ್ಷಿಗಳಿವೆ; ಆದರೆ ಇವು ನೋಡುವುದಕ್ಕೆ ನಮ್ಮ ದೇಶದ ಪಕ್ಷಿಗಳಷ್ಟು ಸುಂದರವಾಗಿಲ್ಲ. ತೋಳ, ನರಿ, ಜಿಂಕೆಗಳೇ ಇಲ್ಲಿನ ಕಾಡುಮೃಗಗಳು; ಕುದುರೆ, ದನ, ಕುರಿ, ನಾಯಿ ಮೊದಲಾದ ಎಲ್ಲಾ ಸಾಧು ಮೃಗಗಳೂ ಇಲ್ಲಿ ಜೀವಿಸುವುವು.

ಇಲ್ಲಿ ವ್ಯವಸಾಯಕ್ಕೆ ಸಾಮಾನ್ಯವಾಗಿ ಕುದುರೆಗಳನ್ನು ಉಪಯೋಗಿಸುವರು. ಮಾಂಸಕ್ಕಾಗಿ ಎತ್ತುಗಳನ್ನು ಸಾಕುವರು.

ಉತ್ತರ ಅಮೆರಿಕ ಖಂಡದ ಶೀತ ಪ್ರದೇಶಗಳಲ್ಲಿ ಬೀವರ್ ಎಂಬ ಒಂದು ಬಗೆಯ ಪ್ರಾಣಿಯು ವಾಸಮಾಡುವುದು. ಇದು ಕಲ್ಲುಗಳನ್ನೂ ಮಣ್ಣನ್ನೂ ಹೊತ್ತುಕೊಂಡು ಬಂದು ಹರಿಯುವ ನೀರಿಗೆ ಅಡ್ಡಲಾಗಿ ಹಾಕಿ ಮನೆಯನ್ನು ಕಟ್ಟಿಕೊಳ್ಳುವುದು; ಇದು ಚಳಿಗಾಲದಲ್ಲಿ ಪೂರ್ತಿಯಾಗಿ ಮೂರು ತಿಂಗಳು ತನ್ನ ಗುಹೆಯಲ್ಲಿ ನಿದ್ದೆಮಾಡುವುದು.

(5) **ಎಲೆಗಳುದುರದಿರುವ ಮರಗಳುಳ್ಳ ಸಮಶೀತೋಷ್ಣ ವಲಯದ ಉಷ್ಣ ಪ್ರದೇಶವು.**—ಅಕ್ಷಾಂಶಗಳು 34ರಿಂದ 45 ಡಿಗ್ರಿಗಳವರೆಗೂ ಪ್ರಸರಿಸಿ ಯೂರೊಪು ಖಂಡದ ದಕ್ಷಿಣ ಭಾಗ, ಏಷ್ಯಾ ಮೈನರ್, ದಕ್ಷಿಣ ಚೀಣಾ, ಸಂಯುಕ್ತ ಸಂಸ್ಥಾನಗಳು, ಅರ್ಜೆನ್‌ಟೈನ, ವಿಕ್ಟೋರಿಯ ಮೊದಲಾದ ದೇಶಗಳನ್ನು ಒಳಗೊಂಡಿರುವುದು. ಈ ವಲಯದಲ್ಲಿ ಸರಾಸರಿ 53 ಡಿಗ್ರಿಗಳಿಂದ 62 ಡಿಗ್ರಿಗಳವರೆಗೂ ಶಾಖವಿರುವುದು. ಇಲ್ಲಿ ಓಕ್, ಸೀಮೆಹಿಪ್ಪೆ ಮೊದಲಾದ ಮರಗಳೂ; ಗೋಧಿ, ಬೀಟ್, ಸೀಮೆಯಗಸೆ, ಮೆಕ್ಕೆ ಅಥವಾ ಮುಸುಕಿನಜೋಳ, ಹೊಗೆಯಸೊಪ್ಪು ಮೊದಲಾದ ಬೆಳೆಗಳೂ; ಕಿತ್ತಿಳೆ, ದ್ರಾಕ್ಷಿ, ಅಂಜೂರ ಮೊದಲಾದ ಹಣ್ಣುಗಳೂ ಬೆಳೆಯುವುವು. ಜರ್ಮನಿ ಮೊದಲಾದ ದೇಶಗಳಲ್ಲಿ ಬೀಟ್ ಗಿಡದಿಂದ ಸಕ್ಕರೆಯನ್ನು ಮಾಡುವರು. ಸೀಮೆ ಅಗಸೆಯ ಗಿಡದ ನಾರಿನಿಂದ ಬಟ್ಟೆಗಳನ್ನು ಮಾಡುವರು; ಅದರ ಬೀಜದಿಂದ ಎಣ್ಣೆಯನ್ನು ತೆಗೆಯುವರು. ಕಿತ್ತಿಳೆ ಮೊದಲಾದ ಹಣ್ಣುಗಳು ಇಲ್ಲಿ ವಿಶೇಷವಾಗಿ ಬೆಳೆಯುವುದಕ್ಕೆ ಹಿಂದೆ ವಿವರಿಸಿರುವ ವಲಯಗಳಿಗಿಂತ ಇಲ್ಲಿ ಹೆಚ್ಚು ಶಾಖವಿರುವುದೇ ಮುಖ್ಯ ಕಾರಣ. ಹಿಪ್ಪಲಿ ನೇರಳೆ ಗಿಡಗಳನ್ನು ಬೆಳೆಯುವ ಕಡೆಗಳಲ್ಲಿ ರೇಷ್ಮೆ ಹುಳುಗಳನ್ನು ಸಾಕಿ ರೇಷ್ಮೆಯ ಸೂಲನ್ನು ತೆಗೆಯುವರು. ಆಲಿವ್ ಅಥವಾ ಸೀಮೆಹಿಪ್ಪೆ ಮರವು ಅಂಜೂರದ ಹಾಗೆಯೇ ಬೆಳೆಯುವುದು; ಇದರ ಎಣ್ಣೆಯನ್ನು ಔಷಧಿಗೂ, ಅಡಿಗೆಗೂ ಉಪಯೋಗಿಸುವರು.

ಈ ವಲಯದಲ್ಲಿ ದನ, ಕುರಿ, ಕುದುರೆ, ಕತ್ತೆ, ಹೇಸರಕತ್ತೆ, ಕೋಳಿ ಮೊದಲಾದ ಎಲ್ಲಾ ಬಗೆಯ ಸಾಧು ಪ್ರಾಣಿಗಳೂ ವಾಸಮಾಡುವುವು. ಇಲ್ಲಿ ಹಿಂದಿನ ವಲಯಗಳಿಗಿಂತ ಹೆಚ್ಚು ಕಾಡುಮೃಗಗಳು ಇರುವುವು; ಇವುಗಳಲ್ಲಿ ಕರಡಿ, ತೋಳ, ಕಾಡುಹಂದಿ, ಮುಳ್ಳುಹಂದಿ, ಕಾಡುಕೋಣ ಇವು ಮುಖ್ಯವಾದುವು.

ಕತ್ತೆಯನ್ನು ನಮ್ಮ ದೇಶದಲ್ಲಿ ಬಹು ತುಚ್ಛವಾಗಿ ಕಾಣುವರು; ಆದರೆ ಸ್ಪೇನ್, ಈಜಿಪ್ಟ್ ಮೊದಲಾದ ದೇಶಗಳಲ್ಲಿ ಇದನ್ನು ಹೊರೆಗಳನ್ನು ಹೊರುವುದಕ್ಕೂ ಸವಾರಿಗೂ ಉಪಯೋಗಿಸುವರು. ಗುಡ್ಡ, ಬೆಟ್ಟ, ಕಾಡುಗಳಲ್ಲಿ ಇವು

ಬಹಳ ಉಪಯೋಗಕರವಾದ ಪ್ರಾಣಿಗಳಾಗಿವೆ; ಇವು ಸೌಂದರ್ಯದಲ್ಲಿಯೂ ಚುರುಕಿನಲ್ಲಿಯೂ ಕುದುರೆಗಳಿಗಿಂತ ಬಹು ಕೀಳಾಗಿದ್ದರೂ ಕಷ್ಟವನ್ನು ಸಹಿಸುವುದರಲ್ಲಿ ಉತ್ತಮವಾಗಿವೆ. ಹೇಸರಕತ್ತೆಯು ಕುದುರೆಯಂತೆ ಚುರುಕಾಗಿಯೂ ಕತ್ತೆಯಂತೆ ಭಾರ ಸಹಿಸುವುದಾಗಿಯೂ ಇರುವುದರಿಂದ ಸೈನ್ಯದಲ್ಲಿ ಫಿರಂಗಿಗಳನ್ನೂ ಸಾಮಾನು ಗಾಡಿಗಳನ್ನೂ ಎಳೆಯುವುದಕ್ಕೆ ಅದು ಬಹು ಉಪಯೋಗವಾಗಿದೆ.

(6) **ಸಮಶೀತೋಷ್ಣವಲಯದಲ್ಲಿ ಉಷ್ಣವಲಯಕ್ಕೆ ಸಮೀಪದಲ್ಲಿರುವ ಸಸ್ಯವಲಯ.**—ಇದು ಸಂಕ್ರಾಂತಿ ವೃತ್ತದಿಂದ 34 ಡಿಗ್ರಿಗಳವರೆಗೆ ಪ್ರಸರಿಸಿದೆ. ಉತ್ತರ ಇಂಡಿಯ, ಆಫ್ಘಾನಿಸ್ಥಾನ, ಅರೇಬಿಯ, ಆಫ್ರಿಕದ ಉತ್ತರ ಭಾಗ, ಉತ್ತರ ಅಮೆರಿಕ ಖಂಡದ ಬಹು ದಕ್ಷಿಣ ಭಾಗ, ದಕ್ಷಿಣ ಆಫ್ರಿಕ, ಮಧ್ಯ ಆಸ್ಟ್ರೇಲಿಯ ಮೊದಲಾದ ಪ್ರದೇಶಗಳು ಈ ವಲಯದಲ್ಲಿವೆ. ಇಲ್ಲಿ ಸರಾಸರಿ ಶಾಖ 62 ಡಿಗ್ರಿಗಳಿಂದ 72 ಡಿಗ್ರಿಗಳವರೆಗೂ ಇರುವುದು. ಈ ವಲಯದ ಸಸ್ಯಗಳಲ್ಲಿ ದೇವದಾರು, ಆಲ, ಕರಿಯಮರಗಳೂ; ಧಾನ್ಯಗಳೂ; ದ್ರಾಕ್ಷಿ, ಕಿತ್ತಿಳೆ, ಖರ್ಜೂರ ಮೊದಲಾದ ಹಣ್ಣುಗಳೂ; ಕಬ್ಬು, ಟೀ, ಹತ್ತಿ, ಸಣಬು, ನೀಲಿ, ಹಿಪ್ಪಲಿನೇರಳೆ, ಇಂಗು ಮೊದಲಾದ ಇತರ ಬೆಳೆಗಳೂ ಮುಖ್ಯವಾಗಿವೆ.

**ಬತ್ತ.**—ಇದು ಬೆಳೆವುದಕ್ಕೆ ಹೆಚ್ಚು ಶಾಖವೂ, ನೀರೂ, ಜಿಗಟಾದ ಮಣ್ಣೂ ಬೇಕು. ಎಷ್ಟು ಹೆಚ್ಚು ಮಳೆಯಾದರೂ ಇದು ತಡೆದುಕೊಳ್ಳಬಲ್ಲುದು. ಮಳೆ ಕಡಿಮೆಯಾಗಿರುವ ಕಡೆಗಳಲ್ಲಿ ಈ ಪೈರಿಗೆ ಕೆರೆ ನದಿ ಮೊದಲಾದುವುಗಳಿಂದ ಆಗಾಗ ನೀರನ್ನು ಒದಗಿಸುತ್ತಲೇ ಇರಬೇಕು. ಈ ಮೂರು ಸೌಕರ್ಯಗಳೂ ವಿಶೇಷವಾಗಿರುವ ಇಂಡಿಯ, ಬರ್ಮ, ಚೀಣ, ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲಿ ಇದು ವಿಶೇಷವಾಗಿ ಬೆಳೆವುದು. ಅಕ್ಕಿಯನ್ನು ಆಹಾರಕ್ಕಾಗಿ ಉಪಯೋಗಿಸುವುದಲ್ಲದೆ ಇದರ ಗಂಜಿಯನ್ನು ಹೊಸಬಟ್ಟೆಗಳನ್ನು ಮುರುಸುಮಾಡುವುದಕ್ಕೂ ಉಪಯೋಗಿಸುವರು. ಯೂರೊಪಿನಲ್ಲಿ ಅಕ್ಕಿಯಿಂದ ಒಂದು ಬಗೆಯ ಮದ್ಯವನ್ನೂ ಮಾಡುವರು.

**ರಾಗಿ, ಜೋಳ ಮೊದಲಾದ ಧಾನ್ಯಗಳು.**—ಈ ವಲಯದಲ್ಲಿ ಬತ್ತ, ಗೋಧಿ ಬೆಳೆಯಲು ಸಾಕಾದಷ್ಟು ಮಳೆಯೂ, ಫಲವತ್ತಾದ ನೆಲವೂ ಇಲ್ಲದ ಪ್ರದೇಶಗಳಲ್ಲಿ ಬೆಳೆಯುವುವು. ಇವು ಜನರಿಗೆ ಆಹಾರವಾಗಿರುವುವು. ಇವುಗಳ ಹುಲ್ಲು ದನಗಳಿಗೆ ಒಳ್ಳೆಯ ಮೇವಾಗುವುದು. ಈ ಧಾನ್ಯಗಳು ಬತ್ತ, ಗೋಧಿಗಳಷ್ಟು ರುಚಿಯಾಗಿಯೂ ಇರುವುದಿಲ್ಲ; ಅಷ್ಟು ಬೆಲೆಯನ್ನೂ ಬಾಳುವುದಿಲ್ಲ.

**ತೊಗರಿ, ಕಡಲೆ, ಹೆಸರು, ಹುರುಳಿ ಮೊದಲಾದ ದ್ವಿದಳ ಧಾನ್ಯಗಳು.**—ಇವು ಈ ವಲಯದ ಅನೇಕ ಕಡೆಗಳಲ್ಲಿ ಬೆಳೆಯುವುವು. ಹೆಚ್ಚಾದ

ಶಾಖವೂ, ಸಾಧಾರಣವಾದ ಮಳೆಯೂ ಆಗುವ! ಫಲವತ್ತಾದ ದೇಶಗಳಲ್ಲಿ ಇವು ಬೆಳೆಯುವುವು. ಈ ಧಾನ್ಯಗಳನ್ನು ಅಡಿಗೆಗೂ ಸಾಧುಪ್ರಾಣಿಗಳ ಆಹಾರಕ್ಕೂ ಉಪಯೋಗಿಸುತ್ತಾರೆ.

**ಕಬ್ಬು.**—ಇದಕ್ಕೆ ಬತ್ತದಂತೆಯೇ ಫಲವತ್ತಾದ ನೆಲವೂ, ಹೆಚ್ಚಾದ ಶಾಖವೂ ವಿಶೇಷವಾಗಿ ನೀರೂ ಬೇಕು; ಆದರೆ ನೆಲದಲ್ಲಿ ಹೆಚ್ಚಾಗಿ ಜೌಗು ಇರ ಕೂಡದು. ಆದುದರಿಂದ ಇದು ಈ ಸಸ್ಯವಲಯಗಳ ಉಷ್ಣವಲಯಗಳಲ್ಲಿ ಅನೇಕ ಕಡೆ ಹೇರಳವಾಗಿ ಬೆಳೆವುದು. ಇದರ ರಸದಿಂದ ಬೆಲ್ಲವನ್ನೂ ಸಕ್ಕರೆಯನ್ನೂ ಮಾಡುತ್ತಾರೆ.

**ಟೀ.**—ಇದಕ್ಕೆ ಆಗಾಗ ಮಳೆ ಬೀಳುತ್ತಲೇ ಇರಬೇಕು; ಆದರೆ ನೀರು ನಿಲ್ಲದೆ ಹರಿದು ಹೋಗುತ್ತಿರಬೇಕು. ಇದು ಬಹು ಶೀತದೇಶಗಳಲ್ಲಿ ಬೆಳೆಯು ಲಾರದು. ಆದುದರಿಂದ ಇದು ಚೀಣ, ಇಂಡಿಯಗಳಲ್ಲಿಯೂ ಸಿಲೋನ್ ದ್ವೀಪಗಳಲ್ಲಿಯೂ ಎತ್ತರವಾದ ಬೆಟ್ಟಗಳ ತಪ್ಪಲುಗಳಲ್ಲಿಯೂ ಬೆಳೆವುದು. ಇದರ ಎಲೆಯನ್ನು ಒಣಗಿಸಿ ಕಷಾಯಮಾಡಿ ಅದಕ್ಕೆ ಹಾಲು ಸಕ್ಕರೆಗಳನ್ನು ಮಿಶ್ರ ಮಾಡಿ ಕುಡಿಯುವರು. ಚೀಣಾದೇಶದಲ್ಲಿ ಬರಿಯ ಕಷಾಯವನ್ನೇ ಕುಡಿಯುವುದೂ ಉಂಟು.

**ಹತ್ತಿ.**—ಇದಕ್ಕೆ ಹೆಚ್ಚಾಗಿ ಉಷ್ಣವುಳ್ಳ ದೀರ್ಘವಾದ ಬೇಸಗೆಯೂ, ನೀರು ನಿಲ್ಲದ ನೆಲ ಅಂದರೆ ಮರಳು ಮಿಶ್ರವಾದ ಭೂಮಿಯೂ, ಸಾಧಾರಣವಾದ ಮಳೆಯೂ ಬೇಕು. ಇದು ಮುಖ್ಯವಾಗಿ ಇಂಡಿಯ, ಈಜಿಪ್ಟ್, ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲಿ ಬೆಳೆಯುತ್ತದೆ. ಅಮೆರಿಕದ ಹತ್ತಿಯು ಉತ್ತಮವಾದುದು. ಹತ್ತಿಯ ನೂಲಿನಿಂದ ವಿಧ ವಿಧವಾದ ಬಟ್ಟೆಗಳನ್ನು ಮಾಡುವರು. ಬಿಡಿಸಿದ ಹತ್ತಿಯನ್ನು ಆಸ್ಪತ್ರೆಯಲ್ಲಿ ಗಾಯಕ್ಕೆ ಕಟ್ಟುವುದಕ್ಕೂ ಯುದ್ಧದಲ್ಲಿ ಸಿಡಿಮದ್ದನ್ನು ಹಾರಿಸುವುದಕ್ಕೂ ಉಪಯೋಗಿಸುವರು. ಹತ್ತಿಯ ಬೀಜಗಳಿಂದ ಎಣ್ಣೆಯನ್ನೂ ತೆಗೆಯುವರು.

**ಸಣಬು.**—ಇದಕ್ಕೆ ಸೆಕೆಯೂ ಗಾಳಿಯಲ್ಲಿ ತೇವವೂ ಹೆಚ್ಚಾಗಿ ಇರಬೇಕು. ಇದು ನೆಲದ ಸಾರವನ್ನು ಬಹು ಬೇಗನೆ ಹೀರಿಕೊಳ್ಳುವುದರಿಂದ ನೆಲವು ಬಹು ಫಲವತ್ತಾಗಿರಬೇಕು. ಈ ಸೌಕರ್ಯಗಳಿರುವ ಬಂಗಾಳ, ಈಜಿಪ್ಟ್, ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲಿ ಇದು ವಿಶೇಷವಾಗಿ ಬೆಳೆವುದು. ಇದರ ನಾರಿನಿಂದ ಬಟ್ಟೆಗಳನ್ನು ನೇಯುವರು, ಗೋಣೀಚೀಲಗಳನ್ನು ಹೆಣೆಯುವರು, ಹಗ್ಗಗಳನ್ನು ಹೊಸೆಯುವರು.

**ಅಫೀಮು.**—ಗಸಗಸೆಯ ಗಿಡಕ್ಕೆ ಹೆಚ್ಚು ಸೆಕೆಯೂ ಫಲವತ್ತಾದ ಒನೆವೂ ತಕ್ಕಮಟ್ಟಿಗೆ ನೀರೂ ಬೇಕು. ಇದನ್ನು ಮುಖ್ಯವಾಗಿ ಚೀಣ, ಇಂಡಿಯ

ಗಳಲ್ಲಿ ಬೆಳೆಯುವರು. ಗಸಗಸೆಯ ಗಿಡದಲ್ಲಿ ಹೂಗಳು ಬಲಿತಮೇಲೆ ಒಂದು ಚೂರಿಯಿಂದ ಅವುಗಳ ಮೇಲ್ಭಾಗವನ್ನು ಒರೆಯುವರು; ಆಗ ಈ ಹೂಗಳಿಂದ ಒಂದು ಒಗೆಯ ಅಂಟು ಹೊರಡುವುದು. ಇದೇ ಅಫೀಮು. ಇದು ಔಷಧಗಳಿಗೆ ಉಪಯೋಗವಾಗುತ್ತದೆ. ಈ ಗಿಡದ ಬೀಜಗಳು ಗಸಗಸೆ ಎನ್ನಿಸಿಕೊಂಡು ಅಡಿಗೆಗೆ ಉಪಯೋಗವಾಗುವುವು.

**ನೀಲಿ.**—ಇದು ಬಿಸಿಲೂ ನೀರೂ ಹೆಚ್ಚಾಗಿರುವ ಫಲವತ್ತಾದ ಭೂಮಿಗಳಲ್ಲಿ ಬೆಳೆಯುವುದು. ಇದು ಮುಖ್ಯವಾಗಿ ಇಂಡಿಯ ಮತ್ತು ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲಿ ಬೆಳೆಯುವುದು. ಗಿಡಗಳು ಹೂ ಬಿಡುವ ಕಾಲದಲ್ಲಿ ಅವನ್ನು ಕೊಯ್ದು ಕಟ್ಟುಗಳಾಗಿ ಕಟ್ಟಿ ನೀರಿನ ತೊಟ್ಟಿಗಳಲ್ಲಿ ನೆನೆಯಹಾಕುವರು. ಕೆಲವು ಘಂಟೆಗಳಾದಮೇಲೆ ಕಟ್ಟುಗಳನ್ನು ತೆಗೆದುಹಾಕಿ ನೀರನ್ನು ಕೋಲುಗಳಿಂದ ಬಡಿಯುವರು. ಅನಂತರ ನೀರಿನ ತಳದಲ್ಲಿ ನೀಲಿಯು ಗಡ್ಡೆಗಡ್ಡೆಗಳಾಗಿ ಸಿಕ್ಕುವುದು. ಈಚೆಗೆ ಜರ್ಮನೀದೇಶದಲ್ಲಿ ನೀಲಿಯನ್ನು ಬೇರೆ ವಿಧದಲ್ಲಿ ಅಗ್ಗವಾಗಿ ತಯಾರುಮಾಡುತ್ತಿರುವುದರಿಂದ ನಮ್ಮ ದೇಶದಲ್ಲಿ ನೀಲಿಗಿಡಗಳನ್ನು ಬೆಳೆಯುವುದು ಈ ಯುದ್ಧಕ್ಕೆ ಮುಂಚೆ ಅಷ್ಟು ಲಾಭಕರವಾಗಿರಲಿಲ್ಲ.

**ಹಿಪ್ಪಲಿನೇರಳೆ.**—ಇದಕ್ಕೆ ಫಲವತ್ತಾದ ಭೂಮಿಯೂ ಸಾಧಾರಣವಾದ ಉಷ್ಣವೂ ಮಳೆಯೂ ಬೇಕು. ಯೂರೊಪು ಖಂಡದ ದಕ್ಷಿಣಭಾಗ, ಇಂಡಿಯ, ಚೀಣ, ಜಪಾನ್‌ಗಳಲ್ಲಿ ಈ ಗಿಡವು ಚೆನ್ನಾಗಿ ಬೆಳೆಯುವುದು. ಇದರ ಸೊಪ್ಪನ್ನು ರೇಷ್ಮೆ ಹುಳುಗಳಿಗೆ ಆಹಾರವಾಗಿ ಉಪಯೋಗಿಸುತ್ತಾರೆ. ಈ ಹುಳುಗಳಿಂದ ದಾರವನ್ನು ತೆಗೆದು ರೇಷ್ಮೆಯ ಬಟ್ಟೆಗಳನ್ನು ಮಾಡುತ್ತಾರೆ.

**ಇಂಗು.**—ಇದು ಪರ್ಷಿಯ, ಆಫ್ಘಾನಿಸ್ಥಾನ, ಟಿಬೆಟ್ ದೇಶಗಳಲ್ಲಿ ವಿಶೇಷವಾಗಿ ಬೆಳೆಯುವ ಒಂದು ಜಾತಿಯ ಮರ. ಈ ಮರದ ಹಾಲು ಒಣಗಿ ಗಟ್ಟಿಯಾದಮೇಲೆ ಇದನ್ನು ರಫ್ತು ಮಾಡುವರು. ಇದು ಅಡಿಗೆಗೂ ಔಷಧಕ್ಕೂ ಉಪಯೋಗವಾಗುವುದು.

ಈ ವಲಯದಲ್ಲಿರುವ ಸಾಧು ಪ್ರಾಣಿಗಳು ಹಿಂದಿನ ವಲಯದವುಗಳಂತೆಯೇ ಇವೆ. ಇಲ್ಲಿ ಹಿಂದಿನ ವಲಯದ ಕಾಡುಮೃಗಗಳಲ್ಲದೆ ಆನೆ, ಒಂಟೆ, ಹುಲಿ, ಚಿರತೆ, ಖಡ್ಗಮೃಗ, ಜೀಬ್ರಾ, ಕಾಂಗರು ಮೊದಲಾದ ಇತರ ಕಾಡುಮೃಗಗಳೂ ಇರುವುವು. ಈ ವಲಯದಲ್ಲಿ ಅನೇಕ ಜಾತಿಯ ಸರ್ಪಗಳೂ ಸುಂದರವಾದ ನಾನಾವರ್ಣದ ಪಕ್ಷಿಗಳೂ ವಿಶೇಷವಾಗಿವೆ.

ಕಾಡುಮೃಗಗಳಲ್ಲೆಲ್ಲಾ ಆನೆಯೇ ಅತ್ಯಂತ ದೊಡ್ಡ ಪ್ರಾಣಿ. ಆದರೂ, ಅದನ್ನು ಹಿಡಿದು ಪಳಗಿಸಿ ಭಾರವಾದ ಸಾಮಾನುಗಳನ್ನು ಹೊರುವುದಕ್ಕೂ ಮಹಾರಾಜರೇ ಮೊದಲಾದ ಶ್ರೀಮಂತರು ಸವಾರಿ ಮಾಡುವುದಕ್ಕೂ ಉಪ

ಯೋಗಿಸುತ್ತಾರೆ. ಇದರ ದಂತವು ಬಹಳ ಬೆಲೆ ಬಾಳುವುದು. ಇದರಿಂದ ಬಾಚಣಿಗೆ ಮೊದಲಾದ ಸಾಮಾನುಗಳನ್ನೂ ಕೆತ್ತನೆಯ ಚಿತ್ರ ಕೆಲಸವನ್ನೂ ಮಾಡುವರು. ಆನೆ ಬಹು ಹೆಚ್ಚಾಗಿ ಆಹಾರವನ್ನು ತಿನ್ನುವ ಪ್ರಾಣಿಯಾದ್ದ್ರಿಂದ ಕಾಡುಗಳು ಹೆಚ್ಚಾಗಿರುವ ಪ್ರದೇಶಗಳಲ್ಲಿ ಮಾತ್ರ ಜೀವಿಸಬಲ್ಲುದು. ಇಂಡಿಯ, ಹಿಂದೂಚೀಣ ದೇಶಗಳ ಮತ್ತು ಆಫ್ರಿಕ ಖಂಡದ ಕಾಡುಗಳಲ್ಲಿ ಇದು ಹೆಚ್ಚಾಗಿ ವಾಸಮಾಡುವುದು.

**ಕಾಂಗರು.**—ಇದು ಆಸ್ಟ್ರೇಲಿಯದಲ್ಲಿ ವಾಸಮಾಡುವ ಒಂದು ವಿಜಾತೀಯವಾದ ಪ್ರಾಣಿ. ಇದರ ಹಿಂದಿನ ಕಾಲುಗಳು ಉದ್ದವಾಗಿಯೂ ಬಲವಾಗಿಯೂ, ಮುಂದಿನ ಕಾಲುಗಳು ಮೋಟಾಗಿಯೂ ಇವೆ. ಇದು ತನ್ನ ಬಾಲವನ್ನು ಊರಿಕೊಂಡು ತನ್ನ ಹಿಂದಿನ ಕಾಲುಗಳಿಂದ ಕುಪ್ಪಳಿಸಿಕೊಂಡು ನಡೆಯುತ್ತದೆ. ಇದಕ್ಕೆ ಸ್ವಾಭಾವಿಕವಾಗಿ ಹೊಟ್ಟೆಯ ಮುಂದೆ ಒಂದು ಚೀಲವಿರುವುದು. ಇದು ಆ ಚೀಲದಲ್ಲಿ ತನ್ನ ಮರಿಯನ್ನು ಇಟ್ಟುಕೊಳ್ಳುವುದು.

ಖಡ್ಗಮೃಗ, ಜೀಬ್ರ, ಉಷ್ಟ್ರಪಕ್ಷಿಗಳು ಆಫ್ರಿಕ ಖಂಡದಲ್ಲಿ ವಾಸಮಾಡುವುವು. ಜೀಬ್ರ ಇದು ಮೈಮೇಲೆ ಕಪ್ಪು ಹಳದಿ ಪಟ್ಟೆಗಳುಳ್ಳ ಒಂದು ಬಗೆಯ ಕಾಡುಕುದುರೆ. ಖಡ್ಗಮೃಗವನ್ನು **ಘೇಂಡಾಮೃಗ**ವೆಂದು ಕರೆಯುವರು. ಇದಕ್ಕೆ ಮೂಗಿನಮೇಲೆ ಒಂದು ಬಲವಾದ ಕೊಂಬಿರುವುದು. **ಉಷ್ಟ್ರಪಕ್ಷಿ**ಯು ಮರುಭೂಮಿಯಲ್ಲಿ ವಾಸಮಾಡುವುದು. ಈಚೆಗೆ ಇದನ್ನು ಈ ವಲಯದ ಇತರ ಭಾಗಗಳಲ್ಲಿಯೂ ಸಾಕುವುದಕ್ಕೆ ಆರಂಭಿಸಿರುವರು. ಇದಕ್ಕೆ ಗರಿಗಳಿದ್ದರೂ ಕೋಳಿಯ ಹಾಗೆ ಸ್ವಲ್ಪ ಎತ್ತರಕ್ಕೆ ಮಾತ್ರವೇ ಹಾರಬಲ್ಲುದು. ಆದರೆ ಈ ರೆಕ್ಕೆಗಳ ಸಹಾಯದಿಂದ ಘಂಟೆಗೆ 25 ಮೈಲಿಗಳವರೆಗೂ ಓಡಬಲ್ಲದು. ಇದರ ಗರಿಗಳನ್ನೂ ಯೂರೋಪಿನ ಜನರು ಅಲಂಕರಿಸಿಕೊಳ್ಳುವುದಕ್ಕೆ ಉಪಯೋಗಿಸುವರು.

(7) **ಸಂಕ್ರಾಂತಿ ವೃತ್ತಕ್ಕೆ ಸಮೀಪದಲ್ಲಿರುವ ಉಷ್ಣವಲಯಕ್ಕೆ ಸೇರಿದ ಸಸ್ಯವಲಯ.**—ಇದು 15 ಡಿಗ್ರಿಗಳಿಂದ ಸಂಕ್ರಾಂತಿ ವೃತ್ತದವರೆಗೂ ಪ್ರಸರಿಸಿ ಹಿಂದೂಚೀಣ, ಇಂಡಿಯ, ಅರೇಬಿಯಗಳ ಮಧ್ಯ ಭಾಗಗಳು, ಮಧ್ಯ ಅಮೆರಿಕ, ಆಸ್ಟ್ರೇಲಿಯದ ಉತ್ತರ ಭಾಗ, ದಕ್ಷಿಣ ಅಮೆರಿಕದ ಮಧ್ಯ ಭಾಗ ಮೊದಲಾದ ಪ್ರದೇಶಗಳನ್ನು ಒಳಕೊಂಡಿರುವುದು. ಇಲ್ಲಿ ಉಷ್ಣವು ಸರಾಸರಿ 73 ಡಿಗ್ರಿಗಳಿಂದ 78 ಡಿಗ್ರಿಗಳವರೆಗೆ ಇರುವುದು. ಈ ವಲಯದ ಸಸ್ಯಗಳೂ ಪ್ರಾಣಿಗಳೂ ಹಿಂದಿನ ವಲಯದ ಹಾಗೆಯೇ ಇವೆ; ಆದರೆ ಇಲ್ಲಿ ಉಷ್ಣವೂ ಮಳೆಯೂ ಇನ್ನೂ ಹೆಚ್ಚಾಗಿರುವುದರಿಂದ ಬೊಂಬು, ಆಲ, ಅರಳಿ, ಮಾವು, ಬೇವು, ತೇಗ, ಮಹಾಗನಿ ಮೊದಲಾದ ಮರಗಳೂ, ಕಾಫಿ ಮತ್ತು ಬಾಳೆಯ ಗಿಡಗಳೂ ಬೆಳೆಯುವುವು.

**ಕಾಫಿ.**—ಈ ಗಿಡಕ್ಕೆ ಹೆಚ್ಚಾದ ಉಷ್ಣವೂ, ನೀರೂ, ಗುಡ್ಡಗಳ ಮೇಲಿನ ಫಲವತ್ತಾದ ಕ್ಷೇತ್ರವೂ ಬೇಕು. ಬಿರುಗಾಳಿಯಿಂದ ಈ ಗಿಡಗಳು ಬಿದ್ದುಹೋಗದಿರುವ ಹಾಗೆ ದೊಡ್ಡ ಮರಗಳ ಆಸರೆಯೂ ಇರಬೇಕು. ಈ ವಲಯದ ಅನೇಕ ಪ್ರದೇಶಗಳಲ್ಲಿ—ಮುಖ್ಯವಾಗಿ ಬ್ರೆಜಿಲ್, ಇಂಡಿಯ ದೇಶಗಳಲ್ಲಿ ಇದು ಬೆಳೆಯುವುದು. ಇದರ ಬೀಜವನ್ನು ಹುರಿದು ಪುಡಿಮಾಡಿ ಕಷಾಯವನ್ನು ಕಾಸಿ ಹಾಲು ಸಕ್ಕರೆ ಬೆರಸಿಕೊಂಡು ಕುಡಿಯುವರು.

**ಬಾಳೆ.**—ಇದಕ್ಕೆ ಹೆಚ್ಚಾದ ಉಷ್ಣವೂ ನೀರೂ ಬೇಕಾಗಿರುವುದರಿಂದ ಇದು ಉಷ್ಣವಲಯದಲ್ಲಿ ಮಾತ್ರ ಬೆಳೆಯುವುದು. ಇದು ಇಂಡಿಯಾ ದೇಶದಲ್ಲಿಯೂ, ಈಸ್ಟಿಂಡಿಯ ಮತ್ತು ವೆಸ್ಟಿಂಡಿಯ ದ್ವೀಪಗಳಲ್ಲಿಯೂ ವಿಶೇಷವಾಗಿ ಬೆಳೆಯುವುದು. ಇದರ ಕಾಯಿ ಹಣ್ಣು ಎಲೆಗಳ ಉಪಯೋಗವು ನಿಮಗೆ ತಿಳಿದೇ ಇದೆ.

**ತೇಗ, ಮಹಾಗನಿ ಮರಗಳು.**—ಇವು ಮರಮುಟ್ಟುಗಳನ್ನೂ ಬೆಂಚು, ಕುರ್ಚಿ ಮೊದಲಾದ ಸಾಮಾನುಗಳನ್ನೂ ಮಾಡುವುದಕ್ಕೆ ಬಹು ಉಪಯೋಗವಾಗಿವೆ. ಇವು ಇಂಡಿಯ ಮತ್ತು ಬರ್ಮಾ ದೇಶಗಳಲ್ಲಿ ವಿಶೇಷವಾಗಿ ಬೆಳೆಯುವುವು. ಆಲದಮರವು ಬಹು ದೊಡ್ಡದಾಗಿಯೂ ವಿಶಾಲವಾಗಿಯೂ ಬೆಳೆಯುವುದು.

(8) **ಉಷ್ಣವಲಯದಲ್ಲಿ ಸಮಭಾಜಕವೃತ್ತಕ್ಕೆ ಸಮೀಪದಲ್ಲಿರುವ ಸಸ್ಯವಲಯ.**—ಇದು ಸಮಭಾಜಕವೃತ್ತದ ಎರಡು ಕಡೆಗಳಲ್ಲಿಯೂ 15 ಡಿಗ್ರಿಗಳವರೆಗೂ ಪ್ರಸರಿಸಿದೆ. ಇಲ್ಲಿ ಉಷ್ಣವು ಸರಾಸರಿ 78 ಡಿಗ್ರಿಗಳಿಂದ 82 ಡಿಗ್ರಿಗಳವರೆಗೂ ಇರುವುದು. ಇಲ್ಲಿ ಯಾವಾಗಲೂ ಸೆಕೆಯೂ ಮಳೆಯೂ ಹೆಚ್ಚಾಗಿರುವುದರಿಂದ ಭಾರಿಮರಗಳು ಅತಿನಿಬಿಡವಾಗಿ ಬೆಳೆಯುವುವು. ಅಮೆಜಾನ್ ಮತ್ತು ಕಾಂಗೋ ನದಿಗಳ ಮೈದಾನಗಳಲ್ಲಿ ಅತಿಗಹನವಾದ ದೊಡ್ಡ ಕಾಡುಗಳಿವೆ. ಈ ಕಾಡುಗಳಲ್ಲಿ ಭಾರಿಮರಗಳು ಒತ್ತೊತ್ತಾಗಿ ಬೆಳೆದು ಬಳ್ಳಿಗಳು ಎಲ್ಲೆಲ್ಲಿಯೂ ಹಬ್ಬಿ ಜನರು ಪ್ರವೇಶಮಾಡಲು ಅಸಾಧ್ಯವಾಗಿದೆ. ಈ ಕಾಡುಗಳಲ್ಲಿ ವಿಧವಿಧವಾದ ಕೋತಿಗಳೂ ಸರ್ಪಗಳೂ ಕ್ರಿಮಿಗಳೂ ಅಸಂಖ್ಯಾತವಾಗಿರುವುವು.

ಈ ವಲಯದ ಸಸ್ಯಗಳೂ ಪ್ರಾಣಿಗಳೂ ಹಿಂದಿನ ವಲಯದಂತೆಯೇ ಇವೆ; ಆದರೆ ಅಡಕೆ, ತೆಂಗು, ತಾಳೆ ಮೊದಲಾದ ಇತರ ಮರಗಳೂ; ಮೆಣಸು, ಏಲಕ್ಕಿ, ಶುಂಠಿ, ಲವಂಗ, ಜಾಯಿಕಾಯಿ ಮೊದಲಾದ **ಸಂಬಾರದ ಪದಾರ್ಥಗಳೂ** ಸಹ ಈ ವಲಯದಲ್ಲಿ ಬೆಳೆಯುವುವು. ಸಂಬಾರದ ಪದಾರ್ಥಗಳು ಈಸ್ಟಿಂಡಿಯ

ದ್ವೀಪಗಳಲ್ಲಿಯೂ ದಕ್ಷಿಣ ಇಂಡಿಯದ ಪಶ್ಚಿಮ ಭಾಗದಲ್ಲಿಯೂ ಮಡಗಾಸ್ಕರ್ ದ್ವೀಪದಲ್ಲಿಯೂ ವಿಶೇಷವಾಗಿ ಬೆಳೆಯುವುವು.

**ತೆಂಗಿನಮರ.**—ಇದಕ್ಕೆ ಹೆಚ್ಚು ಉಷ್ಣವೂ, ನೀರೂ, ಮರಳು ಮಿಶ್ರವಾದ ನೆಲವೂ ಸಮುದ್ರದ ಗಾಳಿಯೂ ಬೇಕು; ಆದುದರಿಂದ ಇದು ಈ ವಲಯದ ಸಮುದ್ರ ತೀರಪ್ರದೇಶಗಳಲ್ಲಿ ವಿಶೇಷವಾಗಿ ಬೆಳೆಯುವುದು. ಇದರ ಕಾಯಿ, ಗರಿ, ಎಳನೀರುಗಳ ಉಪಯೋಗವು ನಿಮಗೆ ತಿಳಿದೆಯಿದೆ. ಅಡಕೆಯ ಮರವು ಮುಖ್ಯವಾಗಿ ಇಂಡಿಯಾ ದೇಶದಲ್ಲಿ ಮಾತ್ರ ಬೆಳೆಯುವುದು. ತಾಳೆ, ಈಚಲು ಮರಗಳು ಸಾಮಾನ್ಯವಾಗಿ ಈ ವಲಯದ ಎಲ್ಲಾ ಕಡೆಗಳಲ್ಲಿಯೂ ಬೆಳೆಯುವುವು; ಇವುಗಳಿಂದ ಹೆಂಡವನ್ನು ಇಳಿಸುತ್ತಾರೆ. ತಾಳೆಯ ಮರದಿಂದ ಬೆಲ್ಲವನ್ನೂ ಮಾಡುವುದುಂಟು.*

**32. ಮೀನುಗಳು.**—ಮೀನುಗಳು ನಮ್ಮ ದೇಶದಲ್ಲಿ ಕೆಲವು ಜಾತಿಯ ಜನರಿಗೆ ಮಾತ್ರವೇ ಆಹಾರವಾಗಿರುವುದು; ಆದರೆ ಇತರ ದೇಶಗಳಲ್ಲಿ ಎಲ್ಲರೂ ಮೀನುಗಳನ್ನು ತಿನ್ನುವರು. ಇವು ನೀರಿನ ವಸತಿಯಿರುವ ಎಲ್ಲಾ ಸ್ಥಳಗಳಲ್ಲಿಯೂ ಸ್ವಲ್ಪಮಟ್ಟಿಗೆ ಸಿಕ್ಕಿದರೂ ನದಿಗಳಲ್ಲಿಯೂ ಸಮುದ್ರಗಳಲ್ಲಿಯೂ ವಿಶೇಷವಾಗಿ ದೊರೆಯುವುವು.

**ಆಹಾರಕ್ಕೆ ಯೋಗ್ಯವಾದ ಮೀನುಗಳು.**—ಮುಖ್ಯವಾಗಿ ನ್ಯೂಫೌಂಡ್ಲೆಂಡ್ ಮತ್ತು ಜಪಾನ್ ದ್ವೀಪಗಳಿಗೆ ಪೂರ್ವದಲ್ಲಿರುವ ಪ್ರದೇಶಗಳಲ್ಲಿಯೂ,

---

* **ಷರಾ.**—(1) (ಹುಡುಗರಿಗೆ) ಸಸ್ಯವಲಯಗಳ ಎಲ್ಲೆಗಳನ್ನು ಮೇಲೆ ಸೂಚಿಸಿರುವಂತೆ ಅಕ್ಷಾಂಶಗಳಿಂದ ಖಂಡಿತವಾಗಿ ಗೊತ್ತುಮಾಡಲು ಸಾಧ್ಯವಿಲ್ಲ. ಇದಲ್ಲದೆ ಒಂದು ವಲಯದ ಅಂಚಿನಲ್ಲಿ ಅದರ ಪಕ್ಕದ ವಲಯದ ಸಸ್ಯಗಳೂ ಪ್ರಾಣಿಗಳೂ ಇರುವುವು. ಮೇಲಿನ ವಿಭಾಗಗಳಲ್ಲಿ ಒಂದು ಬಗೆಯ ಸಸ್ಯಗಳೂ ಪ್ರಾಣಿಗಳೂ ಯಾವ ಪ್ರದೇಶದಲ್ಲಿ ಅತಿ ವಿಶೇಷವಾಗಿರುವುವೋ ಆ ಪ್ರದೇಶವನ್ನು ಒಂದು ವಲಯವನ್ನಾಗಿ ಎಣಿಸಿದೆ. ಪ್ರತಿಯೊಂದು ವಲಯದಲ್ಲಿಯೂ ಪರ್ವತ ಪ್ರಸ್ಥಭೂಮಿಗಳ ಮೇಲೆ ಉತ್ತರಕ್ಕೆ ಹೋದಹಾಗೆಲ್ಲ ಹೆಚ್ಚು ಶೀತವುಳ್ಳ ವಲಯಗಳ ಸಸ್ಯಗಳು ಕಂಡುಬರುವುವು. (ಹಿಂದೆ 25ನೆಯ ಅಧ್ಯಾಯವನ್ನು ನೋಡು.)

(2) (ಉಪಾಧ್ಯಾಯರಿಗೆ) ಮೇಲಿನ ವಿಷಯಗಳನ್ನು ಬೋಧಿಸುವಾಗ ಉಪಾಧ್ಯಾಯರು ಹುಡುಗರ ಅನುಭವವನ್ನೂ ಅವರಿಗೆ ಹಿಂದೆ ಬೋಧಿಸಿರುವ ವಿಷಯಗಳ ಪರಿಚಯವನ್ನೂ ಸಾಧ್ಯವಾದ ಮಟ್ಟಿಗೂ ಉಪಯೋಗಿಸಿಕೊಂಡು, ಸಸ್ಯಗಳ ಬೆಳವಳಿಕೆಗೆ ಬೇಕಾದ ಉಷ್ಣ, ನೀರು, ನೆಲಗಳ ವಿಚಾರವನ್ನು ಸ್ಥೂಲವಾಗಿ ವಿವರಿಸಿ, ಹೇಗೆ ಸಸ್ಯಗಳಲ್ಲಿ ಕೆಲವು ಕೆಲವು ವಲಯಗಳಲ್ಲಿ ವಿಶೇಷವಾಗಿ ಬೆಳೆಯುವುವೆಂಬುದನ್ನು ಹುಡುಗರಿಂದಲೇ ಹೇಳಿಸಬೇಕು. ಹಾಗೆಯೇ ಪ್ರಾಣಿಗಳ ವಿಷಯವನ್ನೂ ತಿಳಿಸಬೇಕು. ಸಸ್ಯಗಳ ಮತ್ತು ಪ್ರಾಣಿಗಳ ಉಪಯೋಗವನ್ನು ತಿಳಿಸುವುದರಿಂದ ಹುಡುಗರಿಗೆ ಪ್ರಕೃತಿ ವಿಷಯದಲ್ಲಿ ಆಸಕ್ತಿ ಹೆಚ್ಚುವುದಲ್ಲದೆ, ಮುಂದೆ ಉದ್ಯೋಗವಿವರಣೆಯ ಬೋಧನೆಗೆ ಅನುಕೂಲವಾಗುವುದು.

ಸ್ಕಾಂಡಿನೇವಿಯ, ಬ್ರಿಟಿಷ್ ಕೊಲಂಬಿಯಗಳಿಗೆ ಪಶ್ಚಿಮದಲ್ಲಿರುವ ಪ್ರದೇಶ ಗಳಲ್ಲಿಯೂ, ಅಂದರೆ ಅಟ್ಲಾಂಟಿಕ್ ಮತ್ತು ಪೆಸಿಫಿಕ್ ಸಾಗರಗಳ ಈಶಾನ್ಯ ಮತ್ತು ವಾಯವ್ಯ ಮೂಲೆಗಳಲ್ಲಿ ಅತ್ಯಂತ ವಿಶೇಷವಾಗಿ ವಾಸಿಸುವುವು. ಯೂರೋಪ್, ಅಮೆರಿಕ, ಜಪಾನ್ ದ್ವೀಪಗಳ ಜನರಲ್ಲಿ ಕೆಲವರು ಈ ಭಾಗಗಳಲ್ಲಿ ಮೀನು ಹಿಡಿದು ಇತರ ದೇಶಗಳಿಗೆ ರಫ್ತುಮಾಡುವ ಉದ್ಯೋಗದಿಂದಲೇ ಜೀವಿಸುತ್ತಿರುವರು.

ಪಾರ್ಸಿ ಕೊಲ್ಲಿಯಲ್ಲಿಯೂ, ಸಿಲೋನ್, ಆಸ್ಟ್ರೇಲಿಯ ದ್ವೀಪಗಳ ಉತ್ತರ ದಲ್ಲಿರುವ ಸಮುದ್ರಗಳಲ್ಲಿಯೂ **ಮುತ್ತಿನ ಹುಳುಗಳು** ವಿಶೇಷವಾಗಿರುವುವು. ಜನಗಳು ದೋಣಿಗಳ ಮೇಲೆ ಅಲ್ಲಿಗೆ ಹೋಗಿ ರಬ್ಬರ್ ಚೀಲಗಳಲ್ಲಿ ಸೇರಿಕೊಂಡು ನೀರಿನೊಳಗೆ ಮುಳುಗಿ ಈ ಹುಳುಗಳನ್ನು ಆರಿಸಿ ಮೇಲಕ್ಕೆ ತರುವರು. ದೋಣಿ ಯಲ್ಲಿರುವವರು ಕೊಳವಿಗಳ ಮೂಲಕ ಹೊಸ ಗಾಳಿಯನ್ನು ಆ ರಬ್ಬರ್ ಚೀಲ ಗಳಿಗೆ ಯಂತ್ರಗಳ ಸಹಾಯದಿಂದ ಒದಗಿಸುವರು. ಇದರಿಂದ ಚೀಲದಲ್ಲಿ ರುವವರು ಕೆಲವು ಗಂಟೆಗಳ ಕಾಲ ಸಮುದ್ರದ ತಳದಲ್ಲಿಯೇ ಕೆಲಸ ಮಾಡು ತ್ತಿರಬಹುದು. ಈ ಹುಳುಗಳು ಸತ್ತಮೇಲೆ ಇವುಗಳ ಚಿಪ್ಪುಗಳನ್ನು, ಅಂದರೆ ಮುತ್ತುಗಳನ್ನು ಕೊರೆದು ರಂಧ್ರಗಳನ್ನು ಮಾಡಿ ಸರಗಳಾಗಿ ಪೋಣಿಸಿ ಮಾರುವರು.

ಸಿಸಿಲೀ ದ್ವೀಪದ ಹತ್ತಿರ ಸಮುದ್ರದ ತಳದಲ್ಲಿರುವ ಬಂಡೆಗಳಮೇಲೆ **ಸ್ಪಂಜು ಹುಳುಗಳು** ಗೂಡುಗಳನ್ನು ಕಟ್ಟುವುವು. ಈ ಗೂಡುಗಳೇ ನೀವು ನೋಡಿರುವ ನೀರನ್ನು ಹೀರಿಕೊಳ್ಳುವ ಸ್ಪಂಜೆಂಬ ಪದಾರ್ಥ. ಅಲ್ಲಿಯ ಜನರು ಈ ಗೂಡುಗಳನ್ನು ತೆಗೆದು ನಾನಾದೇಶಗಳಿಗೆ ಕಳುಹಿಸುವರು.

ಉಷ್ಣ ವಲಯದ ಸಮುದ್ರಗಳಲ್ಲಿರುವ ಹವಳದ ಅಥವಾ **ಕಾರಲ್ ಹುಳದ** ವಿಷಯವು 20ನೇ ಅಧ್ಯಾಯದ ಭಾಗದಲ್ಲಿ ಸೂಚಿಸಲ್ಪಟ್ಟಿದೆ.

ಸಮುದ್ರದಲ್ಲಿ ಕೆಲವು ದುಷ್ಟ ಜಂತುಗಳು ವಾಸಮಾಡುವುವು. ಇವು ಗಳಲ್ಲಿ ಷಾರ್ಕ್ ಎಂಬುದೇ ಮುಖ್ಯವಾದುದು. ಇದು ಇತರ ಜಲಚರಗಳನ್ನೂ ಮನುಷ್ಯರನ್ನೂ ತಿನ್ನುವುದು.

## VII. ಖನಿಜಗಳು

**33. ಖನಿಜಗಳು.**—ಸಸ್ಯಗಳು ಭೂಮಿಯ ಮೇಲ್ಭಾಗದಲ್ಲಿ ಬೆಳೆಯು ವುವು. ಆದರೆ ಭೂಮಿಯ ಒಳಭಾಗದಲ್ಲಿಯೂ ಮನುಷ್ಯನಿಗೆ ಉಪಯೋಗಕರ ವಾದ ಚಿನ್ನ, ಕಬ್ಬಿಣ ಮೊದಲಾದ ಅನೇಕ ಪದಾರ್ಥಗಳಿರುವುವು. ಭೂಮಿಯಲ್ಲಿ ಹಳ್ಳಗಳನ್ನು ತೋಡಿ ಈ ಪದಾರ್ಥಗಳನ್ನು ಹೊರಕ್ಕೆ ತೆಗೆಯುವುದರಿಂದ ಇವು ಗಳನ್ನು ಖನಿಜಗಳೆಂದು ಕರೆಯುವರು. ಒಂದು ಪ್ರದೇಶದ ವಾಯುಗುಣ, ಮಳೆ

ಗಳನ್ನು ತಿಳಿದರೆ ಅಲ್ಲಿ ಯಾವ ಸಸ್ಯಗಳು ಬೆಳೆಯುವುವೆಂಬುದನ್ನು ತಿಳಿದುಕೊಳ್ಳಬಹುದು. ಆದರೆ ಅಲ್ಲಿ ಯಾವ ಖನಿಜಗಳು ಸಿಕ್ಕುವುವೆಂಬುದನ್ನು ಹೇಳುವುದಕ್ಕಾಗುವುದಿಲ್ಲ. ಮನುಷ್ಯನು ನೆಲವನ್ನು ಹಸನುಮಾಡಿ ಬೀಜ ಗೊಬ್ಬರಗಳನ್ನು ಒದಗಿಸಿ ಸಸ್ಯಗಳು ಬೆಳೆಯುವಂತೆ ಮಾಡುವನು; ಪ್ರಾಣಿಗಳನ್ನು ಪೋಷಿಸಿ ವೃದ್ಧಿಪಡಿಸುವನು; ಆದರೆ ಭೂಮಿಯಲ್ಲಿರುವ ಖನಿಜಗಳನ್ನು ಅಗೆದುಕೊಳ್ಳಬಲ್ಲನೇ ಹೊರತು ಭೂಮಿಯಲ್ಲಿ ಅವುಗಳನ್ನು ಹೆಚ್ಚಿಸುವುದಕ್ಕೆ ಮನುಷ್ಯನಿಗೆ ಸಾಧ್ಯವಿಲ್ಲ. ಒಂದು ಪ್ರದೇಶದಲ್ಲಿ ಯಾವುದಾದರೂ ಒಂದು ಖನಿಜವನ್ನು ಭೂಮಿಯಿಂದ ಹೆಚ್ಚಾಗಿ ತೆಗೆಯುತ್ತಾಬಂದರೆ, ಆ ಖನಿಜವು ಅಲ್ಲಿ ಕಡಿಮೆಯಾಗುತ್ತಾ ಹೋಗುವುದೇ ವಿನಾ ಸಸ್ಯಗಳಂತೆ ಹೊಸದಾಗಿ ಬೆಳೆದು ಹೆಚ್ಚಾಗುವುದಿಲ್ಲ.

ಖನಿಜಗಳಲ್ಲಿ ಲೋಹಗಳು, ಲೋಹಗಳಲ್ಲದ ಇತರ ಖನಿಜಗಳು ಎಂದು ಮುಖ್ಯವಾಗಿ ಎರಡು ವಿಧವುಂಟು. ಇವುಗಳು ಎಲ್ಲಿ? ಹೇಗೆ ಸಿಕ್ಕುವುವು? ಇವುಗಳ ಉಪಯೋಗವೇನು? ಎಂಬುದನ್ನು ಕೆಳಗೆ ವಿವರಿಸುತ್ತೇನೆ:—

**ಕಬ್ಬಿಣ.**—ಇದು ಲೋಹಗಳಲ್ಲೆಲ್ಲಾ ಮನುಷ್ಯನಿಗೆ ಅತ್ಯಂತ ಉಪಯುಕ್ತವಾದುದು. ಇದು ಸಾಮಾನ್ಯವಾಗಿ ಎಲ್ಲಾ ಪ್ರದೇಶಗಳಲ್ಲಿಯೂ ಸಿಕ್ಕುವುದು. ಮನುಷ್ಯರಿಗೆ ಬಹು ದೊಡ್ಡ ಪ್ರಯೋಜನವಾಗಿದೆ. ಕಬ್ಬಿಣವು ಸಾಮಾನ್ಯವಾಗಿ ಆಮ್ಲಜನಕದೊಡನೆ ಮಿಶ್ರವಾಗಿ ಸಿಕ್ಕುವುದು. ಈ ಅದುರನ್ನು ಭೂಮಿಯಿಂದ ತೆಗೆದು ದೊಡ್ಡ ಕುಲುಮೆಗಳಲ್ಲಿ ಇದ್ದಲೊಂದಿಗೆ ಹಾಕಿ ಕಾಯಿಸುವರು. ಇದರಿಂದ ಅದಲ್ಲಿರುವ ಆಮ್ಲಜನಕವು ಹೋಗಿ ಕಬ್ಬಿಣವು ಕರಗಿ ದ್ರವರೂಪವಾಗಿ ಹರಿಯುವುದು. ಇದೇ ಎರಕದ ಕಬ್ಬಿಣ. ಇದರಿಂದ ಹಾರೆ, ಕೊಳವೆ ಮೊದಲಾದುವನ್ನು ಮಾಡುತ್ತಾರೆ; ಆದರೆ ಇದು ಅಷ್ಟು ಗಟ್ಟಿಯಲ್ಲ, ಸುಲಭವಾಗಿ ಒಡೆದುಹೋಗುವುದು. ಇದಕ್ಕೆ ಇನ್ನೂ ಇದ್ದಲನ್ನು ಸೇರಿಸಿ ಪುನಃ ಕಾಸಿ ಉಕ್ಕನ್ನೂ ತಗಡು ಕಬ್ಬಿಣವನ್ನೂ ಮಾಡುತ್ತಾರೆ. ಉಕ್ಕಿನಿಂದ ಹರಿತವಾದ ಚಾಕು, ಚೂರಿ ಮೊದಲಾದ ಆಯುಧಗಳನ್ನೂ ತಗಡಿನ ಕಬ್ಬಿಣದಿಂದ ಪಾತ್ರೆಗಳನ್ನೂ ತಯಾರು ಮಾಡುವರು.

ಕಬ್ಬಿಣವು ಎಲ್ಲಾ ಪ್ರದೇಶಗಳಲ್ಲಿಯೂ ದೊರೆಯುವುದು. ಆದರೆ ಸಂಯುಕ್ತ ಸಂಸ್ಥಾನಗಳು, ಜರ್ಮನಿ, ಗ್ರೇಟ್ ಬ್ರಿಟನ್, ಫ್ರಾನ್ಸ್ ದೇಶಗಳಲ್ಲಿ ಬಹು ವಿಶೇಷವಾಗಿ ದೊರೆಯುವುದು. ಈ ದೇಶಗಳಲ್ಲಿ ಕಲ್ಲಿದ್ದಲೂ *ಸುಣ್ಣಕಲ್ಲೂ ಹೇರಳವಾಗಿ ಕಬ್ಬಿಣದ ಅದುರಿನ ಸಮೀಪದಲ್ಲಿಯೇ ಸಿಕ್ಕುವುದರಿಂದ, ಆ ಅದುರಿನಿಂದ ಕಬ್ಬಿಣವನ್ನು ತೆಗೆದು ಯಂತ್ರ ಮೊದಲಾದ ಸಾಮಾನುಗಳನ್ನು ತಯಾರುಮಾಡಲು ಬಹು ಅನುಕೂಲವಾಗಿದೆ.

---

* ಸುಣ್ಣಕಲ್ಲನ್ನು ಕಲ್ಲಿದ್ದಲಿನ ಜೊತೆಯಲ್ಲಿ ಸೇರಿಸುವುದರಿಂದ ಕಬ್ಬಿಣವು ಬೇಗ ಕರಗುವುದು.

ಇಂಡಿಯಾ ದೇಶದಲ್ಲಿ ಅಲ್ಲಲ್ಲಿ ಕಬ್ಬಿಣದ ಅದುರು ವಿಶೇಷವಾಗಿ ಸಿಕ್ಕಿದರೂ ಅವರ ಸಮೀಪದಲ್ಲಿಯೇ ಕಲ್ಲಿದ್ದಲು ಸಿಕ್ಕದೇ ಇರುವುದರಿಂದ ಕಬ್ಬಿಣವನ್ನೂ ಉಕ್ಕನ್ನೂ ಮಾಡುವುದು ಕಡಮೆ; ಮಾಡಿದರೂ ಸಾಮಾನ್ಯವಾಗಿ ಎರಕದ ಕಬ್ಬಿಣ ಒಂದೇ ತಯಾರಾಗುವುದು. ಈಚೆಗೆ ಸಾಕ್ಚಿ ಎಂಬ ಊರಿನಲ್ಲಿ ತಾತಾ ಕಂಪೆನಿಯುವರು ಉತ್ತಮವಾದ ಉಕ್ಕನ್ನು ತಯಾರುಮಾಡುತ್ತಿರುವರು. ನಮ್ಮ ಸೀಮೆಯ ಶಿವಮೊಗ್ಗಾ ಡಿಸ್ಟ್ರಿಕ್ಟಿನಲ್ಲಿರುವ ಬೆಂಕಿಪುರದಲ್ಲಿ (ಭದ್ರಾವತಿ) ಈ ಬಗೆಯ ಕಬ್ಬಿಣದ ಕಾರ್ಖಾನೆಯೊಂದು ಸ್ಥಾಪಿಸಲ್ಪಟ್ಟಿರುವುದು.

**ಚಿನ್ನ.**—ನಮ್ಮ ದೇಶದಲ್ಲಿ ಪೂರ್ವಕಾಲದಲ್ಲಿ ನದಿಗಳ ಮರಳಿನಲ್ಲಿಯೂ, ಒಂಡುಮಣ್ಣಿನಲ್ಲಿಯೂ ಚಿನ್ನವು ಸ್ವಲ್ಪ ಸ್ವಲ್ಪವಾಗಿ ಸಿಕ್ಕುತ್ತಿತ್ತು. ಈ ಮರಳನ್ನು ಅಥವಾ ಮಣ್ಣನ್ನು ಪುಡಿಮಾಡಿ ನೀರಿನಲ್ಲಿ ಜಾಲಿಸಿ ಚಿನ್ನವನ್ನು ತೆಗೆಯುತ್ತಿದ್ದರು. ಈಗ ಉರಿಗ ಮೊದಲಾದ ಸ್ಥಳಗಳಲ್ಲಿ ಸಾವಿರಾರು ಅಡಿ ಆಳವಾದ ಗಣಿಗಳನ್ನು ತೋಡಿ ಬಂಗಾರದ ಅದುರು ಅಡಕವಾಗಿರುವ ಬಂಡೆಗಳನ್ನು ಒಡೆದು ಮೇಲಕ್ಕೆ ಸಾಗಿಸಿ ಪುಡಿಮಾಡಿ ನೀರಿನಲ್ಲಿ ಜಾಲಿಸಿ ಚಿನ್ನವನ್ನು ಪ್ರತ್ಯೇಕಿಸುವರು. ಈ ಕೆಲಸಗಳಿಗೆಲ್ಲಾ ಭಾರಿ ಯಂತ್ರಗಳನ್ನು ಉಪಯೋಗಿಸುವರು. ಈ ಚಿನ್ನವನ್ನು ಶುದ್ಧಿ ಮಾಡಿ ಗಟ್ಟಿಗಳಾಗಿ ಮಾಡಿ ಮಾರಾಟಕ್ಕೆ ಕಳುಹಿಸುವರು.

ಚಿನ್ನದಿಂದ ಒಡವೆಗಳನ್ನೂ ನಾಣ್ಯಗಳನ್ನೂ ಮಾಡುವರು. ಚಿನ್ನವು ಬಹು ಮೃದುವಾಗಿರುವುದರಿಂದ ನಾಣ್ಯಗಳನ್ನು ಮಾಡಲು ಇದರೊಡನೆ ತಾಮ್ರವನ್ನು ಬೆರೆಸುವರು. ಸವರನ್ನಾಣ್ಯದಲ್ಲಿ 11 ಭಾಗ ಚಿನ್ನಕ್ಕೆ 1 ಭಾಗ ತಾಮ್ರವು ಬೆರೆತಿರುವುದು.

ಚಿನ್ನವು ಮುಖ್ಯವಾಗಿ ಸಂಯುಕ್ತ ಸಂಸ್ಥಾನಗಳು, ಕೆನಡ, ದಕ್ಷಿಣ ಆಫ್ರಿಕ, ಆಸ್ಟ್ರೇಲಿಯ, ಇಂಡಿಯಗಳಲ್ಲಿ ದೊರೆಯುವುದು.

**ಬೆಳ್ಳಿ.**—ಇದು ಸಾಮಾನ್ಯವಾಗಿ ಚಿನ್ನ, ಗಂಧಕ ಅಥವಾ ಸೀಸದೊಂದಿಗೆ ಬೆರಕೆಯಾಗಿ ಭೂಮಿಯಲ್ಲಿ ಸಿಕ್ಕುವುದು. ಇದನ್ನೂ ಯಂತ್ರಗಳ ಸಹಾಯದಿಂದಲೇ ಪ್ರತ್ಯೇಕಿಸುವರು. ಇದು ನಾಣ್ಯ, ಪಾತ್ರೆ, ಒಡವೆಗಳನ್ನು ಮಾಡುವುದಕ್ಕೂ ಉತ್ತಮವಾದ ಕಲಾಬತ್ತಿನ ದಾರವನ್ನು ಮಾಡುವುದಕ್ಕೂ ಉಪಯೋಗವಾಗುವುದು. ಉತ್ತರ ದಕ್ಷಿಣ ಅಮೆರಿಕಗಳಲ್ಲಿಯೂ, ಜರ್ಮನಿ, ಆಸ್ಟ್ರೇಲಿಯುಗಳಲ್ಲಿಯೂ ಇದು ವಿಶೇಷವಾಗಿ ಸಿಕ್ಕುವುದು.

**ಸೀಸ.**—ಇದರಿಂದ ಪಾತ್ರೆಗಳನ್ನೂ ಬಂದೂಕಕ್ಕೆ ಹಾಕುವ ಗುಂಡುಗಳನ್ನೂ ಮಾಡುತ್ತಾರೆ. ಇದನ್ನು ತವರದೊಂದಿಗೆ ಬೆರಸಿ ಟಂಕವನ್ನು ಮಾಡುವರು. ಸುರ್ಮದೊಡನೆ ಸೇರಿಸಿ ಅಚ್ಚು ಹಾಕುವ ಮೊಳೆಗಳನ್ನೂ ಮಾಡುತ್ತಾರೆ. ಇದು ಮುಖ್ಯವಾಗಿ ಸಂಯುಕ್ತ ಸಂಸ್ಥಾನ, ಸ್ಪೇನ್, ಜರ್ಮನಿ ಇವುಗಳಲ್ಲಿ ಸಿಕ್ಕುತ್ತದೆ.

**ತವರ.**—ಕಬ್ಬಿಣದ ತಗಡಿಗೆ ಮುಲಾಮು ಮಾಡಿದ ಟಿನ್ ಎಂದು ಕರೆಯಲ್ಪಡುವ ತಗಡುಗಳನ್ನು ಮಾಡುವುದಕ್ಕೂ ತಾಮ್ರದೊಂದಿಗೆ ಬೆರಸಿ ಕಂಚನ್ನು ಮಾಡುವುದಕ್ಕೂ ಹಿತ್ತಾಳೆ ತಾಮ್ರದ ಪಾತ್ರೆಗಳಿಗೆ ಕಲಾಯಿ ಮಾಡುವುದಕ್ಕೂ ತವರವು ಉಪಯೋಗವಾಗುತ್ತದೆ. ಇದು ಮಲಯಪರ್ಯಾಯದ್ವೀಪದಲ್ಲಿಯೂ ಅದರ ಸಮೀಪದ ದ್ವೀಪಗಳಲ್ಲಿಯೂ ಬೊಲೀವಿಯ, ಆಸ್ಟ್ರೇಲಿಯ ಇಂಗ್ಲೆಂಡು ಗಳಲ್ಲಿಯೂ ವಿಶೇಷವಾಗಿ ದೊರೆಯುವುದು.

**ಸತುವು.**—ಇದನ್ನು ತಾಮ್ರದೊಡನೆ ಸೇರಿಸಿ ಹಿತ್ತಾಳೆಯನ್ನು ಮಾಡುವರು. ಇದರ ತಗಡು (ಅಥವಾ ಜಿಂಕ್‌ಷೀಟ್)ಮನೆಗಳಿಗೆ ಹೊದಿಸುವುದಕ್ಕೂ ನೀರನ್ನು ತರುವ ಬಕೆಟ್ ಮೊದಲಾದ ಸಾಮಾನುಗಳನ್ನು ಮಾಡುವುದಕ್ಕೂ ಉಪಯೋಗವಾಗುವುದು. ಇದು ಮುಖ್ಯವಾಗಿ ಸಂಯುಕ್ತಸಂಸ್ಥಾನ, ಜರ್ಮನಿ, ಗ್ರೇಟ್ ಬ್ರಿಟನ್‌ಗಳಲ್ಲಿ ದೊರೆಯುವುದು.

**ತಾಮ್ರ.**—ಇದನ್ನು ಪಾತ್ರೆಗಳನ್ನು ಮಾಡುವುದಕ್ಕೂ ವಿದ್ಯುಚ್ಛಕ್ತಿಯನ್ನು ಸಾಗಿಸಿಕೊಂಡು ಹೋಗುವ ತಂತಿಗಳನ್ನು ಮಾಡುವುದಕ್ಕೂ ಉಪಯೋಗಿಸುವರು. ಸತುವಿನೊಂದಿಗೆ ಇದನ್ನು ಸೇರಿಸಿದರೆ ಹಿತ್ತಾಳೆಯೂ, ತವರದೊಂದಿಗೆ ಸೇರಿಸಿದರೆ ಕಂಚೂ ಆಗುವುದು. ಇದು ಸಂಯುಕ್ತಸಂಸ್ಥಾನ, ಮೆಕ್ಸಿಕೊ, ಸ್ಪೇನ್, ಜಪಾನ್ ಮೊದಲಾದ ಅನೇಕ ದೇಶಗಳಲ್ಲಿ ಸಿಕ್ಕುವುದು.

**ಅಲೂಮಿನಿಯಂ.**—ಈ ಲೋಹದಿಂದ ಮಾಡಿದ ಪಾತ್ರೆಗಳು ಬಹು ಹಗುರವಾಗಿರುವುವು. ಇವು ನಮ್ಮ ದೇಶದಲ್ಲಿ ಈಚೆಗೆ ಬಳಕೆಗೆ ಬಂದಿವೆ. ಇದು ಮುಖ್ಯವಾಗಿ ಸಂಯುಕ್ತ ಸಂಸ್ಥಾನಗಳಿಂದ ಇತರ ದೇಶಗಳಿಗೆ ರಫ್ತಾಗುವುದು.

**ನಿಕ್ಕಲ್.**—ಇದನ್ನು ತಾಮ್ರ ಮತ್ತು ಸತುವಿನೊಂದಿಗೆ ಬೆರಸಿ 'ಜರ್ಮನ್ ಸಿಲ್ವರ್' ಎಂಬ ಮಿಶ್ರಲೋಹವನ್ನು ಮಾಡಿ ಅದರಿಂದ ಪಾತ್ರೆಗಳನ್ನೂ ನಾಣ್ಯಗಳನ್ನೂ ಮಾಡುತ್ತಾರೆ. ಈ ಲೋಹವು ಜರ್ಮನಿ, ಕೆನಡ ದೇಶಗಳಲ್ಲಿ ವಿಶೇಷವಾಗಿ ದೊರೆಯುವುದು.

**ಪಾದರಸ.**—ಇದು ದ್ರವರೂಪವಾಗಿರುವ ಲೋಹ. ಇದನ್ನು ಔಷಧಗಳಿಗೂ, ತವರದೊಂದಿಗೆ ಬೆರಸಿ ಕನ್ನಡಿಯ ಗಾಜಿನ ಹಿಂಭಾಗದಲ್ಲಿ ಹಚ್ಚುವುದಕ್ಕೂ, ಗಾಜಿನ ಕೊಳವಿಗಳಲ್ಲಿ ಹಾಕಿ ಉಷ್ಣಮಾಪಕಯಂತ್ರ, ವಾಯುಮಾಪಕ ಯಂತ್ರ ಮೊದಲಾದ ಯಂತ್ರಗಳನ್ನು ಮಾಡುವುದಕ್ಕೂ ಉಪಯೋಗಿಸುತ್ತಾರೆ. ಇದು ಸಾಮಾನ್ಯವಾಗಿ ಗಂಧಕದೊಡನೆ ಬೆರಕೆಯಾಗಿ ದೊರೆಯುವುದು. ಸ್ಪೇನ್, ಆಸ್ಟ್ರಿಯ ದೇಶಗಳಲ್ಲಿ ವಿಶೇಷವಾಗಿ ಸಿಕ್ಕುವುದು.

## 34. ಲೋಹಗಳಲ್ಲದ ಇತರ ಖನಿಜಗಳು.—

**ಉಪ್ಪು.**—ಇದು ಮನೆಯ ಬಳಕೆಗೆ ಅತ್ಯಂತ ಉಪಯುಕ್ತವಾದ ಪದಾರ್ಥ. ಇದು ನೆಲದಲ್ಲಿ ಎಲ್ಲೆಲ್ಲಿಯೂ ಸೇರಿರುವುದು ; ನೀರಿನಲ್ಲಿ ಇದು ಸುಲಭವಾಗಿ ಕರಗುವುದರಿಂದ ಬಾವಿ, ಚಿಲುಮೆ, ಸರೋವರಗಳ ನೀರಿನಲ್ಲಿಯೂ ಸ್ವಲ್ಪಮಟ್ಟಿಗೆ ಇದ್ದೇ ಇರುವುದು. ಆದರೆ ಸಮುದ್ರದ ನೀರಿನಲ್ಲಿ ಉಪ್ಪು ಬಹಳ ಹೆಚ್ಚಾಗಿರುವುದು. ಸಮುದ್ರದ ನೀರಿನಲ್ಲಿ ಸಾಮಾನ್ಯವಾಗಿ ಶೇಕಡಾ $3\frac{1}{2}$ ಭಾಗವು ಉಪ್ಪೇ ಇರುವುದು.

ಉಷ್ಣವಲಯದಲ್ಲಿ ಅನೇಕಕಡೆ ಸಮುದ್ರತೀರದಲ್ಲಿ ಸಮುದ್ರದ ನೀರನ್ನು ಪಾತಿಗಳಿಗೆ ಹಾಯಿಸಿ ಒಣಗಿಸಿ ಉಪ್ಪನ್ನು ತೆಗೆಯುವರು. ಪಂಜಾಬು, ಆಸ್ಟ್ರಿಯ, ಇಂಗ್ಲೆಂಡುಗಳಲ್ಲಿ ಗಣಿಗಳಿಂದ ಉಪ್ಪನ್ನು ತೆಗೆಯುತ್ತಾರೆ.

**ಪೆಟ್ಲುಪ್ಪು.**—ಬಂಗಾಳದಲ್ಲಿಯೂ ದಕ್ಷಿಣ ಅಮೆರಿಕದಲ್ಲಿರುವ ಪೆರುದೇಶದಲ್ಲಿಯೂ ಇದು ವಿಶೇಷವಾಗಿ ಸಿಕ್ಕುವುದು. ಇದು ಗೊಬ್ಬರಕ್ಕೂ ಮದ್ದು ಮಾಡುವುದಕ್ಕೂ ಉಪಯೋಗಕರವಾದುದು.

**ಕಟ್ಟಡಗಳಿಗೆ ಉಪಯೋಗವಾಗುವ ಕಲ್ಲುಗಳು.**—ಇವು ಅನೇಕ ದೇಶಗಳಲ್ಲಿ ಸಿಕ್ಕುವುವು. ಇವುಗಳಲ್ಲೆಲ್ಲ ಅತ್ಯುತ್ತಮವಾದುದು ಬಹು ಬೆಳ್ಳಗಿರುವ ಅಮೃತಶಿಲೆ. ಇದು ರಾಜಪುತ್ರಸ್ಥಾನದಲ್ಲಿಯೂ, ಇಟಲಿ ದೇಶದಲ್ಲಿಯೂ ವಿಶೇಷವಾಗಿ ಸಿಕ್ಕುವುದು. ಆದುದರಿಂದ ಉತ್ತರ ಇಂಡಿಯ, ಇಟಲಿ ದೇಶಗಳಲ್ಲಿ ಬಹು ಸುಂದರವಾದ ಪುರಾತನಕಾಲದ ಅಮೃತಶಿಲೆಯ ಕಟ್ಟಡಗಳು ಅನೇಕವಾಗಿವೆ. ನಮ್ಮ ದೇಶದಲ್ಲಿ ಸಿಕ್ಕುವ ಕರಿಯಕಲ್ಲು, ಕೆಂಗಲ್ಲುಗಳೂ ಕಟ್ಟಡಗಳಿಗೆ ಉಪಯೋಗವಾಗಿವೆ. ಬಳಪದ ಕಲ್ಲು ಅಷ್ಟು ಗಟ್ಟಿಯಾಗಿರುವುದಿಲ್ಲ; ಈ ಕಲ್ಲಿನಿಂದ ನಮ್ಮ ದೇಶದಲ್ಲಿ ಪಾತ್ರೆಗಳನ್ನು ಮಾಡುವರು. ಗ್ರೇಟ್ ಬ್ರಿಟನ್ನಿನಲ್ಲಿ ಬರೆಯುವ ಕಲ್ಲುಹಲಗೆಗಳನ್ನೂ ಹೆಂಚುಗಳನ್ನೂ ಮಾಡುವರು. ಇದೂ ಗಟ್ಟಿಯಾದ ಸುಣ್ಣಕಲ್ಲೂ ಚಿತ್ರಕೆಲಸಗಳಿಗೆ ಉಪಯೋಗವಾಗುವುವು.

**ಜೇಡಿಮಣ್ಣು.**—ಇದರಲ್ಲಿ ಹಲವು ವಿಧಗಳಿರುವುವು. ಅನೇಕ ಕಡೆ ಸಿಕ್ಕುವ ಜೇಡಿಮಣ್ಣಿನಿಂದ ಮಡಕೆಗಳನ್ನೂ ಹೆಂಚುಗಳನ್ನೂ ಮಾಡುವರು. ಚೀನಾದೇಶದಲ್ಲಿ ವಿಶೇಷವಾಗಿಯೂ ಹಾಲೆಂಡ್ ಆಸ್ಟ್ರಿಯಗಳಲ್ಲಿ ಅಲ್ಲಲ್ಲಿಯೂ ಸಿಕ್ಕುವ ಬಿಳಿಯ ಜೇಡಿಮಣ್ಣಿನಿಂದ ಪಿಂಗಾಣಿ ಪಾತ್ರೆಗಳನ್ನು ಮಾಡುವರು. ದೇಶದ ಎತ್ತರ ತಗ್ಗುಗಳನ್ನು ತೋರಿಸುವ ಮಾದರಿಗಳನ್ನು ಮಾಡುವುದಕ್ಕೆ ಉಪಯೋಗಿಸುವ "ಪ್ಲಾಸ್ಟರ್ ಆಫ್ ಪ್ಯಾರಿಸ್" ಎಂಬ ಜೇಡಿಮಣ್ಣು ಇಂಗ್ಲೆಂಡ್, ಫ್ರಾನ್ಸ್‌ಗಳಲ್ಲಿ ವಿಶೇಷವಾಗಿ ದೊರೆಯುವುದು.

**ಗಂಧಕ.**—ಇದು ದೀಪದ ಕಡ್ಡಿಗಳನ್ನೂ ಸಿಡಿಮದ್ದನ್ನೂ ಮಾಡುವುದಕ್ಕೆ ಅತ್ಯಾವಶ್ಯಕ. ಗಂಧಕ ಸಾಮಾನ್ಯವಾಗಿ ಇಟಲಿ, ಸಿಸಿಲಿ, ಮೆಕ್ಸಿಕೋ ದೇಶಗಳ ಅಗ್ನಿಪರ್ವತಗಳ ಬಳಿ ಸಿಕ್ಕುವುದು.

**ಸೀಮೆಯೆಣ್ಣೆ ಅಥವಾ ಕೆರೋಸಿನ್ ಆಯಿಲ್.**—ಸೀಮೆಯೆಣ್ಣೆಯ ಬಾವಿಗಳು ಸಂಯುಕ್ತಸಂಸ್ಥಾನಗಳಲ್ಲಿಯೂ, ರಷ್ಯ, ಬರ್ಮ ದೇಶಗಳಲ್ಲಿಯೂ ಇರುವುವು. ಎಣ್ಣೆ ಇರುವ ಪ್ರದೇಶದಲ್ಲಿ ಯಂತ್ರಗಳ ಸಹಾಯದಿಂದ ಬಂಡೆಗಳಲ್ಲಿ ರಂಧ್ರಗಳನ್ನು ಕೊರೆದರೆ, ಒಳಗಿನಿಂದ ಹಬೆಯೂ ಎಣ್ಣೆಯೂ ಮೇಲಕ್ಕೆ ಉಕ್ಕಿ ಬರುವುವು. ಕೆಲವು ಕಡೆ ಎಣ್ಣೆಯು ರಭಸದಿಂದ ಮೇಲಕ್ಕೆ ನುಗ್ಗಿ ನೆಲದಮೇಲೆ ಸ್ವಲ್ಪ ದೂರ ಹರಿಯುವುದೂ ಉಂಟು. ಅನೇಕ ಬಾವಿಗಳಲ್ಲಿ ಇದನ್ನು ಪಂಪುಗಳ ಸಹಾಯದಿಂದ ಮೇಲಕ್ಕೆ ಎತ್ತುವರು. ಬಾವಿಗಳಿಂದ ತೆಗೆದ ಎಣ್ಣೆಯನ್ನು ಕೊಳಗಳಲ್ಲಿ ತುಂಬಿಕೊಂಡು ಅಲ್ಲಿಂದ ರಫ್ತು ಮಾಡುವ ಸ್ಥಳಗಳಿಗೆ ಟಿನ್ನುಗಳಲ್ಲಿ ತುಂಬಿ ಸಾಗಿಸುವರು.

ಭೂಮಿಯಲ್ಲಿ ಸಿಕ್ಕುವ ಎಣ್ಣೆಯನ್ನು ಶುದ್ಧಿಮಾಡಿ ಅದರಲ್ಲಿರುವ ಬಹು ಬೇಗ ಉರಿದು ಹೋಗುವ ಪದಾರ್ಥಗಳನ್ನು ಪ್ರತ್ಯೇಕಿಸುವರು. ಹೀಗೆ ಶುದ್ಧ ಮಾಡಿದ ಎಣ್ಣೆಯೇ ನಾವು ದೀಪಕ್ಕೆ ಉಪಯೋಗಿಸುವ ಸೀಮೆಯೆಣ್ಣೆ. ಮೋಟಾರ್‌ಗಾಡಿಗಳಿಗೆ ಉಪಯೋಗಿಸುವ ಪೆಟ್ರೋಲ್ ಎಂಬ ಎಣ್ಣೆಯೂ, ನಾವು ಗಾಯಗಳಿಗೆ ಹಚ್ಚುವ ವ್ಯಾಸಿಲೈನ್ ಎಂಬ ಎಣ್ಣೆಯೂ ಈ ಎಣ್ಣೆಯ ಬಾವಿಗಳಲ್ಲಿ ಸಿಕ್ಕುವ ಪದಾರ್ಥಗಳಿಂದ ತಯಾರಾದುವು.

**ಕಲ್ಲಿದ್ದಲು.**—ಇದು ಇದ್ದಲಿಗಿಂತ ಗಟ್ಟಿಯಾಗಿರುವುದು. ಕಬ್ಬಿಣದಂತೆಯೇ ಇದು ಅನೇಕ ಪ್ರದೇಶಗಳಲ್ಲಿ ಸಿಕ್ಕುವುದು. ಆದರೆ ಕೆಲವು ದೇಶಗಳಲ್ಲಿ ಮಾತ್ರ ಇದನ್ನು ನೆಲದಿಂದ ಅಗೆದು ತೆಗೆಯುತ್ತಿರುವರು. ಅದುರುಗಳಿಂದ ಲೋಹ ಗಳನ್ನು ಪ್ರತ್ಯೇಕಿಸುವುದಕ್ಕೂ ನೀರಿನ ಹಬೆಯಿಂದ ಯಂತ್ರಗಳನ್ನು ನಡೆಯಿಸು ವುದಕ್ಕೂ ಇದು ಅತ್ಯಾವಶ್ಯಕ. ಸಾಮಾನ್ಯವಾಗಿ ಒಂದು ಪ್ರದೇಶದಲ್ಲಿ ಕಲ್ಲಿದ್ದಲು ಹೆಚ್ಚಾಗಿ ಸಿಕ್ಕಿದಷ್ಟೂ ಅಲ್ಲಿನ ಕೈಗಾರಿಕೆಗಳು ವೃದ್ಧಿಯಾಗಲು ಅವಕಾಶವುಂಟಾಗುವುದು.

ಗ್ರೇಟ್ ಬ್ರಿಟನ್, ಸಂಯುಕ್ತ ಸಂಸ್ಥಾನ, ಜರ್ಮನಿ ಈ ದೇಶಗಳಲ್ಲಿ ಸಿಕ್ಕು ವಷ್ಟು ಕಲ್ಲಿದ್ದಲು ಇನ್ನಾವ ಪ್ರದೇಶದಲ್ಲಿಯೂ ಸಿಕ್ಕುವುದಿಲ್ಲ. ಆ ದ್ವೀಪ ಗಳಲ್ಲಿ ಕಬ್ಬಿಣ, ಕಲ್ಲಿದ್ದಲುಗಳು ಒಂದಕ್ಕೊಂದು ಸಮೀಪದಲ್ಲಿ ಯಥೇಚ್ಛವಾಗಿ ಸಿಕ್ಕುವುವು. ಬ್ರಿಟಿಷ್ ಜನರು ಕೈಗಾರಿಕೆ ವ್ಯಾಪಾರಗಳಲ್ಲಿ ಅದ್ವಿತೀಯ ರಾಗಿರುವುದಕ್ಕೆ ಬಹು ಮುಖ್ಯ ಕಾರಣಗಳಲ್ಲಿ ಇದು ಒಂದಾಗಿದೆ.

ಚೀನಾದೇಶದ ಭೂಮಿಯಲ್ಲಿ ಕಲ್ಲಿದ್ದಲು ಯಥೇಚ್ಛವಾಗಿದ್ದರೂ ಅದರ ಅತ್ಯಲ್ಪ ಭಾಗವನ್ನು ಮಾತ್ರವೇ ಅಲ್ಲಿಯ ಜನರು ತೆಗೆಯುತ್ತಿರುವರು; ಇದಕ್ಕೆ ಅವರ ಸಾಮಾನ್ಯ ನಾಗರಿಕತೆಯೇ ಮುಖ್ಯ ಕಾರಣ.

ವಜ್ರ, ಕೆಂಪು ಮೊದಲಾದ ಬೆಲೆಯಾಗುವ ಕಲ್ಲುಗಳು ದಕ್ಷಿಣ ಆಫ್ರಿಕ ಮೊದಲಾದ ಪ್ರದೇಶಗಳಲ್ಲಿ ಸಿಕ್ಕುವುವು.

## VIII. ಕೈಗಾರಿಕೆಗಳು

**35. ಜನರ ಉದ್ಯೋಗ.**—ಪ್ರಪಂಚದಲ್ಲಿರುವ ಎಲ್ಲಾ ಬಗೆಯ ಜನರಿಗೂ ಆಹಾರ, ಉಡುಪು, ಮನೆ ಇವು ಅತ್ಯಾವಶ್ಯಕವಾಗಿ ಇದ್ದೇ ಇರಬೇಕು. ಜನರ ನಾಗರಿಕತೆಯೂ ಐಶ್ವರ್ಯವೂ ಹೆಚ್ಚಿದಹಾಗೆಲ್ಲ ಸೊಗಸಾದ ಬಟ್ಟೆಗಳು, ರೈಲು, ಮೋಟಾರುಗಾಡಿಗಳು, ಪರಿಮಳದ್ರವ್ಯಗಳು, ನಾನಾಬಗೆಯ ಯಂತ್ರಗಳು, ಆಯುಧಗಳು ಮೊದಲಾದ ವಸ್ತುಗಳೂ ಬೇಕಾಗುವುವು. ಇವುಗಳನ್ನೆಲ್ಲ ತಯಾರುಮಾಡಿ ಒದಗಿಸುವುದರಿಂದ ಅನೇಕ ಕೈಗಾರಿಕೆಗಳು ಅಭಿವೃದ್ಧಿಯಾಗುವುವು. ಈ ಕೈಗಾರಿಕೆಗಳನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು:—(1) ಆಹಾರವಸ್ತುಗಳನ್ನು ತಯಾರುಮಾಡುವುದಕ್ಕೆ ಸಂಬಂಧಪಟ್ಟ ಕೈಗಾರಿಕೆಗಳು, (2) ಬಟ್ಟೆಗಳನ್ನೂ ಸಾಮಾನ್ಯವಾಗಿ ಬಳಕೆಗೆ ಬೇಕಾಗುವ ಇತರ ಪದಾರ್ಥಗಳನ್ನೂ ತಯಾರುಮಾಡುವ ಕೈಗಾರಿಕೆಗಳು, (3) ಯಂತ್ರಗಳನ್ನೂ ಆಯುಧಗಳನ್ನೂ ತಯಾರುಮಾಡುವ ಕೈಗಾರಿಕೆಗಳು.

ಈ ಕೈಗಾರಿಕೆಗಳು ಅನೇಕ ಜನರಿಗೆ ಉದ್ಯೋಗ ಅಥವಾ ಕಸಬಾಗಿವೆ. ಜನರು ಈ ಕೈಗಾರಿಕೆಗಳಿಂದಲ್ಲದೆ ಇತರ ಉದ್ಯೋಗಗಳಿಂದಲೂ ಜೀವಿಸುವರು. ಈ ಇತರ ಉದ್ಯೋಗಗಳಲ್ಲಿ ಕೃಷಿ ಮತ್ತು ಪಶುಪಾಲನೆಗಳೂ, ಗಣಿಗಳಿಂದ ಅದುರುಗಳನ್ನು ತೆಗೆಯುವುದೂ, ವ್ಯಾಪಾರವೂ ಮುಖ್ಯವಾದುವು. ಕೆಲವು ಜನರು ಸರಕಾರಿ ನೌಕರಿ, ಮನೆಯ ಚಾಕರಿ, ಕುಶಲ ವಿದ್ಯೆಗಳು, ಮನೆ ಕಟ್ಟುವುದು ಮೊದಲಾದ ಉದ್ಯೋಗಗಳಿಂದಲೂ ಜೀವಿಸುವರು.

**36. ಕೈಗಾರಿಕೆಗಳು:— ಆಹಾರಪದಾರ್ಥಗಳನ್ನು ತಯಾರುಮಾಡುವುದಕ್ಕೆ ಸಂಬಂಧಪಟ್ಟ ಕೈಗಾರಿಕೆಗಳು.**—ಬೆಳೆದ ಧಾನ್ಯವನ್ನು ಸಾಮಾನ್ಯವಾಗಿ ಪ್ರತಿಮನೆಯಲ್ಲಿಯೂ ಆಹಾರಕ್ಕಾಗಿ ಬಳಸುವರು; ಆದರೆ ಕೆಲವು ದೇಶಗಳಲ್ಲಿ ಯಂತ್ರಗಳ ಸಹಾಯದಿಂದ ಧಾನ್ಯಗಳನ್ನು ಆಹಾರಕ್ಕೆ ಸಿದ್ಧಪಡಿಸಿ ರಫ್ತುಮಾಡುವರು. ಗೋಧಿಯ ಹಿಟ್ಟನ್ನೂ, ಬಿಸ್ಕತ್ತುಗಳನ್ನೂ ಮಾಡುವ ಕೈಗಾರಿಕೆಯನ್ನು ಇದಕ್ಕೆ ಉದಾಹರಣೆಯಾಗಿ ತೆಗೆದುಕೊಳ್ಳಬಹುದು. ಯುರೋಪ್ ಖಂಡದ ಹಂಗೇರಿ, ರೊಮೇನಿಯ, ಇಟಲಿದೇಶಗಳಲ್ಲಿಯೂ, ಅಮೆರಿಕದ ಸಂಯುಕ್ತಸಂಸ್ಥಾನಗಳಲ್ಲಿಯೂ ಗೋಧಿಯ ಹಿಟ್ಟನ್ನು ಯಂತ್ರಗಳಿಂದ

ತಯಾರುಮಾಡುವ ಕಾರ್ಖಾನೆಗಳು ಅನೇಕವಾಗಿರುವುವು. ಈ ದೇಶಗಳಲ್ಲಿ ವಿಶೇಷವಾಗಿ ಗೋಧಿ ಬೆಳೆಯುವುದೂ, ಗಾಳಿಯಲ್ಲಿ ತೇವ ಕಡಿಮೆಯಾಗಿರುವುದೂ ಈ ಕೈಗಾರಿಕೆಗೆ ಅನುಕೂಲವಾಗಿದೆ. ಈ ಸೌಕರ್ಯಗಳು ನಮ್ಮ ದೇಶದ ಪಂಜಾಬ್, ಸಂಯುಕ್ತರಾಷ್ಟ್ರ ಮೊದಲಾದ ಪ್ರಾಂತಗಳಲ್ಲಿರುವುದರಿಂದ, ಈ ಕೈಗಾರಿಕೆಯನ್ನು ವೃದ್ಧಿಪಡಿಸಲು ಅವಕಾಶವಿರುವುದು. ಇಂಗ್ಲೆಂಡು ಮತ್ತು ಸಂಯುಕ್ತ ಸಂಸ್ಥಾನಗಳಲ್ಲಿ ಗೋಧಿಯ ಹಿಟ್ಟಿನಿಂದ ಬಿಸ್ಕತ್ತನ್ನೂ ಮಾಡುವರು. ಇಂಗ್ಲೆಂಡಿನಲ್ಲಿರುವ ಒಂದು ಬಿಸ್ಕತ್ತಿನ ಕಾರ್ಖಾನೆಯೇ ಒಂದು ಪಟ್ಟಣದ ಹಾಗಿದೆ.

ಕೆಲವು ದೇಶಗಳಲ್ಲಿ ವಿಶೇಷವಾಗಿ ಬೆಳೆಯುವ ಹಣ್ಣುಗಳನ್ನು ರಫ್ತು ಮಾಡಲು ಅವುಗಳನ್ನು ಒಣಗಿಸಿ ಅಥವಾ ಬೇರೆ ರೀತಿಯಲ್ಲಿ ಹದಮಾಡುವುದೂ ಮುಖ್ಯವಾದ ಕೈಗಾರಿಕೆಯಾಗಿರುವುದು. ಸಕ್ಕರೆಯ ಅಥವ ಜೇನುತುಪ್ಪದ ಪಾಕದಲ್ಲಿ ಇಟ್ಟಾಗಲಿ ಇಲ್ಲವೇ ಗಾಳಿ ಸೇರದಂತಿರುವ ಜಾಡಿಗಳಲ್ಲಿ ತುಂಬಿ ಅವುಗಳ ಸುತ್ತಲೂ ಮಂಜುಗಡ್ಡೆಗಳನ್ನು ಇಟ್ಟಾಗಲಿ ಹಣ್ಣುಗಳನ್ನು ಹದಮಾಡಿ ಕಳುಹಿಸುವರು. ಈ ರೀತಿಯಲ್ಲಿ ಸಂಯುಕ್ತ ಸಂಸ್ಥಾನಗಳಿಂದ ಸೇಬಿನಹಣ್ಣುಗಳನ್ನು ಯೂರೋಪ್ ಖಂಡದ ದೇಶಗಳಿಗೆ ಕಳುಹಿಸುವರು. ಯೂರೋಪಿನ ದಕ್ಷಿಣಭಾಗದ ದ್ವೀಪಗಳಿಂದ ಒಣಗಿದ ದ್ರಾಕ್ಷೆ ಅಥವಾ ದ್ವೀಪದ್ರಾಕ್ಷೆಯ ಹಣ್ಣುಗಳನ್ನೂ, ಏಷ್ಯಾಮೈನರಿನಿಂದ ಒಣಗಿದ ಅಂಜೂರದ ಹಣ್ಣುಗಳನ್ನೂ ಏಷ್ಯ, ಆಫ್ರಿಕದ ಮರುಭೂಮಿ ಪ್ರದೇಶಗಳಿಂದ ಖರ್ಜೂರಗಳನ್ನೂ ಕಳುಹಿಸುವರು. ಆ ಪ್ರದೇಶದಲ್ಲಿ ಈ ಹಣ್ಣುಗಳು ಹೇರಳವಾಗಿ ಬೆಳೆಯುವುವು. ಅವುಗಳನ್ನು ಒಣಗಿಸುವುದಕ್ಕೆ ತಕ್ಕಂತೆ ಬೇಸಿಗೆ ದೀರ್ಘವಾಗಿಯೂ, ಮೋಡವಿಲ್ಲದೆ ಪ್ರತಿ ದಿನವೂ ಬಿಸಿಲು ಚೆನ್ನಾಗಿ ಕಾಯುತ್ತಲೂ ಇರುವುದು. ಆ ಪ್ರದೇಶದಲ್ಲಿ ಧಾನ್ಯಗಳನ್ನು ಬೆಳೆಯುವುದೇ ಬಹಳ ಕಡಮೆಯಾಗಿರುವುದರಿಂದ, ಅಲ್ಲಿನ ಜನರು ಈ ಹಣ್ಣುಗಳನ್ನು ಒಣಗಿಸಿ ಮಾರಿ ಬಂದ ಹಣದಿಂದ ಧಾನ್ಯವನ್ನು ಕೊಂಡುಕೊಳ್ಳುವರು.

ಕೆಲವು ಕಡೆಗಳಲ್ಲಿ ದ್ರಾಕ್ಷೆಹಣ್ಣಿನಿಂದ ರಸವನ್ನು ತೆಗೆದು ಅದನ್ನು ಜಾಡಿಗಳಲ್ಲಿ ತುಂಬಿ ನೆಲದಲ್ಲಿಟ್ಟಿದ್ದು ದ್ರಾಕ್ಷಾರಸ ಅಥವ ವೈನನ್ನು ಮಾಡುವುದೂ ಒಂದು ಕೈಗಾರಿಕೆಯಾಗಿರುವುದು. ಫ್ರಾನ್ಸ್, ಸ್ಪೇನ್, ಪೋರ್ಚ್‌ಗಲ್, ಹಂಗೇರಿ ದೇಶಗಳ ವೈನುಗಳು ಪ್ರಖ್ಯಾತವಾಗಿವೆ. ಜವೆಗೋಧಿ, ಆಲೂಗಡ್ಡೆ, ಹಾಪ್ ಕಾಯಿಗಳು—ಇವುಗಳಿಂದ ಜರ್ಮನಿ, ಗ್ರೇಟ್ ಬ್ರಿಟನ್‌ಗಳಲ್ಲಿ ಬಿಯರ್ ಅಥವಾ ವಿಸ್ಕಿಗಳೆಂಬ ಮದ್ಯಗಳನ್ನು ತಯಾರುಮಾಡುವರು. ನಮ್ಮ ದೇಶದಲ್ಲಿ ಹೆಂಡವು ವಿಶೇಷವಾಗಿ ತಯಾರಾಗುವುದು. ಆದರೆ ಇಲ್ಲಿಂದ ಇತರ ದೇಶಗಳಿಗೆ ರಫ್ತಾಗುವುದಿಲ್ಲ.

ಕೆಲವು ಕಡೆಗಳಲ್ಲಿ ಎಣ್ಣೆಯ ಬೀಜಗಳಿಂದ ಎಣ್ಣೆಯನ್ನು ತೆಗೆಯುವುದೂ ಮುಖ್ಯವಾದ ಒಂದು ಕೈಗಾರಿಕೆಯಾಗಿದೆ. ಇಂಡಿಯ, ಸಿಲೋನ್, ಪೆಸಿಫಿಕ್ ಸಾಗರದಲ್ಲಿರುವ ದ್ವೀಪಗಳಿಂದ ಕೊಬ್ಬರಿಯನ್ನು ತರಿಸಿಕೊಂಡು ಫ್ರಾನ್ಸ್ ಮೊದಲಾದ ದೇಶಗಳಲ್ಲಿ ಎಣ್ಣೆಯನ್ನು ತೆಗೆಯುವರು. ಇಂಡಿಯ ಮೊದಲಾದ ದೇಶಗಳಿಂದ ಹೀಗೆಯೇ ನೆಲಗಡಲೆಬೀಜ, ಹರಳು ಮೊದಲಾದ ಎಣ್ಣೆಯ ಬೀಜಗಳನ್ನು ತರಿಸಿಕೊಂಡು ಫ್ರಾನ್ಸ್, ಇಂಗ್ಲೆಂಡ್, ಜರ್ಮನಿಗಳಲ್ಲಿ ಎಣ್ಣೆಯನ್ನು ತೆಗೆಯುವರು. ಇದರ ಹಿಂಡಿಯನ್ನು ಗೊಬ್ಬರವಾಗಿ ಉಪಯೋಗಿಸುವರು. ಈ ಎಣ್ಣೆಗಳು ಅಡಿಗೆಗೂ, ಯಂತ್ರಗಳಿಗೂ ಉಪಯೋಗವಾಗುವುವು. ಈ ಎಣ್ಣೆಯ ಬೀಜಗಳನ್ನು ರಫ್ತುಮಾಡುತ್ತಿರುವುದರಿಂದ ನಮ್ಮ ದೇಶಕ್ಕೆ ಬಹಳ ನಷ್ಟವಾಗುತ್ತಿರುವುದು. ಈ ಗಿಡಗಳು ಭೂಮಿಯ ಸಾರವನ್ನು ಹೆಚ್ಚಾಗಿ ಹೀರಿ, ನೆಲದ ಸಾರವನ್ನು ಕಡಮೆಮಾಡಿಬಿಡುವುವು. ಬಹಳ ಒಳ್ಳೆಯ ಗೊಬ್ಬರವಾಗುವ ಹಿಂಡಿಯು ನಮ್ಮ ದೇಶದ ನೆಲಗಳಿಗೆ ಬೀಳದೆ ಅನ್ಯದೇಶಗಳ ನೆಲವನ್ನು ಫಲವತ್ತಾಗಿ ಮಾಡುವುದು. ಇದರಿಂದ ಅಲ್ಲಿನವರು ಬೀಪ್ ಸಕ್ಕರೆಯನ್ನು ಹೆಚ್ಚಾಗಿ ತಯಾರುಮಾಡಿ ನಮ್ಮ ದೇಶದ ಕಬ್ಬಿನ ಸಕ್ಕರೆಗಿಂತ ಅಗ್ಗವಾಗಿ ಇಲ್ಲಿಗೆ ತಂದು ಮಾರುವುದರಿಂದ ನಮ್ಮ ದೇಶದ ಕಬ್ಬಿನ ಸಕ್ಕರೆಯ ಗಿರಾಕಿಯು ಕಡಿಮೆಯಾಗಿ ಹೋಯಿತು.

ಮೈಸೂರು ಸೀಮೆಯಲ್ಲಿಯೂ, ಇತರ ದೇಶಗಳಲ್ಲಿಯೂ ಬೆಳೆಯುವ ಶ್ರೀಗಂಧದ ಮರವನ್ನು ಜರ್ಮನಿದೇಶಕ್ಕೆ ವಿಶೇಷವಾಗಿ ರಫ್ತು ಮಾಡುತ್ತಿದ್ದರು. ಅಲ್ಲಿನವರು ಅದರಿಂದ ಎಣ್ಣೆಯನ್ನು ತೆಗೆದು ಪರಿಮಳದ್ರವ್ಯಗಳಿಗೂ, ಔಷಧಕ್ಕೂ ಉಪಯೋಗಿಸುವುದಕ್ಕೋಸ್ಕರ ರಫ್ತು ಮಾಡುತ್ತಿದ್ದರು. ಆದರೆ ಈಚೆಗೆ ನಮ್ಮ ಸೀಮೆಯಲ್ಲಿಯೇ ಸರಕಾರದವರು ಗಂಧದ ಎಣ್ಣೆಯನ್ನು ತಯಾರುಮಾಡುವ ಕಾರ್ಖಾನೆಯನ್ನು ಸ್ಥಾಪಿಸಿರುವರು.

ಕಬ್ಬಿನಿಂದಲೂ ಬೀಪ್ ಮೇಪಲ್ ಎಂಬ ಮರಗಳಿಂದಲೂ ಸಕ್ಕರೆಯನ್ನು ಮಾಡುತ್ತಾರೆ. ಈ ಮರಗಳು ಫ್ರಾನ್ಸ್, ಜರ್ಮನಿ, ಆಸ್ಟ್ರಿಯಗಳಲ್ಲಿ ವಿಶೇಷವಾಗಿ ಬೆಳೆಯುವುವು. ಆ ದೇಶಗಳ ಸರಕಾರದವರು ಈ ಕೈಗಾರಿಕೆಗೆ ವಿಶೇಷವಾಗಿ ಪ್ರೋತ್ಸಾಹವನ್ನು ಕೊಟ್ಟಿರುವುದರಿಂದ, ಬೀಪ್ ಸಕ್ಕರೆಯು ಬಹು ಸುಲಭವಾಗಿ ಕಬ್ಬಿನ ಸಕ್ಕರೆಯ ಗಿರಾಕಿಯನ್ನು ಕಡಮೆ ಮಾಡಿರುವುದು. ಈ ಸಕ್ಕರೆಯು ಕಬ್ಬಿನ ಸಕ್ಕರೆಗಿಂತ ಹೆಚ್ಚು ಸಿಹಿ ಇಲ್ಲದಿದ್ದರೂ ನೋಡುವುದಕ್ಕೆ ಬಹಳ ಬಿಳುಪಾಗಿರುವುದು. ಈ ಕಬ್ಬು ವೆಸ್ಟಿಂಡಿಯಾ ದ್ವೀಪಗಳಲ್ಲಿಯೂ, ಬ್ರೆಜಿಲ್, ಇಂಡಿಯ ದೇಶಗಳಲ್ಲಿಯೂ ವಿಶೇಷವಾಗಿ ಬೆಳೆಯುವುದು. ಈ ದೇಶಗಳಲ್ಲಿ ಇದರಿಂದ ಬೆಲ್ಲವನ್ನೂ ಸಕ್ಕರೆಯನ್ನೂ ಮಾಡುವರು. ಆದರೆ ಸಕಾಲದಲ್ಲಿ ಮಳೆ

ಬೀಳದಿದ್ದರೆ ಕಬ್ಬಿನ ಬೆಳೆ ಕೆಡುವುದರಿಂದಲೂ, ಸಕ್ಕರೆಯನ್ನು ಚೆನ್ನಾಗಿ ಶುದ್ಧಿ ಮಾಡತಕ್ಕ ಯಂತ್ರಗಳನ್ನು ನಮ್ಮ ಜನರು ಉಪಯೋಗಿಸದಿರುವುದರಿಂದಲೂ, ಬೀಪ್ ಸಕ್ಕರೆಯು ಅಗ್ಗವಾಗಿರುವುದರಿಂದಲೂ, ನಮ್ಮ ದೇಶದ ಉತ್ಕೃಷ್ಟವಾದ ಕಬ್ಬಿನ ಸಕ್ಕರೆಯನ್ನು ಮಾಡುವ ಕೈಗಾರಿಕೆಯು ಕ್ಷೀಣತೆಗೆ ಬಂದಿತು.*

ಇವೆಲ್ಲ ವ್ಯವಸಾಯಕ್ಕೆ ಸಂಬಂಧಪಟ್ಟ ಕೈಗಾರಿಕೆಗಳಾಗಿವೆ. ಇದಲ್ಲದೆ ಪಶುಪಾಲನೆಗೆ ಸಂಬಂಧಪಟ್ಟ ಕೈಗಾರಿಕೆಗಳೂ ಕೆಲವು ಪ್ರದೇಶಗಳಲ್ಲಿ ನಡೆಯುತ್ತಿವೆ.

ಜನಸಂಖ್ಯೆ ಕಡಿಮೆಯಾಗಿರುವ ಅಮೆರಿಕ, ಆಸ್ಟ್ರೇಲಿಯ ಖಂಡಗಳಲ್ಲಿ ಅನೇಕ ಪ್ರದೇಶಗಳು ಇನ್ನೂ ಸಾಗುವಳಿಗೆ ಬಂದಿಲ್ಲ. ಏಷ್ಯ, ದಕ್ಷಿಣ ಆಫ್ರಿಕೆಗಳಲ್ಲಿ ವ್ಯವಸಾಯಕ್ಕೆ ಯೋಗ್ಯವಲ್ಲದ ಅನೇಕ ಪ್ರದೇಶಗಳಿರುವುವು. ಈ ಪ್ರದೇಶಗಳೆಲ್ಲಾ ವಿಶೇಷವಾಗಿ ಹುಲ್ಲುಗಾವಲುಗಳಾಗಿರುವುವು. ಇಲ್ಲಿನ ಜನರು ನಮ್ಮ ದೇಶದವರಂತೆ ತಮ್ಮ ಉಪಯೋಗಕ್ಕೋಸ್ಕರವಲ್ಲದೆ ಲಾಭಕರವಾದ ವ್ಯಾಪಾರಕ್ಕೋಸ್ಕರವೂ ದನಗಳನ್ನು ಸಾಕುವರು. ಹಾಲಿನಿಂದ ಗಿಣ್ಣನ್ನೂ ಬೆಣ್ಣೆಯನ್ನೂ ತೆಗೆದು ಮಂಜುಗಡ್ಡೆಗಳ ಸಹಾಯದಿಂದ ಕೆಡದಂತೆ ಪ್ಯಾಕ್‌ಮಾಡಿ ಜನಸಾಂದ್ರತೆ ಹೆಚ್ಚಾಗಿರುವ ದೇಶಗಳಿಗೆ ಕಳುಹಿಸುವರು. ಈ ಪ್ರದೇಶಗಳಿಂದಲೂ, ಡೆನ್‌ಮಾರ್ಕ್, ಹಾಲೆಂಡ್, ಸ್ವಿಟ್ಜರ್ಲೆಂಡ್ ಮೊದಲಾದ ದೇಶಗಳಿಂದಲೂ ಹಾಲನ್ನು ಗಟ್ಟಿಮಾಡಿ (ಕನ್‌ಡೆನ್‌ಸ್ಡ್ ಮಿಲ್ಕ್) ಟಿನ್ನುಗಳಲ್ಲಿ ತುಂಬಿ ರಫ್ತು ಮಾಡುವರು. ಉಷ್ಣವಲಯದಲ್ಲಿ ಉಷ್ಣಾಧಿಕ್ಯದಿಂದ ಬೆಣ್ಣೆಯೂ ಗಿಣ್ಣೂ ಬಹುಬೇಗ ಕೆಟ್ಟುಹೋಗುವುದರಿಂದ ಅವುಗಳಿಗೆ ಬದಲಾಗಿ ತುಪ್ಪವನ್ನೇ ಮಾಡಿ ಉಪಯೋಗಿಸುವರು.

ದನಗಳು ಬಹು ವಿಶೇಷವಾಗಿಯೂ ಜನ ಬಾಹುಳ್ಯವು ಕಡಿಮೆಯಾಗಿಯೂ ಇರುವ ಅಮೆರಿಕ, ಆಸ್ಟ್ರೇಲಿಯಗಳಿಂದ ಜನಬಾಹುಳ್ಯ ಹೆಚ್ಚಾಗಿರುವ ಇಂಗ್ಲೆಂಡ್ ಮೊದಲಾದ ದೇಶಗಳಿಗೆ ದನದ ಮತ್ತು ಕುರಿಯ ಮಾಂಸವನ್ನು ಕಳುಹಿಸುವರು. ಈ ಮಾಂಸವನ್ನು ಚೆನ್ನಾಗಿ ಒಣಗಿಸಿ, ಉಪ್ಪು ಮೊದಲಾದ ಪದಾರ್ಥಗಳೊಡನೆ ಬೆರಸಿ, ಗಾಳಿ ಸೋಕದಂತೆ ಪ್ಯಾಕ್‌ಮಾಡಿ, ಸುತ್ತಲೂ ಮಂಜುಗಡ್ಡೆಗಳನ್ನಿಟ್ಟು ರಫ್ತುಮಾಡುವರು. ಹೀಗೆ ರಫ್ತುಮಾಡುವುದಕ್ಕೆ ಮಾಂಸವನ್ನು ಸಿದ್ಧಪಡಿಸುವುದೂ ಈ ದೇಶದ ಒಂದು ಮುಖ್ಯವಾದ ಕೈಗಾರಿಕೆಯಾಗಿದೆ.

ಉಷ್ಣವಲಯದ ಅನೇಕ ಪ್ರದೇಶಗಳಲ್ಲಿ ಜೇನುತುಪ್ಪವನ್ನು ಶೇಖರಿಸುತ್ತಾರೆ. ಹಿಂದೆ ಸೂಚಿಸಿರುವಂತೆ ಪೆಸಿಫಿಕ್, ಅಟ್ಲಾಂಟಿಕ್ ಸಾಗರಗಳ ಈಶಾನ್ಯ

---

* ಈಗಿನ ಯುದ್ಧವು ಪ್ರಾರಂಭವಾದಂದಿನಿಂದೀಚೆಗೆ ಬೀಪ್ ಸಕ್ಕರೆಯು ಬರುವುದು ಕಡಿಮೆಯಾಗಿ ಈ ಕೈಗಾರಿಕೆಯು ಪ್ರಬಲಿಸಲು ಅವಕಾಶವುಂಟಾಗಿದೆ.

ಮತ್ತು ವಾಯುವ್ಯ ಭಾಗಗಳಲ್ಲಿ ಬಹು ವಿಶೇಷವಾಗಿರುವ ವಿಮಾನುಗಳನ್ನು ಇಂಗ್ಲೆಂಡ್ ಸಂಯುಕ್ತಸಂಸ್ಥಾನಗಳವರೂ, ಕೆನಡ, ಜಪಾನ್ ಮೊದಲಾದ ದೇಶದವರೂ ಹಿಡಿದು ಮಾರಾಟಕ್ಕೆ ಅಣಿಮಾಡುವರು. ಇದು ಕೃಷಿ ಮತ್ತು ಪಶುಪಾಲನೆಗೆ ಸಂಬಂಧಪಡದ ಆಹಾರವನ್ನು ಒದಗಿಸುವ ಇತರ ಕೈಗಾರಿಕೆಯಾಗಿದೆ.

(2) **ಬಟ್ಟೆಗಳನ್ನೂ, ಸಾಮಾನ್ಯ ಬಳಕೆಗೆ ಬೇಕಾಗುವ ಇತರ ಪದಾರ್ಥಗಳನ್ನೂ ತಯಾರುಮಾಡುವ ಕೈಗಾರಿಕೆಗಳು.**—ಏಷ್ಯ, ಆಫ್ರಿಕ ಖಂಡಗಳಲ್ಲಿ ಸ್ವಲ್ಪ ಮಟ್ಟಿಗೆ ಕೈಮಗ್ಗಗಳಿಂದ ಮನೆಗಳಲ್ಲಿ ಬಟ್ಟೆಗಳನ್ನು ನೇಯುವರು. ಆದರೆ ಸಾಮಾನ್ಯವಾಗಿ ಎಲ್ಲಾ ದೇಶಗಳಲ್ಲಿಯೂ ಭಾರಿ ಕಾರ್ಖಾನೆಗಳಲ್ಲಿ ಯಂತ್ರಗಳಿಂದಲೇ ಬಟ್ಟೆಗಳನ್ನು ತಯಾರುಮಾಡುವರು. ಜರತಾರಿಬಟ್ಟೆ ಮೊದಲಾದ ಬಹು ನಾಜೋಕಾದ ಬಟ್ಟೆಗಳನ್ನು ಮಾತ್ರ ಕೈಯಿಂದಲೇ ಮಾಡುವರು.

**ಹತ್ತಿಯ ಬಟ್ಟೆಗಳು.**—ಒಂದು ದೇಶದಲ್ಲಿ ಹತ್ತಿಯ ಬಟ್ಟೆಗಳು ಹೆಚ್ಚಾಗಿ ತಯಾರಾಗಬೇಕಾದರೆ ಅಲ್ಲಿ ಹತ್ತಿ ಹೆಚ್ಚಾಗಿ ಬೆಳೆಯಬೇಕು. ಅಥವಾ ಇತರ ದೇಶಗಳಿಂದ ಹತ್ತಿಯನ್ನು ತರಿಸಿಕೊಳ್ಳಲು ಅನುಕೂಲವಿರಬೇಕು, ಗಾಳಿಯಲ್ಲಿ ಹೆಚ್ಚು ತೇವವಿರಬೇಕು; ಹಾಗಿಲ್ಲದಿದ್ದರೆ ದಾರವು ಕಿತ್ತುಹೋಗುವುದು. ಯಂತ್ರಗಳಿಂದ ವಿಶೇಷವಾಗಿ ಕೆಲಸಮಾಡಿಸಬೇಕಾಗಿರುವುದರಿಂದ ಕಲ್ಲಿದ್ದಲು ವಿಶೇಷವಾಗಿ ಸಿಕ್ಕುತ್ತಿರಬೇಕು. ಜನಗಳಿಗೆ ಕುಶಲತೆಯೂ ಬಂಡವಾಳವೂ ಹೆಚ್ಚಾಗಿರಬೇಕು. ಈ ಅನುಕೂಲ್ಯಗಳೆಲ್ಲ ಇರುವುದರಿಂದಲೇ ಇಂಗ್ಲೆಂಡಿನಲ್ಲಿ ಇತರ ದೇಶಗಳಿಗಿಂತಲೂ ಬಟ್ಟೆಗಳು ಬಹು ಹೆಚ್ಚಾಗಿ ತಯಾರಾಗುವುವು. ಜರ್ಮನಿ, ಫ್ರಾನ್ಸ್, ಬೆಲ್ಜಿಯಂ ಮೊದಲಾದ ಅನೇಕ ದೇಶಗಳಲ್ಲಿಯೂ ಬಟ್ಟೆಗಳು ತಯಾರಾಗುವುವು. ಇಂಡಿಯಾದೇಶದಲ್ಲಿಯೂ ಹತ್ತಿ ವಿಶೇಷವಾಗಿ ಬೆಳೆಯಾಗುತ್ತದೆ. ವಾಯುಗುಣವೂ ಅನುಕೂಲವಾಗಿರುವುದು. ಆದುದರಿಂದ ಬೊಂಬಾಯಿ, ಅಹಮದಾಬಾದ್ ಮೊದಲಾದ ಪಟ್ಟಣಗಳಲ್ಲಿ ಹತ್ತಿಯ ಬಟ್ಟೆಗಳನ್ನು ಮಾಡುವ ಭಾರಿ ಕಾರ್ಖಾನೆಗಳಿರುವುವು; ಆದರೆ ಕಲ್ಲಿದ್ದಲು ಹೆಚ್ಚಾಗಿ ಸಿಕ್ಕುವುದಿಲ್ಲವಾದುದರಿಂದಲೂ ಜನರಿಗೆ ಕುಶಲತೆಯೂ ಬಂಡವಾಳವೂ ಸಾಲದೇ ಇರುವುದರಿಂದಲೂ, ನಮ್ಮ ದೇಶದ ಜನರಿಗೆ ಬೇಕಾದಷ್ಟು ಬಟ್ಟೆಗಳು ನಮ್ಮ ದೇಶದಲ್ಲಿಯೇ ತಯಾರಾಗುವುದಿಲ್ಲ.

**ಉಣ್ಣೆಯ ಬಟ್ಟೆಗಳು.**—ಈ ಕೈಗಾರಿಕೆಗೆ ಉಣ್ಣೆಯೂ ಕಲ್ಲಿದ್ದಲೂ ಕುಶಲತೆಯೂ ಬೇಕು. ಆದುದರಿಂದ ಇಂಗ್ಲೆಂಡು, ಸಂಯುಕ್ತ ಸಂಸ್ಥಾನಗಳು, ಆಸ್ಟ್ರಿಯ, ಹಂಗೇರಿ, ಜರ್ಮನಿ, ಫ್ರಾನ್ಸ್‌ಗಳಲ್ಲಿ ಇವು ವಿಶೇಷವಾಗಿ ತಯಾರಾಗುವುವು. ಈ ದೇಶಗಳಿಗೆ ಆಸ್ಟ್ರೇಲಿಯ, ದಕ್ಷಿಣ ಆಫ್ರಿಕ, ಅರ್‌ಜೆಂಟೈನ

ಮೊದಲಾದ ಪ್ರದೇಶಗಳಿಂದ ಉಣ್ಣೆಯು ಬರುವುದು. ನಮ್ಮ ದೇಶದಲ್ಲಿ ಒರಟಾದ ಕಂಬಳಿಗಳು ತಯಾರಾಗುತ್ತವೆ. ಕಾನ್‌ಪುರ ಮೊದಲಾದ ಕೆಲವು ಪಟ್ಟಣಗಳಲ್ಲಿ ಉಣ್ಣೆಯ ಬಟ್ಟೆಯನ್ನು ತಯಾರುಮಾಡುವ ಕಾರ್ಖಾನೆಗಳಿವೆ.

**ರೇಷ್ಮೆಯ ಬಟ್ಟೆಗಳು.**—ರೇಷ್ಮೆಯ ದಾರವು ಮುಖ್ಯವಾಗಿ ಜಪಾನ್, ಚೀಣ, ಫ್ರಾನ್ಸ್, ಇಟಲಿ, ಇಂಡಿಯಾದೇಶಗಳಲ್ಲಿ ತಯಾರಾಗುವುದು. ರೇಷ್ಮೆಯ ಬಟ್ಟೆಗಳನ್ನು ಮಾಡಬೇಕಾದರೆ ಬಹು ಕುಶಲತೆಯಿರಬೇಕು. ಆದುದರಿಂದ ಒರಟಾದ ಬಟ್ಟೆಗಳು ಚೀಣ ಜಪಾನ್‌ಗಳಲ್ಲಿಯೂ, ಉತ್ತಮವಾದ ಬಟ್ಟೆಗಳು ಮುಖ್ಯವಾಗಿ ಫ್ರಾನ್ಸ್, ಜರ್ಮನಿ, ಸ್ವಿಟ್ಜರ್ಲೆಂಡ್ ದೇಶಗಳಲ್ಲಿಯೂ ತಯಾರಾಗುವುವು. ಇಂಡಿಯಾದೇಶದಲ್ಲಿ ಸ್ವಲ್ಪ ಮಟ್ಟಿಗೆ ಉತ್ತಮವಾದ ಬಟ್ಟೆಗಳು ತಯಾರಾಗುವುವು. ಆದರೆ ಇತರ ದೇಶಗಳಿಗೆ ಕಳುಹಿಸುವಷ್ಟು ತಯಾರಾಗುವುದಿಲ್ಲ.

**ನಾರಿನ ಬಟ್ಟೆಗಳು.**—ಬಟ್ಟೆಗಳಿಗೆ ಬೇಕಾದಷ್ಟು ನಾರೂ, ನಾರು ಕೊಳೆಯುವುದಕ್ಕೆ ಶುದ್ಧವಾದ ನೀರೂ ದೊರೆಯುವ ಸ್ಕಾಟ್ಲೆಂಡ್, ಐರ್ಲೆಂಡ್, ಜರ್ಮನಿ ದೇಶಗಳಲ್ಲಿ ನಾರುಬಟ್ಟೆಗಳು ವಿಶೇಷವಾಗಿ ತಯಾರಾಗುವುವು. ಬಂಗಾಳದಲ್ಲಿ ಬೆಳೆಯುವ ಸಣಬಿನ ನಾರಿನಿಂದ ಗೋಣಿಯ ಚೀಲಗಳನ್ನು ಮಾಡುವರು. ತೆಂಗಿನ ನಾರಿನಿಂದ ಕೆಲವು ಪ್ರದೇಶಗಳಲ್ಲಿ ಹಗ್ಗಗಳೂ ತಯಾರಾಗುತ್ತವೆ.

**ತೊಗಲಿನ ಸಾಮಾನು.**—ದನಕುರಿಗಳು ವಿಶೇಷವಾಗಿರುವ ಸಂಯುಕ್ತ ಸಂಸ್ಥಾನಗಳಲ್ಲಿಯೂ, ತಮ್ಮ ತಮ್ಮ ಕಾಲೋನಿಗಳಿಂದ ವಿಶೇಷವಾಗಿ ತೊಗಲನ್ನು ತರಿಸಿಕೊಂಡು ಕೆಲಸಮಾಡುವ ಜರ್ಮನಿ, ಫ್ರಾನ್ಸ್, ಇಂಗ್ಲೆಂಡುಗಳಲ್ಲಿಯೂ, ಬೂಟ್ಸ್, ಕುದುರೆ ಜೀನು ಮೊದಲಾದ ತೊಗಲಿನ ಸಾಮಾನುಗಳಾಗುವ ದೊಡ್ಡ ಕಾರ್ಖಾನೆಗಳಿರುವುವು.

**ರಬ್ಬರಿನ ಸಾಮಾನು.**—ಸಂಯುಕ್ತ ಸಂಸ್ಥಾನಗಳು, ಇಂಗ್ಲೆಂಡು, ಜರ್ಮನಿ ದೇಶಗಳ ಜನರು, ಬ್ರೆಜಿಲ್, ಪಶ್ಚಿಮ ಆಫ್ರಿಕ ಮೊದಲಾದ ದೇಶಗಳಲ್ಲಿ ಬೆಳೆಯುವ ರಬ್ಬರ್ ಗಿಡದ ಹಾಲಿನಿಂದ ಆಗುವ ರಬ್ಬರನ್ನು ತರಿಸಿಕೊಂಡು ಗಾಲಿಗಳು, ಕೊಳವೆ, ಬೊಂಬೆ ಮೊದಲಾದ ಸಾಮಾನುಗಳನ್ನು ಮಾಡುವರು.

**ಕಾಗದ.**—ಬಟ್ಟೆಯ ಚಿಂದಿಗಳಿಂದಲೂ, ಒಂದು ಬಗೆಯ ಹುಲ್ಲಿನಿಂದಲೂ, ಕೆಲವು ಮರಗಳ ಚಕ್ಕೆಗಳಿಂದಲೂ ಕಾಗದವನ್ನು ಮಾಡುತ್ತಾರೆ. ಸಂಯುಕ್ತ ಸಂಸ್ಥಾನ, ಇಂಗ್ಲೆಂಡ್, ಜರ್ಮನಿಗಳಲ್ಲಿ ಬೇಕಾದ ಪದಾರ್ಥಗಳನ್ನು ಇತರ ದೇಶಗಳಿಂದ ತರಿಸಿಕೊಂಡು ಕಾಗದವನ್ನು ಮಾಡುವರು. ಯಂತ್ರಗಳ ಸಹಾಯದಿಂದ ಈ ಪದಾರ್ಥಗಳನ್ನು ನಯವಾಗಿ ಪುಡಿಮಾಡಿ ಅಂಬಲಿಯ ಹಾಗೆ ಕಾಸಿ ಕಾಳೆಗದಗಳಾಗಿ ಎರಕ ಹೊಯ್ದು ಅವುಗಳಿಗೆ ಬೇಕಾದ ಹದವನ್ನೂ ಬಣ್ಣವನ್ನೂ

ಕೊಡುವರು. ನಾರ್ವೆ ಸ್ವೀಡನ್‌ಗಳಲ್ಲಿ ಬೆಳೆಯುವ ಮರಗಳಿಂದಲೂ, ಚೀಣ, ಜಪಾನ್ ದೇಶಗಳಲ್ಲಿ ಬೆಳೆಯುವ ಬಿದಿರು ಮತ್ತು ಒತ್ತದ ಹುಲ್ಲಿನಿಂದಲೂ ಕಾಗದವನ್ನು ಮಾಡುವರು. ಜಪಾನ್ ದೇಶದವರು ಬೀಸಣಿಗೆ, ಚಾಪೆ ಮೊದ ಲಾದ ಅನೇಕ ವಸ್ತುಗಳನ್ನು ಮಾಡುವುದಕ್ಕೆ ಕಾಗದವನ್ನು ಉಪಯೋಗಿ ಸುತ್ತಾರೆ.

**ಸೀಸದಕಡ್ಡಿ.**—ಇವುಗಳ ತಯಾರಿಗೆ ಗ್ರಾಫೈಟ್ ಎಂಬ ಕರಿಯ ಸೀಸವೂ ಅನುಕೂಲವಾದ ಮತ್ತು ಅಗ್ಗವಾದ ಮರವೂ ಬೇಕು. ಇವೆರಡು ಅನುಕೂಲ ಗಳೂ ಸಂಯುಕ್ತ ಸಂಸ್ಥಾನಗಳಲ್ಲಿರುವುದರಿಂದ ಅಲ್ಲಿ ಸೀಸದಕಡ್ಡಿಗಳನ್ನು ಹೆಚ್ಚಾಗಿ ತಯಾರು ಮಾಡುವರು. ಜರ್ಮನಿಯಲ್ಲಿರುವ ಬವೇರಿಯ ರಾಜ್ಯದಲ್ಲಿ ಇದಕ್ಕೆ ತಕ್ಕ ಮರವು ಸಿಕ್ಕುವುದು. ಇಲ್ಲಿ ವ್ಯವಸಾಯವು ಅಷ್ಟು ಹೆಚ್ಚಾಗಿಲ್ಲ. ಜನರು ಕುಶಲರಾಗಿರುವರು. ಆದುದರಿಂದ ಸಿಲೋನಿನಿಂದ ಕರಿಯ ಸೀಸವನ್ನು ತರಿಸಿಕೊಂಡು ಸೀಸದ ಕಡ್ಡಿಗಳನ್ನು ಮಾಡುವರು. ಬವೇರಿಯದ ಸೀಸದ ಕಡ್ಡಿಗಳು ಬಹು ಪ್ರಸಿದ್ಧವಾಗಿವೆ. ನಮ್ಮ ದೇಶದಲ್ಲಿ ಮರವೂ ಸಿಕ್ಕುವುದು, ಸಿಲೋನಿನಿಂದ ಸೀಸವನ್ನೂ ಸುಲಭವಾಗಿ ತರಿಸಿಕೊಳ್ಳಬಹುದು. ಆದುದರಿಂದ ಇಲ್ಲಿಯೂ ಇನ್ನು ಮೇಲಾದರೂ ಸೀಸದಕಡ್ಡಿಗಳು ಹೆಚ್ಚಾಗಿ ತಯಾರಾದರೂ ಆಗಬಹುದು. ಆದರೆ ಪ್ರಕೃತದಲ್ಲಿ ನಮ್ಮ ಜನಗಳಿಗೆ ಇದರ ಅನುಭವ ಕಡಿಮೆಯಾಗಿದೆ. ಮದರಾಸಿನಲ್ಲಿ ಮಾತ್ರ ಒಂದು ಸೀಸದಕಡ್ಡಿಯ ಕಾರ್ಖಾನೆ ಇದೆ.

**ದೀಪದ ಕಡ್ಡಿಗಳು.**—ಇವುಗಳ ತಯಾರಿಗೆ ಮರವೂ, ರಂಜಕವೂ, ಗಂಧಕವೂ ಬೇಕಲ್ಲದೆ, ಕಡಿಮೆ ಮಜೂರಿಗೆ ಕೆಲಸಮಾಡತಕ್ಕ ಬಹು ಜನರು ಕೂಲಿಯವರೂ ದೊರೆಯುತ್ತಿರಬೇಕು. ತಕ್ಕಮಟ್ಟಿಗೆ ಇಂತಹ ಅನುಕೂಲಗಳನ್ನು ಹೊಂದಿರುವ ಸ್ವೀಡನ್ ಮತ್ತು ಜಪಾನ್ ದೇಶಗಳಲ್ಲಿ ದೀಪದ ಕಡ್ಡಿಗಳು ಹೆಚ್ಚಾಗಿ ತಯಾರಾಗುವುವು.

**ಪರಿಮಳದ್ರವ್ಯಗಳು.**—ಇವುಗಳಲ್ಲಿ ಶ್ರೇಷ್ಠವಾದುದು ಅತ್ತರು. ಇದು ಪರ್ಷಿಯಾ ದೇಶದಲ್ಲಿ ತಯಾರಾಗುವುದು. ಗಂಧದ ಎಣ್ಣೆಯು ಜರ್ಮನಿ ದೇಶ ದಲ್ಲಿಯೂ, ಈಚೆಗೆ ನಮ್ಮ ಮೈಸೂರು ದೇಶದಲ್ಲಿಯೂ ತಯಾರಾಗುತ್ತಿರುವುದು. ಹೂಗಳು ಹೆಚ್ಚಾಗಿ ಬೆಳೆಯುವ ಜಪಾನ್, ಸಂಯುಕ್ತ ಸಂಸ್ಥಾನಗಳಲ್ಲಿ ಹೂವಿ ನಿಂದ ಸುವಾಸನೆಯ ಎಣ್ಣೆಗಳನ್ನು ವಿಶೇಷವಾಗಿ ತಯಾರುಮಾಡುವರು.

**ಗಡಿಯಾರಗಳು.**—ಇವುಗಳನ್ನು ತಯಾರುಮಾಡುವುದಕ್ಕೆ ಬಹಳ ಕುಶಲತೆಯಿರಬೇಕು. ಸಂಯುಕ್ತ ಸಂಸ್ಥಾನಗಳು, ಸ್ವಿಟ್ಜರ್ಲೆಂಡ್, ಇಂಗ್ಲೆಂಡ್ ಮೊದಲಾದ ದೇಶಗಳಲ್ಲಿ ಇವುಗಳನ್ನು ತಯಾರುಮಾಡುವರು.

**ಗಾಜಿನ ಸಾಮಾನುಗಳು.**—ಇವು ಜರ್ಮನಿ, ಆಸ್ಟ್ರಿಯ ಮೊದಲಾದ ಅನೇಕ ದೇಶಗಳಲ್ಲಿ ತಯಾರಾಗುವುವು. ಈಚೆಗೆ ಜಪಾನಿನಲ್ಲಿಯೂ ವಿಶೇಷವಾಗಿ ತಯಾರಾಗುತ್ತಿರುವುದು.

**ಮಣ್ಣಿನ ಸಾಮಾನುಗಳು.**—ಇವು ಅನೇಕ ಕಡೆಗಳಲ್ಲಿ ತಯಾರಾಗುತ್ತವೆ. ಮೆರಗು ಕೊಟ್ಟಿರುವ ಪೊರ್ಸಲೆನ್ ಅಥವಾ ಪಿಂಗಾಣಿ ಸಾಮಾನುಗಳು ಚೀಣ, ಜಪಾನ್‌ಗಳಲ್ಲಿ ಮಾತ್ರ ತಯಾರಾಗುತ್ತಿದ್ದುವು. ಈಗ ಇಂಗ್ಲೆಂಡ್ ಮೊದಲಾದ ಅನೇಕ ದೇಶಗಳಲ್ಲಿ ತಯಾರಾಗುವುವು.

(3) **ಯಂತ್ರಗಳನ್ನೂ ಆಯುಧಗಳನ್ನೂ ತಯಾರು ಮಾಡುವ ಕೈಗಾರಿಕೆಗಳು.**—ಯಂತ್ರಗಳನ್ನೂ, ಆಯುಧಗಳನ್ನೂ ತಯಾರು ಮಾಡುವುದಕ್ಕೆ ವಿಶೇಷವಾಗಿ ಕಲ್ಲಿದ್ದಲೂ ಕಬ್ಬಿಣವೂ, ಹೆಚ್ಚಾದ ಶಾಸ್ತ್ರಜ್ಞಾನವೂ, ಕುಶಲತೆಯೂ, ಯಥೇಚ್ಛವಾಗಿ ಬಂಡವಾಳವೂ ಬೇಕು. ಈ ಅನುಕೂಲಗಳೆಲ್ಲ ಗ್ರೇಟ್ ಬ್ರಿಟನ್ ದೇಶದಲ್ಲಿ ಹೆಚ್ಚಾಗಿರುವುದರಿಂದ ಈ ಸಾಮಾನುಗಳು ಅಲ್ಲಿ ತಯಾರಾಗುವಷ್ಟು ಮತ್ತಾವ ದೇಶದಲ್ಲಿಯೂ ಆಗುವುದಿಲ್ಲ.

ಎನ್‌ಜಿನ್‌ಗಳೂ ಮೋಟಾರ್‌ಗಾಡಿಗಳೂ ಇಂಗ್ಲೆಂಡ್, ಜರ್ಮನಿ, ಸಂಯುಕ್ತ ಸಂಸ್ಥಾನಗಳಲ್ಲಿ ವಿಶೇಷವಾಗಿ ತಯಾರಾಗುವುವು. ವ್ಯವಸಾಯಕ್ಕೆ ಸಂಬಂಧಪಟ್ಟ ಯಂತ್ರಗಳೂ, ಆಯುಧಗಳೂ ಸಂಯುಕ್ತ ಸಂಸ್ಥಾನಗಳಲ್ಲಿ ವಿಶೇಷವಾಗಿ ತಯಾರಾಗುವುವು.

ಹಡಗನ್ನು ಕಟ್ಟುವುದಕ್ಕೆ ಮೇಲೆ ಸೂಚಿಸಿರುವ ಅನುಕೂಲತೆಗಳ ಜೊತೆಗೆ ಒಳ್ಳೆಯ ಬಂದರುಗಳೂ ಆವಶ್ಯಕ. ಪ್ರಪಂಚದಲ್ಲಿ ತಯಾರಾಗುವ ಹಡಗುಗಳಲ್ಲಿ ಮುಕ್ಕಾಲುಪಾಲು ಹಡಗು ಗ್ರೇಟ್ ಬ್ರಿಟನ್ ದ್ವೀಪದಲ್ಲಿಯೇ ತಯಾರಾಗುವುದು.

**37. ಹಿತ್ತಾಳೆಯ ಮತ್ತು ತಾಮ್ರದ ಪಾತ್ರೆಗಳು.**—ಇವು ಇಂಡಿಯಾ ದೇಶದಲ್ಲಿ ವಿಶೇಷವಾಗಿ ತಯಾರಾಗುವುವು. ನಮ್ಮ ದೇಶದವರು ಪೂರ್ವಕಾಲದಿಂದಲೂ ಈ ಪಾತ್ರೆಗಳನ್ನು ಮನೆಯಲ್ಲಿ ಉಪಯೋಗಿಸುತ್ತಿರುವರು. ಈ ಕೈಗಾರಿಕೆಗೆ ಬೇಕಾದ ಲೋಹಗಳೂ ಸಾಕಾದಷ್ಟು ದೊರೆಯುವುವು.

ಕತ್ತರಿ, ಚಾಕು ಮೊದಲಾದ ಅಲಗುಳ್ಳ ಲೋಹದ ಸಾಮಾನುಗಳನ್ನು ಒಂದು ಪ್ರದೇಶದಲ್ಲಿ ತಯಾರು ಮಾಡಬೇಕಾದರೆ ಉತ್ತಮವಾದ ಉಕ್ಕೂ, ಯಂತ್ರಗಳನ್ನು ನಡೆಯಿಸುವುದಕ್ಕೆ ಬೇಕಾಗುವ ಕಲ್ಲಿದ್ದಲೂ, ಹರಿತಮಾಡುವುದಕ್ಕೆ ತಕ್ಕ ಸಾಣೆಯಕಲ್ಲುಗಳೂ ಬೇಕು. ಈ ಅನುಕೂಲಗಳೆಲ್ಲ ಚೆನ್ನಾಗಿರುವ ಇಂಗ್ಲೆಂಡು, ಜರ್ಮನಿ ದೇಶಗಳಲ್ಲಿ ಇವು ವಿಶೇಷವಾಗಿ ತಯಾರಾಗುವುವು.

## IX. ವ್ಯಾಪಾರ ಮತ್ತು ಮಾರ್ಗಗಳು

38. **ವ್ಯಾಪಾರ.**—ಒಂದು ದೇಶದ ಒಳಭಾಗದಲ್ಲಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ನಡೆಯುವ ವ್ಯಾಪಾರಕ್ಕೆ ಒಳದೇಶದ ವ್ಯಾಪಾರವೆಂದು ಹೆಸರು. ಒಂದು ದೇಶದಿಂದ ಮತ್ತೊಂದು ದೇಶಕ್ಕೆ ನಡೆಯುವ ವ್ಯಾಪಾರವನ್ನು **ಪರದೇಶದ ವ್ಯಾಪಾರವೆಂದು** ಕರೆಯಬಹುದು.

ಪೂರ್ವಕಾಲಕ್ಕಿಂತಲೂ ಈಗ ವ್ಯಾಪಾರಕ್ಕೆ ಸೌಕರ್ಯಗಳು ಬಹಳ ಹೆಚ್ಚಾಗಿವೆ. ಆದುದರಿಂದ ಈಗ ಪ್ರತಿಯೊಂದು ದೇಶದ ವಿಷಯದಲ್ಲಿಯೂ ಆ ದೇಶದಲ್ಲಿ ನಡೆಯುವ ಒಳದೇಶದ ವ್ಯಾಪಾರವೂ ಆ ದೇಶಕ್ಕೂ ಇತರ ಅನೇಕ ದೇಶಗಳಿಗೂ ನಡೆಸಲ್ಪಡುವ ಪರದೇಶದ ವ್ಯಾಪಾರವೂ ನಡೆಯುತ್ತಿರುವುವೆಂದು ಸಾಮಾನ್ಯವಾಗಿ ಹೇಳಬಹುದು. ವ್ಯಾಪಾರದಲ್ಲಿ ಎರಡು ಕಡೆಯವರಿಗೂ ಉಪಯೋಗವುಂಟು. ನಾವು ಹೆಚ್ಚಾಗಿ ದವಸವನ್ನು ಬೆಳೆದರೆ ಅದನ್ನು ಪರದೇಶಗಳಿಗೆ ಕಳುಹಿಸಿ ಹೆಚ್ಚು ಬೆಲೆಯನ್ನು ಪಡೆಯುವೆವು. ನಮ್ಮಲ್ಲಿ ದೊರೆಯದ ನಮಗೆ ಬೇಕಾದ ಸಾಮಾನುಗಳನ್ನು ಸುಲಭ ಖರೀದಿಗೆ ಕೊಂಡುಕೊಳ್ಳುವೆವು. ಇದರಿಂದ ನಮಗೂ ಲಾಭವುಂಟಾಗಿ, ಪರದೇಶದವರಿಗೂ ಅವರವರಿಗೆ ಬೇಕಾದ ಸರಕುಗಳು ಒದಗುವುವು. ಅವರವರ ಸರಕುಗಳಿಗೆ ಗಿರಾಕಿಯು ಸಿಕ್ಕುವುದೂ ಅಲ್ಲದೆ, ಅನೇಕ ದೇಶದ ವರ್ತಕರು ಒಟ್ಟಾಗಿ ಕಲೆಯುವುದರಿಂದ ಒಂದೊಂದು ಜನಾಂಗದವರು ಇತರ ಜನಾಂಗಗಳ ನಡೆನುಡಿಗಳನ್ನೂ, ಕುಶಲವಿದ್ಯೆಗಳನ್ನೂ ಕಲಿತುಕೊಳ್ಳಲು ಅವಕಾಶವಾಗುವುದು. ಇದರಿಂದ ಎಲ್ಲಾ ದೇಶಗಳಲ್ಲಿಯೂ ನಾಗರಿಕತೆ ಹೆಚ್ಚುವುದು. ಒಂದು ದೇಶದ ಬೆಳೆಯೂ, ಕೈಗಾರಿಕೆಗಳೂ ಹೆಚ್ಚಿದಷ್ಟೂ ಸರಕುಗಳು ಹೆಚ್ಚಾಗಿ ಸಿಕ್ಕುವುದರಿಂದ ವ್ಯಾಪಾರ ಹೆಚ್ಚಲು ಅವಕಾಶವಾಗುವುದು. ವ್ಯಾಪಾರವು ಹೆಚ್ಚಿದಷ್ಟೂ ಸರಕುಗಳಿಗೆ ಒಳ್ಳೆಯ ಗಿರಾಕಿ ಸಿಕ್ಕುವುದರಿಂದ ಕೃಷಿ ಮತ್ತು ಕೈಗಾರಿಕೆಗಳಿಗೆ ಪ್ರೋತ್ಸಾಹವುಂಟಾಗುವುದು. ಆದುದರಿಂದ ಒಂದು ದೇಶದ ಐಶ್ವರ್ಯವು ಹೆಚ್ಚಬೇಕಾದರೆ ಅಲ್ಲಿನ ವ್ಯಾಪಾರ ವೃದ್ಧಿಯೇ ಮೂಲಕಾರಣ.

39. **ವ್ಯಾಪಾರದ ಅಭಿವೃದ್ಧಿಗೆ ಬೇಕಾದ ಸೌಕರ್ಯಗಳು:**—(1) **ಹಿತಕರವಾದ ವಾಯುಗುಣ.**—ಅತಿಚಳಿಯಾಗಿರುವ ಶೀತವಲಯದಲ್ಲಿ ಜನಗಳು ಜೀವನಮಾಡುವುದೇ ಬಹು ಕಷ್ಟ. ಶೀತವಲಯದ ಪ್ರದೇಶಗಳಲ್ಲಿ ಜನಸಂಖ್ಯೆಯೂ, ಕೃಷಿ, ಕೈಗಾರಿಕೆಗಳೂ ಬಹು ಕಡಿಮೆಯಾಗಿರುವುವು. ಆದುದರಿಂದ ಅಲ್ಲಿ ವ್ಯಾಪಾರ ನಡೆಯುವುದು ಬಹಳ ಕಡಿಮೆಯಾಗಿರುವುದು. ಸಮಶೀತೋಷ್ಣವಲಯದಲ್ಲಿಯೂ, ಉಷ್ಣವಲಯದಲ್ಲಿಯೂ ವಾಯುಗುಣವು ಅನುಕೂಲವಾಗಿರುವುದರಿಂದ ಜನಸಂಖ್ಯೆಯೂ ಹೆಚ್ಚು, ಸಸ್ಯಗಳೂ ಚೆನ್ನಾಗಿ

ಬೆಳೆಯುವುವು. ಕೈಗಾರಿಕೆಗಳೂ ಹೆಚ್ಚಾಗಿ ನಡೆಯುವುವು. ಆದುದರಿಂದ ಆ ಸಲಯುಗಳಲ್ಲಿ ವ್ಯಾಪಾರವು ಹೆಚ್ಚು. ಇಂಗ್ಲೆಂಡಿನಲ್ಲಿ ಇಂಡಿಯಾದೇಶಕ್ಕಿಂತ ವಾಯುಗುಣವು ಸಮಧಾತುವಾಗಿರುವುದರಿಂದ ಅಲ್ಲಿನ ಜನರು ಕಷ್ಟಪಟ್ಟು ಕೆಲಸಮಾಡುವುದು ಹೆಚ್ಚು. ಆ ದೇಶದ ಅಸಾಧ್ಯವಾದ ವ್ಯಾಪಾರಕ್ಕೆ ಇದೂ ಒಂದು ಮುಖ್ಯ ಕಾರಣ.

(2) **ಜನಸಾಂದ್ರತೆಯೂ ಐಶ್ವರ್ಯವೂ ಹೆಚ್ಚಾಗಿರುವ ದೇಶಗಳ ಮಧ್ಯದಲ್ಲಿರುವುದು.**—ಒಂದು ದೇಶವು ಇಂತಹ ದೇಶಗಳ ಬಳಿಯಲ್ಲಿದ್ದರೆ ಅವುಗಳೊಡನೆ ಹೆಚ್ಚಾಗಿ ವ್ಯಾಪಾರ ನಡೆಯಲು ಅನುಕೂಲವಾಗುವುದು; ದೂರ ದಲ್ಲಿದ್ದರೆ ಅನುಕೂಲ ಕಡಿಮೆ. ಇಂಡಿಯಾದೇಶದ ಸಮೀಪದಲ್ಲಿ ಸಂಪದ್ಯುಕ್ತ ವಾದ ದೇಶಗಳು ಇಲ್ಲದಿರುವುದರಿಂದ ವ್ಯಾಪಾರಕ್ಕೆ ಸ್ವಲ್ಪಮಟ್ಟಿಗೆ ಕುಂದು ಉಂಟಾಗಿರುವುದು. ಸಾಮಾನುಗಳನ್ನು ಬಹುದೂರಕ್ಕೆ ಕಳುಹಿಸಿ ಬಹುದೂರ ದಿಂದ ತರಿಸಿಕೊಳ್ಳಬೇಕಾಗಿರುವುದರಿಂದ ಖರ್ಚು ಹೆಚ್ಚಾಗುವುದು. ಬ್ರಿಟಿಷ್ ದ್ವೀಪಗಳಿಗೆ ಪೂರ್ವ ದಿಕ್ಕಿನಲ್ಲಿ ಬಹು ಸಮೀಪವಾಗಿ ಕೈಗಾರಿಕೆಗಳಲ್ಲಿಯೂ, ಐಶ್ವರ್ಯದಲ್ಲಿಯೂ ಯುರೋಪ್ ಖಂಡದಲ್ಲಿ ಬಹು ಮುಂದಾಗಿರುವ ಫ್ರಾನ್ಸ್ ಮೊದಲಾದ ದೇಶಗಳಿರುವುದರಿಂದಲೂ, ಪಶ್ಚಿಮ ದಿಕ್ಕಿನಲ್ಲಿ ತಕ್ಕಮಟ್ಟಿಗೆ ಸಮೀಪ ವಾಗಿ ವರ್ಷ ವರ್ಷವೂ ಐಶ್ವರ್ಯದಲ್ಲಿ ಮುಂದುವರಿಯುತ್ತಿರುವ ಅಮೆರಿಕಾ ಖಂಡದ ದೇಶಗಳಿರುವುದರಿಂದಲೂ, ಈ ದ್ವೀಪಗಳು ಸ್ಥಳಾರ್ಧಗೋಳದ ಮಧ್ಯ ಭಾಗದಲ್ಲಿರುವುದರಿಂದಲೂ ಅಲ್ಲಿನ ವ್ಯಾಪಾರಾಭಿವೃದ್ಧಿಗೆ ಬಹು ವಿಶೇಷವಾದ ಸೌಕರ್ಯವಾಗಿರುವುದು.

(3) **ಸಮುದ್ರತೀರವು ದೀರ್ಘವಾಗಿಯೂ ಒಳ್ಳೆಯ ಬಂದರುಗಳುಳ್ಳದಾಗಿಯೂ ಇರುವುದು.**--ದೂರ ದೇಶಗಳಿಗೆ ಸಾಮಾನುಗಳನ್ನು ಕಳುಹಿಸಬೇಕಾದರೆ ರೈಲು ಗಾಡಿಗಳ ಮೂಲಕ ಕಳುಹಿಸುವುದಕ್ಕಿಂತ ಹಡಗು ಗಳಲ್ಲಿ ಕಡಿಮೆ ಖರ್ಚಿನಿಂದ ಕಳುಹಿಸಬಹುದು. ಅಂದರೆ ರೈಲಿಗಿಂತ ಹಡಗು ಗಳಲ್ಲಿ ಸಾಮಾನುಗಳಿಗೆ ಛಾರ್ಜು ಕಡಿಮೆಯಾಗಿರುವುದು. ಆದುದರಿಂದ ಯಾವ ದೇಶದಲ್ಲಿ ಸಮುದ್ರತೀರವು ಹಡಗಿನ ಸಂಚಾರಕ್ಕೆ ಅನುಕೂಲವಾಗಿರು ವುದೋ ಅಲ್ಲಿ ವ್ಯಾಪಾರವು ಹೆಚ್ಚಾಗಿ ನಡೆಯುವುದು. ನಮ್ಮ ಮೈಸೂರು ಸೀಮೆಯಲ್ಲಿ ರೈಲು ಮಾರ್ಗಗಳು ಎಷ್ಟು ಹೆಚ್ಚಿದರೂ, ಸಮೀಪದಲ್ಲಿ ಬಂದರಿಲ್ಲ. ಇದರಿಂದ ಇಲ್ಲಿನ ವ್ಯಾಪಾರದ ಅಭಿವೃದ್ಧಿಗೆ ತುಂಬ ಕೊರತೆಯಾಗಿದೆ. ಈ ಕೊರತೆಯನ್ನು ತಪ್ಪಿಸಬೇಕೆಂದು ದಯಾಳುಗಳಾದ ನಮ್ಮ ಸರ್ಕಾರದವರು ಪಶ್ಚಿಮತೀರದಲ್ಲಿರುವ ಭಟ್ಕಲ್ ಎಂಬ ಬಂದರನ್ನು ಹಡಗಿನ ವ್ಯಾಪಾರಕ್ಕೆ ಅನುಕೂಲಪಡಿಸಿ ಅಲ್ಲಿಗೆ ರೈಲು ಹಾಕಬೇಕೆಂದು ಯೋಚಿಸುತ್ತಿರುವರು.

(4) **ಅನುಕೂಲವಾದ ಒಳದೇಶದ ಮಾರ್ಗಗಳೂ ಇರಬೇಕು.**– ಒಂದು ದೇಶದ ವ್ಯಾಪಾರವು ಅಭಿವೃದ್ಧಿಯಾಗಬೇಕಾದರೆ ಅದರ ಎಲ್ಲಾ ಭಾಗಗಳ ಸರಕುಗಳೂ ಪರದೇಶಗಳಿಗೆ ಹೋಗುವುದಕ್ಕೂ, ಪರದೇಶದ ಸರಕು ದೇಶದ ಎಲ್ಲಾ ಭಾಗಗಳಿಗೂ ಬರುವುದಕ್ಕೂ ಅನುಕೂಲವಾಗಿ ಒಳದೇಶದಲ್ಲಿ ಗಾಡಿಯ ರಸ್ತೆಗಳೂ ರೈಲುಮಾರ್ಗಗಳೂ ಸುಲಭವಾಗಿ ನದಿಗಳನ್ನು ದಾಟುವುದಕ್ಕೆ ಸೇತುವೆಗಳೂ ಇರಬೇಕು. ಇವೂ ಅಲ್ಲದೆ ಅನೇಕವಾಗಿ ಹಡಗುಗಳೂ ಅವುಗಳ ಸಂಚಾರಕ್ಕೆ ಯೋಗ್ಯವಾದ ನದಿಗಳೂ ಸಹ ಇರಬೇಕು. ಈ ಅನುಕೂಲತೆಗಳು ಕಡಿಮೆಯಾದಷ್ಟೂ ವ್ಯಾಪಾರವೂ ಕಡಿಮೆಯಾಗುವುದು. ಒಳದೇಶದ ಮಾರ್ಗಗಳ ಸೌಕರ್ಯದ ವಿಷಯದಲ್ಲಿ ಇಂಗ್ಲೆಂಡ್, ಇಂಡಿಯ, ಅರೇಬಿಯಗಳನ್ನು ಹೋಲಿಸಿ ತಾರತಮ್ಯಗಳನ್ನು ಪರೀಕ್ಷಿಸಿ ನೋಡಿ.

(5) **ಅನುಕೂಲವಾದ ರಾಜ್ಯಭಾರ.**—ಯಾವ ದೇಶವು ಸದಾ ಇತರ ದೇಶದೊಂದಿಗೆ ಯುದ್ಧಮಾಡುತ್ತಾ ತನ್ನ ದ್ರವ್ಯವನ್ನೆಲ್ಲ ಯುದ್ಧದಲ್ಲಿಯೇ ವಿನಿಯೋಗಿಸುತ್ತಿರುವುದೋ ಅಂತಹ ದೇಶದಲ್ಲಿ ವ್ಯಾಪಾರವು ಏಳಿಗೆಯನ್ನು ಹೊಂದಲಾರದು. ದೇಶದಲ್ಲಿ ಕಳ್ಳಕಾಕರ ಭೀತಿಯಿದ್ದರೆ ವ್ಯವಸಾಯ ಕೈಗಾರಿಕೆಗಳು ಚೆನ್ನಾಗಿ ನಡೆಯುವುದಿಲ್ಲವಾದುದರಿಂದ ವ್ಯಾಪಾರವೂ ಕ್ಷೀಣವಾಗುವುದು. ಕಂದಾಯಗಳೂ ಸುಂಕಗಳೂ ಹೆಚ್ಚಾಗಿದ್ದರೂ ಪರದೇಶದವರು ಅಲ್ಲಿ ವ್ಯಾಪಾರವನ್ನು ಮಾಡಕೂಡದೆಂದು ಸರ್ಕಾರದವರು ನಿರ್ಬಂಧಪಡಿಸಿದರೂ ವ್ಯಾಪಾರವು ಕಡಿಮೆಯಾಗುವುದು.

(6) ಫಲವತ್ತಾದ ನೆಲವೂ, ಹೇರಳವಾದ ಖನಿಜಗಳೂ ಇದ್ದು; ಹೆಚ್ಚು ಜನಸಾಂದ್ರತೆಯೂ, ಪ್ರೌಢವಿದ್ಯೆಗಳ ಮತ್ತು ಕುಶಲ ವಿದ್ಯೆಗಳ ಪರಿಶ್ರಮವೂ ಜನರಿಗೆ ಇದ್ದಷ್ಟೂ ವ್ಯಾಪಾರವು ವೃದ್ಧಿಯಾಗುವ ಅನುಕೂಲಗಳು ಹೆಚ್ಚುವುವು.

ಈ ಮೇಲಿನ ಅನುಕೂಲಗಳಲ್ಲಿ ಎಷ್ಟು ಆನುಕೂಲ್ಯವಿದ್ದರೆ ಅಷ್ಟೂ ಉತ್ತಮ. ಬ್ರಿಟಿಷ್ ದ್ವೀಪಗಳಿಗೆ ಈ ಆನುಕೂಲ್ಯಗಳೆಲ್ಲ ಇರುವುದರಿಂದಲೇ ಬ್ರಿಟಿಷ್ ಜನರು ವ್ಯಾಪಾರದಲ್ಲಿ ಅದ್ವಿತೀಯರಾಗಿರುವರು.

**40. ಭೂಮಾರ್ಗ ಮತ್ತು ಜಲಮಾರ್ಗಗಳು.**—ಮೇಲೆ ಸೂಚಿಸಿರುವ ಸೌಕರ್ಯಗಳಲ್ಲಿ ವ್ಯಾಪಾರಾಭಿವೃದ್ಧಿಗೆ ಭೂಮಾರ್ಗ ಮತ್ತು ಜಲಮಾರ್ಗಗಳು ಬಹು ಮುಖ್ಯವಾದುವು. ಒಂದು ದೇಶದಲ್ಲಿ ಬೆಳೆಗಳೂ, ಖನಿಜಗಳೂ, ಕೈಗಾರಿಕೆಗಳೂ ಬಹಳ ಹೆಚ್ಚಾಗಿದ್ದರೂ ಅನುಕೂಲವಾದ ಮಾರ್ಗಗಳಿಲ್ಲದಿದ್ದರೆ ಅಲ್ಲಿ ವ್ಯಾಪಾರ ಹೆಚ್ಚಾಗಿ ನಡೆಯಲಾರದು. ವ್ಯಾಪಾರ ಕಡಿಮೆಯಾದಷ್ಟೂ

ಕೃಷಿ ಮತ್ತು ಕೈಗಾರಿಕೆಗಳ ಅಭಿವೃದ್ಧಿಯೂ ಕಡಿಮೆಯಾಗುವುದು. ಆದುದರಿಂದಲೇ ನಾಗರಿಕರಾದ ಪ್ರತಿಯೊಂದು ಜನಾಂಗದವರೂ ತಮ್ಮ ದೇಶದ ಭೂಮಾರ್ಗ ಮತ್ತು ಜಲಮಾರ್ಗಗಳನ್ನು ವೃದ್ಧಿಪಡಿಸಿಕೊಳ್ಳುತ್ತಲಿರುವರು.

(1) **ಭೂಮಾರ್ಗಗಳು.**—ಸಾಮಾನ್ಯವಾಗಿ ಎಲ್ಲಾ ದೇಶಗಳಲ್ಲಿಯೂ ಭೂಮಾರ್ಗವಾಗಿಯೇ ಒಳದೇಶದ ವ್ಯಾಪಾರವು ನಡೆಯುವುದು. ಸಮುದ್ರ ತೀರದಲ್ಲಿರುವ ಸ್ವಿಟ್ಜರ್ಲೆಂಡು ಮೊದಲಾದ ದೇಶಗಳಲ್ಲಿ ಪರದೇಶದ ವ್ಯಾಪಾರವೂ ಹೀಗೆಯೇ ನಡೆಯುತ್ತಿರುವುದು.

(a) **ಗಾಡಿಯ ರಸ್ತೆಗಳು.**—ಭೂಮಾರ್ಗವಾಗಿ ಸಂಚಾರ ಮಾಡುವುದಕ್ಕೆ ರಸ್ತೆಗಳು ಇರಬೇಕು. ಒಂದೂರಿನಿಂದ ಇನ್ನೊಂದೂರಿಗೆ ಎತ್ತಿನಗಾಡಿ, ಕುದುರೆಯಗಾಡಿ, ಮೋಟಾರ್ ಗಾಡಿಗಳಲ್ಲಿ ಪ್ರಯಾಣ ಮಾಡಬೇಕಾದರೂ, ರೈಲು ಮಾರ್ಗವಿಲ್ಲದ ಕಡೆಗೆ ಸಾಮಾನುಗಳನ್ನು ಸಾಗಿಸಬೇಕಾದರೂ ಗಾಡಿಯ ರಸ್ತೆಗಳಿದ್ದೇ ತೀರಬೇಕು.

ಒಂದು ಪ್ರದೇಶದಲ್ಲಿ ಕೆಲವು ಅನುಕೂಲತೆಗಳು ಕಂಡುಬಂದರೆ ಗಾಡಿಯ ರಸ್ತೆಗಳು ವಿಶೇಷವಾಗಿರಬಹುದೆಂದು ಊಹಿಸಬಹುದು. ಈ ಅನುಕೂಲತೆಗಳಲ್ಲಿ ಮುಖ್ಯವಾದುವು ಯಾವುವೆಂದರೆ:—

(i) **ರಸ್ತೆಗಳು ಆವಶ್ಯಕವಾಗಿ ಅಥವಾ ಲಾಭಕರವಾಗಿ ಇರಬೇಕು.**—ರಸ್ತೆಗಳನ್ನು ಹಾಕುವುದಕ್ಕೂ ಅವುಗಳನ್ನು ಆಗಾಗ ರಿಪೇರಿಮಾಡುವುದಕ್ಕೂ ಹಣ ಬೇಕಾಗುವುದರಿಂದ ಮರುಭೂಮಿಗಳಲ್ಲಿಯೂ ಜನಸಾಂದ್ರತೆ ಕಡಿಮೆಯಾಗಿರುವ ಪ್ರದೇಶಗಳಲ್ಲಿಯೂ ರಸ್ತೆಗಳು ಬಹು ಕಡಿಮೆಯಾಗಿರುವುವು. ಆದರೆ ಬೆಳೆ ಮತ್ತು ಖನಿಜಗಳು ಹೆಚ್ಚಾಗಿರುವ ಪ್ರದೇಶಗಳಿಗೂ ಯಾತ್ರಾಸ್ಥಳಗಳಿಗೂ, ರೈಲ್ವೆಸ್ಟೇಷನ್‌ಗಳಿಗೂ, ಬಂದರುಗಳಿಗೂ ಅನೇಕ ರಸ್ತೆಗಳನ್ನು ಮಾಡಿರುವರು. ಆಫ್ರಿಕ ಖಂಡದಲ್ಲಿ ಅನೇಕ ಮರುಭೂಮಿಗಳಿರುವುದರಿಂದಲೂ, ಜನಸಾಂದ್ರತೆ ಕಡಿಮೆಯಾಗಿರುವುದರಿಂದಲೂ ಅಲ್ಲಿ ಇತರ ಖಂಡಗಳಿಗಿಂತ ರಸ್ತೆಗಳು ಕಡಿಮೆಯಾಗಿರುವುವು. ವಿಶೇಷವಾಗಿ ಬೆಳೆಯಾಗುವ ಗಂಗಾನದಿಯ ಮೈದಾನದಲ್ಲಿ ಅನೇಕ ರಸ್ತೆಗಳಿರುವುವು. ಶ್ರೀರಂಗ, ಕಾಶಿ ಮೊದಲಾದ ಯಾತ್ರಾಸ್ಥಳಗಳಿಗೂ ಬೆಂಗಳೂರು, ಬೊಂಬಾಯಿ ಮೊದಲಾದ ವ್ಯಾಪಾರ ಮತ್ತು ಕೈಗಾರಿಕೆಗಳಿಗೆ ಪ್ರಸಿದ್ಧವಾದ ಪಟ್ಟಣಗಳಿಗೂ ಅನೇಕ ಕಡೆಗಳಿಂದ ರಸ್ತೆಗಳು ಬಂದು ಸೇರುವುವು. ಈ ರಸ್ತೆಗಳೆಲ್ಲ ಜನರಿಗೆ ಅತ್ಯಂತ ಲಾಭಕರವಾಗಿರುವುವು.

ಕೆಲವು ಸಂದರ್ಭಗಳಲ್ಲಿ ರಸ್ತೆಗಳು ಲಾಭಕರವಾಗಿಲ್ಲದಿದ್ದರೂ ಅತ್ಯಂತ ಆವಶ್ಯಕವಾಗಿರುವುವು. ಗೇರುಸೊಪ್ಪೆಯಲ್ಲಿ ನೋಡುವುದಕ್ಕೆ ಮನೋಹರ

ವಾದ ಜಲಪಾತವಿರುವುದರಿಂದ ಅಲ್ಲಿಗೆ ರಸ್ತೆಯನ್ನು ಹಾಕಿರುವರು. ಪಿಷಾವರ್ ಸಮೀಪದಲ್ಲಿಯೂ ಬೆಲೂಚಿಸ್ಥಾನದಲ್ಲಿಯೂ ವ್ಯಾಪಾರವೂ ಜನಸಂಚಾರವೂ ಬಹು ಕಡಿಮೆಯಾಗಿರುವುದರಿಂದ ರಸ್ತೆಗಳು ಲಾಭಕರವಾಗಿಲ್ಲ. ಆದರೆ ನಮ್ಮ ದೇಶಕ್ಕೆ ಶತ್ರುಭಯವುಂಟಾದರೆ ಸೈನ್ಯಗಳು ಅಲ್ಲಲ್ಲಿ ಜಾಗ್ರತೆಯಾಗಿ ಸಂಚರಿಸ ಬೇಕಾಗಿರುವುದರಿಂದ ಅನೇಕ ರಸ್ತೆಗಳನ್ನು ಮಾಡಿರುವರು.

(ii) **ರಸ್ತೆಗಳನ್ನು ಹಾಕುವುದಕ್ಕೆ ಸ್ವಾಭಾವಿಕವಾದ ಅನುಕೂಲ ಗಳೂ ಇರಬೇಕು.**—ಬೆಟ್ಟ ಗುಡ್ಡಗಳಿಂದ ಕೂಡಿದ ಪ್ರದೇಶದಲ್ಲಿ ರಸ್ತೆಗಳನ್ನು ಹಾಕುವುದು ಬಹಳ ಕಷ್ಟ. ಆದರೆ ಅದು ಮೈದಾನ ಪ್ರದೇಶದಲ್ಲಿ ಬಹು ಸುಲಭವಾದುದರಿಂದ ಸಾಮಾನ್ಯವಾಗಿ ಬೆಟ್ಟಸೀಮೆಗಳಲ್ಲಿ ರಸ್ತೆಗಳು ಕಡಿಮೆ. ಗಂಗಾನದಿಯ ಮೈದಾನದಲ್ಲಿ ವಿಶೇಷವಾಗಿರುವುವು. ಅನಾರೋಗ್ಯ ಸ್ಥಳಗಳಲ್ಲಿ ರಸ್ತೆಗಳನ್ನು ಹಾಕಲು ಹೆಚ್ಚು ಕೂಲಿಯನ್ನು ಕೊಡಬೇಕಾಗುವುದರಿಂದ ಅಂಥ ಪ್ರದೇಶದಲ್ಲಿಯೂ ರಸ್ತೆಗಳು ಕಡಿಮೆ. ನಮ್ಮ ಸೀಮೆಯ ಮಲೆನಾಡಿನಲ್ಲಿ ಬೈಲು ಸೀಮೆಗಿಂತ ರಸ್ತೆಗಳು ಕಡಿಮೆಯಾಗಿರುವುದಕ್ಕೆ ಇದೂ ಒಂದು ಕಾರಣ.

(b) **ರೈಲು (ಅಥವಾ ಕಬ್ಬಿಣದ ಕಂಬಿಯ ಮಾರ್ಗ).**—ಒಂದು ಪ್ರದೇಶದಲ್ಲಿ ರೈಲು ಮಾರ್ಗಗಳನ್ನು ಹಾಕುವುದಕ್ಕೆ ಗಾಡಿಯ ರಸ್ತೆಗಳನ್ನು ಹಾಕುವುದರಲ್ಲಿ ತೋರಿಬರುವ ಅನುಕೂಲ ಪ್ರತಿಕೂಲಗಳೇ ವಿಶೇಷವಾಗಿ ತೋರಿ ಬರುವುವು. ಪರ್ವತ ಸೀಮೆಯಲ್ಲಿ ರೈಲು ಮಾರ್ಗಗಳನ್ನು ಹಾಕಲು ಬಹಳ ಹೆಚ್ಚು ಹಣ ಖರ್ಚಾಗುವುದು. ಆದರೆ ಮೈದಾನಗಳಲ್ಲಿ ಇವನ್ನು ಸಿದ್ಧಮಾಡುವುದು ಸುಲಭ. ಗಾಡಿಯ ರಸ್ತೆಗಳಿಂದ ಎಲ್ಲಿ ವಿಶೇಷ ಲಾಭವಿರುವುದೋ ಅಲ್ಲಿ ಹೆಚ್ಚು ಖರ್ಚಾದರೂ ರೈಲು ಮಾರ್ಗಗಳನ್ನು ಹಾಕುವರು. ಜನಸಾಂದ್ರತೆ ಹೆಚ್ಚಾಗಿರುವ ಬಂಗಾಳ ಮೊದಲಾದ ಪ್ರದೇಶಗಳಲ್ಲಿಯೂ, ಅನೇಕ ಯಾತ್ರಾಸ್ಥಳಗಳುಳ್ಳ ಇಂಡಿಯಾದೇಶದ ದಕ್ಷಿಣ ಭಾಗ ಮೊದಲಾದ ಪ್ರದೇಶಗಳಲ್ಲಿಯೂ, ಹೆಚ್ಚಾಗಿ ಸರಕುಗಳನ್ನು ರಫ್ತುಮಾಡುವ ಬೊಂಬಾಯಿ, ಪಂಜಾಬ್ ಮೊದಲಾದ ಪ್ರದೇಶ ಗಳಲ್ಲಿಯೂ ರೈಲು ಮಾರ್ಗಗಳನ್ನು ಹಾಕುವುದು ಬಹು ಲಾಭಕರವಾಗಿರುವುದ ರಿಂದ ಅಲ್ಲಿ ಅನೇಕ ರೈಲು ಮಾರ್ಗಗಳಿರುವುವು. ಇಂಡಿಯಾದೇಶದ ವಾಯುವ್ಯದ ಸರಹದ್ದಿನ ಪ್ರಾಂತದಲ್ಲಿ ರೈಲು ಮಾರ್ಗಗಳಿಂದ ವಿಶೇಷ ಲಾಭವಿಲ್ಲದಿದ್ದರೂ, ಸೈನ್ಯದ ಸಂಚಾರಕ್ಕೆ ಅನುಕೂಲವಾಗಿರುವಂತೆ ರೈಲು ಮಾರ್ಗಗಳನ್ನು ಮಾಡಿರುವರು.

(c) **ಕಾರವಾನ್ ದಾರಿಗಳು.**—ಅರೇಬಿಯ, ತುರ್ಕಿಸ್ಥಾನ, ಸಹರ, ಸೂಡಾನ್ ಮೊದಲಾದ ಮರುಭೂಮಿ ಪ್ರದೇಶಗಳಲ್ಲಿ ಗಾಡಿಯ ರಸ್ತೆಗಳಾಗಲಿ, ರೈಲು ಮಾರ್ಗಗಳಾಗಲಿ ಇಲ್ಲ. ಅಲ್ಲಿ ರಸ್ತೆಗಳನ್ನು ಹಾಕುವುದು ಬಹು ಕಷ್ಟ.

ಅಲ್ಲದೆ ಲಾಭಕರವೂ ಅಲ್ಲ. ಹಾಗಾದರೆ ಈ ಪ್ರದೇಶಗಳಲ್ಲಿ ಪ್ರಯಾಣಮಾಡು ವುದು ಹೇಗೆ?

ಈ ಪ್ರದೇಶಗಳಲ್ಲಿ ಒಂಟೆಯಲ್ಲದೆ ಮತ್ತಾವ ಪ್ರಾಣಿಯೂ ಪ್ರಯಾಣ ಮಾಡಲಾರದು. ಆದುದರಿಂದ ಅಲ್ಲಿನ ಜನರು ಒಂಟೆಗಳ ಮೇಲೆ ಕುಳಿತುಕೊಂಡು ಪ್ರಯಾಣಮಾಡುವರು. ವ್ಯಾಪಾರದ ಸರಕುಗಳನ್ನು ಒಂಟೆಗಳ ಮೇಲೆ ಹೇರಿ ಸಾಗಿಸುವರು. ಮರುಭೂಮಿಯಲ್ಲಿ ಒಂಟಿಯಾಗಿ ಪ್ರಯಾಣಮಾಡುವುದು ಅಪಾಯಕರವಾದುದರಿಂದ, ನೂರಾರು ಜನರು ಒಟ್ಟಾಗಿ ಸೇರಿ ಆಯುಧ ಪಾಣಿಗಳಾಗಿ ಪ್ರಯಾಣಮಾಡುವರು. ಈ ಪ್ರಯಾಣಿಕರ ಜೀವನವು ಬಹು ಕಷ್ಟವಾದುದು. ಇವರು ಪ್ರಯಾಣಮಾಡುವಾಗ ಮರುಭೂಮಿಗಳಲ್ಲಿ ನೀರಿಗೆ ವಸತಿ ಇರುವ ಓಯಸಿಸ್‌ಗಳ ಬಳಿ ತಂಗುವರು. ಮರುಭೂಮಿಗಳಲ್ಲಿ ಓಯಸಿಸ್ ಗಳು ಬಹಳ ವಿರಳವಾಗಿರುವುದರಿಂದ ಕೆಲವು ವೇಳೆ ಇವರು ಮಧ್ಯೆ ತಂಗದೆ ಅನೇಕ ದಿನಗಳವರೆಗೂ ಪ್ರಯಾಣಮಾಡುತ್ತಲೇ ಇರಬೇಕಾಗುವುದು. ಅತಿ ಪ್ರಚಂಡವಾದ ಬಿಸಿಲೂ, ಬಿಸಿಲಿನಿಂದ ಕಾದ ಮರಳಿನ ಬೇಗೆಯೂ, ಮರಳಿನಿಂದ ತುಂಬಿದ ಗಾಳಿಯೂ ಇವರಿಗೆ ಹಿಂಸೆಯನ್ನುಂಟುಮಾಡುವುವು. ಇವರು ಆಹಾರಕ್ಕಾಗಿ ಖರ್ಜೂರವನ್ನೂ, ಕುಡಿಯುವುದಕ್ಕಾಗಿ ಚರ್ಮದ ಚೀಲಗಳಲ್ಲಿ ತುಂಬಿದ ನೀರನ್ನೂ ತಮ್ಮ ಜೊತೆಯಲ್ಲಿಯೇ ತೆಗೆದುಕೊಂಡು ಹೋಗುವರು.

ಮರುಭೂಮಿಯಲ್ಲಿ ಪ್ರಯಾಣಮಾಡುವುದಕ್ಕೆ ಒಂಟೆಯೊಂದೇ ಅತ್ಯಂತ ಉಪಯೋಗವಾದ ಪ್ರಾಣಿಯಾಗಿದೆ. ಒಂಟೆಗಳು ಅನೇಕ ದಿನಗಳವರೆಗೆ ಸಾಕಾಗು ವಷ್ಟು ನೀರನ್ನೂ ಒಟ್ಟಿಗೆ ಒಂದೇ ಸಲ ಕುಡಿಯಬಲ್ಲವು. ಕೆಲವು ದಿನಗಳು ಆಹಾರವಿಲ್ಲದೆ ಹೋದರೂ ಇರಬಲ್ಲವು. ಒಂಟೆಗಳ ಪಾದಗಳು ಅಗಲವಾಗಿರು ವುದರಿಂದ ಮರಳಿನಲ್ಲಿ ಹೂತುಕೊಳ್ಳುವುದಿಲ್ಲ. ಹಡಗುಗಳಿಲ್ಲದೆ ಸಮುದ್ರದ ಮೇಲೆ ಪ್ರಯಾಣ ಮಾಡುವುದು ಹೇಗೆ ಅಸಾಧ್ಯವೋ ಹಾಗೆಯೇ ಒಂಟೆಗಳಿಲ್ಲ ದಿದ್ದರೆ ಮರುಭೂಮಿಯಲ್ಲಿ ಪ್ರಯಾಣಮಾಡುವುದೂ ಅಸಾಧ್ಯ. ಆದುದರಿಂದ ಒಂಟೆಯನ್ನು 'ಮರುಭೂಮಿಯ ಹಡಗು' ಎಂದು ಕರೆಯುವರು.

ಮರುಭೂಮಿಗಳಲ್ಲಿ ಇಷ್ಟು ಕಷ್ಟಪಟ್ಟು ಪ್ರಯಾಣಮಾಡುವುದಕ್ಕೆ ಬಹು ಲಾಭಕರವಾದ ವ್ಯಾಪಾರವೇ ಕಾರಣ. ಇಲ್ಲಿನ ಜನರು ಯೌವನದಲ್ಲಿ ವ್ಯಾಪಾರ ದಿಂದ ಹಣವನ್ನು ಸಂಪಾದಿಸಿ ಮುಪ್ಪಿನಲ್ಲಿ ಸುಖವಾಗಿ ಜೀವಿಸುವರು. ಈ ಮೇರೆ ಒಂಟೆಗಳ ಮೇಲೆ ಮರುಭೂಮಿಗಳಲ್ಲಿ ವ್ಯಾಪಾರಕ್ಕೋಸ್ಕರ ಸಂಚಾರಮಾಡುವ ಪ್ರಯಾಣಿಕರ ಗುಂಪಿಗೆ 'ಕಾರವಾನ್'ಗಳೆಂದು ಹೆಸರು. ಈ ಕಾರವಾನ್‌ಗಳು ಮರುಭೂಮಿಗಳಲ್ಲಿ ಒಂದು ಗೊತ್ತಾದ ದಾರಿಯಲ್ಲಿ ಪ್ರಯಾಣಮಾಡುವುವು. ಈ ಹಾದಿಗಳನ್ನು ಕಾರವಾನ್ ದಾರಿಗಳೆಂದು ಕರೆಯುವರು.

***(2) ಸಾಗರದಲ್ಲಿರುವ ಮುಖ್ಯವಾದ ವ್ಯಾಪಾರ ಮಾರ್ಗಗಳು.**– ಅಟ್ಲಾಂಟಿಕ್ ಸಾಗರದ ಮಾರ್ಗವಾಗಿ ನಡೆಯುವಷ್ಟು ವ್ಯಾಪಾರವು ಮತ್ತಾವ ಸಾಗರದ ಮಾರ್ಗವಾಗಿಯೂ ನಡೆಯುವುದಿಲ್ಲ. ಈ ಸಾಗರದ ಪೂರ್ವ ಪಶ್ಚಿಮಗಳಲ್ಲಿ ಎತ್ತರವಾದ ಬಂದರುಗಳೂ, ಸಂಪದ್ಯುಕ್ತವಾದ ದೇಶಗಳೂ ಇರುವುದೇ ಇದಕ್ಕೆ ಕಾರಣ. ಇಲ್ಲಿ ಸಂಚಾರ ಮಾಡುವ ಹಡಗುಗಳಲ್ಲಿ ಹೆಚ್ಚು ಭಾಗ ಬ್ರಿಟಿಷರದಾಗಿದೆ. ಈ ಸಾಗರದ ಮಾರ್ಗವಾಗಿ ಹಡಗುಗಳು ಇಂಗ್ಲೆಂಡಿನಲ್ಲಿರುವ ಲಂಡನ್, ಪ್ಲಿಮತ್ ಮೊದಲಾದ ಬಂದರುಗಳಿಂದ ಅಮೆರಿಕದಲ್ಲಿರುವ ಕ್ವಿಬೆಕ್, ನ್ಯೂಯಾರ್ಕ್, ನ್ಯೂ ಆರ್ಲಿಯನ್ಸ್, ರೈಯೋಡಿಜನೈರೊ ಬಂದರುಗಳಿಗೂ, ಆಫ್ರಿಕದಲ್ಲಿರುವ ಕೇಪ್‌ಟೌನಿಗೂ ಹೋಗುವುವು. ಲಿವರ್‌ಪೂಲಿನಿಂದ ಕ್ವಿಬೆಕ್ಕಿಗೆ ಸುಮಾರು 2,500 ಮೈಲಿ ದೂರವಿರುವುದು. ಆದರೂ ಹಡಗುಗಳು 8 ದಿವಸಗಳಲ್ಲಿ ಲಿವರ್‌ಪೂಲಿನಿಂದ ಕ್ವಿಬೆಕ್ಕನ್ನು ತಲಪುವುವು. ನ್ಯೂಯಾರ್ಕಿಗೆ 3,000 ಮೈಲಿ ದೂರವಿದೆ. ಹಡಗುಗಳು ಸುಮಾರು 10 ದಿನಗಳಲ್ಲಿ ಅಲ್ಲಿಗೆ ಹೋಗುವುವು. ಹೀಗೆಯೇ ಈ ಸಾಗರದ ಮೂಲಕ ಜರ್ಮನಿ, ಫ್ರಾನ್ಸ್, ಪೋರ್ಚುಗಲ್ ಮೊದಲಾದ ದೇಶದ ರೇವು ಪಟ್ಟಣಗಳಿಂದ ಅಮೆರಿಕ, ಆಫ್ರಿಕ ಖಂಡಗಳ ರೇವು ಪಟ್ಟಣಗಳಿಗೆ ಹೊಗೆಯ ಜಹಜುಗಳು ಪ್ರಯಾಣಮಾಡುವುವು.

ಇಂಗ್ಲೆಂಡು ದೇಶದಿಂದ ಹೊರಟು ಗುಡ್‌ಹೋಪ್ ಭೂಶಿರದ ಮಾರ್ಗವಾಗಿ ಹಿಂದೂಸಾಗರಕ್ಕೆ ಬಂದು, ಅದರ ಮತ್ತು ಪೆಸಿಫಿಕ್ ಸಾಗರದ ಮಾರ್ಗವಾಗಿ ಆಸ್ಟ್ರೇಲಿಯಕ್ಕೂ, ಚೀನಾ, ಜಪಾನ್ ದೇಶಗಳಿಗೂ ಜಹಜುಗಳು ಹೋಗಿ ಬರುವುವು. ಇಂಗ್ಲೆಂಡಿನಿಂದ ಹೊರಟು ಜಹಜುಗಳು ಜಿಬ್ರಾಲ್ಟರ್ ಜಲಸಂಧಿ, ಮೆಡಿಟರೇನಿಯನ್ ಸಮುದ್ರ, ಸೂಯಿಸ್ ಕಾಲುವೆ, ಕೆಂಪುಸಮುದ್ರ, ಅರೇಬಿಯನ್ ಸಮುದ್ರಗಳ ಮಾರ್ಗವಾಗಿ ಇಂಡಿಯಾದೇಶಕ್ಕೆ ಬರುವುವು. ಅಮೆರಿಕ ಖಂಡದ ಪಶ್ಚಿಮ ಭಾಗಕ್ಕೂ, ಏಷ್ಯ ಖಂಡದ ಪೂರ್ವ ಭಾಗಕ್ಕೂ ಪೆಸಿಫಿಕ್ ಸಾಗರದ ಮಾರ್ಗವಾಗಿ ವ್ಯಾಪಾರವು ನಡೆಯುವುದು. ಈ ಮಾರ್ಗಗಳು ನ್ಯೂಜೀಲೆಂಡಿನಲ್ಲಿರುವ ಆಕ್ಲೆಂಡು ರೇವುಪಟ್ಟಣವನ್ನೂ, ಸಾಂಡ್ವಿಚ್ ದ್ವೀಪಗಳಲ್ಲಿರುವ ಹೊನಲುಲು ರೇವುಪಟ್ಟಣವನ್ನೂ ಸಂಧಿಸುವುವು.*

ಉತ್ತರ ದಕ್ಷಿಣ ಸಾಗರಗಳ ನೀರು ಶೀತದಿಂದ ವಿಶೇಷವಾಗಿ ಗಡ್ಡೆ ಕಟ್ಟಿಕೊಂಡಿರುವುದರಿಂದ ಅಲ್ಲಿ ವ್ಯಾಪಾರ ನಡೆಯುವುದೇ ಬಹಳ ಕಡಿಮೆ.

---

* ಕೆಲವು ಮುಖ್ಯವಾದ ಮಾರ್ಗಗಳನ್ನು ಹುಡುಗರು ಮರ್ಕೇಟರನ ಪ್ರಪಂಚದ ಭೂಪಟದಲ್ಲಿ ತೋರಿಸಲಿ. ಅಲ್ಲಲ್ಲಿರುವ ಹಡಗುಗಳು ನಿಲ್ಲುವುದಕ್ಕೆ ಅನುಕೂಲವಾದ ಸ್ಥಳಗಳನ್ನೂ ಈ ಮಾರ್ಗಗಳು ಹೇಗೆ ಅನುಸರಿಸುವುವೆಂಬುದನ್ನೂ ಅವರಿಗೆ ಸ್ಪಷ್ಟಪಡಿಸಿ.

(3) **ಉತ್ತಮವಾದ ಬಂದರಿನ ಲಕ್ಷಣಗಳು.**—ಒಂದು ದೇಶದ ಸಾಗರ ವ್ಯಾಪಾರಕ್ಕೆ ಉತ್ತಮವಾದ ಬಂದರುಗಳೇ ಬಹು ಆವಶ್ಯಕವಾದ ಅನುಕೂಲ. ಮನುಷ್ಯರು ವಾಸಮಾಡುವುದಕ್ಕೆ ಹೇಗೆ ಮನೆಯು ಬೇಕೋ, ಹಾಗೆಯೇ ಜಹಜುಗಳು ನಿಲ್ಲುವುದಕ್ಕೆ ಅನುಕೂಲವಾದ ಬಂದರುಗಳು ಇರಬೇಕು. ಮನೆಗೆ ಸನ್ನಿವೇಶ, ಪ್ರಮಾಣ, ಕಟ್ಟಿರುವ ರೀತಿ ಮೊದಲಾದ ಸೌಕರ್ಯಗಳು ಹೇಗೆ ಆವಶ್ಯಕವೋ ಹಾಗೆಯೇ ಬಂದರುಗಳಿಗೂ ಸನ್ನಿವೇಶ, ವಿಸ್ತಾರ, ಆಳ ಮೊದಲಾದ ಸೌಕರ್ಯಗಳು ಆವಶ್ಯಕ.

ಒಂದು ಬಂದರು ಉತ್ತಮವಾಗಿರಬೇಕಾದರೆ ಅದಕ್ಕೆ ಯಾವ ಯಾವ ಲಕ್ಷಣಗಳಿರಬೇಕೆಂದರೆ :—

(1) **ಬಂದರು ವಿಶಾಲವಾಗಿರಬೇಕು.**—ಹಾಗಿಲ್ಲದಿದ್ದರೆ ಹೆಚ್ಚು ಹಡಗುಗಳು ನಿಲ್ಲುವುದಕ್ಕೆ ಅವಕಾಶವಿರುವುದಿಲ್ಲ.

(2) **ಬಂದರಿನ ಬಳಿ ನೀರು ಆಳವಾಗಿರಬೇಕು.**—ಹಿಂದಿನ ಕಾಲದ ಹಡಗುಗಳಿಗಿಂತ ಈಗಿನ ಕಾಲದ ಹಡಗುಗಳು ಬಹು ದೊಡ್ಡವಾಗಿರುವುದರಿಂದ ಅವು ನೀರು ಆಳವಿಲ್ಲದ ಕಡೆಗೆ ಬರಲಾರವು. ಮಂಗಳೂರು ಮೊದಲಾದ ನಮ್ಮ ದೇಶದ ಪಶ್ಚಿಮ ತೀರದ ಬಂದರುಗಳಲ್ಲಿ ನೀರು ಆಳವಾಗಿಲ್ಲದುದರಿಂದ ದೊಡ್ಡ ಹಡಗುಗಳು ಅಲ್ಲಿ ನಿಲ್ಲಲಾರವು. ಬಹಳ ಆಳವಾಗಿರುವುದರಿಂದ ಕೊಲಂಬೋ ಬಂದರು ಹಡಗುಗಳು ನಿಲ್ಲುವುದಕ್ಕೆ ಬಹು ಅನುಕೂಲವಾಗಿದೆ. ಕಲ್ಕತ್ತಾ ಮೊದಲಾದ ಬಂದರುಗಳಲ್ಲಿ ಅಲೆಗಳಿಂದ ತರಲ್ಪಟ್ಟ ಮರಳಿನಿಂದ ಆಳವು ಕಡಿಮೆಯಾಗುವುದು. ಯಂತ್ರಗಳ ಸಹಾಯದಿಂದ ಮರಳನ್ನು ತೆಗೆದುಹಾಕಿ ಆಳವನ್ನು ಹೆಚ್ಚಿಸಿಕೊಳ್ಳುವರು.

(3) **ಬಂದರಿನ ಕಡೆಗೆ ಬಿರುಗಾಳಿ ನುಗ್ಗದಂತಿರಬೇಕು.**—ಬೊಂಬಾಯಿ ದ್ವೀಪವು ಪಶ್ಚಿಮದಿಂದ ಬೀಸುವ ಅರೇಬಿಯನ್ ಸಮುದ್ರದ ಬಿರುಗಾಳಿಯನ್ನು ತಡೆಯುವುದರಿಂದ ಅದರ ಪೂರ್ವ ದಿಕ್ಕಿನಲ್ಲಿರುವ ಬೊಂಬಾಯಿ ಬಂದರಿನಲ್ಲಿ ಹಡಗುಗಳು ಸುರಕ್ಷಿತವಾಗಿ ನಿಲ್ಲಬಹುದು.

(4) **ಬಂದರಿನ ಸಮೀಪದ ಪ್ರದೇಶಗಳು ಸಂಪದ್ಯುಕ್ತವಾಗಿರಬೇಕು.**—ಕರಾಚಿ ಬಂದರು ಅತ್ಯಂತ ಅನುಕೂಲವಾಗಿದ್ದರೂ ಅದರ ಸಮೀಪದ ಪ್ರದೇಶವು ಸಾಮಾನ್ಯವಾಗಿ ಮರುಭೂಮಿಯಾಗಿರುವುದರಿಂದ ವ್ಯಾಪಾರವು ಕಡಿಮೆ. ಪಂಜಾಬಿನಿಂದ ಕಳುಹಿಸುವ ಗೋಧಿಯೇ ಇಲ್ಲಿನ ಮುಖ್ಯವಾದ ವ್ಯಾಪಾರದ ಸರಕಾಗಿದೆ. ಬೊಂಬಾಯಿ ಬಳಿ ಹತ್ತಿ ಹೆಚ್ಚಾಗಿ ಬೆಳೆಯುವುದರಿಂದ ಅಲ್ಲಿನ ವ್ಯಾಪಾರ ಹೆಚ್ಚು. ಕಲ್ಕತ್ತೆಯ ಬಳಿ ವಿಶೇಷವಾಗಿ ಬತ್ತ, ಸಣಬು

ಮೊದಲಾದ ಪದಾರ್ಥಗಳು ಬೆಳೆಯುವುದರಿಂದಲೂ, ಜನಸಾಂದ್ರತೆ ಹೆಚ್ಚಾಗಿರುವುದರಿಂದಲೂ ಅಲ್ಲಿನ ವ್ಯಾಪಾರವು ಇನ್ನೂ ಹೆಚ್ಚು.

(5) **ಬಂದರಿನ ವಾಯುಗುಣವು ಹಿತಕರವಾಗಿರಬೇಕು.**—ಆಫ್ರಿಕದ ಗಿನೀ ತೀರದಲ್ಲಿ ಜೌಗು ಪ್ರದೇಶಗಳು ಹೆಚ್ಚಾಗಿರುವುದರಿಂದ ಅಲ್ಲಿನ ಬಂದರುಗಳು ವ್ಯಾಪಾರಕ್ಕೆ ಅನುಕೂಲವಾಗಿಲ್ಲ. ಏಡನ್ ರೇವುಪಟ್ಟಣದಲ್ಲಿ ಸೆಕೆ ಹೆಚ್ಚಾಗಿರುವುದರಿಂದಲೂ, ಸಿಹಿನೀರು ಸಿಕ್ಕುವುದು ಕಷ್ಟವಾಗಿರುವುದರಿಂದಲೂ ಅದು ಜನರ ವಾಸಕ್ಕೆ ಅನುಕೂಲವಾಗಿಲ್ಲ. ಆದುದರಿಂದ ಏಡನ್ ಬಂದರು ಇಂಗ್ಲೆಂಡಿನಿಂದ ಇಂಡಿಯಾದೇಶಕ್ಕೆ ಬರುವ ಸಾಗರ ಮಾರ್ಗದಲ್ಲಿದ್ದರೂ ಹೆಚ್ಚು ಪ್ರಾಮುಖ್ಯತೆಯನ್ನು ಪಡೆಯಲು ಅವಕಾಶವಾಗಲಿಲ್ಲ.

(6) **ಬಂದರುಗಳ ಬಳಿ ಕಲ್ಲಿದ್ದಲು ಸಿಕ್ಕುತ್ತಿದ್ದರೆ ಹಡಗುಗಳಿಗೆ ಹೆಚ್ಚು ಅನುಕೂಲವು.**—ಕೆನಡಾ ದೇಶದಲ್ಲಿರುವ ಎಸ್ಕಿಮಾಲ್ಟ್, ಆಸ್ಟ್ರೇಲಿಯದಲ್ಲಿರುವ ಮೆಲ್ಬೋರ್ನ್ ಮೊದಲಾದ ಬಂದರುಗಳಲ್ಲಿ ಈ ಸೌಕರ್ಯವು ವಿಶೇಷವಾಗಿರುವುದು.

(7) **ಸಾಗರ ಮಾರ್ಗಗಳ ಮಧ್ಯದಲ್ಲಿ ಬಂದರುಗಳಿದ್ದರೆ ವ್ಯಾಪಾರಕ್ಕೆ ಅನುಕೂಲ.**—ಲಂಡನ್ ಬಂದರಿನಲ್ಲಿ ಸಾಮಾನ್ಯವಾಗಿ ಮುಖ್ಯವಾದ ಎಲ್ಲಾ ಸಾಗರ ಮಾರ್ಗಗಳೂ ಸಂಧಿಸುವುವು. ಕೊಲಂಬೊ, ಸಿಂಗಪೂರ್ ಮೊದಲಾದ ಬಂದರುಗಳು ಸಾಗರ ಮಾರ್ಗಗಳ ಮಧ್ಯದಲ್ಲಿರುವುವು. ಕರಾಚಿ, ಕಲ್ಕತ್ತಾ ಬಂದರುಗಳಿಗೆ ಈ ಸೌಕರ್ಯವಿರುವುದು ಕಡಿಮೆ.

## X. ಜನಗಳು

**41. ಜನರ ಬುಡಕಟ್ಟುಗಳು.**—ಸಾಮಾನ್ಯವಾಗಿ ಪ್ರಪಂಚದ ಎಲ್ಲಾ ಭೂಪ್ರದೇಶಗಳಲ್ಲಿಯೂ ಜನರು ವಾಸಮಾಡುವರು. ಅವರೆಲ್ಲ ಎತ್ತರದಲ್ಲಿಯೂ ಮುಖಭಾವದಲ್ಲಿಯೂ ಬಣ್ಣದಲ್ಲಿಯೂ ಒಂದೇ ರೀತಿಯಾಗಿಲ್ಲ. ಇದಕ್ಕೆ ಕಾರಣವೇನೆಂದರೆ, ಅನೇಕ ಸಾವಿರ ವರ್ಷಗಳ ಹಿಂದೆ ಜನರು ಈಗಿನ ಆಫ್ರಿಕ ಖಂಡದ ಉತ್ತರ ಭಾಗದ ಒಂದೇ ಕಡೆಯಲ್ಲಿ ವಾಸಮಾಡುತ್ತಿದ್ದರು. ಕಾಲಕ್ರಮೇಣ ಅವರು ಅಲ್ಲಿಂದ ನಾನಾದಿಕ್ಕಿಗೆ ಚದರಿಹೋಗಿ ಸಾವಿರಾರು ವರ್ಷಗಳಿಂದ ಬೇರೆಬೇರೆ ಪ್ರದೇಶಗಳಲ್ಲಿ ವಾಸಮಾಡುತ್ತಿರುವರು. ಅವರಲ್ಲಿ ಒಂದೊಂದು ಪಂಗಡದವರು, ಕುಲದವರು, ಅಥವಾ ಬುಡಕಟ್ಟಿನವರು ಇತರ ದೇಶಗಳಿಗೆ ಹೋಗುತ್ತಲೂ ಇರಲಿಲ್ಲ. ಇತರ ಪಂಗಡದವರೊಡನೆ ಯಾವ ವಿಧವಾದ ಸಂಬಂಧವನ್ನೂ ಬೆಳೆಯಿಸುತ್ತಲೂ ಇರಲಿಲ್ಲ. ಇದರಿಂದ ಆಯಾ ದೇಶದ ಹವ, ಆಹಾರ ಮೊದಲಾದವುಗಳಿಗೆ ಅನುಸಾರವಾಗಿ ಆಯಾ ದೇಶದ ಜನಗಳ ವರ್ಣ ಮೊದಲಾದುವು ಬದಲಾಯಿಸಿಹೋದುವು.

ಹೀಗೆ ಮುಖಭಾವ, ಬಣ್ಣ ಮೊದಲಾದ ಲಕ್ಷಣಗಳಲ್ಲಿ ವ್ಯತ್ಯಾಸವನ್ನು ಹೊಂದಿ ನಾನಾ ಪ್ರದೇಶಗಳಲ್ಲಿ ಈಗ ವಾಸಮಾಡುತ್ತಿರುವ ಜನರನ್ನು ಮುಖ್ಯ ವಾಗಿ ಮೂರು ಪಂಗಡಗಳಾಗಿ ವಿಂಗಡಿಸಬಹುದು:— (1) ಕಪ್ಪು ಜನರು, (2) ಹಳದಿ ಜನರು, (3) ಬಿಳಿಯ ಜನರು.



ಚಿತ್ರ 18

(1) **ಕಪ್ಪು (ಅಥವಾ ನೀಗ್ರೋ) ಜನರು.**—ಇವರು ಆಫ್ರಿಕ ಖಂಡ ದಲ್ಲಿಯೂ, ಪೆಸಿಫಿಕ್‌ಸಾಗರದ ಅನೇಕ ದ್ವೀಪಗಳಲ್ಲಿಯೂ ವಾಸವಾಗಿರುವರು. ಈ ಜನರಿಗೆ ಬಹಳ ಕಪ್ಪಾದ ಚರ್ಮವೂ, ಚಪ್ಪಟೆಯಾಗಿ ಅಗಲವಾಗಿರುವ ಮೂಗೂ, ಅಗಲ ಕಡಿಮೆಯಾದ ತಲೆಯೂ, ದಪ್ಪವಾಗಿ ಮುಂದಕ್ಕೆ ಚಾಚಿ ಕೊಂಡಿರುವ ತುಟಿಗಳೂ, ಉಣ್ಣೆಯಂತಿರುವ ಒರಟು ಕೂದಲೂ ಉಂಟು. ಇವರು ಸಾಮಾನ್ಯವಾಗಿ ಕುಳ್ಳಾಗಿರುವರು. ಇವರಿಗೆ ಬುದ್ಧಿ ಚುರುಕಾಗಿಲ್ಲ. ಇವರು ಕೃಷಿ, ಕೈಗಾರಿಕೆಗಳನ್ನು ಚೆನ್ನಾಗಿ ಅರಿಯದವರಾಗಿ ನಾಗರಿಕತೆಯಲ್ಲಿ ಬಹಳ ಹಿಂದಾಗಿರುವರು. ಆಫ್ರಿಕದ ಉತ್ತರ ಭಾಗದಲ್ಲಿರುವ ನೀಗ್ರೋ ಜನರೂ ದಕ್ಷಿಣ ಭಾಗದಲ್ಲಿರುವ ಕಾಫರ್, ಜೂಲು ಮೊದಲಾದ ಜನರೂ, ಮಧ್ಯ ಭಾಗದ ಅರಣ್ಯಗಳಲ್ಲಿರುವ ಅತಿ ಕುಳ್ಳಾದ, ಅಂದರೆ ಸುಮಾರು 4 ಅಡಿ ಎತ್ತರ ವಿರುವ ಪಿಗ್ಮಿ ಜನರೂ ಈ ಬುಡಕಟ್ಟಿಗೆ ಸೇರಿದವರಾಗಿದ್ದಾರೆ.

ನ್ಯೂಗಿನಿ, ಆಸ್ಟ್ರೇಲಿಯ, ಅಂಡಮಾನ್, ಫಿಜಿ ಮೊದಲಾದ ದ್ವೀಪಗಳ ನಿವಾಸಿಗಳನ್ನು ದಕ್ಷಿಣ ದ್ವೀಪ ನಿವಾಸಿಗಳೆಂಬ ಒಂದೇ ಹೆಸರಿನಿಂದ ಕರೆಯ ಬಹುದು. ಇವರೂ ನೀಗ್ರೋ ಬುಡಕಟ್ಟಿಗೆ ಸೇರಿದವರಾಗಿಯೇ ಇರುವರು.

(2) **ಹಳದಿ (ಅಥವಾ ಮಂಗೋಲಿಯನ್) ಜನರು.**—ಇವರು ಚೀಣ, ಜಪಾನ್, ಹಿಂದೂಚೀಣ ದೇಶಗಳಲ್ಲಿರುವರು. ಇವರಿಗೆ ಹಳದಿಯ ಅಥವಾ ಕಪಿಲವರ್ಣದ ಚರ್ಮವೂ, ದುಂಡಾದ ತಲೆಯೂ, ಉಬ್ಬಾದ ಕೆನ್ನೆಯ ಮೂಳೆ ಗಳೂ, ಅಗಲವಾದ ಮುಖವೂ, ಓರೆನೋಟವುಳ್ಳ ಸಣ್ಣ ಕಣ್ಣುಗಳೂ, ಉದ್ದ ವಾದ ಮತ್ತು ಒರಟಾದ ಕರಿಯ ಕೂದಲೂ, ಚಿಕ್ಕದಾದ ಮೂಗೂ ಇರುವುವು. ಈ ಜನರಿಗೆ ಗಡ್ಡ ಮೀಸೆಗಳು ಬೆಳೆಯುವುದಿಲ್ಲ. ಈ ಜನರು ತಕ್ಕಮಟ್ಟಿಗೆ

ನಾಗರಿಕತೆಯನ್ನು ಪಡೆದಿರುವರು. ಆದರೆ ಜಪಾನ್ ದೇಶದವರು ಈಚೆಗೆ ನಾಗರಿಕತೆಯಲ್ಲಿ ಬಹು ಮುಂದರಿದಿರುವರು. ಏಷ್ಯಾ ಖಂಡದ ಏಷ್ಯಾಮೈನರಿನ ಜನರೂ, ಯುರೋಪಿನ ಲಾಪ್ಲೆಂಡ್, ಫಿನ್‌ಲೆಂಡ್‌ಗಳ ಜನರೂ, ಅಮೆರಿಕದ ಎಸ್ಕಿಮೋ ಜನರೂ, ಮಡಗಾಸ್ಕರ್, ನ್ಯೂಜಿಲೆಂಡ್ ದ್ವೀಪಗಳ ಪೂರ್ವ ನಿವಾಸಿಗಳೂ ಈ ಬುಡಕಟ್ಟಿಗೆ ಸೇರಿದವರಾಗಿದ್ದಾರೆ. ಅಮೆರಿಕ ಖಂಡದ ಪೂರ್ವ ನಿವಾಸಿಗಳಾದ ಜನರು ಎತ್ತರವಾಗಿಯೂ, ಕೆಂಪು ಬಣ್ಣದವರಾಗಿಯೂ ಇರುವರು. ಇವರನ್ನು ಕೆಲವು ಶಾಸ್ತ್ರಜ್ಞರು ಮಂಗೋಲಿಯನ್ ಬುಡಕಟ್ಟಿಗೆ ಸೇರಿಸುವರು. ಇನ್ನು ಕೆಲವರು ಅಮೆರಿಕನ್ ಅಥವಾ ರೆಡ್ ಇಂಡಿಯನ್ ಎಂಬ ಹೆಸರಿನ ಬೇರೆ ಬುಡಕಟ್ಟಿನವರೆಂದು ಎಣಿಸುವರು.

(3) **ಬಿಳಿಯ (ಅಥವಾ ಕಕೇಷಿಯನ್) ಜನರು.**—ಇವರು ಯುರೋಪು ಖಂಡದಲ್ಲಿಯೂ ಏಷ್ಯಾ ಖಂಡದ ದಕ್ಷಿಣ ಪಶ್ಚಿಮ ಭಾಗಗಳಲ್ಲಿಯೂ ಬಹು ಕಾಲದಿಂದ ವಾಸಮಾಡುತ್ತಿರುವರು. ಈಚೆಗೆ ಅಮೆರಿಕ, ಆಸ್ಟ್ರೇಲಿಯ, ದಕ್ಷಿಣ ಆಫ್ರಿಕಗಳಲ್ಲಿಯೂ ವಾಸಮಾಡುತ್ತಿರುವರು. ಇಂಗ್ಲಿಷಿನವರೂ, ಪಾರ್ಸೀಜನರೂ, ಇಂಡಿಯಾ ದೇಶದ ಜನರೂ ಈ ಬುಡಕಟ್ಟಿಗೆ ಸೇರಿದವರು. ಇವರಿಗೆ ಸಾಮಾನ್ಯವಾಗಿ ಉದ್ದವಾದ ಮುಖವೂ, ಅಂಡಾಕಾರವಾದ ತಲೆಯೂ, ಎತ್ತರವಾದ ಹಣೆಯೂ, ಮೊನೆಯಾಗಿರುವ ಮೂಗೂ, ಬಿಳಿಯ ಅಥವ ಕಪಿಲ ವರ್ಣದ ಚರ್ಮವೂ ಇರುವುವು. ಇವರಲ್ಲಿ ಕೆಲವರಿಗೆ ಕಪ್ಪಾದ ಕಣ್ಣುಗಳೂ, ಇತರರಿಗೆ ಬೆಕ್ಕಿನ ಕಣ್ಣು ಅಥವಾ ನೀಲವರ್ಣದ ಕಣ್ಣುಗಳೂ ಇರುವುವು. ಇವರು ಸಾಮಾನ್ಯವಾಗಿ ಎತ್ತರವಾಗಿರುವರು. ಈ ಜನರು ಬುದ್ಧಿವಂತರಾಗಿಯೂ, ಸಾಹಸಿಗಳಾಗಿಯೂ, ನಾಗರಿಕತೆಯುಳ್ಳವರಾಗಿಯೂ ಇರುವರು. ಶುದ್ಧವಾದ ಬಿಳಿಯ ಜನರು ಕಾಕಸಸ್ ಪರ್ವತಗಳ ಪ್ರದೇಶದಲ್ಲಿರುವರು. ಇವರು ನೋಡುವುದಕ್ಕೆ ಬಹು ಸ್ಫುರದ್ರೂಪಿಗಳು.

ಪ್ರಪಂಚದಲ್ಲಿ ಸಾಮಾನ್ಯವಾಗಿ ಯಾವ ಬುಡಕಟ್ಟಿನ ಜನಾಂಗದವರೂ ಶುದ್ಧರಾಗಿಲ್ಲ. ಒಂದು ಬುಡಕಟ್ಟಿನವರು ಇತರ ಬುಡಕಟ್ಟಿನವರೊಡನೆ ವಿವಾಹ ಸಂಬಂಧದಿಂದ ಸ್ವಲ್ಪಮಟ್ಟಿಗಾದರೂ ಕಲೆತುಹೋಗಿರುವರು. ಕೆಲವು ಕಡೆ ಈ ಕುಲ ಸಾಂಕರ್ಯವು ವಿಶೇಷವಾಗಿರುವುದು. ಬಂಗಾಳದ ಬಿಳಿಯ ಜನರು ಹಳದಿ ಜನರೊಡನೆ ಬೆರೆತಿರುವರು. ದಕ್ಷಿಣ ಅಮೆರಿಕ ಖಂಡದ ಬಿಳಿಯ ಜನರಾದ ಸ್ಪಾನಿಷ್ ಜನರು ಅಲ್ಲಿನ ಪೂರ್ವ ನಿವಾಸಿಗಳಾದ ಕೆಂಪು ಬಣ್ಣದವರೊಡನೆ ಸಂಪೂರ್ಣವಾಗಿ ಕಲೆತುಹೋಗಿರುವುದರಿಂದ, ಆ ಖಂಡದಲ್ಲಿ ಈಗಿರುವ ಜನರು ಬಹು ಮಟ್ಟಿಗೆ ಮಿಶ್ರ ಕುಲದವರಾಗಿದಾರೆ.

**42. ಜನರ ನಾಗರಿಕತೆಯ ತಾರತಮ್ಯಗಳು.**—ನಮ್ಮ ಸೀಮೆಯಲ್ಲಿ ಕೆಲವು ಜನರು ತಮ್ಮ ವಾಸದ ಮನೆ, ಧರಿಸುವ ಉಡುಪು, ತಿನ್ನುವ ಆಹಾರ,

ಕಸಬುಗಳು, ವಿದ್ಯೆ ಮೊದಲಾದುವುಗಳಲ್ಲಿ ಬಹು ನಾಜೋಕಾಗಿರುವರು. ಮತ್ತೆ ಕೆಲವರು ಬಹು ಒರಟಾಗಿರುವರು. ಅಂದರೆ ಕೆಲವರು ಹೆಚ್ಚಾದ ನಾಗರಿಕತೆ ಯುಳ್ಳವರಾಗಿಯೂ ಮತ್ತೆ ಕೆಲವರು ನಾಗರಿಕತೆ ಕಡಿಮೆಯಾದವರಾಗಿಯೂ ಇರುವರು. ಹೀಗೆಯೇ ಪ್ರತಿಯೊಂದು ದೇಶದಲ್ಲಿಯೂ ತಾರತಮ್ಯಗಳು ತೋರಿ ಬರುವುವು. ಪ್ರಪಂಚದಲ್ಲಿ ಕಂಡುಬರುವ ನಾಗರಿಕತೆಯ ತಾರತಮ್ಯಗಳಿಗನು ಸಾರವಾಗಿ ಜನಾಂಗಗಳನ್ನು ಐದು ವರ್ಗಗಳಾಗಿ ಅಥವಾ ದರ್ಜೆಗಳಾಗಿ ವಿಂಗಡಿಸಬಹುದು :—

(1) **ನಾಗರಿಕತೆಯಿಲ್ಲದ ಕಾಡುಜನರು.**—ಅಫ್ರಿಕ ಖಂಡದ ಮಧ್ಯ ಭಾಗದಲ್ಲಿರುವ ದೊಡ್ಡ ಕಾಡು ಪ್ರದೇಶದಲ್ಲಿ ವಾಸವಾಗಿರುವ ಬಹಳ ಕುಳ್ಳರಾದ ಪಿಗ್ಮಿ ಜನರನ್ನು ಈ ವರ್ಗದ ಜನಾಂಗಕ್ಕೆ ಉದಾಹರಣೆಯಾಗಿ ಆರಿಸಿಕೊಳ್ಳಬಹುದು. ಇವರು ಕೈಗೆ ಸಿಕ್ಕಿದ ಹಣ್ಣು ಹಂಪಲುಗಳನ್ನೂ, ನೆಲ ದಲ್ಲಿ ಸಿಕ್ಕುವ ಗೆಡ್ಡೆ ಗೆಣಸುಗಳನ್ನೂ ತಿಂದು, ತಮ್ಮ ಬಿಲ್ಲು ಬಾಣಗಳಿಂದ ಮೃಗ ಗಳನ್ನು ಬೇಟೆಯಾಡಿ ಅವುಗಳ ಮಾಂಸವನ್ನು ತಿನ್ನುತ್ತಲೂ ಜೀವನಮಾಡು ವರು. ಎಲೆಗಳಿಂದ ಮಾಡಿದ ಗುಡಿಸಲುಗಳಲ್ಲಿ ವಾಸಮಾಡುವರು. ಯಾವ ಉಡುಪನ್ನೂ ಧರಿಸುವುದಿಲ್ಲ. ಓದುಬರಹಗಳಾಗಲಿ, 5–6ಕ್ಕಿಂತ ಹೆಚ್ಚು ಸಂಖ್ಯೆ ಯನ್ನು ಎಣಿಸುವ ಲೆಕ್ಕವಾಗಲಿ ಇವರಿಗೆ ತಿಳಿಯದು. ಕೃಷಿ, ಕೈಗಾರಿಕೆ ಮೊದಲಾದ ಕಸಬುಗಳ ಗಂಧವನ್ನೇ ಅರಿಯರು. ಇವರಷ್ಟು ನಾಗರಿಕತೆಯಲ್ಲಿ ಕಡಿಮೆಯಾದ ಜನರು ನಮ್ಮ ದೇಶದಲ್ಲಿಲ್ಲ. ಆದರೆ ಮೈಸೂರು ಸೀಮೆಯಲ್ಲಿ ರುವ ಕಾಡುಕುರುಬರೂ, ಮಧ್ಯದ ಇಂಡಿಯಾದಲ್ಲಿರುವ ಗೊಂಡರೂ ಸ್ವಲ್ಪ ಹೆಚ್ಚು ಕಡಿಮೆ ಇವರಂತೆ ನಾಗರಿಕತೆಯಿಲ್ಲದವರಾಗಿಯೇ ಇರುವರು.

(2) **ಅಲ್ಪ ನಾಗರಿಕತೆಯುಳ್ಳವರು ಅಥವಾ ಸಂಚರಿಸುತ್ತಿರುವ ಜನರು.**—ಮೇಲಿನ ವರ್ಗದ ಜನರು ಮುಖ್ಯವಾಗಿ ಬೇಟೆಯಿಂದ ಜೀವಿಸು ವರು. ಈ ವರ್ಗದ ಜನರು ಮುಖ್ಯವಾಗಿ ಪಶುಪಾಲನೆಯಿಂದ ಜೀವಿಸುವರು. ಅಲ್ಪ ನಾಗರಿಕತೆಯುಳ್ಳ ಜನರಿಗೆ ರಷ್ಯಾ ದೇಶದ ಹುಲ್ಲುಗಾವಲುಗಳಲ್ಲಿರುವ ಜನರೇ ಉದಾಹರಣೆಯಾಗಿರುವರು. ಇವರು ಮುಖ್ಯವಾಗಿ ಕುರಿ, ಮೇಕೆ ಗಳನ್ನು ಮೇಯಿಸಿಕೊಂಡು, ಒಂದು ಕಾವಲಿನಲ್ಲಿ ಹುಲ್ಲು ಮುಗಿದಮೇಲೆ ಮತ್ತೊಂದು ಕಾವಲಿಗೆ ಹೋಗುತ್ತಾ ಕ್ಲುಪ್ತವಾದ ವಾಸಸ್ಥಳವಿಲ್ಲದೆ ಸದಾ ಸಂಚರಿಸುತ್ತಿರುವರು. ಇವರು ಅಲ್ಲಲ್ಲಿ ತಂಗುವ ಸ್ಥಳಗಳಲ್ಲಿ ತುಪ್ಪಟದಿಂದ ಅಥವಾ ಚರ್ಮದಿಂದ ಮಾಡಿದ ಡೇರೆಗಳನ್ನು ಹಾಕಿಕೊಂಡು ಅವುಗಳಲ್ಲಿ ವಾಸ ಮಾಡುವರು. ಕುರಿ, ಮೇಕೆಗಳ ಹಾಲೂ, ಮಾಂಸವೂ ಇವರ ಮುಖ್ಯವಾದ ಆಹಾರ. ಕೊಂಚ ಗೋಧಿಯನ್ನು ಕೊಂಡುಕೊಂಡೋ ಅಥವಾ ಬೆಳೆದೋ

ಉಪಯೋಗಿಸುವುದೂ ಉಂಟು. ಒರಟಾದ ತುಪ್ಪಟದ ಬಟ್ಟೆಗಳೇ ಇವರ ಉಡುಪು. ಇವರಿಗೆ ಓದುಬರಹ ಬಾರದು. ನಮ್ಮ ಸೀಮೆಯ ಕಾಡುಗೊಲ್ಲರೂ ಕೊಂಚಮಟ್ಟಿಗೆ ಇವರಂತೆಯೇ ಇರುವರು.

(3) **ಅರ್ಧನಾಗರಿಕತೆಯುಳ್ಳವರು.**—ಈ ವರ್ಗದ ಜನರಿಗೆ ತಕ್ಕ ಮಟ್ಟಿಗೆ ಕೃಷಿ ತಿಳಿದಿರುವುದು. ಇವರು ಗುಡಿಸಲುಗಳನ್ನು ಕಟ್ಟಿಕೊಂಡು ಹಳ್ಳಿಗಳಲ್ಲಿ ವಾಸಮಾಡುವರು. ಇವರಲ್ಲಿ ಶುಚಿತ್ವ ಕಡಿಮೆ, ಇವರ ಉಡುಗೆಗಾಗಿ ಒರಟಾದ ಮತ್ತು ಮಲಿನವಾದ ಬಟ್ಟೆಗಳನ್ನು ಉಡುವರು. ಇವರಿಗೆ ಕೈಗಾರಿಕೆಯೂ ಓದುಬರಹವೂ ತಿಳಿಯದು. ಇತರ ದೇಶಗಳ ಜನರು ಹೇಗಿರುವರೆಂಬುದು ಇವರ ಯೋಚನೆಗೇ ಬರುವುದಿಲ್ಲ. ಏಷ್ಯ, ಆಫ್ರಿಕ ಖಂಡಗಳಲ್ಲಿ ಇಂತಹ ಜನರು ಅನೇಕರಿರುವರು. ನಮ್ಮ ಸೀಮೆಯ ಕುರುಬರು, ಬೇಡರು, ಸುಕಾಲಿಗರು ಮೊದಲಾದವರು ಈ ವರ್ಗಕ್ಕೆ ಸೇರಿದವರಾಗಿರುತ್ತಾರೆ.

(4) **ನಾಗರಿಕತೆಯುಳ್ಳವರು.**—ನಮ್ಮ ಇಂಡಿಯಾದೇಶದಲ್ಲಿಯೂ, ಚೀಣ, ಆಫ್ಘಾನಿಸ್ಥಾನ, ಪರ್ಷಿಯ, ಈಜಿಪ್ಟ್ ಮೊದಲಾದ ದೇಶಗಳಲ್ಲಿಯೂ ಇರುವ ಜನರಲ್ಲಿ ಬಹುಮಂದಿ ಈ ವರ್ಗಕ್ಕೆ ಸೇರಿದವರಾಗಿರುತ್ತಾರೆ. ಇವರು ಮೈತುಂಬ ಅಂದವಾದ ಉಡುಪನ್ನು ಧರಿಸುವರು. ಅನುಕೂಲವಾಗಿ ಕಟ್ಟಿದ ಮಣ್ಣಿನ ಅಥವಾ ಇಟ್ಟಿಗೆ ಮನೆಗಳಲ್ಲಿ ವಾಸಮಾಡುವರು. ಇವರಿಗೆ ಸಾಮಾನ್ಯವಾಗಿ ಯಂತ್ರಗಳ ಉಪಯೋಗವೂ, ಕೈಗಾರಿಕೆ, ವ್ಯಾಪಾರ, ಕುಶಲ ವಿದ್ಯೆಗಳೂ ಚೆನ್ನಾಗಿ ತಿಳಿದಿರುವುವು. ಇತರ ದೇಶದವರ ಸ್ಥಿತಿಯನ್ನೂ ಅವರ ಶಾಸ್ತ್ರವಿಷಯಗಳನ್ನೂ ಇವರು ಅರಿತಿರುವರು. ಆದರೆ ಈಗಿನ ಕಾಲದ ಭಾರಿ ಯಂತ್ರಗಳನ್ನು ತಯಾರುಮಾಡುವುದೂ, ತಾವಾಗಿಯೇ ಹೆಚ್ಚಾಗಿ ಪರದೇಶದೊಡನೆ ವ್ಯಾಪಾರ ಮಾಡುವುದೂ ಇವರಲ್ಲಿ ಬಹಳ ಕಡಿಮೆ.

(5) **ಪೂರ್ಣನಾಗರಿಕತೆಯುಳ್ಳವರು.**—ಜನಸಾಮಾನ್ಯದಲ್ಲಿ ಓದುಬರಹವು ಚೆನ್ನಾಗಿ ಹರಡಿ, ಶಾಸ್ತ್ರೀಯ ಕುಶಲ ವಿದ್ಯೆಗಳಲ್ಲಿ ಅನೇಕರು ಉತ್ತಮವಾದ ಪರಿಚಯವನ್ನು ಹೊಂದಿ, ನಾನಾ ಬಗೆಯ ಯಂತ್ರಗಳನ್ನು ಒದಗಿಸಿಕೊಂಡು, ವಿಶೇಷವಾಗಿ ಕೈಗಾರಿಕೆ ಮತ್ತು ವ್ಯಾಪಾರಗಳನ್ನು ನಡೆಯಿಸುತ್ತಾ, ಧೈರ್ಯ, ಸಾಹಸ, ದೇಶಾಭಿಮಾನ ಮೊದಲಾದ ಗುಣಗಳನ್ನು ವಿಶೇಷವಾಗಿ ಪಡೆದಿರುವ ಜನಾಂಗವನ್ನು ಪೂರ್ಣನಾಗರಿಕತೆಯುಳ್ಳವರೆಂದು ಕರೆಯಬಹುದು. ಯೂರೊಪು ಖಂಡದಲ್ಲಿ ಇಂತಹ ಜನರೇ ಬಹಳ ಹೆಚ್ಚಾಗಿಗುವರು. ಅಮೆರಿಕ, ಆಸ್ಟ್ರೇಲಿಯ, ಆಫ್ರಿಕಗಳಲ್ಲಿ ನೆಲೆಗೊಂಡಿರುವ ಯೂರೋಪಿನವರೂ ಕೂಡ ಈ ವರ್ಗಕ್ಕೆ ಸೇರಿದವರು. ಜಪಾನ್ ದೇಶದವರು ಈಚೆಗೆ ಈ ಸ್ಥಿತಿಗೆ ಬಂದಿರುತ್ತಾರೆ.

ಪ್ರತಿಯೊಂದು ಪಂಗಡದಲ್ಲಿಯೂ ಅನೇಕ ಜನಾಂಗದವರು ಕ್ರಮೇಣ ತಮ್ಮ ಮೇಲಿನ ದರ್ಜೆಯವರ ಸ್ಥಿತಿಗೆ ಬರುತ್ತಲಿವರು. ನಮ್ಮ ಇಂಡಿಯಾ ದೇಶದ ಜನರು ಬಹು ಪುರಾತನ ಕಾಲದಿಂದಲೂ ನಾಗರಿಕತೆಯುಳ್ಳವರಾಗಿಯೇ ಇರುವರು. ಈಚೆಗೆ ಬ್ರಿಟಿಷರ ಪ್ರಭುತ್ವದಲ್ಲಿ ಯೂರೋಪ್ ಜನರ ಪೂರ್ಣ ನಾಗರಿಕತೆಯು ನಮ್ಮ ದೇಶದಲ್ಲಿ ವಿಶೇಷವಾಗಿ ಹರಡುತ್ತಲಿರುವುದು.

ಒಂದು ಜನಾಂಗವು ನಾಗರಿಕತೆಯಲ್ಲಿ ಅಭಿವೃದ್ಧಿಗೆ ಬರಲು ರಸ್ತೆಗಳು ಮತ್ತು ವ್ಯಾಪಾರಾಭಿವೃದ್ಧಿ, ಎಲ್ಲಾ ಬಗೆಯ ವಿದ್ಯಾಭ್ಯಾಸದ ಪ್ರಾಚುರ್ಯ, ಇವು ಬಹು ಮುಖ್ಯವಾದ ಸಾಧನಗಳಾಗಿವೆ.

**43. ಜನರ ಮುಖ್ಯವಾದ ಭಾಷೆ ಮತ್ತು ಮತ.**—ಪ್ರಪಂಚದಲ್ಲಿ ಬೇರೆ ಬೇರೆ ಜನಾಂಗದವರು ಸಾಮಾನ್ಯವಾಗಿ ಬೇರೆ ಬೇರೆ ಭಾಷೆಗಳನ್ನು ಆಡುವರು. ಒಂದು ಜನಾಂಗದವರ ಭಾಷೆಯು ಮತ್ತೊಂದು ಜನಾಂಗದವರಿಗೆ ಸಾಮಾನ್ಯವಾಗಿ ತಿಳಿಯುವುದಿಲ್ಲ. ಹೀಗೆ ಪ್ರಪಂಚದಲ್ಲಿ ಸುಮಾರು 4,000 ಬೇರೆ ಬೇರೆ ಭಾಷೆಗಳಿರುವುವೆಂದು ಗೊತ್ತಾಗಿದೆ. ಈ ಭಾಷೆಗಳಲ್ಲಿ ಅನೇಕ ಜನರು ಕೆಲವನ್ನು ಮಾತ್ರ ಆಡುವರು. ಅವುಗಳಲ್ಲಿ ಹೆಚ್ಚು ಅಭಿಪ್ರಾಯಗಳನ್ನು ತಿಳಿಸುವುದಕ್ಕೆ ಆಗುವುದಿಲ್ಲ. ಕೆಲವು ಭಾಷೆಗಳನ್ನು ಅನೇಕ ಕೋಟಿ ಜನರು ಆಡುವರು. ಅವುಗಳಿಂದ ಎಲ್ಲಾ ಶಾಸ್ತ್ರಗಳ ಅಭಿಪ್ರಾಯಗಳನ್ನೂ ಹೇಳಬಹುದು. ಲಂಬಾಣಿಗಳ ಭಾಷೆಯು ಕೆಲವು ಸಾವಿರ ಜನಗಳಿಂದ ಮಾತ್ರ ಆಡಲ್ಪಡುತ್ತಿರುವುದು. ಹೆಚ್ಚು ಅಭಿಪ್ರಾಯಗಳನ್ನು ಆ ಭಾಷೆಯಿಂದ ತಿಳಿಸುವುದಕ್ಕೆ ಆಗುವುದಿಲ್ಲ. ಇಂಗ್ಲಿಷು ಭಾಷೆಯನ್ನಾಡುವಷ್ಟು ಜನರು ಇನ್ನಾವ ಭಾಷೆಯನ್ನೂ ಆಡುವುದಿಲ್ಲ. ಪ್ರತಿಯೊಂದು ಶಾಸ್ತ್ರದ ವಿಷಯದಲ್ಲಿಯೂ ಈ ಭಾಷೆಯಲ್ಲಿ ಅನೇಕ ಪುಸ್ತಕಗಳು ಬರೆಯಲ್ಪಟ್ಟಿವೆ. ನಮ್ಮ ಕನ್ನಡ ಭಾಷೆಯನ್ನು ಸುಮಾರು ಒಂದು ಕೋಟಿ ಜನರು ಆಡುವರು. ಜನರು ಮಿಶ್ರವಾಗುವ ಹಾಗೆ ಭಾಷೆಗಳೂ ಮಿಶ್ರವಾಗುವುವು. ನಮ್ಮ ಭಾಷೆಯಲ್ಲಿ ಶಾಸ್ತ್ರಗಳ ವಿಷಯವನ್ನು ಬರೆಯುವಾಗ ಸರಿಯಾದ ಮಾತುಗಳು ಸಿಕ್ಕದಿದ್ದರೆ ಮುಖ್ಯವಾಗಿ ಸಂಸ್ಕೃತದಿಂದಲೂ, ಸ್ವಲ್ಪ ಮಟ್ಟಿಗೆ ಉರ್ದು, ಇಂಗ್ಲಿಷ್ ಭಾಷೆಗಳಿಂದಲೂ ಪದಗಳನ್ನು ತೆಗೆದುಕೊಂಡು ಪ್ರಯೋಗಿಸುವರು. ಹೀಗೆ ಈ ಭಾಷೆಯಲ್ಲಿ ಶಾಸ್ತ್ರವಿಷಯಗಳನ್ನು ಬರೆಯಲು ಅಥವಾ ತಿಳಿಸಲು ಪ್ರಯತ್ನಿಸಿದ ಹಾಗೆಲ್ಲ ಇದು ವೃದ್ಧಿಯಾಗುತ್ತಲಿದೆ. ಈ ಮೇಲಿನ ಉದಾಹರಣೆಗಳಿಂದ ಪ್ರಪಂಚದಲ್ಲಿರುವ ಭಾಷೆಗಳ ಬಗೆಗಳನ್ನೂ, ಅವು ವೃದ್ಧಿಯಾಗುವ ಕ್ರಮಗಳನ್ನೂ ನೀವೇ ಊಹಿಸಿಕೊಳ್ಳಬಹುದು.

ಪ್ರಪಂಚದ ನಾಗರಿಕತೆಯುಳ್ಳ ಜನರು ಅವಲಂಬಿಸಿರುವ ಮತಗಳಲ್ಲಿ ಆರು ಮತಗಳು ಮುಖ್ಯವಾದುವು. ನಮ್ಮ ಇಂಡಿಯಾ ದೇಶದಲ್ಲಿ ಸುಮಾರು 2 ಭಾಗ

ಜನರು ಹಿಂದೂ ಮತವನ್ನು ಅವಲಂಬಿಸಿರುವರು. ಚೀಣ, ಜಪಾನ್, ಹಿಂದೂ ಚೀಣ ದೇಶಗಳ ಜನರು ಬೌದ್ಧಮತದವರು. ಇಂಡಿಯಾದೇಶದಲ್ಲಿ ಕಾಲುಪಾಲು ಜನರೂ, ಆಫ್ಘಾನಿಸ್ಥಾನ, ಪರ್ಷಿಯ, ಅರೇಬಿಯ, ತುರ್ಕಿಸ್ಥಾನ ತುರ್ಕಿ ಮೊದಲಾದ ದೇಶಗಳ ಜನರೂ ಮತ್ತು ಆಫ್ರಿಕಖಂಡದ ಉತ್ತರ ಭಾಗದ ಜನರೂ, ಮಹಮ್ಮದನ ಮತಾವಂಬಿಗಳಾಗಿರುವರು. ಕ್ರೈಸ್ತ ಮತವು ಯೂರೋಪ್ ಖಂಡದಲ್ಲಿಯೂ ಯೂರೋಪಿನವರು ಈಚೆಗೆ ವಾಸಮಾಡುತ್ತಿರುವ ಅಮೆರಿಕ, ಆಸ್ಟ್ರೇಲಿಯ ಖಂಡಗಳಲ್ಲಿಯೂ, ತಕ್ಕಮಟ್ಟಿಗೆ ದಕ್ಷಿಣ ಆಫ್ರಿಕದಲ್ಲಿಯೂ, ಸ್ವಲ್ಪಮಟ್ಟಿಗೆ ಚೀಣ, ಇಂಡಿಯ ಮೊದಲಾದ ಪ್ರದೇಶಗಳಲ್ಲಿಯೂ ಪ್ರಸರಿಸಿರುವುದು. ಜೈನ ಮತ್ತು ಪಾರ್ಸಿ ಮತದವರು ಮಾತ್ರ ಇಂಡಿಯಾದೇಶದಲ್ಲಿ ಕೆಲವರಿರುವರು.

ಈ ಮುಖ್ಯವಾದ ಆರು ಮತಗಳಲ್ಲಿ ಅನೇಕ ಭೇದಗಳೂ ಅಥವಾ ಪಂಗಡಗಳೂ ಇರುವುವು. ಈ ಮುಖ್ಯ ಮತಗಳಲ್ಲದೆ ಪ್ರಪಂಚದಲ್ಲಿ ಇನ್ನೂ ಅನೇಕ ಮತಗಳಿರುವುವು. ಅನೇಕ ದೇಶಗಳಲ್ಲಿ ಯಹೂದ್ಯ ಮತದವರು ಹರಡಿಕೊಂಡಿರುವರು. ಇಂಡಿಯ, ಆಫ್ರಿಕಗಳ ಕೆಲವು ಪ್ರದೇಶಗಳಲ್ಲಿ ಮರ ಕಲ್ಲು ಮೊದಲಾದುವನ್ನು ದೇವತೆಗಳೆಂದೂ ಅವು ದುಷ್ಟದೇವತೆಗಳೆಂದೂ ಅವುಗಳ ಪ್ರೀತಿಗಾಗಿ ಪ್ರಾಣಿಗಳನ್ನು ಬಲಿ ಕೊಡುವ ಅನಾಗರಿಕರಾದ ಅನೇಕ ಜನರಿರುವರು. ಅವರನ್ನು ಮಾರಿಯ ಪೂಜಕರೆಂದು ಕರೆಯಬಹುದು.

ಹಿಂದೂ ಮತದವರು ಇತರ ಮತಸ್ಥರನ್ನು ತಮ್ಮ ಮತಕ್ಕೆ ಸೇರಿಸಿಕೊಳ್ಳುತ್ತಿರಲಿಲ್ಲ. ಈಚೀಚೆಗೆ ಬೇರೆ ಮತದವರನ್ನು ಸೇರಿಸಿಕೊಳ್ಳುತ್ತಿದ್ದಾರೆ. ಕ್ರೈಸ್ತರೂ ಮಹಮ್ಮದೀಯರೂ ಇತರರನ್ನು ತಮ್ಮ ಮತಗಳಿಗೆ ಸೇರಿಸಿಕೊಳ್ಳುವರು. ಆದುದರಿಂದ ಅವರ ಸಂಖ್ಯೆ ಮುಖ್ಯವಾಗಿ ಕ್ರೈಸ್ತರ ಸಂಖ್ಯೆ ಹೆಚ್ಚುತ್ತಲಿದೆ.

**44. ಜನಸಾಂದ್ರತೆ.—** ಜನಸಾಂದ್ರತೆಯೆಂದರೆ ಜನರು ನಿಬಿಡವಾಗಿ ಅಥವಾ ಒತ್ತಾಗಿ ವಾಸವಾಗಿರುವುದು. ಒಂದು ಪ್ರದೇಶದ ಹಳ್ಳಿಗಳು ಬಹಳ ಒತ್ತಾಗಿದ್ದರೂ, ಅಲ್ಲಿ ಅನೇಕ ದೊಡ್ಡ ದೊಡ್ಡ ಪಟ್ಟಣಗಳಿದ್ದರೂ ಅಲ್ಲಿನ ಜನಸಾಂದ್ರತೆ ಹೆಚ್ಚಾಗಿರುವುದು. ಒಂದು ಪ್ರದೇಶದ ಜನಸಾಂದ್ರತೆಯನ್ನು ನಿಖರವಾಗಿ ಸೂಚಿಸಲು ಒಟ್ಟು ಜನಸಂಖ್ಯೆಯನ್ನು ವಿಸ್ತೀರ್ಣದಿಂದ ಭಾಗಿಸಿ, ಒಂದು ಚದರ ಮೈಲಿಗೆ ಸರಾಸರಿ ಇಷ್ಟು ಜನಸಂಖ್ಯೆಯಿದೆಯೆಂದು ಹೇಳಬಹುದು. ಮೈಸೂರು ಸೀಮೆಯ ಜನಸಂಖ್ಯೆ ಸುಮಾರು 59 ಲಕ್ಷ; ವಿಸ್ತೀರ್ಣ ಸುಮಾರು 29,000 ಚದರ ಮೈಲಿಗಳು. ಅದರ ಜನಸಾಂದ್ರತೆ ಚದರ ಮೈಲಿಗೆ 203. ಗ್ರೇಟ್ ಬ್ರಿಟನ್ ದ್ವೀಪದ ಜನಸಂಖ್ಯೆ 3,70,00,000. ವಿಸ್ತೀರ್ಣ 88,000 ಚದರ ಮೈಲಿಗಳು. ಅದರ ಜನಸಾಂದ್ರತೆ 1 ಚದರ ಮೈಲಿಗೆ 425.

ಒಂದು ಪ್ರದೇಶದ ಮೇಲ್ಮೈಯ್ಯ ಲಕ್ಷಣ, ವಾಯುಗುಣ, ಉದ್ಯೋಗ ಮೊದಲಾದ ವಿಷಯಗಳನ್ನು ತಿಳಿದರೆ, ಆ ಪ್ರದೇಶದಲ್ಲಿ ಜನಸಾಂದ್ರತೆಯು

ಹೆಚ್ಚಾಗಿರುವುದೇ ಅಥವಾ ಕಡಿಮೆಯಾಗಿರುವುದೇ ಎಂದು ಸುಲಭವಾಗಿ ಊಹಿಸ ಬಹುದು. ಹಿಂದೆ ಸೂಚಿಸಿರುವ ನಾಗರಿಕತೆಯ ಐದು ದರ್ಜೆಗಳಲ್ಲಿ ಕಡೆಯ ದರ್ಜೆಯಿಂದ ಅದರ ಮೇಲಿನ ದರ್ಜೆಗೆ ಒಂದು ಪ್ರದೇಶದ ಜನರು ಹತ್ತಿದ ಹಾಗೆಲ್ಲ ಅಲ್ಲಿ ಸಾಮಾನ್ಯವಾಗಿ ಜನಸಾಂದ್ರತೆ ಹೆಚ್ಚಾಗಿರುವುದೆಂದು ಹೇಳ ಬಹುದು.

(1) ಒಂದು ಪ್ರದೇಶದಲ್ಲಿ ಸಾಕಾದಷ್ಟು ಮಳೆಯೂ ಫಲವತ್ತಾದ ನೆಲವೂ ಇದ್ದರೆ, ಅಲ್ಲಿ ಕೃಷಿಗೆ ಬಹು ಅನುಕೂಲವಾಗಿರುವುದರಿಂದ ಸಾಮಾನ್ಯ ವಾಗಿ ಹಳ್ಳಿಗಳು ಒತ್ತೊತ್ತಾಗಿರುವುವು. ಇದರಿಂದ ಜನಸಾಂದ್ರತೆಯೂ ಹೆಚ್ಚಾಗಿರುವುದು. ಉದಾ.—ಗಂಗಾನದಿಯ ಮೈದಾನದಲ್ಲಿ ಜನಸಾಂದ್ರತೆ ಬಹಳ ಹೆಚ್ಚು. ಸಿಂಧೂದೇಶದ ಮರುಭೂಮಿಯಲ್ಲಿ ಬಹಳ ಕಡಿಮೆ.

(2) ಒಂದು ಪ್ರದೇಶದಲ್ಲಿ ಕಬ್ಬಿಣ ಕಲ್ಲಿದ್ದಲುಗಳು ವಿಶೇಷವಾಗಿ ದೊರೆ ಯುತ್ತಿದ್ದರೆ ಅಲ್ಲಿ ಸಾಮಾನ್ಯವಾಗಿ ಕೈಗಾರಿಕೆಗಳು ಪ್ರಬಲವಾಗಿ ನಡೆಯುವುವು. ಅನೇಕ ದೊಡ್ಡ ಪಟ್ಟಣಗಳೂ ಇರುವುವು. ಆದುದರಿಂದ ಅಲ್ಲಿಯೂ ಜನಸಾಂದ್ರತೆ ಹೆಚ್ಚಾಗಿರುವುದು. ಉದಾ.—ಇಂಗ್ಲೆಂಡಿನಲ್ಲಿ ಜನಸಾಂದ್ರತೆ ಹೆಚ್ಚು ; ಐರ್ಲೆಂಡಿ ನಲ್ಲಿ ಖನಿಜಗಳು ಸಿಕ್ಕುವುದು ಬಹು ಕಡಿಮೆಯಾಗಿರುವುದರಿಂದ ಜನಸಾಂದ್ರತೆ ಕಡಮೆ.

(3) ಒಂದು ದೇಶದಲ್ಲಿ ವ್ಯಾಪಾರವು ಬಹಳ ಹೆಚ್ಚಾಗಿ ನಡೆಯುತ್ತಿದ್ದರೆ ಅಲ್ಲಿ ಅನೇಕ ದೊಡ್ಡ ಪಟ್ಟಣಗಳಿರುವುವು. ಅಲ್ಲದೆ ಜನಸಾಂದ್ರತೆಯೂ ಹೆಚ್ಚಾಗಿರು ವುದು. ಉದಾ.—ಜರ್ಮನಿಯಲ್ಲಿಯೂ ಸಾಮಾನ್ಯವಾಗಿ ಇಂಗ್ಲೆಂಡಿನಂತೆಯೇ ಕೈಗಾರಿಕೆಗಳ ಆನುಕೂಲ್ಯಗಳಿದ್ದರೂ ವ್ಯಾಪಾರಕ್ಕೆ ಅಷ್ಟು ಜನಸಾಂದ್ರತೆಯು ಇಲ್ಲದಿರುವುದರಿಂದ ಅಲ್ಲಿ ಇಂಗ್ಲೆಂಡಿಗಿಂತ ಅನುಕೂಲ ಕಡಿಮೆಯಾಗಿರುವುದು.

(4) ಕಾಡುಗಳು, ಮರುಭೂಮಿಗಳು, ಅನಾರೋಗ್ಯ ಸ್ಥಳಗಳು ಇರುವ ಪ್ರದೇಶಗಳಲ್ಲಿಯೂ ಶೀತವಲಯಗಳಲ್ಲಿಯೂ ಜನಸಾಂದ್ರತೆ ಕಡಿಮೆ ಯಾಗಿರುವುದು. ಕಾಂಗೊ, ಅರೇಬಿಯ, ನಮ್ಮ ಮೈಸೂರು ದೇಶದ ಮಲೆನಾಡು, ಸೈಬೀರಿಯ ಇವು ಕ್ರಮವಾಗಿ ಮೇಲಿನ ಪ್ರದೇಶಗಳಿಗೆ ಉದಾ ಹರಣೆಗಳಾಗಿವೆ.

**45. ಪಟ್ಟಣಗಳ ಅಭಿವೃದ್ಧಿಗೆ ಅಥವಾ ಅವುಗಳ ಪ್ರಾಮುಖ್ಯತೆಗೆ ಕಾರಣಗಳು.**—ಒಂದು ಪ್ರದೇಶದಲ್ಲಿ ಜನರಿಗೆ ಕೃಷಿಯೇ ಮುಖ್ಯವಾದ ಕಸ ಬಾಗಿದ್ದರೆ ಹಳ್ಳಿಗಳು ಹೆಚ್ಚಾಗಿಯೂ ಪಟ್ಟಣಗಳು ಕಡಿಮೆಯಾಗಿಯೂ ಇರುವು ವೆಂದೂ, ಕೈಗಾರಿಕೆ ವ್ಯಾಪಾರಗಳು ಹೆಚ್ಚಾದ ಹಾಗೆಲ್ಲಾ ಪಟ್ಟಣಗಳ ಸಂಖ್ಯೆಯೂ, ಪ್ರಮಾಣವೂ ಹೆಚ್ಚುವುವೆಂದೂ ಸಾಮಾನ್ಯವಾಗಿ ಹೇಳಬಹುದು. ನಮ್ಮ

ಇಂಡಿಯಾದೇಶದಲ್ಲಿ ಕೃಷಿಯೇ ಮುಖ್ಯವಾದ ಉದ್ಯೋಗವಾಗಿರುವುದರಿಂದ ಕಾಲುಪಾಲು ಜನರು ಮಾತ್ರ ಪಟ್ಟಣಗಳಲ್ಲಿ ವಾಸಮಾಡುವರು. ಆದರೆ ಇಂಗ್ಲೆಂಡಿನಲ್ಲಿ ಕೈಗಾರಿಕೆ, ವ್ಯಾಪಾರಗಳೇ ಮುಖ್ಯವಾದ ಕಸಬಾಗಿರುವುದರಿಂದ ಅರ್ಧಕ್ಕಿಂತ ಹೆಚ್ಚು ಜನರು ಪಟ್ಟಣವಾಸಿಗಳಾಗಿರುವರು. ಅಲ್ಲಿ ಬಹು ದೊಡ್ಡ ಪಟ್ಟಣಗಳು ಅನೇಕವಿರುವುವು.

ಪಟ್ಟಣಗಳು ಅಭಿವೃದ್ಧಿಯಾಗುವುದಕ್ಕೆ ಅಥವ ಅವುಗಳ ಪ್ರಾಮುಖ್ಯತೆಗೆ ಮುಖ್ಯ ಕಾರಣಗಳು ಯಾವುವೆಂದರೆ:—

(1) ಒಂದು ಪಟ್ಟಣವು ನದಿಯ ತೀರದಲ್ಲಿ ಅಥವ ಸಮುದ್ರತೀರದಲ್ಲಿದ್ದರೆ ಆದರ ಜನಸಂಖ್ಯೆಯೂ ಐಶ್ವರ್ಯವೂ ಹೆಚ್ಚುತ್ತಾ ಬರುವುದು. ನದಿಯು ಹಡಗುಗಳ ಸಂಚಾರಕ್ಕೆ ಅನುಕೂಲವಾಗಿಯೂ ಸಮುದ್ರವು ಉತ್ತಮವಾದ ಬಂದರುಗಳುಳ್ಳುದಾಗಿಯೂ ಇದ್ದಷ್ಟೂ ಈ ವಿಧವಾದ ಅನುಕೂಲ ಹೆಚ್ಚು. ಉದಾ.—ಅಲಹಾಬಾದ್, ಬೊಂಬಾಯಿ.

(2) ಖನಿಜಗಳು ವಿಶೇಷವಾಗಿ ಸಿಕ್ಕುವ ಸ್ಥಳಗಳಲ್ಲಿ ಅನೇಕರು ಕೆಲಸಗಾರರೂ, ಕೂಲಿಯವರೂ ಬಂದು ಸೇರುತ್ತಾರೆ. ಇದರಿಂದ ಅಲ್ಲಿರುವ ಪಟ್ಟಣಗಳು ದಿನೇ ದಿನೇ ಅಭಿವೃದ್ಧಿಯಾಗುವುವು. ಉದಾ.—ಉರಿಗ, ಮೆಲ್ಬೋರ್ನ್.

(3) ಇದೇ ಮೇರೆ ಒಂದು ಪಟ್ಟಣದ ಕೈಗಾರಿಕೆ ಹೆಚ್ಚಿದಷ್ಟೂ ಅಲ್ಲಿನ ಜನಸಂಖ್ಯೆಯೂ ಹೆಚ್ಚುವುದು. ಕಾನ್ಪೂರ್, ಮಾಂಚೆಸ್ಟರ್.

(4) ಅನೇಕವಾದ ದೊಡ್ಡ ರಸ್ತೆಗಳಾಗಲಿ, ಕಾರವಾನ್ ಹಾದಿಗಳಾಗಲಿ, ರೈಲು ಮಾರ್ಗಗಳಾಗಲಿ ಸಂಧಿಸುವ ಸ್ಥಳದಲ್ಲಿ ವ್ಯಾಪಾರವು ಹೆಚ್ಚಾಗಿ ನಡೆಯುವುದರಿಂದ ಅಲ್ಲಿರುವ ಪಟ್ಟಣವು ಅಭಿವೃದ್ಧಿಗೆ ಬರುವುದು. ಉದಾ.—ಅಲಹಾಬಾದ್, ಟಿಂಬಕ್ಟು, ಬೆಂಗಳೂರು.

(5) ಯಾತ್ರಾಸ್ಥಳಗಳಿಗೂ, ದೊಡ್ಡ ಸಂತೆಗಳಾಗುವ ಸ್ಥಳಗಳಿಗೂ ಅನೇಕ ಜನರು ಬಂದು ಹೋಗುವುದರಿಂದ, ಅವರ ಅನುಕೂಲಕ್ಕೋಸ್ಕರ ಅಂತಹ ಪಟ್ಟಣಗಳಲ್ಲಿ ಅನೇಕ ವರ್ತಕರೂ, ಕೂಲಿಯವರೂ ಬಂದು ಸೇರುವುದರಿಂದ ಅವು ಅಭಿವೃದ್ಧಿಯಾಗುವುವು. ಉದಾ.—ಕಾಶಿ, ನಿಜ್ನಿನೌಗರಾಡ್.

(6) ಒಂದು ಪಟ್ಟಣವು ಜನರ ಆರೋಗ್ಯಕ್ಕೆ ಅನುಕೂಲವಾದ ಹವವನ್ನು ಹೊಂದಿದ್ದರೆ ವೃದ್ಧಿಯಾಗುವುದು. ಉದಾ.—ಉದಕಮಂಡಲ, ಸಿಮ್ಲಾ. ಹಾಗಿಲ್ಲವಾದರೆ ಕ್ಷೀಣದಶೆಗೆ ಬರುವುದು. ಉದಾ.—ಶ್ರೀರಂಗಪಟ್ಟಣ.

(7) ರಾಜಧಾನಿ ಅಥವಾ ಮುಖ್ಯ ಪಟ್ಟಣಗಳಲ್ಲಿಯೂ ಸ್ವಸ್ಥವಿರುವ ಕಂಟೋನ್ಮೆಂಟುಗಳಲ್ಲಿಯೂ ಅನೇಕ ಸರ್ಕಾರಿ ಕೆಲಸಗಾರರು, ವ್ಯಾಪಾರಿಗಳು

ಮೊದಲಾದವರು ವಾಸಮಾಡುವರು. ಉದಾ.—ಡೆಲ್ಲಿ, ಬೆಂಗಳೂರು, ಸಿಕಂದರಾಬಾದ್.

46. **ಪ್ರಭುತ್ವ ಅಥವಾ ರಾಜ್ಯಭಾರ.**—ನಾಗರಿಕರಾದ ಜನಾಂಗಗಳಲ್ಲಿ ಪ್ರಭುತ್ವವು ಎರಡು ವಿಧವಾಗಿರುವುದು:-(1) **ರಾಜಪ್ರಭುತ್ವ**, (2) **ಪ್ರಜಾಪ್ರತಿನಿಧಿ ಪ್ರಭುತ್ವ.** ಒಂದು ದೇಶದಲ್ಲಿ ರಾಜಪ್ರಭುತ್ವವಿರುವುದೆಂದರೆ ಅಲ್ಲಿ ವಂಶಪಾರಂಪರ್ಯವಾಗಿ ನಡೆದುಬಂದ ರಾಜರು ಪ್ರಜೆಗಳನ್ನು ಆಳುವರು. ಈ ರಾಜಪ್ರಭುತ್ವದಲ್ಲಿ ಎರಡು ವಿಧವುಂಟು:—**ಸಾಂಕುಶ ಪ್ರಭುತ್ವ, ನಿರಂಕುಶ ಪ್ರಭುತ್ವ.** ಸಾಂಕುಶಪ್ರಭುತ್ವವೆಂದರೆ ರಾಜನು ಪ್ರಜೆಗಳಿಂದ ಚುನಾಯಿಸಲ್ಪಟ್ಟ ಪ್ರತಿನಿಧಿಗಳ ಸಭೆಯನ್ನು ಸೇರಿಸಿ ಅವರ ಸಲಹೆಗಳಿಗನುಸಾರವಾಗಿ ರಾಜ್ಯಭಾರ ಮಾಡುವುದು. ಇಂಗ್ಲೆಂಡು, ಹಾಲೆಂಡು, ಬೆಲ್ಜಿಯಂ ಮೊದಲಾದ ದೇಶಗಳಲ್ಲಿ ಈ ಬಗೆಯ ಪ್ರಭುತ್ವವಿರುವುದು. ನಿರಂಕುಶಪ್ರಭುತ್ವವೆಂದರೆ ರಾಜನು ಸ್ವೇಚ್ಛೆಯಾಗಿ, ಅಂದರೆ ಪ್ರಜೆಗಳ ಸಲಹೆಗಳನ್ನು ಅಂಗೀಕರಿಸದೆ ತನಗೆ ತೋರಿದಂತೆ, ರಾಜ್ಯಭಾರ ಮಾಡುವುದು. ಈ ಬಗೆಯ ಪ್ರಭುತ್ವವು ರಷ್ಯ, ಚೀಣ ಮೊದಲಾದ ಅನೇಕ ದೇಶಗಳಲ್ಲಿ ಹಿಂದಿನ ಕಾಲದಲ್ಲಿತ್ತು. ಈಗ ಜನಗಳ ಪ್ರಾಬಲ್ಯವು ಹೆಚ್ಚಿ, ಇಂತಹ ರಾಜ್ಯಭಾರಕ್ರಮವು ಪರ್ಷಿಯ, ಆಫ್ಘಾನಿಸ್ಥಾನ, ಮೊರಕ್ಕೋ ಮೊದಲಾದ ಕೆಲವು ದೇಶಗಳಲ್ಲಿ ಮಾತ್ರ ನೆಲೆಗೊಂಡಿದೆ.

ಪ್ರಜಾಪ್ರತಿನಿಧಿಪ್ರಭುತ್ವವೆಂದರೆ ಪ್ರಜೆಗಳೇ ರಾಜ್ಯವನ್ನಾಳುವುದು. ಪ್ರಜೆಗಳು ಅಥವಾ ಅವರ ಪ್ರತಿನಿಧಿಗಳು ಪ್ರೆಸಿಡೆಂಟೆಂಬ ಮುಖ್ಯಾಧಿಕಾರಿಯನ್ನು ಚುನಾಯಿಸುವರು. ಈತನು ಇತರ ಅಧಿಕಾರಿಗಳನ್ನು ನೇಮಿಸಿಕೊಂಡು ಪ್ರಜೆಗಳಿಂದ ಚುನಾಯಿಸಲ್ಪಟ್ಟ ಪ್ರತಿನಿಧಿ ಸಭೆಯ ಅನುಮತಿಯ ಮೇರೆಗೆ ಪ್ರಭುತ್ವವನ್ನು ಮಾಡುವನು. ಪ್ರೆಸಿಡೆಂಟರಿಗೆ ರಾಜರಂತೆ ಯಾವಾಗಲೂ ಪ್ರಭುತ್ವವಿರುವುದಿಲ್ಲ. ಕೆಲವು ವರ್ಷಗಳು ಮಾತ್ರ ಕ್ಲಪ್ತವಾಗಿರುವುದು. ಇಂತಹ ಪ್ರಜಾಪ್ರತಿನಿಧಿಪ್ರಭುತ್ವವು ಫ್ರಾನ್ಸ್, ಸಂಯುಕ್ತ ಸಂಸ್ಥಾನಗಳು, ಚೀಣ ಮೊದಲಾದ ದೇಶಗಳಲ್ಲಿ ನೆಲೆಗೊಂಡಿದೆ.

ಒಂದು ಪ್ರಭುತ್ವಕ್ಕೆ ಒಳಪಟ್ಟ ದೇಶವನ್ನು ಸಂಸ್ಥಾನವೆಂದು ಕರೆಯುವುದುಂಟು. ಬ್ರಿಟಿಷ್ ದ್ವೀಪಗಳು, ಫ್ರಾನ್ಸ್, ಇಟಲಿ ಮೊದಲಾದ ದೇಶಗಳಲ್ಲಿ ಒಂದೇ ಪ್ರಭುತ್ವವಿರುವುದರಿಂದ ಅವು ಒಂದೊಂದು ಸಂಸ್ಥಾನಗಳಾಗಿವೆ. ಅಮೆರಿಕದ ಸಂಯುಕ್ತ ಸಂಸ್ಥಾನಗಳು, ಕೆನಡ, ಆಸ್ಟ್ರೇಲಿಯ ಮೊದಲಾದ ದೇಶಗಳಲ್ಲಿ ಅನೇಕ ಸಂಸ್ಥಾನಗಳು ಮೊದಲು ಏರ್ಪಟ್ಟು, ಶತ್ರುಭಯದಿಂದ ಸಂರಕ್ಷಿಸಲ್ಪಡುವುದಕ್ಕೋಸ್ಕರ ಅವು ಒಟ್ಟುಗೂಡಿ ಒಂದೇ ಪ್ರಭುತ್ವವಾಗಿರುವುದು. ಆದುದರಿಂದ ಅವುಗಳನ್ನು **ಸಂಯುಕ್ತ ಸಂಸ್ಥಾನಗಳು** ಅಥವಾ **ಸಂಯುಕ್ತ ಪ್ರಭುತ್ವಗಳು** ಎಂದು ಕರೆಯಬಹುದು.

ನಾಗರಿಕರಾದ ಒಂದು ದೇಶದವರು ನಾಗರಿಕತೆಯಿಲ್ಲದ ಮತ್ತೊಂದು ದೇಶದಲ್ಲಿ ನೆಲೆಗೊಂಡು ಕಾಲೋನಿ ಅಥವಾ ಸ್ವಾಸ್ಥ್ಯಗಳನ್ನು ಸ್ಥಾಪಿಸಿರುವರು. ಬ್ರಿಟಿಷ್ ಜನರು ಹೀಗೆ ದಕ್ಷಿಣ ಆಫ್ರಿಕ, ಆಸ್ಟ್ರೇಲಿಯ, ಕೆನಡ ಮೊದಲಾದ ದೇಶಗಳಲ್ಲಿ ಕಾಲೋನಿಗಳನ್ನು ಸ್ಥಾಪಿಸಿರುವರು. ಒಂದು ದೇಶವೂ, ಅದರ ಕಾಲೋನಿಗಳೂ, ಆ ದೇಶದ ಜನರು ಗೆದ್ದು ಸ್ವಾಧೀನಪಡಿಸಿಕೊಂಡಿರುವ **ಅಧೀನ ರಾಜ್ಯ** (ಉದಾ.—ಇಂಡಿಯ)ಗಳೂ ಒಟ್ಟು ಸೇರಿ, ಆ ದೇಶದ **ಚಕ್ರಾಧಿಪತ್ಯ**ವೆನಿಸಿಕೊಳ್ಳುವುದು. (ಉದಾ.—ಬ್ರಿಟಿಷ್ ಚಕ್ರಾಧಿಪತ್ಯ.)

---

## ಏಷ್ಯಾ ಖಂಡ

## ಸಾಮಾನ್ಯ ವರ್ಣನೆ

**ಸನ್ನಿವೇಶ, ವಿಸ್ತೀರ್ಣ ಮತ್ತು ಮೇರೆಗಳು.**—ಏಷ್ಯಾ, ಯುರೋಪು ಖಂಡಗಳು ಒಂದಕ್ಕೊಂದು ಸೇರಿಕೊಂಡಿವೆ. ಹೀಗೆ ಒಟ್ಟಾಗಿ ಸೇರಿರುವ ಭೂಭಾಗಕ್ಕೆ 'ಯುರೇಷಿಯ' ಎಂದು ಹೆಸರು. ಈ ಯುರೇಷಿಯದ ಉತ್ತರ ಭಾಗದಲ್ಲಿ ವಿಶಾಲವಾದ ಮೈದಾನವೂ, ಮಧ್ಯ ಭಾಗದಲ್ಲಿ ಪೂರ್ವ ಪಶ್ಚಿಮವಾಗಿ ಹಬ್ಬಿರುವ ಪರ್ವತಪಙ್ಕ್ತಿಗಳೂ, ದಕ್ಷಿಣಭಾಗಗಳಲ್ಲಿ ಪರ್ಯಾಯದ್ವೀಪಗಳೂ ಇವೆ. ಯುರೋಪು, ಏಷ್ಯಾ ಖಂಡಗಳು ಒಟ್ಟುಗೂಡಿ ಹೀಗೆ ಕೆಲವು ಸಾಮಾನ್ಯ ಲಕ್ಷಣಗಳನ್ನು ಉಂಟಾಗಿದ್ದರೂ ಇವೆರಡಕ್ಕೂ ಅನೇಕ ವ್ಯತ್ಯಾಸಗಳಿರುವುವು. ಏಷ್ಯಾ ಖಂಡವು ದಕ್ಷಿಣದಲ್ಲಿ ಬಹುದೂರದವರೆಗೂ ಪ್ರಸರಿಸಿರುವುದು. ಇಲ್ಲಿನ ಮೈದಾನಗಳು ಬಹು ವಿಶಾಲವಾಗಿರುವುವು. ಪರ್ವತಪಙ್ಕ್ತಿಗಳು ಬಹು ಎತ್ತರವಾಗಿಯೂ ವಿಶಾಲವಾಗಿಯೂ ಇರುವುವು. ಇಲ್ಲಿನ ಜನರು ನಾಗರಿಕತೆಯಲ್ಲಿ ಯೂರೋಪಿನ ಜನರಿಗಿಂತ ಹಿಂದಾಗಿರುವರು. ಆದುದರಿಂದ ಶಾಸ್ತ್ರಜ್ಞರು ಯುರೇಷಿಯವೆಂಬ ದೊಡ್ಡ ಭೂಭಾಗವನ್ನು ಯುರೋಪು, ಏಷ್ಯಗಳೆಂಬ ಎರಡು ಖಂಡಗಳಾಗಿ ಭಾಗಿಸಿರುವರು.

ಏಷ್ಯಾ ಖಂಡದ ಮೇರೆಗಳನ್ನು ಪರಿಶೀಲಿಸಿ ನೋಡಿ, ಪಶ್ಚಿಮದಲ್ಲಿ ಯಾವ ಸಮುದ್ರ, ಜಲಸಂಧಿ, ಪರ್ವತಗಳು ಈ ಖಂಡವನ್ನು ಆಫ್ರಿಕ, ಯುರೋಪು ಖಂಡಗಳಿಂದ ಪ್ರತ್ಯೇಕಿಸುವುವೋ ಹೇಳಿ.

ಈ ಖಂಡದ ಉತ್ತರ ಮತ್ತು ಪೂರ್ವದಿಕ್ಕುಗಳಲ್ಲಿರುವ ದ್ವೀಪಗಳಲ್ಲದೆ, ಆಗ್ನೇಯ ಭಾಗದಲ್ಲಿ ಬಾಂಡಾ ಸಮುದ್ರದವರೆಗೂ ಹಬ್ಬಿರುವ ಈಸ್ಟಿಂಡಿಯನ್ ಅಥವಾ ಮಲೆಯದ್ವೀಪಸ್ತೋಮವೂ ಈ ಖಂಡಕ್ಕೆ ಸೇರಿದೆ. ಇದರ ಒಟ್ಟು ವಿಸ್ತೀರ್ಣವು 1 ಕೋಟಿಯೂ 75 ಲಕ್ಷ ಚದರ ಮೈಲಿಗಳು. ಎಂದರೆ ಪೃಥ್ವಿಯ

ನೆಲದಲ್ಲಿ $\frac{1}{6}$ ಭಾಗವನ್ನು ಇದು ಒಳಗೊಂಡಿದೆ. ಇದು ಆಫ್ರಿಕಕ್ಕೆ 1½ಯಷ್ಟು, ಯೂರೋಪಿಗೆ 4½ಯಷ್ಟು, ಇಂಡಿಯಾದೇಶಕ್ಕೆ 12ರಷ್ಟು ವಿಸ್ತಾರವುಳ್ಳದ್ದಾಗಿರುವುದು. ಇದು ಯಾವ ಅಕ್ಷಾಂಶ ರೇಖಾಂಶಗಳಲ್ಲಿ ವಿಸ್ತರಿಸಿರುವುದೊ? ಇದರ ಅತ್ಯಂತ ಉದ್ದವೂ ಅಗಲವೂ ಎಷ್ಟಿರಬಹುದೊ? ಇತರ ಖಂಡಗಳೊಡನೆ ಹೋಲಿಸಿ ನೋಡಿ.

**ತೀರದ ಲಕ್ಷಣ.**—ಈ ಖಂಡದ ತೀರಪ್ರದೇಶದ ಉದ್ದವನ್ನು ಇದರ ವಿಸ್ತೀರ್ಣದೊಡನೆ ಹೋಲಿಸಿ ನೋಡಿದರೆ ಬಹಳ ಕಡಿಮೆಯಾಗಿರುವುದು. ಯೂರೋಪು, ಉತ್ತರ ಅಮೆರಿಕ ಖಂಡಗಳಲ್ಲಿಯಾದರೋ ಸಮುದ್ರವು ದೇಶದೊಳಕ್ಕೆ ವಿಶೇಷವಾಗಿ ನುಗ್ಗಿ ಅನೇಕ ಖಾರಿ, ಕೊಲ್ಲಿ, ಉಪಸಮುದ್ರ, ದ್ವೀಪ, ಪರ್ಯಾಯದ್ವೀಪಗಳುಂಟಾಗಿರುವುದರಿಂದ ಆ ಖಂಡಗಳ ತೀರದಳತೆಯು ಬಹಳ ಹೆಚ್ಚಾಗಿರುವುದು. ಯೂರೋಪಿನಲ್ಲಿ ಸರಾಸರಿ 190 ಚ. ಮೈ. ಗೆ 1 ಮೈಲಿ ತೀರಪ್ರದೇಶವಿರುವುದು. ಉತ್ತರ ಅಮೆರಿಕದಲ್ಲಿ 350 ಚ. ಮೈ. ಗೆ 1 ಮೈಲಿ ತೀರಪ್ರದೇಶವಿರುವುದು. ಏಷ್ಯಾದಲ್ಲಿ 500 ಚ. ಮೈ. ಗೆ 1 ಮೈಲಿ ಮಾತ್ರ ತೀರವಿರುವುದು. ಇದರಿಂದ ಈ ಖಂಡದ ಮಧ್ಯ ಭಾಗದ ಕೆಲವು ಪ್ರದೇಶಗಳು ಸಮುದ್ರಕ್ಕೆ 1,500 ಮೈಲಿಗಳಿಗಿಂತ ಹೆಚ್ಚಾದ ದೂರದಲ್ಲಿವೆ.

ಈ ಖಂಡದ ತೀರಪ್ರದೇಶದ ಸ್ಥಿತಿಯನ್ನು ಗಮನಿಸಿ ನೋಡಿದರೆ ಉತ್ತರ ತೀರದಲ್ಲಿ ಕೆಲವು ಅಳಿವೆಗಳೂ, ದ್ವೀಪಗಳೂ ಈ ಖಂಡಕ್ಕೆ ಅತ್ಯಂತ ಉತ್ತರದಲ್ಲಿರುವ ಚೆಲ್ಯೂಸ್ಕಿನ್ ಎಂಬ ಭೂಶಿರವೂ ಇರುವುವು. ಆದರೆ ಉತ್ತರ ಸಾಗರದ ನೀರು ಸಾಮಾನ್ಯವಾಗಿ ವರ್ಷವೆಲ್ಲ ಚಳಿಯಿಂದ ಘನೀಭೂತವಾಗಿರುವುದರಿಂದ ಈ ತೀರ ಪ್ರದೇಶವು ಹಡಗುಗಳ ಸಂಚಾರಕ್ಕೆ ಸ್ವಲ್ಪವೂ ಅನುಕೂಲವಾಗಿಲ್ಲ. ಈಶಾನ್ಯದಲ್ಲಿರುವ ಬೆಹರಿಂಗ್ ಜಲಸಂಧಿಯು ಅಮೆರಿಕ ಖಂಡವನ್ನು ಏಷ್ಯಾ ಖಂಡದಿಂದ ಪ್ರತ್ಯೇಕಿಸುತ್ತದೆ.

ಪೂರ್ವ ಭಾಗದಲ್ಲಿ ಕೆಲವು ಉಪಸಮುದ್ರಗಳಿವೆ. ಈ ಉಪಸಮುದ್ರಗಳನ್ನು ದ್ವೀಪಗಳು ಸಾಗರದಿಂದ ಪ್ರತ್ಯೇಕಿಸುವುವು. ಅಲೂಷಿಯನ್ ದ್ವೀಪಗಳಿಂದ ಪ್ರತ್ಯೇಕಿಸಲ್ಪಟ್ಟಿರುವ ಬೆಹರಿಂಗ್ ಸಮುದ್ರ, ಕಾಮುಶ್ಚಾಟ್ಕ ಪರ್ಯಾಯದ್ವೀಪಕ್ಕೂ, ಕ್ಯೂರೈಲ್ ದ್ವೀಪಗಳಿಂದ ಆವರಿಸಲ್ಪಟ್ಟಿರುವ ಓಕಟಸ್ಕ್ ಸಮುದ್ರ, ಜಪಾನ್ ದ್ವೀಪಗಳಿಂದ ಪ್ರತ್ಯೇಕಿಸಲ್ಪಟ್ಟಿರುವ ಜಪಾನ್ ಸಮುದ್ರ ಮತ್ತು ಹಳದಿ ಸಮುದ್ರ, ಫಿಲಿಪೈನ್, ಬೊರ್ನಿಯೋ ದ್ವೀಪಗಳಿಂದ ಪ್ರತ್ಯೇಕಿಸಲ್ಪಟ್ಟಿರುವ ಚೀಣಾ ಸಮುದ್ರ ಇವುಗಳು ಉಪಸಮುದ್ರಗಳಾಗಿ ಕಾಣುತ್ತಿರುವುದನ್ನು ನೋಡಬಹುದು. ಈ ಖಂಡದ ಅತ್ಯಂತ ಪೂರ್ವ ಭೂಶಿರವು ಈಸ್ಟ್‌ಕೇಪ್. ಅತ್ಯಂತ ದಕ್ಷಿಣ ಭೂಶಿರವು ಮಲೆಯ ಪರ್ಯಾಯದ್ವೀಪದಲ್ಲಿರುವ ರೊಮೇನಿಯ ಎಂಬುದು.

ದಕ್ಷಿಣದಲ್ಲಿ ಬಂಗಾಳಕೊಲ್ಲಿ, ಅರಬ್ಬೀ ಸಮುದ್ರ, ಪಾರ್ಸಿಕೊಲ್ಲಿಗಳೂ, ಹಿಂದೂಚೀಣ, ಇಂಡಿಯ, ಅರೇಬಿಯ ಪರ್ಯಾಯದ್ವೀಪಗಳೂ, ಸಿಲೋನ್ ಮತ್ತು ಅಂಡಮಾನ್ ಮೊದಲಾದ ಸಣ್ಣ ದ್ವೀಪಗಳೂ ಇರುವುವು. ಕ್ರಾ ಭೂಸಂಧಿಯು ಹಿಂದೂಚೀಣವನ್ನೂ ಮಲೆಯಪರ್ಯಾಯದ್ವೀಪವನ್ನೂ ಸೇರಿಸುತ್ತದೆ. ಮಲಕ್ಕಾ ಜಲಸಂಧಿಯು ಸುಮಾತ್ರ ದ್ವೀಪವನ್ನು ಪ್ರತ್ಯೇಕಿಸುವುದು.

ಪಶ್ಚಿಮದಲ್ಲಿ ಕೆಂಪು ಸಮುದ್ರ, ಮೆಡಟರೇನಿಯನ್ ಸಮುದ್ರ, ಕಪ್ಪು ಸಮುದ್ರ, ಕ್ಯಾಸ್ಪಿಯನ್ ಸಮುದ್ರಗಳು ಇರುವುವು. ಬ್ಯಾಬೆಲ್‌ಮಾಂಡೆಬ್ ಜಲಸಂಧಿಯೂ ಸೂಯಿಸ್‌ಕಾಲುವೆಯೂ ಆಫ್ರಿಕವನ್ನು ಅರೇಬಿಯದಿಂದ ಪ್ರತ್ಯೇಕಿಸುತ್ತವೆ. ಇವೆರಡನ್ನೂ ಸೂಯಿಸ್ ಭೂಸಂಧಿ ಕೂಡಿಸುವುದು. ಕೆಂಪು ಸಮುದ್ರವು ಅಗಲದಲ್ಲಿ ಬಹಳ ಕಡಿಮೆ. ಇದು 1,400 ಮೈಲಿಗಳ ಉದ್ದವಾಗಿದೆ. ಸೂಯಿಸ್ ಕಾಲುವೆಯನ್ನು ಮಾಡಿದ ಮೇಲೆ ಇಲ್ಲಿ ವಿಶೇಷವಾಗಿ ಹಡಗುಗಳು ಸಂಚಾರಮಾಡುತ್ತಲಿವೆ. ಮೆಡಟರೇನಿಯನ್ ಸಮುದ್ರದಲ್ಲಿರುವ ಸೈಪ್ರಸ್ ದ್ವೀಪವು ಈ ಖಂಡಕ್ಕೆ ಸೇರಿದೆ. ಏಷ್ಯಾ ಮೈನರ್ ಪರ್ಯಾಯದ್ವೀಪದಲ್ಲಿರುವ ಬಾಬಾ ಭೂಶಿರವೇ ಈ ಖಂಡದ ಅತ್ಯಂತ ಪಶ್ಚಿಮದಲ್ಲಿರುವ ಭೂಶಿರವಾಗಿದೆ. ಡಾರ್ಡನೆಲ್ಸ್, ಬಾಸ್ಫೊರಸ್ ಜಲಸಂಧಿಗಳು ಯೂರೊಪು ಖಂಡದಿಂದ ಈ ಪರ್ಯಾಯದ್ವೀಪವನ್ನು ಪ್ರತ್ಯೇಕಿಸುತ್ತವೆ.

ಪೂರ್ವ ತೀರದಲ್ಲಿಯೂ, ದಕ್ಷಿಣ ತೀರದಲ್ಲಿಯೂ ಅನೇಕ ರೇವುಪಟ್ಟಣಗಳಿವೆ. ಅವುಗಳಲ್ಲಿ ಮುಖ್ಯವಾದುವು ಕ್ರಮವಾಗಿ ವ್ಲಾಡಿವೋಸ್ಟಾಕ್, ಯೋಕೋಹಾಮ, ಟೀನ್‌ಟ್ಸಿನ್, ಷಾಂಗ್ಹೈ, ಕ್ಯಾಂಟನ್, ಹಾಂಕಾಂಗ್, ಸಿಂಗಪೂರ್, ರಂಗೂನ್, ಕಲ್ಕತ್ತಾ, ಕೊಲೊಂಬೊ, ಬೊಂಬಾಯಿ, ಕರಾಚಿ, ಬುಷೈರ್ ಮತ್ತು ಏಡನ್ ಇವುಗಳ ಪ್ರಾಮುಖ್ಯವು ಮುಂದೆ ವಿವರಿಸಲ್ಪಡುವುದು. ಭೂಪಟದಲ್ಲಿ ಇವು ಇರುವ ಸ್ಥಳಗಳನ್ನು ನೋಡಿ.

**ಮೇಲ್ಮೈಯ ಲಕ್ಷಣ.**—ಈ ಏಷ್ಯಾ ಖಂಡವು ಉತ್ತರದಲ್ಲಿಯೂ, ಮಧ್ಯಭಾಗದಲ್ಲಿಯೂ ಬಹಳ ಅಗಲವಾಗಿರುವುದು. ದಕ್ಷಿಣ ಭಾಗದಲ್ಲಿ ಮಾತ್ರ ಅನೇಕ ಪರ್ಯಾಯದ್ವೀಪಗಳಿಂದ ಕೂಡಿರುವುದು. ಇದರಷ್ಟು ವಿಸ್ತಾರವಾದ ಭೂಭಾಗವು ಇನ್ನು ಯಾವ ಖಂಡದಲ್ಲಿಯೂ ಇಲ್ಲ.

ಈ ಭೂಖಂಡವನ್ನು ಸ್ವಾಭಾವಿಕವಾಗಿ ಮೂರುಭಾಗಗಳಾಗಿ ವಿಂಗಡಿಸಬಹುದು:—ಉತ್ತರದಲ್ಲಿರುವ ಮಹಾಸಮಭೂಮಿ ಪ್ರದೇಶ, ಮಧ್ಯದಲ್ಲಿರುವ ಪ್ರಸ್ಥಭೂಮಿ ಮತ್ತು ಪರ್ವತ ಪ್ರದೇಶ, ದಕ್ಷಿಣದಲ್ಲಿರುವ ಪರ್ಯಾಯದ್ವೀಪಗಳು—ಈ ಮುಖ್ಯ ವಿಭಾಗಗಳ ಜೊತೆಗೆ ತೀರದಲ್ಲಿರುವ ಮೈದಾನಗಳು, ನದಿಯ ಬಯಲುಗಳು ಮತ್ತು ಸಣ್ಣ ದ್ವೀಪಗಳು ಎಂಬ ಉಪಭಾಗಗಳನ್ನು ಸೇರಿಸಿಕೊಳ್ಳಬಹುದು.

(1) **ಉತ್ತರ ಭಾಗದ ದೊಡ್ಡ ಮೈದಾನ.**—ಈ ದೊಡ್ಡ ಮೈದಾನವು ಉತ್ತರದಲ್ಲಿ ಅಗಲವಾಗಿಯೂ, ದಕ್ಷಿಣದಲ್ಲಿ ಇಕ್ಕಟ್ಟಾಗಿಯೂ ಇರುವುದು. ಈ ದೊಡ್ಡ ಮೈದಾನದಲ್ಲಿ ಯೂರಲ್ ಪರ್ವತಗಳಿಂದ ಒಕಟಸ್ಕ್ ಸಮುದ್ರದ ವರೆಗೂ ಉತ್ತರ ಸಾಗರದಿಂದ ತಿಯನ್‌ಷಾನ್ ಪರ್ವತಗಳವರೆಗೂ ಹರಡಿಕೊಂಡಿರುವ ವಿಶಾಲವಾದ ಭಾಗಕ್ಕೆ ಸೈಬೀರಿಯ ಮೈದಾನವೆಂದೂ, ಕ್ಯಾಸ್ಪಿಯನ್ ಸಮುದ್ರದಿಂದ ಪಾಮಿರ್ ಪ್ರಸ್ಥಭೂಮಿಯವರೆಗೆ ಹರಡಿಕೊಂಡಿರುವ ಚಿಕ್ಕ ಭಾಗಕ್ಕೆ ತುರಾನ್ ಮೈದಾನವೆಂದೂ ಹೆಸರು. ಸೈಬೀರಿಯ ಮೈದಾನವು ಸಮುದ್ರ ಮಟ್ಟಕ್ಕಿಂತ ಸ್ವಲ್ಪ ಮಟ್ಟಿಗೆ ಎತ್ತರವಾಗಿರುವುದು. ತುರಾನ್ ಮೈದಾನವು ಸಮುದ್ರ ಮಟ್ಟಕ್ಕಿಂತ ಸ್ವಲ್ಪ ತಗ್ಗಾಗಿರುವುದು. ಆದುದರಿಂದ ಇಲ್ಲಿ ಬಿದ್ದ ಮಳೆಯ ನೀರು ಏರಲ್ ಸರೋವರಕ್ಕೆ ಹರಿದುಹೋಗುವುದು.

(2) **ಮಧ್ಯ ಭಾಗದ ಪ್ರಸ್ಥಭೂಮಿಗಳು ಮತ್ತು ಪರ್ವತಗಳು.**— ಈ ಖಂಡದಲ್ಲಿರುವಷ್ಟು ಎತ್ತರವಾದ ಪರ್ವತಸ್ತೋಮಗಳು, ಪ್ರಸ್ಥಭೂಮಿಗಳು ಇನ್ನು ಯಾವ ಖಂಡದಲ್ಲಿಯೂ ಇಲ್ಲ. ಇವು ಪಾಮಿರ್ ಪ್ರಸ್ಥಭೂಮಿಯಿಂದ ಪೂರ್ವ ಪಶ್ಚಿಮ ದಿಕ್ಕುಗಳಿಗೆ ಹಬ್ಬಿಕೊಂಡಿರುವುವು. ಪಾಮಿರ್ ಪ್ರಸ್ಥಭೂಮಿಯಿಂದ ಈಶಾನ್ಯಕ್ಕೆ ತಿಯನ್‌ಷಾನ್, ಅಲ್ಟೈ, ಯಬ್ಲೋನಾಯ್, ಸ್ಟಾನೋವಾಯ್ ಪರ್ವತಗಳು ಈಸ್ಟ್‌ಕೇಪಿನವರೆಗೂ ಹಬ್ಬಿರುವುವು. ಅಲ್ಲದೆ ಈ ಪ್ರಸ್ಥಭೂಮಿಯಿಂದ ಪೂರ್ವಕ್ಕೆ ಕ್ವೆನ್‌ಲೆನ್ ಪರ್ವತಗಳು ಹಬ್ಬಿರುವುವು. ಈ ಎರಡು ಪರ್ವತ ಪಙ್ಕ್ತಿಗಳ ಮಧ್ಯೆ ಗೋಬೀ ಮರುಭೂಮಿಯೂ, ಮಂಗೋಲಿಯ ಪ್ರಸ್ಥಭೂಮಿಯೂ ಇವೆ. ಪಾಮಿರ್ ಪ್ರಸ್ಥಭೂಮಿಯಿಂದ ಆಗ್ನೇಯ ಮುಖವಾಗಿ ಹಿಮಾಲಯ ಪರ್ವತಸ್ತೋಮವು ಪ್ರಸರಿಸಿರುವುದು. ಕ್ವೆನ್‌ಲೆನ್ ಮತ್ತು ಹಿಮಾಲಯಗಳಿಗೆ ಮಧ್ಯದಲ್ಲಿ ಟಿಬೆಟ್ ಪ್ರಸ್ಥಭೂಮಿ ಇರುವುದು. ಇದೇ ಪ್ರಪಂಚದಲ್ಲೆಲ್ಲಾ ಅತ್ಯಂತ ಎತ್ತರವಾದ (ಸುಮಾರು 18,000 ಅಡಿ) ಮತ್ತು ವಿಶಾಲವಾದ ಪ್ರಸ್ಥಭೂಮಿ. ಮಂಗೋಲಿಯ, ಟಿಬೆಟ್ ಪ್ರಸ್ಥಭೂಮಿಗಳಿಗೆ ಪೂರ್ವ ಭಾಗದಲ್ಲಿ ವಿಶಾಲವಾದ ಆಮೂರ್, ಹೊಯಾಂಗ್ಹೊ, ಯಾಂಗ್ಟಿಸಿಕಿಯಾಂಗ್ ನದಿಗಳ ಬಯಲುಗಳಿವೆ. ಪಾಮಿರ್ ಪ್ರಸ್ಥಭೂಮಿಯಿಂದ ಪಶ್ಚಿಮಕ್ಕೆ ಹಿಂದೂಕುಷ್, ಎಲ್‌ಬರ್ಜ್, ಕಾಕಸಸ್ ಮೊದಲಾದ ಪರ್ವತಗಳೂ, ಇರಾನ್ ಮತ್ತು ಏಷ್ಯಾಮೈನರ್ ಪ್ರಸ್ಥಭೂಮಿಗಳೂ ಇವೆ. ಈ ಪ್ರಸ್ಥಭೂಮಿಗಳಿಗೆ ವಾಯುವ್ಯದಲ್ಲಿ ಮೆಸಪೊಟೇಮಿಯ ಮೈದಾನವೂ, ಸಿರಿಯ ಮರುಭೂಮಿಯೂ ಇವೆ.

(3) **ದಕ್ಷಿಣದಲ್ಲಿರುವ ಪರ್ಯಾಯದ್ವೀಪಗಳು.**—ಈ ಖಂಡದಲ್ಲಿರುವಷ್ಟು ದೊಡ್ಡ ಪರ್ಯಾಯದ್ವೀಪಗಳು ಇನ್ನೆಲ್ಲಿಯೂ ಇಲ್ಲ. ಅರೇಬಿಯ ಪರ್ಯಾಯದ್ವೀಪವು ಸಾಧಾರಣವಾಗಿ ಎತ್ತರವುಳ್ಳ (3,000–6,000 ಅಡಿ)

ಪ್ರಸ್ಥಭೂಮಿಯಾಗಿದೆ. ಪೂರ್ವ ಪಶ್ಚಿಮ ತೀರಗಳಲ್ಲಿ ಮಾತ್ರ ಇಕ್ಕಟ್ಟಾದ ಮೈದಾನಗಳಿವೆ. ಇಂಡಿಯಾ ಪರ್ಯಾಯದ್ವೀಪದ ಉತ್ತರದಲ್ಲಿ ಸಿಂಧು, ಗಂಗಾ ನದಿಗಳ ದೊಡ್ಡ ಮೈದಾನವೂ, ಮಧ್ಯದಲ್ಲಿ ಮಧ್ಯ ಇಂಡಿಯ ಪ್ರಸ್ಥಭೂಮಿಯೂ, ದಕ್ಷಿಣದಲ್ಲಿ ದಖನ್ ಪ್ರಸ್ಥಭೂಮಿಯೂ, ಪೂರ್ವ ಪಶ್ಚಿಮ ತೀರಗಳ ಮೈದಾನಗಳೂ ಇವೆ. ಹಿಂದೂಚೀಣಾ ಪರ್ಯಾಯದ್ವೀಪದಲ್ಲಿ ಪರ್ವತಗಳು ಉತ್ತರ ದಕ್ಷಿಣವಾಗಿ ಹಬ್ಬಿರುವುವು. ಆದುದರಿಂದ ಇದರ ಮಧ್ಯದ ನದಿಯ ಬಯಲುಗಳೂ ಉತ್ತರ ದಕ್ಷಿಣವಾಗಿಯೇ ಹಬ್ಬಿರುವುವು.

(4) **ಸಣ್ಣ ವಿಭಾಗಗಳು.**—ಈ ಖಂಡದ ಮಧ್ಯ ಭಾಗದಲ್ಲಿಯೂ, ದಕ್ಷಿಣ ಭಾಗದಲ್ಲಿಯೂ ಇರುವ ಮುಖ್ಯವಾದ ನದಿಯ ಬಯಲುಗಳನ್ನೂ ತೀರದ ಮೈದಾನಗಳನ್ನೂ ಮೊದಲೇ ಸೂಚಿಸಿದೆ. ಸಿಲೋನ್ ದ್ವೀಪ ಮತ್ತು ಜಪಾನ್, ಪಿಲಿಪೈನ್, ಈಸ್ಟಿಂಡಿಯಾ ದ್ವೀಪಸ್ತೋಮಗಳಲ್ಲಿ ಪ್ರತಿಯೊಂದರ ಮಧ್ಯ ಭಾಗವೂ ಬೆಟ್ಟ ಗುಡ್ಡಗಳ ಪ್ರದೇಶವಾಗಿರುವುದೆಂದೂ, ಸಮುದ್ರದ ಅಂಚಿನಲ್ಲಿ ಇಕ್ಕಟ್ಟಾದ ಮೈದಾನಗಳಿರುವುವೆಂದೂ ಸಾಮಾನ್ಯವಾಗಿ ಹೇಳಬಹುದು. ಈ ದ್ವೀಪಸ್ತೋಮಗಳಲ್ಲಿರುವ ಪರ್ವತಗಳಲ್ಲಿ ಅನೇಕ ಪರ್ವತಗಳು ಅಗ್ನಿಪರ್ವತಗಳಾಗಿರುವುವು. ಇವುಗಳಲ್ಲಿ ಜಪಾನ್ ದೇಶದಲ್ಲಿರುವ ಫ್ಯೂಜಿಯಾಮ ಎಂಬುದು ಬಹು ಮುಖ್ಯವಾದುದು. ಈ ಅಗ್ನಿಪರ್ವತಗಳು ಯಾವಾಗಲೂ ಹೊಗೆಯಾಡುತ್ತಾ ಆಗಾಗ ಕಾದ ಕಲ್ಲುಮಣ್ಣುಗಳನ್ನು ಮೇಲಕ್ಕೆ ಎಸೆಯುವುವು. ಕೆಲವು ಅಗ್ನಿಪರ್ವತಗಳ ಮಧ್ಯೆ ಶಿಲಾರಸವು ಉಕ್ಕಿ ಬಂದು ಸುತ್ತುಮುತ್ತಿನ ಪ್ರದೇಶವನ್ನು ಹಾಳು ಮಾಡುವುದುಂಟು. ಅಗ್ನಿಪರ್ವತಗಳ ಪ್ರದೇಶದಲ್ಲಿ ಆಗಾಗ ಭೂಕಂಪವು ಆಗುತ್ತಲೇ ಇರುವುದು. ಒಂದೊಂದು ವೇಳೆ ಪ್ರಬಲವಾದ ಭೂಕಂಪವುಂಟಾಗಿ ಊರುಗಳು ಹಾಳಾಗಿ ನಷ್ಟವಾಗುವುದುಂಟು. ಆದುದರಿಂದ ಅಲ್ಲಿನ ಜನರು ಮಹಡಿಮನೆಗಳನ್ನು ಕಟ್ಟುವುದಿಲ್ಲ. ಜಪಾನಿನ ಅನೇಕ ಕಡೆಗಳಲ್ಲಿ ಕಾಗದ, ರಟ್ಟುಗಳಿಂದಲೂ, ಬಿದರಿನ ತಟ್ಟಿಗಳಿಂದಲೂ ಮನೆಗಳನ್ನು ಕಟ್ಟಿಕೊಂಡಿರುವರು.

**ನದಿಗಳು ಮತ್ತು ಸರೋವರಗಳು.**—ಈ ಖಂಡದಲ್ಲಿ ಅನೇಕ ನದಿಗಳೂ, ಸರೋವರಗಳೂ ಇವೆ. ಈ ನದಿಗಳಲ್ಲಿ ಮುಖ್ಯವಾದುವು ಪಾಮಿರ್ ಪ್ರಸ್ಥಭೂಮಿಯ ಸಮಾಪದಲ್ಲಿರುವ ಪರ್ವತಶ್ರೇಣಿಗಳಲ್ಲಿ ಹುಟ್ಟುವುವು. ಈ ಖಂಡದ ನದಿಗಳಲ್ಲಿ ಕೆಲವು ವಿಶೇಷವಾಗಿ ಕಣಿವೆಗಳಲ್ಲಿ ಹರಿಯುವುವು. ಬೇಸಗೆಯಲ್ಲಿ ಅನೇಕ ನದಿಗಳಲ್ಲಿ ನೀರು ಬತ್ತಿಹೋಗುವುದು. ಕೆಲವು ನದಿಗಳ ನೀರು ಚಳಿಗಾಲದಲ್ಲಿ ಗಡ್ಡೆ ಕಟ್ಟಿಕೊಂಡಿರುವುದು. ಆದುದರಿಂದ ಇಲ್ಲಿನ ನದಿಗಳು ಯೂರೊಪ್, ಉತ್ತರ ಅಮೆರಿಕ, ದಕ್ಷಿಣ ಅಮೆರಿಕ ಖಂಡಗಳ ನದಿಗಳಂತೆ ಹಡಗುಗಳ ಸಂಚಾರಕ್ಕೆ ಯೋಗ್ಯವಾಗಿಲ್ಲ. ಆಫ್ರಿಕ, ಉತ್ತರ ಅಮೆರಿಕ ಖಂಡಗಳಲ್ಲಿರುವಂತೆ ಈ ಖಂಡದಲ್ಲಿ

ವಿಶಾಲವಾದ ಸಿಹಿನೀರಿನ ಸರೋವರಗಳಿಲ್ಲ. ಆದರೆ ಅವುಗಳಿಗೆ ಬದಲಾಗಿ ಕ್ಯಾಸ್ಪಿಯನ್, ಏರಲ್, ಮೃತ್ಯು ಸರೋವರ ಮೊದಲಾದ ಅನೇಕ ಉಪ್ಪುನೀರಿನ ಸರೋವರಗಳಿವೆ.

ಈ ಖಂಡದ ನದಿಗಳನ್ನು 4 ಭಾಗಗಳಾಗಿ ವಿಂಗಡಿಸಬಹುದು:—

(1) ಸಾಗರಕ್ಕೆ ಸಂಗಮವಾಗದ ಅಥವಾ ದೇಶದ ಒಳಭಾಗದಲ್ಲಿ ಹರಿಯುವ ನದಿಗಳು, (2) ಉತ್ತರ ಸಾಗರಕ್ಕೆ ಸೇರುವ ನದಿಗಳು, (3) ಪೆಸಿಫಿಕ್ ಸಾಗರಕ್ಕೆ ಸೇರುವ ನದಿಗಳು ಮತ್ತು (4) ಹಿಂದೂಸಾಗರಕ್ಕೆ ಬೀಳುವ ನದಿಗಳು.

(1) **ದೇಶದ ಒಳಭಾಗದಲ್ಲಿ ಹರಿಯುವ ನದಿಗಳು.**—ಈ ಖಂಡದ ದೊಡ್ಡ ಮೈದಾನವಾದ ನೈರುತ್ಯ ಭಾಗವೂ, ಯೂರೋಪ್ ಖಂಡದ ಆಗ್ನೇಯ ಭಾಗವೂ ಅಂದರೆ ಕ್ಯಾಸ್ಪಿಯನ್, ಏರಲ್ ಸಮುದ್ರಗಳ ಸುತ್ತುಮುತ್ತಿನ ಪ್ರದೇಶಗಳೂ ಸೇರಿ ಒಂದು ಜಲಾನಯನಭೂಮಿಯಾಗಿದೆ. ಭೂಪಟದಲ್ಲಿ ಈ ಪ್ರದೇಶದ ನದಿಗಳು ಹರಿಯುವ ದಿಕ್ಕನ್ನು ನೋಡಿ, ನೆಲವು ಯಾವ ಕಡೆಗೆ ಇಳಿಜಾರಾಗಿದೆ ಎಂಬುದನ್ನು ಊಹಿಸಿ. ಜಕ್ಸಾರ್ಟೀಸ್, ವೋಲ್ಗ ಮೊದಲಾದ ನದಿಗಳು ಸಾಗರದ ಕಡೆಗೆ ಹರಿಯದೆ, ದೇಶದ ಒಳಭಾಗಕ್ಕೆ ಹರಿದು, ಉಪ್ಪುನೀರಿನ ಸರೋವರಗಳಾದ ಏರಲ್, ಕ್ಯಾಸ್ಪಿಯನ್ ಸಮುದ್ರಗಳಿಗೆ ಬೀಳುವುವು. ಈ ಒಳಭಾಗದ ಜಲಾನಯನಭೂಮಿಯೇ ಪ್ರಪಂಚದಲ್ಲೆಲ್ಲಾ ಅತಿವಿಸ್ತಾರವಾದುದು. ಆದರೂ ಇದು ಕೆಲವು ಕಡೆ ಸಮುದ್ರಮಟ್ಟಕ್ಕಿಂತ ತಗ್ಗಾಗಿರುವುದು.

ಕ್ಯಾಸ್ಪಿಯನ್ ಸಮುದ್ರಕ್ಕೆ ಅದರ ದಕ್ಷಿಣ ಪಶ್ಚಿಮ ಭಾಗಗಳಲ್ಲಿರುವ ಪರ್ವತಗಳಿಂದ ಹರಿದುಬರುವ ಅನೇಕ ಸಣ್ಣ ಸಣ್ಣ ನದಿಗಳು ಬಂದು ಸೇರುವುವು. ಏರಲ್ ಸಮುದ್ರಕ್ಕೆ ಸರ್‌ಡೇರಿಯ ಅಥವಾ ಜಕ್ಸಾರ್ಟೀಸ್ ಮತ್ತು ಅಮುಡೇರಿಯ ಅಥವ ಆಕ್ಸಸ್ ನದಿಗಳು ಬಂದು ಬೀಳುವುವು.

ಜಕ್ಸಾರ್ಟೀಸ್ ನದಿಯು ಎತ್ತರವಾದ ತಿಯನ್‌ಷಾನ್ ಪರ್ವತದಲ್ಲಿ ಹುಟ್ಟುವುದಲ್ಲದೆ ಆ ಪರ್ವತದ ಹಿಮದ ನೀರನ್ನೂ ಮಳೆಯ ನೀರನ್ನೂ ಪಡೆಯುವುದು. ಆದುದರಿಂದ ಇದು ವ್ಯವಸಾಯಕ್ಕೆ ಅನುಕೂಲವಾಗಿದೆ. ಈ ನದಿಯ ಬಯಲಿನಲ್ಲಿ ವಿಶೇಷವಾಗಿ ಹುಲ್ಲುಗಾವಲುಗಳಿರುವುದರಿಂದ ಇದರ ದಡದಲ್ಲಿರುವ **ಕೋಕಂದ್** ಪಟ್ಟಣದಿಂದ ವಿಶೇಷವಾಗಿ ದನಗಳ ತೊಗಲು ರಫ್ತಾಗುವುದು. ಆಕ್ಸಸ್ ನದಿಯು ಪಾಮಿರ್ ಪ್ರಸ್ಥಭೂಮಿಯಲ್ಲಿ ಹುಟ್ಟಿ ಏರಲ್ ಸಮುದ್ರಕ್ಕೆ ಹರಿಯುವುದರಿಂದ ಇದೂ ಜಕ್ಸಾರ್ಟೀಸ್ ನದಿಯಂತೆಯೇ ಉಪಯೋಗಕರವಾಗಿದೆ. ಇದರ ತೀರದಲ್ಲಿರುವ ಮುಖ್ಯ ಪಟ್ಟಣ **ಖೀವಾ.**

ಬಾಲ್ಕಷ್ ಸರೋವರಕ್ಕೆ ಅನೇಕ ಸಣ್ಣ ನದಿಗಳು ಹರಿದು ಬರುವುವು. ಮಧ್ಯ ಭಾಗದ ಪ್ರಸ್ಥಭೂಮಿ ಪ್ರದೇಶದಲ್ಲಿಯೂ ಅನೇಕ ಸಣ್ಣ ಸಣ್ಣ ಉಪ್ಪು

ನೀರಿನ ಸರೋವರಗಳಿವೆ. ಇವುಗಳಲ್ಲಿ ಲಾಬ್‌ನಾರ್ ಮತ್ತು ಮೃತ್ಯುಸರೋವರಗಳು ಪ್ರಸಿದ್ಧವಾದುವು. ತಿಯುನ್‌ಷಾನ್ ಪರ್ವತಕ್ಕೆ ಆಗ್ನೇಯ ದಿಕ್ಕಿನಲ್ಲಿರುವ ಲಾಬ್‌ನಾರ್ ಸರೋವರವು ಆಳದಲ್ಲಿ ಬಹಳ ಕಡಿಮೆ; ಅದರ ತುಂಬ ಸಾಮಾನ್ಯವಾಗಿ ಜೊಂಡು ಬೆಳೆದಿರುವುದು. ತಾರಿಂ ನದಿಯು ಈ ಸರೋವರವನ್ನು ಸೇರುವುದು. ಈ ನದಿ 1,700 ಮೈಲಿ ಉದ್ದವಾಗಿದ್ದರೂ ಮಳೆ ಬಾರದ ಪ್ರದೇಶದಲ್ಲಿ ಹರಿಯುವುದರಿಂದ ಬೇಸಗೆಯಲ್ಲಿ ಬತ್ತಿಹೋಗುವುದು. ಇದಕ್ಕೆ ಉಪನದಿಗಳಿಲ್ಲ. ಆದರೆ ಪರ್ವತಗಳಿಂದ ಜಾರುವ ಹಿಮದ ನೀರು ಬಂದು ಸೇರುವುದರಿಂದ ತಕ್ಕ ಮಟ್ಟಿಗೆ ವ್ಯವಸಾಯಕ್ಕೆ ಅನುಕೂಲವಾಗಿದೆ. ಈ ನದಿಯ ಬಯಲಿನಲ್ಲಿ ಕುರಿಗಳನ್ನು ಸಾಕುವುದು ಹೆಚ್ಚು. ಇದರ ತೀರದಲ್ಲಿರುವ **ಕ್ಯಾಷ್‌ಗರ್** ಪಟ್ಟಣದಲ್ಲಿ ಒಳ್ಳೆಯ ಉಣ್ಣೆಯ ಬಟ್ಟೆಗಳು ತಯಾರಾಗುತ್ತವೆ.

**ಮೃತ್ಯುಸರೋವರ.**—ಇದು ಸಿರಿಯಾ ದೇಶದಲ್ಲಿದೆ. ಸಮುದ್ರದ ಮಟ್ಟಕ್ಕಿಂತ 1,300 ಅಡಿಗಳಷ್ಟು ತಗ್ಗಾಗಿರುವುದು. ಇದರ ಸುತ್ತುಮುತ್ತಿನ ಪ್ರದೇಶಕ್ಕಿಂತ ತಗ್ಗಾದ ಭೂಭಾಗವು ಪೃಥ್ವಿಯಲ್ಲಿ ಎಲ್ಲಿಯೂ ಇಲ್ಲ. ಇಲ್ಲಿ ಸೆಕೆ ಹೆಚ್ಚಾಗಿರುವುದರಿಂದ ಈ ಸರೋವರದ ನೀರು ಸಮುದ್ರದ ನೀರಿಗಿಂತ ಬಹಳ ಉಪ್ಪಾಗಿರುವುದಲ್ಲದೆ; ಮಂದವಾಗಿಯೂ ಇರುವುದು. ಈ ಉಪ್ಪುನೀರಿನಲ್ಲಿ ಮೀನುಗಳೂ ಬದುಕಲಾರವು; ಮಂದವಾಗಿರುವುದರಿಂದ ಈ ನೀರಿನಲ್ಲಿ ಮನುಷ್ಯರೂ ಮುಳುಗಲಾರರು. ಜಾರ್ಡನ್ ನದಿಯು ಈ ಸರೋವರಕ್ಕೆ ಹರಿದುಬರುವುದು.

ಅನೇಕ ನದಿಗಳು ಈ ಖಂಡದ ಮಧ್ಯ ಭಾಗದದಲ್ಲಿ ಬಹು ದೂರ ಹರಿದು ಅಲ್ಲಲ್ಲಿ ಮರಳಿನಲ್ಲಿ ಇಂಗಿಹೋಗುವುವು. ಇಂಥ ನದಿಗಳಲ್ಲಿ ಆಫ್ಘಾನಿಸ್ಥಾನದಲ್ಲಿರುವ ಹೆಲ್ಮಂದ್ ಎಂಬುದು ಮುಖ್ಯವಾದುದು. ಈ ನದಿಯು ತಾರಿಂ ನದಿಯಂತೆಯೇ ಉಪಯೋಗಕರವಾಗಿದೆ. ಇದರ ತೀರದಲ್ಲಿ ವ್ಯಾಪಾರಕ್ಕೆ ಬಹು ಪ್ರಸಿದ್ಧಿಗೊಂಡಿರುವ **ಕಾಂದಹಾರ್** ಪಟ್ಟಣವಿರುವುದು.

(2) **ಉತ್ತರ ಸಾಗರಕ್ಕೆ ಬಂದು ಸೇರುವ ನದಿಗಳು.**—ಇವುಗಳಲ್ಲಿ ಮುಖ್ಯವಾದುವು ಇರ್ಟಿಷ್-ಓಬಿ ಎಂಬ ಯಮಳನದಿಗಳು ಮತ್ತು ಯುನಿಸಿ, ಲೀನ ನದಿಗಳು. ಇವುಗಳಲ್ಲಿ ಪ್ರತಿಯೊಂದೂ 2,000 ಮೈಲಿಗಿಂತ ಹೆಚ್ಚು ಉದ್ದವಾಗಿರುವುದು. ಇವು ಉತ್ತರ ಭಾಗದ ದೊಡ್ಡ ಮೈದಾನದಲ್ಲಿ ನಿಧಾನವಾಗಿ ಹರಿಯುವುವು. ಇವುಗಳಿಗೆ ಎಡಬಲಗಳಿಂದ ಅನೇಕ ಉಪನದಿಗಳು ಬಂದು ಸೇರುವುವು. ಆದರೆ ಇವು ಸಾಮಾನ್ಯವಾಗಿ ವರ್ಷವೆಲ್ಲ ನೀರು ಗಡ್ಡೆಕಟ್ಟಿಕೊಂಡಿರುವ ಉತ್ತರ ಸಾಗರವನ್ನು ಸೇರುವುವು. ಇವುಗಳ ಮೇಲ್ಭಾಗಗಳಲ್ಲಿಯೂ ವರ್ಷದಲ್ಲಿ ಆರು ತಿಂಗಳು ನೀರು ಗಡ್ಡೆಕಟ್ಟಿಕೊಂಡಿರುವುದು. ಆದುದರಿಂದ ಈ ನದಿಗಳಿಂದ ವ್ಯವಸಾಯಕ್ಕೂ, ವ್ಯಾಪಾರಕ್ಕೂ ಹೆಚ್ಚು ಪ್ರಯೋಜನವಿಲ್ಲ. ಲೀನಾ ನದಿಯ

ದಡದಲ್ಲಿರುವ **ಯೊಕಟಿಸ್ಕ್** ಪಟ್ಟಣವು ವ್ಯಾಪಾರಕ್ಕೆ ಪ್ರಸಿದ್ಧವಾಗಿದೆ. ಯೆಸಿಸಿ ನದಿಯ ಉಪನದಿಯಾದ ಅಂಗರನದಿಯು ಬೇಕಲ್ ಸರೋವರದಿಂದ ಹರಿದು ಬರುವುದು. ಹೀಗೆ ಈ ನದಿ ಹರಿಯುವುದರಿಂದ ಈ ಬೇಕಲ್ ಸರೋವರವು ಸಿಹಿ ನೀರಿನ ಸರೋವರವಾಗಿದೆ. ಇದು ಪೂರ್ವಾರ್ಧ ಗೋಳದಲ್ಲೆಲ್ಲಾ ಬಹಳ ದೊಡ್ಡ ದಾದ ಮತ್ತು ಪ್ರಪಂಚದಲ್ಲೆಲ್ಲಾ ಅತ್ಯಂತ ಆಳವಾದ ಸಿಹಿನೀರಿನ ಸರೋವರ ವಾಗಿದೆ.

(3) **ಪೆಸಿಫಿಕ್ ಸಾಗರಕ್ಕೆ ಹೋಗಿ ಬೀಳುವ ನದಿಗಳು.**—ಇವುಗಳಲ್ಲಿ ಮುಖ್ಯವಾದುವು ಆಮೂರ್, ಹೊಯಾಂಗ್ಹೊ, ಯಾಂಗ್ಟಿಸಿಕಿಯಾಂಗ್, ಸಿಕಿ ಯಾಂಗ್ ಮತ್ತು ಮಿಕಾಂಗ್. ಇವೆಲ್ಲ ಈ ಖಂಡದ ಮಧ್ಯಭಾಗದ ಪರ್ವತ ಪ್ರದೇಶಗಳಲ್ಲಿ ಹುಟ್ಟುವುದರಿಂದ ಮೇಲ್ಭಾಗದಲ್ಲಿ ವೇಗವಾಗಿ ಹರಿಯುವುವು. ಅಲ್ಲಿ ಇವು ಹಡಗುಗಳ ಸಂಚಾರಕ್ಕೆ ಅನುಕೂಲವಾಗಿಲ್ಲ; ಕೆಳಭಾಗದ ಮೈದಾನ ಗಳಲ್ಲಿ ಇವು ನಿಧಾನವಾಗಿ ಹರಿಯುವುವು; ಪರ್ವತಗಳಿಂದ ಬಂದ ಹಿಮದ ನೀರೂ ಮುಂಗಾರು ಹಿಂಗಾರು ಮಳೆಯ ನೀರೂ ಈ ನದಿಗಳಿಗೆ ವಿಶೇಷವಾಗಿ ಬರುವುದ ರಿಂದ ಮೈದಾನ ಭಾಗದಲ್ಲಿ ಇವು ವ್ಯವಸಾಯಕ್ಕೂ, ಹಡಗುಗಳ ಸಂಚಾರಕ್ಕೂ ಬಹು ಅನುಕೂಲವಾಗಿವೆ.

ಆಮೂರ್ ನದಿಯು ಯಾಬ್ಲೊನಾಯ್ ಪರ್ವತದಲ್ಲಿ ಹುಟ್ಟಿ, 3,000 ಮೈಲಿ ದೂರ ಹರಿದು ಒಕಟಸ್ಕ್ ಸಮುದ್ರವನ್ನು ಸೇರುವುದು. ಈ ನದಿಯಮುಖವು ಬಹು ಉತ್ತರದಲ್ಲಿರುವುದರಿಂದ ಅಲ್ಲಿ ವರ್ಷಕ್ಕೆ ಆರು ತಿಂಗಳು ನೀರು ಗಡ್ಡೆ ಕಟ್ಟಿ ಕೊಂಡಿರುವುದು.

ಹೊಯಾಂಗ್ಹೊ ನದಿಯು ಕ್ವೆನ್‌ಲುನ್ ಪರ್ವತಗಳಲ್ಲಿ ಹುಟ್ಟಿ, ಮಂಗೋ ಲಿಯ ಪ್ರಸ್ಥಭೂಮಿಯ ಮತ್ತು ಚೀಣದೇಶದ ಮೈದಾನದ ಮಾರ್ಗವಾಗಿ ಬಂದು ಡೊಂಕು ಡೊಂಕಾಗಿ ಹರಿದು ಹಳದೀ ಸಮುದ್ರವನ್ನು ಸೇರುವುದು. ಇದರ ಕೆಳಭಾಗದ ಬೈಲೆಲ್ಲಾ ಬಹು ಫಲವತ್ತಾದ ಹಳದಿಯ ಮಣ್ಣಿನಿಂದ ತುಂಬಿದೆ. ಈ ನದಿಯು ವಿಶೇಷವಾಗಿ ಮಣ್ಣು, ಮೆಕ್ಕಲನ್ನು ತಂದು ಪಾತ್ರವನ್ನು ಎತ್ತರ ವಾಗಿ ಮಾಡಿಕೊಳ್ಳುವುದರಿಂದ ಪ್ರವಾಹಕಾಲದಲ್ಲಿ ಇದು ದಡದಮೇಲೆ ಹೊರಳಿ ಅನೇಕ ಗ್ರಾಮಗಳನ್ನು ನಾಶಮಾಡುವುದುಂಟು. ಇದನ್ನು ತಪ್ಪಿಸುವುದಕ್ಕೋ ಸ್ಕರ ಇದರ ಎರಡು ದಡಗಳಲ್ಲಿಯೂ ಎತ್ತರವಾದ ಮತ್ತು ಬಲವಾದ ಏರಿ ಗಳನ್ನು ಕಟ್ಟಿರುವರು; ಆದರೂ ಒಂದೊಂದು ವೇಳೆ ಇದು ಈ ಏರಿಗಳನ್ನು ಒಡೆದು ಕೊಂಡು ದಡದಮೇಲೆ ನುಗ್ಗಿ ಸಾವಿರಾರು ಗ್ರಾಮಗಳನ್ನು ನಾಶಮಾಡುವುದು. ಆದುದರಿಂದ ಆ ದೇಶದವರು ಈ ನದಿಗೆ 'ಚೀಣಾ ದೇಶದ ದುಃಖಕಾರಿ' ಎಂಬ ಬಿರುದನ್ನು ಕೊಟ್ಟಿರುವರು.

ಯಾಂಗ್ಟಿಸಿಕಿಯಾಂಗ್ ನದಿ ಕ್ವೆನ್‌ಲುನ್ ಪರ್ವತಗಳಲ್ಲಿ ಹುಟ್ಟಿ, 3,200 ಮೈಲಿ ದೂರ ಹರಿದು ಚೀಣಾಸಮುದ್ರವನ್ನು ಸೇರುವುದು. ಇದೇ ಈ ಖಂಡ ದಲ್ಲೆಲ್ಲಾ ಅತ್ಯಂತ ಉದ್ದವಾದ ನದಿ. ಇದರ ಮುಖದ ಬಳಿ ವ್ಯಾಪಾರಕ್ಕೆ ಬಹು ಪ್ರಸಿದ್ಧವಾದ **ಷಾಂಘೇ** ಎಂಬ ರೇವುಪಟ್ಟಣವಿದೆ. ಈ ಪಟ್ಟಣಕ್ಕೆ 800 ಮೈಲಿ ದೂರದಲ್ಲಿ ಈ ನದಿಯ ದಡದಮೇಲೆ ಟೀ, ಕಬ್ಬಿಣ, ಕಲ್ಲಿದ್ದಲುಗಳನ್ನು ವಿಶೇಷ ವಾಗಿ ರಫ್ತುಮಾಡುವ ಹಾಂಕೋ ಪಟ್ಟಣವಿರುವುದು. ಷಾಂಘೇಯಿಂದ ಹಾಂಕೋವರೆಗೂ ಹಡಗುಗಳು ಸುಲಭವಾಗಿ ಸಂಚರಿಸಬಹುದು. ಈ ನದಿಯ ಬಯಲು ಫಲವತ್ತಾದ ಕೆಂಪು ಮಣ್ಣುಳ್ಳದಾಗಿಯೂ ಬಹು ಹೆಚ್ಚಾದ ಜನ ಸಾಂದ್ರತೆಯುಳ್ಳದಾಗಿಯೂ ಇದೆ.

ಸೀಕಿಯಾಂಗ್ ಅಥವ ಕ್ಯಾನ್ಟನ್ ನದಿ. ಇದರ ಮುಖದಲ್ಲಿ ವ್ಯಾಪಾರಕ್ಕೆ ಪ್ರಸಿದ್ಧವಾದ **ಕ್ಯಾಂಟನ್** ಎಂಬ ರೇವುಪಟ್ಟಣವಿರುವುದು. ಇದರ ಇದಿರಿಗೆ ಬ್ರಿಟಿಷರಿಗೆ ಸೇರಿದ ಹಾಂಕಾಂಗ್ ದ್ವೀಪವಿದೆ.

ಹೊಯಾಂಗ್ಹೊ, ಯಾಂಗ್ಟಿಸಿಕಿಯಾಂಗ್, ಕ್ಯಾನ್ಟನ್ ನದಿಗಳು ಚೀಣಾ ದೇಶದಲ್ಲಿ ವ್ಯವಸಾಯಕ್ಕೂ, ವ್ಯಾಪಾರಕ್ಕೂ ಅತ್ಯಂತ ಉಪಯೋಗಕರವಾಗಿವೆ. ವಿಧವಿಧವಾದ ದೋಣಿಗಳನ್ನು ಕಟ್ಟಿ, ಅವುಗಳಲ್ಲಿ ಮಾರಾಟಕ್ಕೆ ಸರಕುಗಳನ್ನು ನದಿಗಳ ಮೇಲೂ, ಅವುಗಳ ಕಾಲುವೆಗಳ ಮೇಲೂ ಸಾಗಿಸುವುದರಲ್ಲಿ ಚೀಣಾದೇಶ ದವರಿಗೆ ಸಮಾನರಾದವರು ಯಾರೂ ಇಲ್ಲ. ಇವರು ದೋಣಿಗಳ ಸಂಚಾರಕ್ಕೆ ಅನುಕೂಲವಾದ ಅನೇಕ ಕಾಲುವೆಗಳನ್ನು ಮಾಡಿರುವರು. ಈ ಕಾಲುವೆಗಳಲ್ಲಿ ಹೊಯಾಂಗ್ಹೊ, ಯಾಂಗ್ಟಿಸಿಕಿಯಾಂಗ್ ನದಿಗಳನ್ನು ಸೇರಿಸುವ ಕಾಲುವೆ ಮುಖ್ಯ ವಾದುದು. ಇದು 700 ಮೈಲಿ ಅಂದರೆ ಕಾವೇರಿ ನದಿಯ 1½ ಯಷ್ಟು ಉದ್ದವಾ ಗಿರುವುದು. ಈ ಪ್ರದೇಶದ ಅನೇಕ ಜನರು ಈ ನದಿಗಳಲ್ಲಿ ಮೀನು ಹಿಡಿಯುವ ಉದ್ಯೋಗದಿಂದ ಜೀವಿಸುತ್ತಿರುವರು.

(4) **ಹಿಂದೂಸಾಗರವನ್ನು ಸೇರುವ ನದಿಗಳು.**—ಇವುಗಳಲ್ಲಿ ಸಾಲ್ವಿನ್, ಇರವಾಡಿ, ಬ್ರಹ್ಮಪುತ್ರ, ಗಂಗೆ, ಸಿಂಧು, ಯೂಫ್ರೆಟಿಸ್, ಟೈಗ್ರಿಸ್ ನದಿಗಳು ಮುಖ್ಯವಾದುವು. ಇವು ಉಷ್ಣ ಹೆಚ್ಚಾಗಿರುವ ಪ್ರದೇಶಗಳಲ್ಲಿ ಹರಿ ಯುವುದರಿಂದ ಇವುಗಳ ನೀರು ಗಡ್ಡೆ ಕಟ್ಟಿಕೊಳ್ಳುವುದಿಲ್ಲ. ಆದರೆ ಹೆಚ್ಚಾದ ಉಷ್ಣದಿಂದ ಬೇಸಿಗೆಯಲ್ಲಿ ನೀರು ಕಡಿಮೆಯಾಗುವುದು. ಮಳೆಗಾಲದಲ್ಲಿ ಹೆಚ್ಚು ಮಳೆಯಿಂದ ನೀರು ದಡಗಳ ಮೇಲೆ ಹೊರಳುವುದೂ ಉಂಟು.

ಸಾಲ್ವಿನ್ ನದಿಯು ಉದ್ದವಾಗಿದ್ದರೂ ಪರ್ವತ ಸೀಮೆಯಲ್ಲಿ ಹರಿಯು ವುದರಿಂದ ವ್ಯವಸಾಯಕ್ಕಾಗಲಿ, ಹಡಗುಗಳ ಸಂಚಾರಕ್ಕಾಗಲಿ ಹೆಚ್ಚು ಉಪ ಯೋಗಕರವಾಗಿಲ್ಲ. ಈ ಪ್ರದೇಶದ ಕಾಡುಗಳಲ್ಲಿ ವಿಶೇಷವಾಗಿ ಬೆಳೆಯುವ

ತೇಗದ ಮರಗಳನ್ನು ಕಡಿದು ಇದರಮೇಲೆ ದಿಮ್ಮಿಗಳನ್ನು ತೇಲಿಬಿಟ್ಟು ಇದರ ಮುಖದಲ್ಲಿರುವ **ಮೌಲ್ಮೇನ** ರೇವುಪಟ್ಟಣಕ್ಕೆ ಸಾಗಿಸುವರು.

ಐರಾವತಿ ಅಥವ ಇರವಾಡಿ ನದಿಯು ಚೀಣಾದೇಶದಲ್ಲಿ ಹುಟ್ಟಿ, ಬರ್ಮಾ ದೇಶದಲ್ಲಿ ಹರಿದು ಬಂಗಾಳಕೊಲ್ಲಿಯನ್ನು ಸೇರುತ್ತದೆ. ಪರ್ವತ ಸೀಮೆಯಲ್ಲಿ ಹರಿಯುವ ಮೇಲ್ಭಾಗದಲ್ಲಿ ವಿನಾ, ಎಂದರೆ ರಂಗೂನ್ ರೇವು ಪಟ್ಟಣದಿಂದ ಭಾಮೊ ಪಟ್ಟಣದವರೆಗೂ ಈ ನದಿಯ ಮೇಲೆ ಸಣ್ಣ ಹಡಗುಗಳು ಸಂಚಾರ ಮಾಡಬಹುದು. ಆದುದರಿಂದ ಈ ನದಿಯ ಮಾರ್ಗವಾಗಿ ಇದರ ಬಯಲುಗಳಲ್ಲಿ ವಿಶೇಷವಾಗಿ ಬೆಳೆಯುವ ಅಕ್ಕಿಯನ್ನೂ, ಇದರ ಸಮೀಪದ ಪರ್ವತಗಳಲ್ಲಿ ಬೆಳೆಯುವ ತೇಗದ ಮರಗಳನ್ನೂ, ಉತ್ತರ ಭಾಗದ ಕೆಲವು ಕಡೆ ಸಿಕ್ಕುವ ಸೀಮೆಯೆಣ್ಣೆ ಯನ್ನೂ ರಫ್ತುಮಾಡುವರು.

ಬ್ರಹ್ಮಪುತ್ರಾ ಮತ್ತು ಗಂಗಾ ಎಂಬ ಯಮಳನದಿಗಳು.—ಬ್ರಹ್ಮಪುತ್ರಾ ನದಿಯು ಟಿಬೆಟ್ ದೇಶದಲ್ಲಿ ಹುಟ್ಟಿ ಬಹು ದೂರ ಪೂರ್ವಕ್ಕೆ ಹರಿದು ಅನಂತರ ಹಿಂದೂದೇಶವನ್ನು ಪ್ರವೇಶಿಸಿ, ಅಸ್ಸಾಂ, ಬಂಗಾಳಗಳ ಮಾರ್ಗವಾಗಿ ಹರಿದು ಗಂಗಾನದಿಯೊಡನೆ ಕೂಡಿ ಬಂಗಾಳಕೊಲ್ಲಿಯನ್ನು ಸೇರುವುದು. ಇದು ಬಹುದೂರದವರೆಗೂ ವೇಗವಾಗಿ ಹರಿಯುವುದರಿಂದ ಈ ನದಿಯಿಂದ ವ್ಯಾಪಾರಕ್ಕೆ ವಿಶೇಷ ಪ್ರಯೋಜನವಿಲ್ಲ. ಆದರೆ ಅಸ್ಸಾಂ ಬಂಗಾಳಗಳಲ್ಲಿ ವ್ಯವಸಾಯಕ್ಕೆ ಮಾತ್ರ ಸಹಕಾರಿಯಾಗಿದೆ.

ಗಂಗಾನದಿ—ಇದು ಹಿಮಾಲಯ ಪರ್ವತಗಳಲ್ಲಿ ಹುಟ್ಟಿ ಸುಮಾರಾಗಿ ಆಗ್ನೇಯ ದಿಕ್ಕಿಗೆ ಹರಿದು, ಬ್ರಹ್ಮಪುತ್ರಾ ನದಿಯೊಡನೆ ಸೇರಿ, ವಿಸ್ತಾರವಾದ ನದೀ ಮುಖಜಭೂಮಿಯನ್ನು ಮಾಡಿಕೊಂಡು ಅದರ ಮೇಲೆ ಅನೇಕ ಶಾಖೆಗಳಾಗಿ ಒಡೆದು ಬಂಗಾಳಕೊಲ್ಲಿಯನ್ನು ಸೇರುತ್ತದೆ. ಈ ಮುಖಗಳಲ್ಲಿ ಹೂಗ್ಲಿಯು ಹಡಗುಗಳ ಸಂಚಾರಕ್ಕೆ ಅನುಕೂಲವಾಗಿದೆ. ಇದರ ತೀರದಲ್ಲಿ **ಕಲ್ಕತ್ತ** ರೇವುಪಟ್ಟಣವಿರುವದು. ಈ ನದಿಯು ಹಿಮಪೋಷಿತವಾಗಿರುವುದರಿಂದಲೂ ಇದರ ಬೈಲಿನಲ್ಲಿ ವಿಶೇಷವಾಗಿ ಮಳೆ ಬೀಳುವುದರಿಂದಲೂ ಇದಕ್ಕೆ ಅನೇಕ ಉಪನದಿಗಳು ಬಂದು ಸೇರುವುದರಿಂದಲೂ ಸಣ್ಣಹಡಗುಗಳ ಸಂಚಾರಕ್ಕೆ ಬಹು ಅನುಕೂಲವಾಗಿದೆ. ಈ ನದಿಯು ವಿಶೇಷವಾಗಿ ಮಣ್ಣು ಮೆಕ್ಕಲನ್ನು ತರುವುದರಿಂದ ಇದರ ಬೈಲೆಲ್ಲ ಬಹು ಫಲವತ್ತಾಗಿದೆ. ಇಂಡಿಯಾ ದೇಶದಲ್ಲೆಲ್ಲಾ ಇದು ಬಹು ಪುಣ್ಯಕರವಾದ ನದಿಯೆಂದು ಭಾವಿಸಲ್ಪಟ್ಟಿದೆ. ಇದರ ದಡದಲ್ಲಿ ಕಾಶಿ (ಬೆನಾರಿಸ್), ಪ್ರಯಾಗ (ಅಲಹಾಬಾದ್) ಮೊದಲಾದ ಪ್ರಸಿದ್ಧವಾದ ಯಾತ್ರಾಸ್ಥಳಗಳಿವೆ.

ಸಿಂಧು ನದಿಯು ಹಿಮಾಲಯ ಪರ್ವತಗಳ ಉತ್ತರದಲ್ಲಿ ಹುಟ್ಟಿ, ಕಣಿವೆಗಳ ಮಾರ್ಗವಾಗಿ ದಕ್ಷಿಣಕ್ಕೆ ತಿರುಗಿ, ಪಂಜಾಬ್, ಸಿಂಧೂದೇಶಗಳಲ್ಲಿ ಹರಿದು ಅರಬ್ಬೀ ಸಮುದ್ರವನ್ನು ಸೇರುವುದು. ಇದರ ಉದ್ದ 1,800 ಮೈಲಿಗಳು. ಇದು ಗಂಗಾ, ಬ್ರಹ್ಮಪುತ್ರಾ ನದಿಗಳಿಗಿಂತ ಉದ್ದವಾಗಿದೆ. ಪಂಜಾಬಿನಲ್ಲಿ ಇದಕ್ಕೆ ಅನೇಕ ಉಪನದಿಗಳು ಬಂದು ಸೇರುವುವು. ಅಲ್ಲಿ ಇದರ ನೀರನ್ನು ವಿಶೇಷವಾಗಿ ವ್ಯವಸಾಯಕ್ಕೆ ಉಪಯೋಗಿಸುವರು. ಪಂಜಾಬಿನ ಕೆಳಭಾಗದಲ್ಲಿ ಉಪನದಿಗಳಿಲ್ಲ. ಅಲ್ಲಿ ಇದು ಮರುಭೂಮಿಗಳಲ್ಲಿ ಹರಿಯುವುದು. ಇದು ಹಿಮಪೋಷಿತ ನದಿಯಾಗಿದ್ದರೂ, ಮುಖದ ಕಡೆಗೆ ಹೋದ ಹಾಗೆಲ್ಲ ಇದರಲ್ಲಿ ನೀರು ಕಡಿಮೆಯಾಗುವುದು. ಆದುದರಿಂದ ಇದು ಹಡಗುಗಳ ಸಂಚಾರಕ್ಕೆ ಅನುಕೂಲವಾಗಿಲ್ಲ; ವ್ಯವಸಾಯಕ್ಕೆ ಬಹು ಅನುಕೂಲವಾಗಿದೆ. ಪ್ರವಾಹ ಕಾಲದಲ್ಲಿ ಹೊಯಾಂಗ್ಹೊ ನದಿಯಂತೆ ಇದು ದಡದಮೇಲೆ ಉರುಳುವುದರಿಂದ, ಇದರ ದಡಕ್ಕೆ ದೂರವಾಗಿ ದಿಣ್ಣೆಯಾದ ಸ್ಥಳಗಳಲ್ಲಿ ಪಟ್ಟಣಗಳನ್ನು ಕಟ್ಟಿರುವರು.

ಇಂಡಿಯಾದೇಶದ ದಕ್ಷಿಣ ಭಾಗದಲ್ಲಿರುವ ಗೋದಾವರಿ, ಕೃಷ್ಣಾ, ಕಾವೇರಿ ಮೊದಲಾದ ನದಿಗಳಲ್ಲಿ ಬೇಸಿಗೆಯಲ್ಲಿ ನೀರು ಬಹಳ ಕಡಿಮೆಯಾಗಿರುವುದರಿಂದ ಅವು ವ್ಯಾಪಾರಕ್ಕೆ ಅನುಕೂಲವಾಗಿಲ್ಲ. ವ್ಯವಸಾಯಕ್ಕೆ ಮಾತ್ರ ಉಪಯೋಗವಾಗಿವೆ.

ಯೂಫ್ರೆಟೆಸ್, ಟೈಗ್ರಿಸ್ ನದಿಗಳು ಮಧ್ಯ ಭಾಗದ ಪರ್ವತ ಸೀಮೆಯಲ್ಲಿ ಹುಟ್ಟಿ ದಕ್ಷಿಣಕ್ಕೆ ಹರಿದು ಕೊನೆಗೆ ಒಟ್ಟುಗೂಡಿ ಪಾರ್ಸಿ ಕೊಲ್ಲಿಯನ್ನು ಸೇರುವುವು. ಈ ಯಮಳನದಿಗಳ ಬೈಲಿಗೆ ಮೆಸೊಪೊಟೇಮಿಯ ಮೈದಾನವೆಂದು ಹೆಸರು. ಇಲ್ಲಿ ನೆಲವು ಫಲವತ್ತಾಗಿದ್ದರೂ ಬಹು ಕಾಲದಿಂದಲೂ ಸರಿಯಾದ ರಾಜ್ಯಭಾರವಿಲ್ಲದುದರಿಂದ ಸಾಗುವಳಿ ಬಹಳ ಕಡಿಮೆಯಾಗಿರುವುದು. ಈ ಪ್ರದೇಶದಲ್ಲಿ ಮಳೆ ಬಹಳ ಕಡಿಮೆಯಾದುದರಿಂದ, ಹಿಮದ ನೀರಿನಿಂದ ಪ್ರವಾಹವು ಬರುವ ಕಾಲದಲ್ಲಿ ವಿನಾ ಉಳಿದ ಕಾಲಗಳಲ್ಲಿ ಹಡಗುಗಳ ಸಂಚಾರಕ್ಕೆ ಈ ನದಿಗಳು ಅನುಕೂಲವಾಗಿಲ್ಲ. ಟೈಗ್ರಿಸ್ ನದಿಯ ದಡದಲ್ಲಿರುವ **ಬಾಗ್ದಾದ್** ಪಟ್ಟಣವು ವ್ಯಾಪಾರಕ್ಕೆ ಪ್ರಸಿದ್ಧವಾದ ಸ್ಥಳವಾಗಿದೆ.

**ವಾಯುಗುಣ ಮತ್ತು ಮಳೆ.**— ಈ ಖಂಡದಲ್ಲಿ ಶೀತೋಷ್ಣಗಳ ವ್ಯತ್ಯಾಸ ಬಹಳ ಹೆಚ್ಚು. ಕೆಲವು ಪ್ರದೇಶಗಳಲ್ಲಿ ಸೆಕೆ ಬಹಳ ಹೆಚ್ಚು. ಇನ್ನು ಕೆಲವು ಪ್ರದೇಶಗಳಲ್ಲಿ ಚಳಿ ಬಹಳ ಹೆಚ್ಚು. ಹೀಗೆ ಬೇರೆ ಬೇರೆ ಪ್ರದೇಶಗಳಲ್ಲಿ ಶೀತೋಷ್ಣಗಳ ವ್ಯತ್ಯಾಸಗಳು ಅತ್ಯಧಿಕವಾಗಿರುವುದಲ್ಲದೆ, ಒಂದೊಂದು ಪ್ರದೇಶದಲ್ಲಿಯೇ ಹಗಲಿಗೂ ರಾತ್ರಿಗೂ ಮತ್ತು ನಡುಬೇಸಿಗೆಗೂ, ನಡುಚಳಿಗಾಲಕ್ಕೂ ವಿಶೇಷವಾಗಿ ವ್ಯತ್ಯಾಸಗಳು ಕಾಣಬರುವುವು. ಈ ವ್ಯತ್ಯಾಸಗಳಿಗೆ

ಕೆಲವು ಉದಾಹರಣೆಗಳನ್ನು ಕೊಡಬಹುದು. ಸೈಬೀರಿಯಾ ದೇಶದಲ್ಲಿ ಪ್ರಪಂಚದಲ್ಲಿ ಜನರು ವಾಸಮಾಡುವ ಯಾವ ಪ್ರದೇಶದಲ್ಲಿಯೂ ಆಗದಷ್ಟು ಚಳಿಯಾಗುವುದು. ದಕ್ಷಿಣ ಇಂಡಿಯದಲ್ಲಿ ಸೆಕೆ ಬಹಳ ಹೆಚ್ಚು. ಅರೇಬಿಯದಲ್ಲಿ ಹಗಲು ಹೊತ್ತಿನಲ್ಲಿ ಸೆಕೆ ವಿಪರೀತವಾಗಿರುವುದಲ್ಲದೆ ರಾತ್ರಿಯಲ್ಲಿ ನೀರು ಗಡ್ಡೆಯಾಗುವಷ್ಟು ಶೀತವಾಗಿರುವುದು. ಉತ್ತರ ಇಂಡಿಯಾದಲ್ಲಿ ಬೇಸಿಗೆಯಲ್ಲಿ ಸೆಕೆ ಬಹು ಹೆಚ್ಚು; ಚಳಿಗಾಲದಲ್ಲಿ ಚಳಿ ಬಹಳ ಹೆಚ್ಚು.

ಹೀಗೆ ಈ ಖಂಡದ ನಾನಾಪ್ರದೇಶಗಳ ವಾಯುಗುಣದಲ್ಲಿ ವಿಶೇಷ ವ್ಯತ್ಯಾಸಗಳು ತೋರಿಬರಲು ಕಾರಣವೇನೆಂದರೆ:—

(1) ಈ ಖಂಡವು ಸಮಭಾಜಕ ವೃತ್ತದಿಂದ ಉತ್ತರ ಅಕ್ಷಾಂಶ 77° ಗಳವರೆಗೂ ಪ್ರಸರಿಸಿರುವುದರಿಂದ ಈ ಖಂಡದಲ್ಲಿ ಎಲ್ಲಾ ವಲಯಗಳ ವಾಯುಗುಣವೂ ತೋರಿಬರುವುದು. ಈ ಖಂಡದಲ್ಲಿರುವಂತೆಯೇ ಉತ್ತರ ಅಮೆರಿಕದಲ್ಲಿ ಅಕ್ಷಾಂಶ ಭೇದಗಳಿರುವುವು. ಉಳಿದ ಯಾವ ಖಂಡವೂ ಇಷ್ಟು ಅಕ್ಷಾಂಶಗಳಲ್ಲಿ ಪ್ರಸರಿಸಿಲ್ಲ.

(2) ಈ ಖಂಡದ ನಾನಾಪ್ರದೇಶಗಳ ಎತ್ತರದಲ್ಲಿ ಬಹು ವ್ಯತ್ಯಾಸವಿರುವುವು. ಪ್ರಪಂಚದಲ್ಲಿ ಅತ್ಯಂತ ತಗ್ಗಿನಲ್ಲಿರುವ ಮೃತ್ಯುಸರೋವರ ಪ್ರದೇಶವೂ, ಅತ್ಯಂತ ಎತ್ತರವಾದ ಎವರೆಸ್ಟ್ ಶಿಖರವೂ ಈ ಖಂಡದಲ್ಲಿ ಇರುವುವು. ಹಿಮಾಲಯದ ಸಾಲುಗಳೇ ಅತ್ಯಂತ ಎತ್ತರವಾದ ಪರ್ವತಗಳು. ಟಿಬೆಟ್ ಪ್ರಸ್ಥಭೂಮಿಯೇ ಅತ್ಯಂತ ಉನ್ನತವಾದ ಪ್ರಸ್ಥಭೂಮಿ. ಉತ್ತರ ಭಾಗದ ದೊಡ್ಡ ಮೈದಾನ, ಗಂಗಾನದಿಯ ಬೈಲು ಮೊದಲಾದ ಮೈದಾನಗಳು ಸಮುದ್ರ ಮಟ್ಟಕ್ಕಿಂತ ಸ್ವಲ್ಪ ಮಟ್ಟಿಗೆ ಎತ್ತರವಾಗಿರುವುವು.

(3) ಈ ಖಂಡವು ದಕ್ಷಿಣ ಭಾಗದಲ್ಲಿ ವಿನಾ ಉಳಿದ ಭಾಗಗಳಲ್ಲಿ ಬಹಳ ಅಗಲವಾಗಿರುವುದು. ಈ ಖಂಡಕ್ಕೆ ಪಶ್ಚಿಮದಲ್ಲಿ ಯೂರೋಪ್ ಖಂಡವಿದೆ. ಈ ಖಂಡದಲ್ಲಿ ಸ್ವಲ್ಪ ಮಟ್ಟಿಗೆ ದಕ್ಷಿಣದಲ್ಲಿ ವಿನಾ ಸಮುದ್ರವು ದೇಶದೊಳಕ್ಕೆ ನುಗ್ಗಿಲ್ಲ. ಆದುದರಿಂದ ಈ ಖಂಡದ ಅನೇಕ ಭಾಗಗಳು ಸಮುದ್ರಕ್ಕೆ ಬಹು ದೂರವಾಗಿವೆ.

ಅತ್ಯಂತ ವ್ಯತ್ಯಾಸವುಳ್ಳ ಈ ಖಂಡದ ವಾಯುಗುಣವನ್ನು ತಿಳಿಯುವುದಕ್ಕಾಗಿ ಈ ಖಂಡದ ಮೇಲ್ಮೈಯ ಸ್ವಾಭಾವಿಕ ವಿಭಾಗಗಳನ್ನು ಸಾಮಾನ್ಯವಾಗಿ ಅನುಸರಿಸಿ ಇದನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು:—

(1) **ಉತ್ತರಭಾಗದ ಶೀತಪ್ರದೇಶಗಳು.**—ಉತ್ತರಭಾಗದ ದೊಡ್ಡ ಮೈದಾನ. ಇದು ಬಹಳ ಉತ್ತರದಲ್ಲಿರುವುದರಿಂದ ಶೀತಪ್ರದೇಶವಾಗಿದೆ.

ಇಲ್ಲಿ ಚಳಿಗಾಲದಲ್ಲಿ ಸದಾ ಹಿಮ ಬೀಳುತ್ತಲೇ ಇರುವುದರಿಂದ ಸೂರ್ಯನ ಕಾಣಿಸುವುದೇ ಅಪೂರ್ವ. ನದಿಗಳಲ್ಲಿಯೂ, ಸರೋವರಗಳಲ್ಲಿಯೂ ನೀರು ಗಡ್ಡೆ ಕಟ್ಟಿಕೊಳ್ಳುವುದು. ಸಾಗರಕ್ಕೆ ದೂರದಲ್ಲಿರುವ ದೇಶದ ಒಳಭಾಗಗಳಲ್ಲಿ ಈ ಕಾಲದಲ್ಲಿ ಚಳಿ ಇನ್ನೂ ವಿಪರೀತವಾಗಿರುವುದು. ಈ ಭಾಗದಲ್ಲಿ ಬೇಸಿಗೆಯು ಸ್ವಲ್ಪ ಕಾಲ ಮಾತ್ರ ಇರುವುದು. ಆಗ ಸೂರ್ಯನು ಅಂತರಿಕ್ಷದಲ್ಲಿ ಬಹಳ ಎತ್ತರದಲ್ಲಿಲ್ಲದಿದ್ದರೂ ಬಹಳ ಹೊತ್ತು ಪ್ರಕಾಶಿಸುವುದರಿಂದ (ಎಂದರೆ ಹಗಲು ದೀರ್ಘವಾಗಿರುವುದರಿಂದ) ತಕ್ಕ ಮಟ್ಟಿಗೆ ಸೆಕೆಯಾಗಿರುವುದು. ಆಗ ಮಂಜುಗಡ್ಡೆಗಳು ಕರಗಿ ಸ್ವಲ್ಪ ಮಟ್ಟಿಗೆ ಮಳೆಯಾಗುವುದು.

(2) **ಮಧ್ಯ ಭಾಗದ ಪರ್ವತ ಪ್ರಸ್ಥಭೂಮಿಗಳು ಮತ್ತು ಮರುಭೂಮಿಗಳು.**—ಅನೇಕ ಅಕ್ಷಾಂಶಗಳಲ್ಲಿ ಇಲ್ಲದೇ ಇದ್ದರೂ ಎತ್ತರವಾಗಿರುವುದರಿಂದ ಹಿಮಾಲಯ ಮೊದಲಾದ ಪರ್ವತಗಳ ಮೇಲೂ, ಟಿಬೆಟ್, ಪಾಮಿರ್ ಮೊದಲಾದ ಪ್ರಸ್ಥಭೂಮಿಗಳಲ್ಲಿಯೂ ಚಳಿ ಬಹಳ ಹೆಚ್ಚಾಗಿರುವುದು. ಮುಂಗಾರುಗಾಳಿಗಳಿಂದ ಹಿಮಾಲಯ ಮೊದಲಾದ ಪರ್ವತಗಳ ದಕ್ಷಿಣ ಭಾಗದಲ್ಲಿ ವಿಶೇಷವಾಗಿ ಮಳೆ ಬೀಳುವುದು. ಆದರೆ ಗಾಳಿಯಲ್ಲಿರುವ ನೀರಿನ ಆವಿಯು ಮಳೆಯಾಗಿ ಮೊದಲೇ ಬಿದ್ದುಹೋಗಿರುವುದರಿಂದ ಪರ್ವತ ಪ್ರಸ್ಥಭೂಮಿಗಳಲ್ಲಿ ಮಳೆಯಾಗುವುದು ಬಹಳ ಕಡಿಮೆ.

ಅರೇಬಿಯ, ಇರಾನ್, ಬೆಲುಚಿಸ್ಥಾನ, ಥಾರ್, ಗೋಬಿ ಮೊದಲಾದ ಮರುಭೂಮಿಗಳಲ್ಲಿ ಮಳೆ ಬೀಳುವುದು ಬಹಳ ಅಪೂರ್ವ. ಅಲ್ಲಿ ಹಗಲು ವಿಪರೀತ ಸೆಕೆಯಾಗಿಯೂ, ರಾತ್ರಿ ವಿಪರೀತ ಚಳಿಯಾಗಿಯೂ ಇರುವುದು.

(3) **ದಕ್ಷಿಣ ಭಾಗದ ಮುಂಗಾರು ಹಿಂಗಾರು ಪ್ರದೇಶಗಳು.**—ಅರೇಬಿಯ ದೇಶದ ದಕ್ಷಿಣದ ಕೊನೆ, ಇಂಡಿಯ, ಹಿಂದೂಚೀಣ, ಚೀಣದೇಶದ ಮೈದಾನ ಪ್ರದೇಶ, ಜಪಾನ್, ಈಸ್ಟಿಂಡಿಯಾ ದ್ವೀಪಸ್ತೋಮ ಇವುಗಳ ಮೇಲೆ ಮುಂಗಾರು ಗಾಳಿಗಳು ಬೀಸುವುವು. ಜಪಾನ್ ದೇಶದ ವಾಯುಗುಣವು ಅಕ್ಷಾಂಶ ಮತ್ತು ಸಮುದ್ರದ ಸಾಮೀಪ್ಯಗಳಿಂದ ಸಮಧಾತುವಾಗಿರುವುದು. ಉಳಿದ ಪ್ರದೇಶಗಳೆಲ್ಲ ಬಹು ಉಷ್ಣಪ್ರದೇಶಗಳಾಗಿರುವುವು. ಅಲ್ಲಿ ಬೇಸಗೆಯಲ್ಲಿ ಸೆಕೆ ಬಹಳ ಹೆಚ್ಚು; ಮಳೆ ಬಿದ್ದ ಮೇಲೆ ಸ್ವಲ್ಪ ಸೆಕೆ ಕಡಿಮೆಯಾಗುವುದು. ಸಮುದ್ರತೀರಗಳಲ್ಲಿ ಚಳಿಗಾಲದಲ್ಲಿ ಚಳಿ ಸಾಮಾನ್ಯವಾಗಿರುವುದು. ದೇಶದ ಒಳಭಾಗದಲ್ಲಿ ಮಾತ್ರ ಸ್ವಲ್ಪ ಹೆಚ್ಚಾಗಿರುವುದು. ಈ ಪ್ರದೇಶಗಳ ವಾಯುಗುಣವನ್ನೂ ಮಳೆಯನ್ನೂ ತಿಳಿಯಬೇಕಾದರೆ ಅಲ್ಲಿ ಬೀಸುವ ಮುಂಗಾರು ಹಿಂಗಾರುಗಳ ವಿಷಯವನ್ನು ವಿವರವಾಗಿ ತಿಳಿಯಬೇಕಾದುದು ಆವಶ್ಯಕ.

ಮಾರ್ಚಿ ತಿಂಗಳಿಂದ ಜೂನ್ ತಿಂಗಳವರೆಗೆ ಸೂರ್ಯನು ಕರ್ಕಾಟಕ ಸಂಕ್ರಾಂತಿ ವೃತ್ತದ ಸಮೀಪದಲ್ಲಿರುವ ಭಾಗಗಳಿಗೆ ಇದಿರಾಗಿರುವುದರಿಂದಲೂ,

ಅಲ್ಲಿ ಆ ಕಾಲದ ಅಹಃಪ್ರಮಾಣವು ಹೆಚ್ಚಾಗಿರುವುದರಿಂದಲೂ, ಅಲ್ಲಿನ ಭೂಭಾಗಗಳು ವಿಶೇಷವಾಗಿ ಕಾದುಹೋಗುವುದರಿಂದ ಅಲ್ಲಿನ ಗಾಳಿಯೂ ವಿರಳವಾಗಿ ಮೇಲಕ್ಕೇರುವುದು. ಆದರೆ ಅದೇ ಕಾಲದಲ್ಲಿ ದಕ್ಷಿಣದಲ್ಲಿರುವ ಸಾಗರದ ಮೇಲಿನ ಗಾಳಿಯು ಕಡಿಮೆ ಶಾಖವುಳ್ಳದ್ದಾಗಿಯೂ, ಹೆಚ್ಚು ಸಾಂದ್ರತೆಯುಳ್ಳದ್ದಾಗಿಯೂ ಇರುವುದರಿಂದ, ನೈರುತ್ಯದಿಕ್ಕಿನಿಂದ ಕರ್ಕಾಟಕ ಸಂಕ್ರಾಂತಿ ವೃತ್ತದ ಕಡೆಗೆ ಬೀಸುವುದು. ಈ ನೈರುತ್ಯಮಾರುತ ಅಥವಾ ಮುಂಗಾರು ಗಾಳಿಯು ಉಷ್ಣವಲಯದ ಸಾಗರದ ಮೇಲಿನಿಂದ ಬೀಸುವುದರಿಂದ ಇದರಲ್ಲಿ ವಿಶೇಷವಾಗಿ ತೇವವಿರುವುದು.

ಈ ಮಾರುತವು ಬೀಸುವಾಗ ಅಡ್ಡಲಾಗಿ ಸಿಕ್ಕುವ ಪರ್ವತ ಪ್ರುಷ್ಠಭೂಮಿಗಳ ಕಡೆಗಳಲ್ಲಿ ಮಳೆ ಬಹು ಹೆಚ್ಚಾಗಿ ಬೀಳುವುದು. ಹೀಗೆ ಪರ್ವತಗಳು ಗಾಳಿಯನ್ನು ತಡೆಯದ ಕಡೆಗಳಲ್ಲಿಯೂ, ಅವುಗಳ ಆಚೆಗೂ ಮಳೆ ಕಡಿಮೆ. ದಕ್ಷಿಣ ಇಂಡಿಯ, ಬರ್ಮಗಳ ಪಶ್ಚಿಮದಲ್ಲಿರುವ ಬೆಟ್ಟಗಳು ಈ ಗಾಳಿಯನ್ನು ತಡೆಯುವುದರಿಂದ, ಪಶ್ಚಿಮತೀರದ ಮೈದಾನಗಳಲ್ಲಿ 100 ಅಂಗುಲಕ್ಕಿಂತ ಹೆಚ್ಚಾಗಿಯೇ ಮಳೆಯಾಗುವುದು. ಆದರೆ ಆ ಬೆಟ್ಟಗಳ ಪೂರ್ವ ಭಾಗಕ್ಕೆ ಅಂದರೆ ದಖನ್ನಿಗೂ ಬರ್ಮ ದೇಶದ ಮಧ್ಯ ಭಾಗಕ್ಕೂ, ಈ ಗಾಳಿಯು ಹೋಗುವಾಗ ಅದರ ತೇವವು ಕಡಿಮೆಯಾಗುವುದರಿಂದ ಅಲ್ಲಿ ಮಳೆ ಬೀಳುವುದು ಕಡಿಮೆ. ಈ ಗಾಳಿಯು ಹಿಮಾಲಯ ಪರ್ವತಗಳಿಂದ ತಡೆಯಲ್ಪಟ್ಟಾಗ ಉತ್ತರ ಹಿಂದೂಸ್ಥಾನದಲ್ಲಿ ಹೆಚ್ಚಾಗಿ ಮಳೆ ಬೀಳುವುದು. ಅಸ್ಸಾಮಿನಲ್ಲಿರುವ ಚಿರಾಪುಂಜಿಯಲ್ಲಿ ವರ್ಷಕ್ಕೆ 600 ಅಂಗುಲ ಮಳೆಯಾಗುವುದು. ಸಿಂಧೂದೇಶ, ರಾಜಪುಟಾಣಗಳಲ್ಲಿ ಈ ಗಾಳಿಯನ್ನು ತಡೆಯತಕ್ಕ ಬೆಟ್ಟಗಳಿಲ್ಲದುದರಿಂದ ಮಳೆ ಕಡಿಮೆ. ಹಿಂದೂ ಚೀಣದ ಪೂರ್ವಭಾಗ, ಚೀಣಾ, ಜಪಾನ್, ಈಸ್ಟಿಂಡಿಯ ದ್ವೀಪಸ್ತೋಮಗಳಿಗೆ ಈ ಗಾಳಿಯು ಆಗ್ನೇಯದಿಂದ ಬೀಸಿ ವಿಶೇಷವಾಗಿ ಮೋಡಗಳನ್ನು ತಂದು ಅಲ್ಲಿರುವ ಪರ್ವತಗಳಿಂದ ತಡೆಯಲ್ಪಟ್ಟು ಹೆಚ್ಚಾಗಿ ಮಳೆ ಸುರಿಸುವುದು.

ಈ ರೀತಿಯಲ್ಲಿ ಮುಂಗಾರುಗಾಳಿಯು ಸಾಮಾನ್ಯವಾಗಿ ಜೂನ್ ತಿಂಗಳಿಂದ ಸೆಪ್ಟಂಬರ್ ತಿಂಗಳವರೆಗೂ ಮಳೆಯನ್ನು ಸುರಿಸುವುದು. ಅಕ್ಟೋಬರ್ ತಿಂಗಳಿಂದ ಮಾರ್ಚಿ ತಿಂಗಳವರೆಗೆ ಕರ್ಕಾಟಕ ಸಂಕ್ರಾಂತಿ ವೃತ್ತದ ಪ್ರದೇಶಗಳಲ್ಲಿ ಸೂರ್ಯನು ಓರೆಯಾಗಿ ಕಾಣುವುದರಿಂದಲೂ, ಅಹಃಪ್ರಮಾಣವು ಕಡಿಮೆಯಾಗಿರುವುದರಿಂದಲೂ, ಅಂದರೆ ಅಲ್ಲಿ ಚಳಿಗಾಲವಾಗಿರುವುದರಿಂದ ಅಲ್ಲಿನ ಗಾಳಿಯು ಹೆಚ್ಚು ಶಾಖವಿರುವ ಸಮಭಾಜಕ ವೃತ್ತದ ಕಡೆಗೆ ಈಶಾನ್ಯದಿಂದ ಬೀಸುವುದು. ಇದನ್ನು ಈಶಾನ್ಯ ಮಾರುತ ಅಥವ ಹಿಂಗಾರು ಗಾಳಿ ಎಂದು ಕರೆಯಬಹುದು. ಈ ಗಾಳಿಯು ಹೆಚ್ಚಾಗಿ ಭೂಭಾಗಗಳ ಮೇಲೆಯೇ ಬೀಸಿಕೊಂಡು ಬರುವುದ

ರಿಂದಲೂ, ಮುಂಗಾರಿಗಿಂತ ಇದರಲ್ಲಿ ಶಾಖವು ಕಡಿಮೆಯಾಗಿರುವುದರಿಂದಲೂ ಮುಂಗಾರಿಗಿಂತ ಕಡಿಮೆಯಾಗಿ ಮಳೆಯಾಗುವುದು. ಆದರೂ ದಕ್ಷಿಣ ಇಂಡಿಯದ ಪೂರ್ವ ಭಾಗ, ಸಿಲೋನ್, ಈಸ್ಟಿಂಡಿಯಾ ದ್ವೀಪ, ಚೀಣ, ಜಪಾನ್‌ಗಳಿಗೆ ಸ್ವಲ್ಪ ಮಟ್ಟಿಗೆ ಹಿಂಗಾರುಗಾಳಿಯಿಂದಲೂ ಮಳೆಯಾಗುವುದುಂಟು.

ಈ ಖಂಡದ ಇತರ ಪ್ರದೇಶಗಳಿಗಿಂತ ಈ ಪ್ರದೇಶಗಳಲ್ಲಿ ವ್ಯವಸಾಯವೂ ಜನಸಾಂದ್ರತೆಯೂ ಹೆಚ್ಚಾಗಿರುವುದಕ್ಕೆ ಈ ಮುಂಗಾರು ಹಿಂಗಾರು ಗಾಳಿಗಳೇ ಕಾರಣವಾಗಿವೆ.

**ಸಸ್ಯಗಳು ಮತ್ತು ಪ್ರಾಣಿಗಳು.**—ಈ ಖಂಡವು ಸಮಭಾಜಕ ವೃತ್ತ ದಿಂದ ಉತ್ತರ ಅಕ್ಷಾಂಶ 77° ವರೆಗೆ ಪ್ರಸರಿಸಿರುವುದರಿಂದಲೂ, ಎತ್ತರವಾದ ಪರ್ವತಗಳೂ, ಪ್ರಸ್ಥಭೂಮಿಗಳೂ, ತಗ್ಗಾದ ಮೈದಾನಗಳೂ ಇರುವುದರಿಂದಲೂ ಇಲ್ಲಿ ಎಲ್ಲಾ ಸಸ್ಯವಲಯಗಳೂ ಮತ್ತು ಪ್ರಾಣಿವಲಯಗಳೂ ಇರುವುವು. ಸಮಭಾಜಕ ವೃತ್ತದ ಪ್ರದೇಶದಿಂದ ಉತ್ತರ ಅಥವಾ ದಕ್ಷಿಣಕ್ಕೆ ಹೋದರೂ, ಅಷ್ಟೇ ಎತ್ತರಕ್ಕೆ ಹೋದರೂ ಹೇಗೆ ವಾಯುಗುಣವು ಬದಲಾಯಿಸುವುದೋ ಹಾಗೆಯೇ ಅಕ್ಷಾಂಶಗಳಿಗೂ ಎತ್ತರಕ್ಕೂ ಅನುಗುಣವಾಗಿ ಸಸ್ಯವಲಯಗಳೂ ಬದಲಾಯಿಸುವುವು.

ಈ ಖಂಡದ ವಾಯುಗುಣ, ಮಳೆಗಳಲ್ಲಿ ಹೇಗೆ ವ್ಯತ್ಯಾಸವಿರುವುದೋ ಹಾಗೆ ಸಸ್ಯಗಳಲ್ಲಿಯೂ ವ್ಯತ್ಯಾಸವಿರುವುದು. ಈ ವಿಷಯದಲ್ಲಿ ಈ ಖಂಡವು ಉತ್ತರ ಅಮೆರಿಕ ಖಂಡವನ್ನು ಹೋಲುವುದು. ಇತರ ಯಾವ ಖಂಡದಲ್ಲಿಯೂ ಇಷ್ಟು ವ್ಯತ್ಯಾಸಗಳು ತೋರಿಬರುವುದಿಲ್ಲ.

ಉತ್ತರದಿಂದ ದಕ್ಷಿಣಕ್ಕೆ ಹೋದಹಾಗೆಲ್ಲ, ಈ ಖಂಡದ ಉತ್ತರ ಭಾಗದ ದೊಡ್ಡ ಮೈದಾನದ ಸಸ್ಯಗಳೂ, ಪ್ರಾಣಿಗಳೂ ಹಿಂದೆ ಸಾಮಾನ್ಯ ವಿವರಣೆಯ 31ನೆಯ ಪ್ರಕರಣದಲ್ಲಿ* ಕ್ರಮವಾಗಿ ವಿವರಿಸಿರುವ ವಲಯಗಳಲ್ಲಿ ಮೊದಲಿನ ಮೂರು ವಲಯದವುಗಳೇ ಆಗಿವೆ.

ಆದರೆ ಈ ಖಂಡದ ಪರ್ವತಗಳೂ, ಪ್ರಸ್ಥಭೂಮಿಗಳೂ, ಮರುಭೂಮಿಗಳೂ ಮಧ್ಯ ಭಾಗದಲ್ಲಿರುವುದರಿಂದ, ಅಲ್ಲಿ ಕ್ರಮವಾಗಿ 4, 5, 6ನೆಯ ಸಸ್ಯವಲಯಗಳ ಸಸ್ಯಗಳು ಬೆಳೆಯುವುವೆಂದು ಹೇಳುವುದಕ್ಕಾಗುವುದಿಲ್ಲ. ಪರ್ವತ ಪ್ರಸ್ಥಭೂಮಿಗಳ ಎತ್ತರಕ್ಕನುಗುಣವಾಗಿ ಹೆಚ್ಚು ಶೀತಪ್ರದೇಶಗಳ ಸಸ್ಯಗಳು ಬೆಳೆಯುವುವು.

---

* ಉಪಾಧ್ಯಾಯರು ಉಚಿತವಾದ ಪ್ರಶ್ನೆಗಳನ್ನು ಹಾಕಿ, ಹುಡುಗರು ಹಿಂದೆ ಓದಿರುವ ಸಾಮಾನ್ಯ ವಿಷಯಗಳನ್ನು ಈ ಖಂಡದ ನಾನಾ ಪ್ರದೇಶಗಳಿಗೆ ಅನ್ವಯಿಸಿಕೊಂಡು ಈ ಖಂಡದ ಸಸ್ಯಗಳನ್ನೂ ಪ್ರಾಣಿಗಳನ್ನೂ ತಾವೇ ಊಹಿಸಿ ತಿಳಿಯುವಂತೆ ಮಾಡಬಹುದು.

ಟಿಬೆಟ್ ದೇಶದಲ್ಲಿ ಕೆಲವು ಅಪೂರ್ವವಾದ ಪ್ರಾಣಿಗಳಿರುವುವು. ಚಮರೀ ಮೃಗ.—ಇದು ಬೆಟ್ಟಸೀಮೆಯಲ್ಲಿ ಹೇರುಗಳನ್ನು ಹೊರುವುದಕ್ಕೆ ಉಪಯುಕ್ತ ವಾಗಿದೆ. ಇದರ ಉದ್ದವಾದ ಕೂದಲಿನಿಂದ ಚಾಮರಗಳೂ ಚೌರಿಯ ಕುಚ್ಚು ಗಳೂ ಆಗುವುವು. ಕಸ್ತೂರಿಮೃಗವು ಕಾಡಿನಲ್ಲಿ ವಾಸಮಾಡುವುದು. ಜನರು ಇದನ್ನು ಬೇಟೆಯಾಡಿ ಕಸ್ತೂರಿಯನ್ನು ಶೇಖರಿಸಿ ರಫ್ತುಮಾಡುವರು. ಇಲ್ಲಿ ಬಹು ನುಣುಪಾದ ಮತ್ತು ಉದ್ದವಾದ ಕೂದಲುಳ್ಳ ಮೇಕೆಗಳಿರುವುವು. ಇವುಗಳ ಕೂದಲಿನಿಂದ ಸೊಗಸಾದ ಕಾಶ್ಮೀರದ ಶಾಲುಗಳು ತಯಾರಾಗುತ್ತವೆ.

ಕಲ್ಲು ಮತ್ತು ಮರಳು ವಿಶೇಷವಾಗಿರುವುದರಿಂದಲೂ, ಮಳೆ ಬೀಳುವುದು ಕಡಿಮೆಯಾದುದರಿಂದಲೂ ಮರುಭೂಮಿಗಳಲ್ಲಿ ಸಸ್ಯಗಳು ಬೆಳೆಯುವುದು ಕಡಿಮೆ. ಅಲ್ಲಿ ಸಾಮಾನ್ಯವಾಗಿ ಕೆಲವು ಬಗೆಯ ಮುಳ್ಳುಗಿಡ, ಮುಂಡುಗಳ್ಳಿ ಗಳು ಬೆಳೆಯುವುವು. ಅಲ್ಲಲ್ಲಿ ಓಯಸಿಸ್‌ಗಳಿರುವುವು. ಇವುಗಳಲ್ಲೆಲ್ಲಾ ಸಾಮಾನ್ಯವಾಗಿ ಖರ್ಜೂರದ ಮರವು ಬೆಳೆಯುವುದು. ದೊಡ್ಡದೊಡ್ಡ ಓಯ ಸಿಸ್ ಪ್ರದೇಶಗಳಲ್ಲಿ ಗೋಧಿ, ಬತ್ತ, ಕಬ್ಬು, ಹಿಪ್ಪಲಿನೇರಳೆ ಮೊದಲಾದ ಬೆಳೆ ಗಳನ್ನು ಬೆಳೆಯುವರು. ನದಿಗಳಿಂದಲೂ ವಾಡಿಗಳಿಂದಲೂ ಕಾಲುವೆಗಳನ್ನು ತೆಗೆದು ವ್ಯವಸಾಯಕ್ಕೆ ನೀರನ್ನು ಉಪಯೋಗಿಸಿಕೊಳ್ಳುವರು. ಈ ಓಯಸಿಸ್ ಗಳಲ್ಲಿ ಅನೇಕ ಕಡೆ ವಿಶಾಲವಾದ ಹುಲ್ಲುಗಾವಲುಗಳಿರುವುವು. ಅಲ್ಲಿನ ಜನರು ಕುರಿ, ದನ, ಕುದುರೆ, ಒಂಟೆಗಳನ್ನು ಸಾಕಿ ಅದರಿಂದ ಜೀವನಮಾಡುವರು. ಈ ಮರುಭೂಮಿಗಳಲ್ಲಿರುವ ಜನರಿಗೆ ಪಶುಪಾಲನೆಯೇ ಮುಖ್ಯವಾದ ಉದ್ಯೋಗವೆಂದು ಹೇಳಬಹುದು.

ಮುಂಗಾರು ಹಿಂಗಾರು ಮಳೆಯಾಗುವ ಪ್ರದೇಶಗಳಲ್ಲಿ 7, 8ನೆಯ ವಲಯಗಳ ಸಸ್ಯಗಳು ಹೇರಳವಾಗಿ ಬೆಳೆಯುವುವು. ಯಾಂಗ್ಟಿಸಿಕಿಯಾಂಗ್, ಗಂಗಾ ಮೊದಲಾದ ನದಿಗಳ ಬೈಲುಗಳಲ್ಲಿ ನೆಲವು ಫಲವತ್ತಾಗಿರುವುದರಿಂದಲೂ, ಶಾಖವು ಹೆಚ್ಚಾಗಿರುವುದರಿಂದಲೂ, ಮುಂಗಾರು ಹಿಂಗಾರು ಮಳೆಗಳಿಂದಲ್ಲದೆ ನದಿಯ ಕಾಲುವೆಗಳಿಂದಲೂ ನೀರಿನ ಆಸರೆ ಯಥೇಚ್ಛವಾಗಿರುವುದರಿಂದಲೂ ಅಲ್ಲಿ ಬಹು ಕಾಲದಿಂದಲೂ ಹೆಚ್ಚಾಗಿ ವ್ಯವಸಾಯ ನಡೆಯುತ್ತಿರುವುದು. ಹಳ್ಳಿ ಗಳೂ ಸಣ್ಣ ಸಣ್ಣ ಪಟ್ಟಣಗಳೂ ದಟ್ಟವಾಗಿರುವುವು. ಜನಸಾಂದ್ರತೆಯೂ ಹೆಚ್ಚಾಗಿರುವುದು. ಈ ಪ್ರದೇಶದ ಕಾಡುಗಳಲ್ಲಿ ಸಿಂಹ, ಆನೆ, ಹುಲಿ, ಚಿರತೆ ಮೊದಲಾದ ದುಷ್ಟ ಮೃಗಗಳೂ, ಬಗೆ ಬಗೆಯ ಹಾವುಗಳೂ, ನಾನಾ ವರ್ಣದ ಪಕ್ಷಿಗಳೂ, ವಿಧವಿಧವಾದ ಕ್ರಿಮಿಗಳೂ ವಾಸಮಾಡುವುವು. ಮೈದಾನಗಳಲ್ಲಿ ಕುರಿ, ದನ ಮೊದಲಾದ ಸಾಧು ಪ್ರಾಣಿಗಳನ್ನು ವಿಶೇಷವಾಗಿ ಸಾಕುವರು.

ಸಾಮಾನ್ಯವಾಗಿ ಈ ಖಂಡದ ನದಿಗಳಲ್ಲೆಲ್ಲಾ ಆಹಾರಕ್ಕೆ ಯೋಗ್ಯವಾದ ಮೀನುಗಳು ವಿಶೇಷವಾಗಿ ಸಿಕ್ಕುವುವು. ಜಪಾನ್, ಚೀಣ ದೇಶಗಳಿಗೆ ಪೂರ್ವ

ಕ್ಕಿನಲ್ಲಿರುವ ಸಮುದ್ರಗಳಲ್ಲಿ ಮೀನುಗಳು ವಿಶೇಷವಾಗಿರುವುದರಿಂದ ಮೀನು ಡಿದು ಮಾರುವುದರಿಂದಲೇ ಸುಮಾರು 4 ಕೋಟಿ ಜನರು ಜೀವನ ಮಾಡುತ್ತಿರುವರು. ಪಾರ್ಶಿ ಕೊಲ್ಲಿಯಲ್ಲಿಯೂ ಮತ್ತು ಸಿಲೋನ್ ದ್ವೀಪಕ್ಕೆ ಉತ್ತರದಲ್ಲಿಯೂ ಮುತ್ತಿನ ಚಿಪ್ಪುಗಳು ಸಿಕ್ಕುವುವು.

**ಖನಿಜಗಳು.**—ಈ ಖಂಡದ ಭೂಮಿಯಲ್ಲಿ ಖನಿಜಗಳು ಪುಷ್ಕಳವಾಗಿದ್ದರೂ ಜನರಿಗೆ ಕುಶಲತೆಯೂ, ಬಂಡವಾಳವೂ ಕಡಿಮೆಯಾಗಿರುವುದರಿಂದ ಗಣಿಗಳನ್ನು ತೋಡಿ ಖನಿಜಗಳನ್ನು ಹೆಚ್ಚಾಗಿ ಹೊರಕ್ಕೆ ತೆಗೆಯಲಾಗುವುದಿಲ್ಲ. ಕೃಷಿ, ಪಶುಪಾಲನೆಗಳೇ ಈ ಖಂಡದ ಜನರ ಮುಖ್ಯೋದ್ಯೋಗಗಳಾಗಿವೆ. ಖನಿಜಗಳನ್ನು ತೆಗೆದು ಕೈಗಾರಿಕೆಗಳನ್ನು ಮಾಡುವುದರಲ್ಲಿ ಈ ಖಂಡದ ಜನರು ಆಫ್ರಿಕಾಖಂಡದ ಹೊರತು ಉಳಿದ ಖಂಡಗಳ ಜನರಿಗಿಂತ ಬಹಳ ಹಿಂದಾಗಿರುವರು. ಈಚೆಗೆ ಯೂರೋಪಿಯನ್ ಜನರು ಈ ಖಂಡದ ಕೆಲವು ಪ್ರದೇಶಗಳಲ್ಲಿ ಖನಿಜಗಳನ್ನು ತೆಗೆಯುತ್ತಿರುವರು. ಹೀಗೆ ಹೊರಕ್ಕೆ ತೆಗೆಯುತ್ತಿರುವ ಖನಿಜಗಳಲ್ಲಿ ಮುಖ್ಯವಾದುವು ಯಾವುವೆಂದರೆ:—

**ಚಿನ್ನ.**—ರಷ್ಯದವರು ಸೈಬೀರಿಯದ ಆಲ್ಟೈ ಪರ್ವತಗಳಲ್ಲಿಯೂ, ಬೇಕಲ್ ಸರೋವರದ ಸಮೀಪದಲ್ಲಿಯೂ ಚಿನ್ನವನ್ನು ತೆಗೆಯುವರು. ಬ್ರಿಟಿಷ್ ಜನರು ಇಂಡಿಯದಲ್ಲಿ (ಮುಖ್ಯವಾಗಿ ಕೋಲಾರದ) ಗಣಿಗಳಿಂದ ಚಿನ್ನವನ್ನು ತೆಗೆಯುತ್ತಿರುವರು. ಜಪಾನ್ ಕೊರಿಯಗಳಲ್ಲಿಯೂ ಸ್ವಲ್ಪ ಚಿನ್ನವು ಸಿಕ್ಕುವುದು; ಇದನ್ನು ಜಪಾನ್ ದೇಶೀಯರೇ ತೆಗೆಯುತ್ತಿರುವರು.

**ತವರ.**—ಇದು ಮಲಯಪರ್ಯಾಯದ್ವೀಪದಲ್ಲಿ ವಿಶೇಷವಾಗಿ ಸಿಕ್ಕುತ್ತದೆ. ಪ್ರಪಂಚದಲ್ಲಿ ಸಿಕ್ಕುವ ತವರದಲ್ಲಿ $\frac{3}{5}$ ಭಾಗವು ಸಿಕ್ಕುವುದು. ಇಲ್ಲಿನ ಜನರು ಕುಶಲತೆಯಲ್ಲಿಯೂ, ಕಷ್ಟಪಟ್ಟು ಕೆಲಸಮಾಡುವುದರಲ್ಲಿಯೂ ಹಿಂದುಳಿದವರಾಗಿರುವುದರಿಂದ, ಮುಖ್ಯವಾಗಿ ಚೀನಾ ದೇಶೀಯರೇ ಇಲ್ಲಿ ಕೆಲಸ ಮಾಡುತ್ತಿರುವರು.

**ಕಲ್ಲಿದ್ದಲು.**—ಇದು ಚೀಣ, ಜಪಾನ್, ಇಂಡಿಯ ದೇಶಗಳಲ್ಲಿ ಸಿಕ್ಕುವುದು. ಚೀಣ ದೇಶದಲ್ಲಿ ಕಲ್ಲಿದ್ದಲು ಅಪರಿಮಿತವಾಗಿದ್ದರೂ, ಅಲ್ಲಿನ ಜನರು ಸ್ವಲ್ಪವನ್ನು ಮಾತ್ರ ತೆಗೆಯುತ್ತಿರುವರು. ಜನರ ಕುಶಲತೆಯೂ, ಕೈಗಾರಿಕೆಗಳೂ ಹೆಚ್ಚಿದ ಹಾಗೆಲ್ಲ ಇದನ್ನು ಹೆಚ್ಚಾಗಿ ಉಪಯೋಗಿಸಿಕೊಳ್ಳುವರು. ಇಂಡಿಯ, ಜಪಾನ್‌ಗಳಲ್ಲಿ ಕಲ್ಲಿದ್ದಲು ದೊರೆಯುವುದರಿಂದ ರೈಲ್ವೆ ಎಂಜನ್‌ಗಳನ್ನೂ, ಕಾರ್ಖಾನೆಯ ಯಂತ್ರಗಳನ್ನೂ ನಡೆಯಿಸುವುದಕ್ಕೆ ಸೌಕರ್ಯವಾಗಿದೆ.

**ಕೆರೋಸಿನ್ ಎಣ್ಣೆ.**—ಇದು ಕಾಕಸಸ್ ಪರ್ವತಗಳ ಸಮೀಪದ ಪ್ರದೇಶಗಳಲ್ಲಿಯೂ, ಬರ್ಮದಲ್ಲಿಯೂ ವಿಶೇಷವಾಗಿ ಸಿಕ್ಕುವುದು. ಕ್ಯಾಸ್ಪಿಯನ್

ಸಮುದ್ರದ ಮೇಲೆ ಹೋಗುವ ಹೊಗೆಯ ಜಹಜುಗಳನ್ನು ನಡೆಯಿಸುವುದಕ್ಕೆ ಕಲ್ಲಿದ್ದಲಿಗೆ ಬದಲಾಗಿ ಈ ಎಣ್ಣೆಯನ್ನೇ ಉಪಯೋಗಿಸುವರು. ಕ್ಯಾಸ್ಪಿಯನ್ ಸಮುದ್ರತೀರದಲ್ಲಿರುವ **ಬಾಕು** ಪಟ್ಟಣದಿಂದಲೂ, ಕಪ್ಪುಸಮುದ್ರ ತೀರದಲ್ಲಿರುವ **ಬಾಟೊಂ** ಪಟ್ಟಣದಿಂದಲೂ ಈ ಎಣ್ಣೆ ರಫ್ತಾಗುವುದು.

**ಉಪ್ಪು.**—ದಕ್ಷಿಣ ಭಾಗದ ಸಮುದ್ರತೀರಗಳಲ್ಲಿ ಸಮುದ್ರದ ನೀರಿನಿಂದ ಉಪ್ಪನ್ನು ತಯಾರುಮಾಡುವರು. ಪಂಜಾಬಿನಲ್ಲಿ ನೆಲದಲ್ಲಿಯೇ ಉಪ್ಪು ಸಿಕ್ಕುವುದು.

ಸಿಂಹಳ ದ್ವೀಪದಲ್ಲಿ ಕೆಂಪು, ಪಚ್ಚೆ, ಕರಿಯ ನೀಸ ಇವುಗಳು ಸಿಕ್ಕುವುವು. ಜಪಾನಿನಲ್ಲಿ ತಾಮ್ರ, ಗಂಧಕ, ರಂಜಕಗಳು ದೊರೆಯುವುವು.

**ಜನಸಾಂದ್ರತೆ ಮತ್ತು ಉದ್ಯೋಗ.**—ಪ್ರಪಂಚದ ಜನಸಂಖ್ಯೆ 150 ಕೋಟಿಯೆಂದು ಊಹಿಸಿರುವರು. ಅದರಲ್ಲಿ ಈ ಖಂಡವೊಂದರಲ್ಲಿಯೇ 85 ಕೋಟಿ ಜನರು ವಾಸವಾಗಿರುವರು. ಆದರೆ ಈ ಖಂಡದ ಜನಸಾಂದ್ರತೆಗಿಂತ ಯೂರೊಪು ಖಂಡದಲ್ಲಿ ಜನಸಾಂದ್ರತೆ ಹೆಚ್ಚಾಗಿರುವುದು. ಈ ಖಂಡದಲ್ಲಿ ಜನಸಾಂದ್ರತೆ 1 ಚದರ ಮೈಲಿಗೆ ಸರಾಸರಿ 49 ಆಗುವುದು. ಆದರೆ ಯೂರೊಪಿನಲ್ಲಿ ಚದರ ಮೈಲಿಗೆ 96 ಆಗುವುದು. ಇತರ ಖಂಡಗಳ ಜನಸಾಂದ್ರತೆ ಈ ಖಂಡಕ್ಕಿಂತ ಬಹಳ ಕಡಿಮೆಯಾಗಿರುವುದು.

ಜನಸಾಂದ್ರತೆ ಈ ಖಂಡದ ಎಲ್ಲಾ ಪ್ರದೇಶಗಳಲ್ಲಿಯೂ ಒಂದೇಸಮನಾಗಿಲ್ಲ. ಇಂಡಿಯ, ಚೀಣ, ಜಪಾನ್ ದೇಶಗಳಲ್ಲಿ ಬಹು ಹೆಚ್ಚಾಗಿಯೂ; ಉಳಿದ ಪ್ರದೇಶಗಳಲ್ಲಿ ಜನಸಾಂದ್ರತೆ ಅತ್ಯಲ್ಪವಾಗಿಯೂ ಇರುವುದು.

(1) **ಉತ್ತರ ಭಾಗದ ಮೈದಾನ.**—ಈ ಖಂಡದ ಉತ್ತರ ಭಾಗದಲ್ಲಿ, ಅಂದರೆ ಶೀತವಲಯದ ಸಸ್ಯವಲಯಗಳ ಪ್ರದೇಶದ ಜನರಿಗೆ ಬೇಟೆಯಾಡುವುದೂ, ಮೀನು ಹಿಡಿಯುವುದೂ ಮುಖ್ಯವಾದ ಉದ್ಯೋಗವಾಗಿದೆ. ಕೃಷಿ ಮತ್ತು ಕೈಗಾರಿಕೆಗಳು ಇಲ್ಲಿ ಇಲ್ಲವೇ ಇಲ್ಲವೆಂದು ಹೇಳಬೇಕಾದುದೇ ಇಲ್ಲ. ಬೇಟೆಯಾಡಿ ಸಂಪಾದಿಸಿದ ತುಪ್ಪಟಗಳನ್ನು ಸ್ವಲ್ಪ ಮಟ್ಟಿಗೆ ರಫ್ತುಮಾಡುವುದೇ ಇಲ್ಲಿನ ವ್ಯಾಪಾರವಾಗಿದೆ. ಆದುದರಿಂದ ಈ ಪ್ರದೇಶದ ಜನಸಾಂದ್ರತೆ ಬಹಳ ಕಡಿಮೆ. ಚದರ ಮೈಲಿಗೆ ಸರಾಸರಿ ಒಂದರಂತೆಯೂ ಇಲ್ಲ.

ಈ ಮೈದಾನದ ದಕ್ಷಿಣ ಭಾಗದಲ್ಲಿ ಮರಗಳನ್ನು ಕಡಿದು ರಫ್ತುಮಾಡುವುದೇ ಮುಖ್ಯವಾದ ಉದ್ಯೋಗವಾಗಿದೆ. ಉತ್ತರ ಭಾಗಕ್ಕಿಂತ ಇಲ್ಲಿ ಜನಸಾಂದ್ರತೆ ಸ್ವಲ್ಪ ಹೆಚ್ಚು. ಈ ಮೈದಾನದ ನೈರುತ್ಯ ಭಾಗದಲ್ಲಿರುವ ಹುಲ್ಲುಗಾವಲುಗಳಲ್ಲಿ ಪಶುಪಾಲನೆಯೇ ಮುಖ್ಯವಾದ ಉದ್ಯೋಗವಾಗಿರುವುದರಿಂದ ಅಲ್ಲಿಯೂ

ಜನಸಾಂದ್ರತೆ ಸ್ವಲ್ಪ ಹೆಚ್ಚಾಗಿಯೇ ಇರುವುದು. ಈ ಪ್ರದೇಶಗಳಲ್ಲಿ ಚದರ ಮೈಲಿಗೆ ಸರಾಸರಿ 8—10ರಂತೆ ಜನರಿರುವರು.

(2) **ಮಧ್ಯಭಾಗದ ಪರ್ವತ ಪ್ರಸ್ಥಭೂಮಿಗಳು ಮತ್ತು ಮರುಭೂಮಿಗಳು.**—ಈ ಭಾಗದ ಪಶ್ಚಿಮದ ಕೊನೆಯನ್ನು ಮೆಡಿಟರೇನಿಯನ್ ಸಮುದ್ರ ತೀರದಲ್ಲಿರುವ ಏಷಿಯ ಮೈನರ್ ಮತ್ತು ಸಿರಿಯ ದೇಶಗಳ ತೀರ ಪ್ರದೇಶದಲ್ಲಿ ದ್ರಾಕ್ಷಿ ಮತ್ತು ಗೋಧಿಗಳನ್ನು ಬೆಳೆಯುವುದೂ, ಒಳಭಾಗದ ಪರ್ವತ ಪ್ರದೇಶದಲ್ಲಿ ಪಶುಪಾಲನೆಯು ಮುಖ್ಯೋದ್ಯೋಗವಾಗಿದೆ. ಮೆಡಿಟರೇನಿಯನ್ ಸಮುದ್ರ ಮಾರ್ಗವಾಗಿ ತುರ್ಕಿ, ಗ್ರೀಸ್, ಇಟಲಿ ಮೊದಲಾದ ದೇಶಗಳೊಡನೆ ಸ್ವಲ್ಪ ವ್ಯಾಪಾರ ನಡೆಯುವುದು. ಆದರೆ ಒಳಭಾಗದಲ್ಲಿ ಪರ್ವತ ಶೀಮೆಯೇ ಹೆಚ್ಚಾಗಿ, ಮಳೆ ಬೀಳುವುದು ಕಡಿಮೆಯಾದುದರಿಂದ ಜನಸಾಂದ್ರತೆ ಕಡಿಮೆಯಾಗಿದೆ.

ಅರೇಬಿಯ, ಇರಾನ್, ಗೋಬಿ ಮೊದಲಾದ ಮರುಭೂಮಿಗಳ ಓಯಸಿಸ್‌ಗಳ ಬಳಿಯಲ್ಲಿ ಮಾತ್ರ ಜನರಿಗೆ ಸ್ವಲ್ಪಮಟ್ಟಿಗೆ ಪಶುಪಾಲನೆಯೂ, ವ್ಯವಸಾಯವೂ ಉದ್ಯೋಗವಾಗಿರುವುದರಿಂದ, ಸಾಮಾನ್ಯವಾಗಿ ಶೀತವಲಯದ ಪ್ರದೇಶಗಳಂತೆ ಆ ಪ್ರದೇಶಗಳಲ್ಲಿ ಜನಸಾಂದ್ರತೆ ಬಹು ಕಡಮೆಯಾಗಿರುವುದು. ಆದರೆ ಅರೇಬಿಯ ದೇಶದ ಪಶ್ಚಿಮ ಮತ್ತು ದಕ್ಷಿಣ ತೀರಗಳಲ್ಲಿ ಮಳೆ ಸ್ವಲ್ಪವಾಗಿ ಬೀಳುವುದರಿಂದ ವ್ಯವಸಾಯವೂ ನಡೆಯುವುದು, ಜನಸಾಂದ್ರತೆಯೂ ಸ್ವಲ್ಪ ಹೆಚ್ಚಾಗಿರುವುದು.

ಪರ್ವತ ಪ್ರದೇಶಗಳಲ್ಲಿ ಮರಗಳನ್ನು ಕಡಿಯುವುದೂ ಪ್ರಸ್ಥಭೂಮಿಗಳಲ್ಲಿ ಪಶುಪಾಲನೆಯೂ ಮುಖ್ಯೋದ್ಯೋಗವಾಗಿರುವುದರಿಂದ ಹಿಮಾಲಯ ಮೊದಲಾದ ಪರ್ವತ ಪ್ರದೇಶಗಳಲ್ಲಿಯೂ, ಟಿಬೆಟ್, ಮಾಂಗೋಲಿಯ ಮೊದಲಾದ ಪ್ರಸ್ಥಭೂಮಿಗಳಲ್ಲಿಯೂ ಜನಸಾಂದ್ರತೆ ಅತಿವಿರಳವಾಗಿದೆ.

(3) **ಮುಂಗಾರು ಹಿಂಗಾರು ಗಾಳಿಗಳು ಬೀಸುವ ಪ್ರದೇಶ.**—ಈ ಖಂಡದಲ್ಲೆಲ್ಲಾ ಮುಂಗಾರು ಹಿಂಗಾರು ಗಾಳಿಗಳು ಬೀಸುವ ಪ್ರದೇಶಗಳಲ್ಲಿ ಮಾತ್ರ ಜನಸಾಂದ್ರತೆ ಬಹಳ ಹೆಚ್ಚಾಗಿರುವುದು. ಈ ಖಂಡದ ಒಟ್ಟು ಜನಸಂಖ್ಯೆಯಲ್ಲಿ $\frac{8}{9}$ ಭಾಗ ಜನರು ಈ ಪ್ರದೇಶಗಳಲ್ಲಿ ವಾಸಮಾಡುವರು. ಚೀಣ, ಜಪಾನ್, ಇಂಡಿಯ ದೇಶಗಳ ಮೈದಾನಗಳಲ್ಲಿ ಸಾಮಾನ್ಯವಾಗಿ ಜನಸಾಂದ್ರತೆ 1 ಚ. ಮೈಲಿಗೆ 500ರಂತೆ ಇದೆ. ಪ್ರಪಂಚದಲ್ಲಿ ಇನ್ಯಾವ ವಿಶಾಲವಾದ ಭಾಗದಲ್ಲಿಯೂ ಇಲ್ಲಿರುವಂತೆ ಜನರು ಒತ್ತೊತ್ತಾಗಿ ವಾಸಮಾಡುವುದಿಲ್ಲ. ಆದರೆ ಸಿಂಧೂದೇಶ, ರಾಜಪುತ್ರಸ್ಥಾನ ಮೊದಲಾದ ಮರುಭೂಮಿ ಪ್ರದೇಶಗಳಲ್ಲಿಯೂ, ಬೆಟ್ಟ, ಗುಡ್ಡ, ಕಾಡುಗಳು ವಿಶೇಷವಾಗಿರುವ ಹಿಂದೂಚೀಣ

ಪರ್ಯಾಯದ್ವೀಪ, ಈಸ್ಟಿಂಡಿಯಾ ದ್ವೀಪಸ್ತೋಮಗಳಲ್ಲಿಯೂ ಜನರು ಒತ್ತೊತ್ತಾಗಿ ವಾಸಮಾಡುವುದಿಲ್ಲ.

ಮುಂಗಾರು ಹಿಂಗಾರು ಗಾಳಿಗಳು ಬೀಸುವ ಪ್ರದೇಶಗಳಲ್ಲಿ ಜನಸಾಂದ್ರತೆ ಹೆಚ್ಚಾಗಿರಲು ಕಾರಣಗಳಾವುವೆಂದರೆ :—

(1) ಕ್ಷೇತ್ರಲಕ್ಷಣ, ಶಾಖ, ನೀರಾವರಿ ಇವು ವ್ಯವಸಾಯಕ್ಕೆ ಬಹಳ ಅನುಕೂಲವಾಗಿರುವುವು.

(2) ನದಿಗಳು ಜನಸಂಚಾರಕ್ಕೂ, ವ್ಯಾಪಾರಕ್ಕೂ ಅನುಕೂಲವಾಗಿರುವುದು. ಉತ್ತಮವಾದ ಬಂದರುಗಳಿರುವುದು. ಗಾಡಿಯ ರಸ್ತೆಗಳನ್ನೂ, ರೈಲು ಮಾರ್ಗಗಳನ್ನೂ ಹಾಕುವುದಕ್ಕೆ ಬೇಕಾದ ಸೌಕರ್ಯಗಳು ವಿಶೇಷವಾಗಿರುವುದು.

(3) ಈ ಪ್ರದೇಶಗಳ ಮೈದಾನಗಳಲ್ಲಿ ವ್ಯವಸಾಯವೇ ಜನರ ಮುಖ್ಯೋದ್ಯೋಗವಾಗಿರುವುದು. ಬೆಟ್ಟಗುಡ್ಡಗಳಲ್ಲಿರುವ ಜನರು ಜೇನುತುಪ್ಪ ಮೊದಲಾದ ಪಸಾರಿಯ ಸರಕುಗಳನ್ನು ಸಂಗ್ರಹಿಸುವುದರಿಂದಲೂ, ರಬ್ಬರುಗಿಡದ ಹಾಲಿನಿಂದ ರಬ್ಬರು ತಯಾರುಮಾಡುವುದರಿಂದಲೂ, ಪಶುಗಳನ್ನು ಸಾಕುವುದರಿಂದಲೂ, ಬೇಟೆಯಾಡುವುದರಿಂದಲೂ ಜೀವನಮಾಡುತ್ತಾರೆ. ಆದರೆ ಮೈದಾನಗಳಲ್ಲಿರುವ ಅನೇಕ ಜನರು ಹಿಂದಿನ ಕಾಲದಿಂದಲೂ ಕೈಗಾರಿಕೆಗಳಲ್ಲಿ ಕುಶಲರಾಗಿರುವರು. ಈಚೆಗೆ ಹಲವು ಕಾರ್ಖಾನೆಗಳೂ ಏರ್ಪಟ್ಟಿವೆ. ಆದುದರಿಂದ ಅನೇಕ ಪಟ್ಟಣಗಳು ವೃದ್ಧಿಯಾಗಿ ಜನಸಾಂದ್ರತೆಯೂ ಹೆಚ್ಚುತ್ತಿರುವುದು. ಜಪಾನ್, ಚೀಣ ದೇಶಗಳಲ್ಲಿ ರೇಷ್ಮೆಯ ಬಟ್ಟೆಗಳನ್ನೂ, ಪಿಂಗಾಣಿ ಸಾಮಾನುಗಳನ್ನೂ ತಯಾರುಮಾಡುವರು. ಜಪಾನ್ ದೇಶದಲ್ಲಿ ಕಾಗದ ಮತ್ತು ಗಾಜಿನ ಸಾಮಾನುಗಳನ್ನು ಹಬೆಯ ಯಂತ್ರಗಳ ಸಹಾಯದಿಂದಲೇ ತಯಾರುಮಾಡುತ್ತಿರುವರು. ಹತ್ತಿಯ ಬಟ್ಟೆಗಳು, ಉಣ್ಣೆಯ ಬಟ್ಟೆಗಳು, ಗೋಣಿಯ ಚೀಲ, ಚರ್ಮದ ಸಾಮಾನು ಮೊದಲಾದುವನ್ನು ಈಚೆಗೆ ಯಂತ್ರಗಳ ಸಹಾಯದಿಂದ ಇಂಡಿಯ ದೇಶದಲ್ಲಿ ದೊಡ್ಡ ಕಾರ್ಖಾನೆಗಳಲ್ಲಿ ತಯಾರುಮಾಡುತ್ತಿರುವರು. ಈ ದೇಶದಲ್ಲಿ ಚಿನ್ನ ಬೆಳ್ಳಿಯ ಒಡವೆಗಳನ್ನೂ, ಹಿತ್ತಾಳೆ ತಾಮ್ರದ ಪಾತ್ರೆ, ಜರತಾರಿ ಬಟ್ಟೆಗಳು ಮೊದಲಾದುವನ್ನೂ ಮಾಡುವ ಕೆಲಸವು ಮೊದಲಿನಿಂದಲೂ ನಡೆಯುತ್ತಿದೆ.

**ವ್ಯಾಪಾರ ಮತ್ತು ಮುಖ್ಯ ಮಾರ್ಗಗಳು.**—ಪೂರ್ವಕಾಲದಿಂದಲೂ ಒಳದೇಶದ ವ್ಯಾಪಾರವು ಈ ಖಂಡದಲ್ಲಿ ವಿಶೇಷವಾಗಿ ನಡೆಯುತ್ತಿರುವುದು. ಪಶ್ಚಿಮ ಭಾಗದಲ್ಲಿರುವ ಕಾರವಾನ್ ಹಾದಿಗಳ ಮತ್ತು ಇಂಡಿಯ, ಚೀಣ ದೇಶಗಳಲ್ಲಿ ಗಾಡಿಯ ರಸ್ತೆಗಳ, ನದಿಗಳ ಮತ್ತು ನದಿಯ ಕಾಲುವೆಗಳ ಮಾರ್ಗವಾಗಿ ವ್ಯಾಪಾರ ನಡೆಯುತ್ತಿರುವುದು. ಈ ಖಂಡದಲ್ಲಿ ಈಚೆಗೆ ಪಾಶ್ಚಾತ್ಯ ನಾಗರಿಕತೆ

ಹೆಚ್ಚಿ ಬ್ರಿಟಿಷ್ ದ್ವೀಪಗಳು, ಸಂಯುಕ್ತ ಸಂಸ್ಥಾನಗಳು, ಇಂಡಿಯ, ಚೀಣ, ಜಪಾನ್ ಮೊದಲಾದ ದೇಶಗಳಿಗೂ ಪರದೇಶದ ವ್ಯಾಪಾರವು ಸಾಗರದ ಮಾರ್ಗವಾಗಿ ವಿಶೇಷವಾಗಿ ನಡೆಯುತ್ತಿರುವುದು.

**ಒಳದೇಶದ ವ್ಯಾಪಾರದ ಮಾರ್ಗಗಳು.**—ಈ ಖಂಡದ ಮಧ್ಯ ಭಾಗ ಮತ್ತು ಪಶ್ಚಿಮ ಭಾಗದಲ್ಲಿರುವ ಮರುಭೂಮಿ ಪ್ರದೇಶಗಳಲ್ಲಿ ಮುಖ್ಯವಾಗಿ ಕಾರವಾನ್ ದಾರಿಗಳ ಮೂಲಕ ವ್ಯಾಪಾರ ನಡೆಯುವುದು. ಮೆಡಿಟರೇನಿಯನ್ ಸಮುದ್ರದ ತೀರದಿಂದ ತುರ್ಕಿಸ್ಥಾನ, ಪರ್ಷಿಯ, ಅಫ್ಘಾನಿಸ್ಥಾನಗಳಿಗೆ ಕೆಲವು ಕಾರವಾನ್ ಹಾದಿಗಳಿರುವುವು. ಕೆಂಪು ಸಮುದ್ರ ಮತ್ತು ಪಾರ್ಸೀಕೊಲ್ಲಿಗಳ ತೀರದಿಂದ ದೇಶದ ಒಳಭಾಗಕ್ಕೆ ಕೆಲವು ಕಾರವಾನ್ ಹಾದಿಗಳಿರುವುವು. ಈ ಹಾದಿಗಳ ಮೂಲಕ ವರ್ತಕರು ಉಣ್ಣೆ, ದ್ರಾಕ್ಷಿ, ರೇಷ್ಮೆ ಮೊದಲಾದ ಸರಕುಗಳನ್ನು ರಫ್ತುಮಾಡಿ, ಯೂರೋಪಿನಿಂದ ಬಟ್ಟೆ, ಚಾಕು, ಚೂರಿ ಮೊದಲಾದ ಸಾಮಾನುಗಳನ್ನು ಕೊಂಡು ತಂದು ಮಾರುವರು. ಈ ಕಾರವಾನ್ ಹಾದಿಗಳಲ್ಲಿರುವ ಬೆರೂಟ್, ಜಾಫ, ಏಡನ್, ಮುರಿಸ್ಕತ್ ಮೊದಲಾದ ರೇವು ಪಟ್ಟಣಗಳೂ, ಡಮಾಸ್ಕಸ್, ಮಕ್ಕ, ಬಾಗ್ದಾದ್, ಹೀರತ್, ಕಾಬೂಲ್, ಕಾಂದಹಾರ್ ಮೊದಲಾದ ಒಳದೇಶದಲ್ಲಿರುವ ಪಟ್ಟಣಗಳೂ ವ್ಯಾಪಾರಕ್ಕೆ ಪ್ರಸಿದ್ಧವಾಗಿವೆ.

ಸೈಬೀರಿಯ, ಇಂಡಿಯ, ಜಪಾನ್ ದೇಶಗಳಲ್ಲಿ ಅನೇಕ ರೈಲು ಮಾರ್ಗಗಳಿರುವುವು. ಸೈಬೀರಿಯದ ರೈಲು ಮಾರ್ಗವು ಯೂರೋಪಿನ ರಷ್ಯದ ಪೂರ್ವಭಾಗದ ಎಲ್ಲೆಯಿಂದ ಪೆಸಿಫಿಕ್ ಸಾಗರದ ತೀರದಲ್ಲಿರುವ ವ್ಲಾಡಿವೋಸ್ಟಾಕ್ ರೇವುಪಟ್ಟಣದವರೆಗೂ ಹಾಕಲ್ಪಟ್ಟಿದೆ. ವ್ಲಾಡಿವೋಸ್ಟಾಕಿನಿಂದ ಇರ್ಕಟಸ್ಕ್, ಆಂಮ್‌ಸ್ಕ್, ಸಮಾರ ಮೊದಲಾದ ಪಟ್ಟಣಗಳ ಮಾರ್ಗವಾಗಿ ರಷ್ಯದಲ್ಲಿರುವ ಮಾಸ್ಕೋ ಪಟ್ಟಣಕ್ಕೆ ಹೋಗಿ ಅಲ್ಲಿಂದ ರೈಲು ಮಾರ್ಗವಾಗಿ ಡೋವರ್ ಪಟ್ಟಣದವರೆಗೂ ಪ್ರಯಾಣಮಾಡಬಹುದು. ಈ ಮಾರ್ಗವು 7,000 ಮೈಲಿ ಉದ್ದವಾಗಿರುವುದರಿಂದ ಪ್ರಯಾಣಕ್ಕೆ ಸುಮಾರು 17 ದಿನ ಹಿಡಿಯುವುದು. ಈ ರೈಲು ಮಾರ್ಗವಾಗಿ ಸೈಬೀರಿಯದಿಂದ ತೊಲೆಗಳೂ, ತುಪ್ಪಟಗಳೂ, ಚೀಣ ದೇಶದಿಂದ ರೇಷ್ಮೆ ಮತ್ತು ಟೀ ರಷ್ಯಾದೇಶಕ್ಕೆ ರಫ್ತಾಗುವುವು.

ಕ್ಯಾಸ್ಪಿಯನ್ ರೈಲು ಮಾರ್ಗವು ಕ್ಯಾಸ್ಪಿಯನ್ ಸಮುದ್ರತೀರದಿಂದ ರಷ್ಯನರಿಗೆ ಸೇರಿದ ತುರ್ಕಿಸ್ಥಾನದ ಪೂರ್ವದಿಕ್ಕಿನ ಕೊನೆಯವರೆಗೂ ಹಬ್ಬಿದೆ. ಈ ರೈಲು ಮಾರ್ಗದ ಮೂಲಕ ಕೆರೋಸಿನ್ ಎಣ್ಣೆ, ದ್ರಾಕ್ಷಿ, ಉಣ್ಣೆ, ತೊಗಲು ಇವು ರಫ್ತಾಗುವುವು. ಮರ್ವ್, ಬೊಖಾರ, ಸಮಾರ್ಕಂಡ್, ಟ್ಯಾಷ್ಕೆಂಟ್, ಖೋಕಂಡ್ ಎಂಬಿವು ಈ ಮಾರ್ಗದಲ್ಲಿರುವ ಮುಖ್ಯ ಪಟ್ಟಣಗಳು.

ಕಾಕಸಸ್ ಪರ್ವತದ ಬಳಿಯಲ್ಲಿ ವಿಶೇಷವಾಗಿ ಸಿಕ್ಕುವ ಕೆರೋಸಿನ್ ಎಣ್ಣೆ ಕಕೇಷಿಯನ್ ರೈಲು ಮಾರ್ಗವಾಗಿ ರಫ್ತಾಗುವುದು. ಈ ಮಾರ್ಗದಲ್ಲಿರುವ ಮುಖ್ಯ ಪಟ್ಟಣಗಳು ಟಿಪ್ಲಿಸ್ ಮತ್ತು ಬಾಕು.

ಈ ಮೂರು ರೈಲು ಮಾರ್ಗಗಳೂ ರಷ್ಯ ದೇಶದ ಜನರಿಂದ ಹಾಕಲ್ಪಟ್ಟಿವೆ. ಅವರ ವ್ಯಾಪಾರಕ್ಕೂ, ರಾಜ್ಯಭಾರಕ್ಕೂ ಇವು ತುಂಬ ಅನುಕೂಲವನ್ನು ಉಂಟು ಮಾಡಿವೆ.

ಇಂಡಿಯಾದೇಶದಲ್ಲಿ ಬ್ರಿಟಿಷ್ ಜನರೂ, ಜಪಾನ್ ದೇಶದಲ್ಲ ಜಪಾನರೂ ಕೋಟ್ಯಂತರ ರೂಪಾಯಿಗಳನ್ನು ವೆಚ್ಚಮಾಡಿ ಅನೇಕ ರೈಲುಮಾರ್ಗಗಳನ್ನು ಮಾಡಿರುವರು. ಈ ರೈಲು ಮಾರ್ಗಗಳು ಚೀಣ ದೇಶದಲ್ಲಿ ಬಹಳ ಕಡಿಮೆ. ಮುಂದೆ ಹೇಳುವ ದೇಶಗಳ ವಿವರಣೆಯಲ್ಲಿ ಈ ರೈಲು ಮಾರ್ಗಗಳನ್ನು ವಿವರಿಸಿದೆ. ಈ ಖಂಡದ ಉಳಿದ ಭಾಗಗಳಲ್ಲಿ ಜನಸಾಂದ್ರತೆಯೂ, ವ್ಯಾಪಾರವೂ ಬಹು ಕಡಿಮೆಯಾಗಿರುವುದಕ್ಕೆ, ಅಲ್ಲಿ ಇನ್ನೂ ರೈಲು ಮಾರ್ಗಗಳನ್ನು ಹಾಕದಿರುವುದೇ ಕಾರಣ.

ಸಾಮಾನ್ಯವಾಗಿ ಎಲ್ಲಾ ದೇಶಗಳಲ್ಲಿಯೂ ಗಾಡಿಯ ರಸ್ತೆಗಳು ಇರುವುವು. ಆದರೆ ಇಂಡಿಯ, ಚೀಣ, ಜಪಾನ್ ದೇಶಗಳ ಮೈದಾನಗಳಲ್ಲಿ ವ್ಯವಸಾಯ, ಕೈಗಾರಿಕೆ, ವ್ಯಾಪಾರಗಳು ಹೆಚ್ಚಾಗಿ ನಡೆಯುವುದರಿಂದಲೂ, ಜನಸಾಂದ್ರತೆಯು ಬಹಳ ಹೆಚ್ಚಾಗಿರುವುದರಿಂದಲೂ ಗಾಡಿಯ ರಸ್ತೆಗಳು ಬಹು ಉಪಯೋಗಕರಗಳಾಗಿವೆ. ಈ ಮೈದಾನಗಳು ವಿಶಾಲವಾಗಿಯೂ ಸಮವಾಗಿಯೂ ಇರುವುದರಿಂದ ದೊಡ್ಡ ರಸ್ತೆಗಳನ್ನು ಹಾಕುವುದು ದುಬಾರಿಯಾಗುವುದಿಲ್ಲ. ಆದುದರಿಂದ ಈ ಪ್ರದೇಶಗಳಲ್ಲಿ ಸೊಗಸಾದ ಗಾಡಿಯ ರಸ್ತೆಗಳು ಬಹಳ ವಿಶೇಷವಾಗಿವೆ.

ಈ ಖಂಡದ ನದಿಗಳಲ್ಲಿ ಎಷ್ಟು ಮಟ್ಟಿಗೆ ವ್ಯಾಪಾರಕ್ಕೆ ಅನುಕೂಲವಾದ ಜಲಮಾರ್ಗಗಳಿವೆ ಎಂಬುದನ್ನು ಹಿಂದೆಯೇ ವಿವರಿಸಿದೆ.

**ಪರದೇಶದ ವ್ಯಾಪಾರ ಮಾರ್ಗಗಳು.**—ಯೂರೊಪು ಖಂಡದ ಮತ್ತು ಅಮೆರಿಕದ ಸಂಯುಕ್ತ ಸಂಸ್ಥಾನಗಳ ಜನರು ಈ ಖಂಡದೊಡನೆ ವಿಶೇಷವಾಗಿ ವ್ಯಾಪಾರವನ್ನು ನಡೆಸುತ್ತಿರುವರು. ಉಳಿದ ಖಂಡಗಳೊಡನೆ ಕೊಂಚ ಮಟ್ಟಿಗೆ ಮಾತ್ರ ವ್ಯಾಪಾರ ನಡೆಯುವುದು. ಯೂರೊಪ್ ಖಂಡದ ಪಶ್ಚಿಮ ಭಾಗದ ದೇಶಗಳಿಂದ ಹೊರಟ ಹಡಗುಗಳು ಜಿಬ್ರಾಲ್ಟರ್ ಜಲಸಂಧಿ, ಮೆಡಿಟರೇನಿಯನ್ ಸಮುದ್ರ, ಸೂಯಿಸ್ ಕಾಲುವೆ, ಬೇಬಲ್ ಮಾಂಡಬ್ ಜಲಸಂಧಿಗಳ ಮೂಲಕ ಪ್ರಯಾಣಮಾಡಿ ಪಾರ್ಸಿ ಕೊಲ್ಲಿಯ ಮುಖದಲ್ಲಿರುವ ಮಸ್ಕತ್ ರೇವುಪಟ್ಟಣಕ್ಕಾಗಲಿ, ನಮ್ಮ ಇಂಡಿಯಾ ದೇಶದ ಕರಾಚಿ, ಬೊಂಬಾಯಿ ರೇವುಪಟ್ಟಣಗಳಿಗಾಗಲಿ, ಸಿಂಹಳ ದ್ವೀಪದಲ್ಲಿರುವ ಕೊಲಂಬೋ ರೇವುಪಟ್ಟಣಕ್ಕಾಗಲಿ ಬಂದು

ಸೇರುವುವು. ನಮ್ಮ ದೇಶದಿಂದ ಜಪಾನಾ ದೇಶಕ್ಕೆ ಹಡಗುಗಳು ಹೋಗ ಬೇಕಾದರೆ ಬಂಗಾಳ ಕೊಲ್ಲಿ, ಮಲಕ್ಕಾ ಜಲಸಂಧಿ, ಸಿಂಗಪೂರ್ ರೇವುಪಟ್ಟಣ ಗಳನ್ನು ಹಾದು, ಪೆಸಿಫಿಕ್ ಸಾಗರವನ್ನು ಸೇರಿ, ಹಾಂಕಾಂಗ್, ಷಾಂಘೇ ರೇವು ಪಟ್ಟಣಗಳ ಮಾರ್ಗವಾಗಿ ಯೋಕೊಹಾಮ ಅಥವಾ ನಾಗಸಾಕಿ ಬಂದರಿಗೆ ಹೋಗುತ್ತವೆ. ಈ ಖಂಡದಿಂದ ಹಿಂದೂಸಾಗರದ ಮಾರ್ಗವಾಗಿ ಆಫ್ರಿಕ, ಆಸ್ಟ್ರೇಲಿಯ ಖಂಡಗಳಿಗೂ, ಪೆಸಿಫಿಕ್ ಸಾಗರದ ಮಾರ್ಗವಾಗಿ ಉತ್ತರ ಅಮೆರಿಕ ಖಂಡ, ಫೀಜಿ ಮೊದಲಾದ ದ್ವೀಪಗಳಿಗೂ ಹಡಗುಗಳು ಹೋಗಿ ಬರುವುವು.

**ಜನಗಳ ಕುಲ, ಭಾಷೆ ಮತ್ತು ಮತಗಳು.**—ಈ ಖಂಡದಲ್ಲಿ ಕಕೇಷಿ ಯನ್ ಮತ್ತು ಮಂಗೋಲಿಯನಾ ಬುಡಕಟ್ಟಿನ ಜನರೂ ಅಥವ ಬಿಳಿಯ ಮತ್ತು ಹಳದಿ ಜನರೂ ವಾಸವಾಗಿರುವರು. ಸಾಮಾನ್ಯವಾಗಿ ಜಪಾನ್, ಚೀಣ, ಹಿಂದೂಚೀಣಗಳಲ್ಲಿ ವಾಸಮಾಡುವ ಜನರು ಹಳದಿವರ್ಣದವರೆಂದೂ, ಉಳಿದ ಜನರೆಲ್ಲ ಬಿಳಿಯ ಜನರೆಂದೂ ಹೇಳಬಹುದು. ಚೀಣ, ಜಪಾನ್ ದೇಶಗಳ ಜನರು ಚೀಣ, ಜಪಾನಾ ಭಾಷೆಗಳನ್ನು ಆಡುವರು. ಈ ಭಾಷೆಗಳ ಅಕ್ಷರಗಳು ಚಿತ್ರ ಗಳಂತೆ ಕಾಣುವುವು. ಒಂದರ ಕೆಳಗೆ ಒಂದರಂತೆ ಮೇಲಿನಿಂದ ಕೆಳಕ್ಕೆ ಸಾಲಾಗಿ ಈ ಅಕ್ಷರಗಳನ್ನು ಬರೆಯುವರು. ಪಶ್ಚಿಮ ಭಾಗದಲ್ಲಿ ಜನರು ತುರ್ಕಿ, ಪಾರ್ಸಿ, ಆಫ್ಘನ್, ಬೆಲೂಚಿ ಮೊದಲಾದ ಭಾಷೆಗಳನ್ನು ಆಡುವರು. ಇಂಡಿಯಾದೇಶದಲ್ಲಿ ಹಿಂದೂಸ್ಥಾನಿ, ಗುಜರಾತಿ, ಬಂಗಾಳಿ ಮೊದಲಾದ ಸಂಸ್ಕೃತಕ್ಕೆ ಸಂಬಂಧಪಟ್ಟ ಭಾಷೆಗಳನ್ನೂ, ಕನ್ನಡ, ತೆನುಗು ಮೊದಲಾದ ದ್ರಾವಿಡ ಭಾಷೆಗಳನ್ನೂ ಆಡುವರು.

ಎಲ್ಲಾ ಮತದ ಜನರೂ ಈ ಖಂಡದಲ್ಲಿ ವಾಸಮಾಡುವರು. ಜಪಾನ್, ಚೀಣ, ಹಿಂದೂಚೀಣ, ಸಿಲೋನ್‌ಗಳ ಜನರು ಬೌದ್ಧ ಮತದವರಾಗಿರುವರು. ಇವರ ಒಟ್ಟು ಸಂಖ್ಯೆ ಸುಮಾರು 56 ಕೋಟಿ. ಅಂದರೆ ಪ್ರಪಂಚದ ಒಟ್ಟು ಜನರಲ್ಲಿ ಸುಮಾರು $\frac{3}{4}$ ಭಾಗ ಜನರು ಈ ಮತದವರಾಗಿದಾರೆ. ಇಂಡಿಯಾ ದೇಶದ ಜನಸಂಖ್ಯೆಯ $\frac{3}{4}$ ಭಾಗ ಎಂದರೆ ಸುಮಾರು 20 ಕೋಟಿ ಜನರು ಹಿಂದೂಮತದವರಾಗಿರುವರು. ಇಂಡಿಯಾದೇಶದ ಉಳಿದ $\frac{1}{4}$ ಭಾಗ ಜನರೂ, ಆಫ್ಘಾನಿಸ್ಥಾನ, ಪರ್ಷಿಯ, ಅರೇಬಿಯ, ಏಷ್ಯದ ತುರ್ಕಿ ಮೊದಲಾದ ದೇಶಗಳ ಜನರೂ ಮಹಮ್ಮದೀಯಮತದವರಾಗಿದಾರೆ.

ಈ ಖಂಡದಲ್ಲಿ ಸುಮಾರು 2 ಕೋಟಿ ಕ್ರೈಸ್ತರಿರುವರು. ಇವರು ಏಷ್ಯದ ತುರ್ಕಿ, ಸೈಬೀರಿಯ, ಇಂಡಿಯಗಳಿಗೆ ಚದರಿಹೋಗಿರುವರು. ಅಲ್ಲದೆ ಕೆಲವು ಜೈನ ಮತ್ತು ಪಾರ್ಸಿ ಮತಸ್ಥರೂ ಇಂಡಿಯಾದೇಶದಲ್ಲಿರುವರು. ಹಲವು ಯಹೂ

ದ್ಯರು ಅಲ್ಲಲ್ಲಿ ಚದರಿಹೋಗಿರುವರು. ಈ ಖಂಡದ ಮಧ್ಯ ಭಾಗ ಮತ್ತು ದಕ್ಷಿಣ ಭಾಗಗಳಲ್ಲಿ ಕೆಲವು ಜನ ಚೈತನ್ಯ ಪೂಜಕರೂ ಇರುವರು.

**ರಾಜಕೀಯ ವಿಭಾಗಗಳು ಮತ್ತು ರಾಜ್ಯಭಾರಕ್ರಮ.**—ಈ ಖಂಡದಲ್ಲಿ ಇತರ ಖಂಡದ ಜನರಿಗೆ ಅಧೀನವಾಗಿರುವ ಮುಖ್ಯವಾದ ರಾಜಕೀಯ ವಿಭಾಗಗಳು ಯಾವುವೆಂದರೆ:—

(1) ರಷ್ಯನ್ ಜನರಿಗೆ ಸೇರಿರುವ ಸೈಬೀರಿಯ, ರಷ್ಯದ ಮಧ್ಯ ಏಷ್ಯ ಮತ್ತು ಕಕೇಷಿಯನ್ ಪ್ರಾಂತಗಳು ಅಥವಾ ಏಷ್ಯದ ರಷ್ಯ.

(2) ಬ್ರಿಟಿಷ್ ಜನರಿಗೆ ಸೇರಿರುವ ಇಂಡಿಯಾ ಚಕ್ರಾಧಿಪತ್ಯ, ಬೆಲೂಚಿಸ್ಥಾನದ ಒಂದು ಭಾಗ, ಸಿಂಹಳ ದ್ವೀಪ, ಸೈಪ್ರಸ್, ಪೆರಿಂ ಮತ್ತು ಹಾಂಕಾಂಗ್ ದ್ವೀಪಗಳು, ಸ್ಟ್ರೇಟ್ ಸೆಟಲ್‌ಮೆಂಟುಗಳು, ವಿಹೈವೈ ಮತ್ತು ಬೋರ್ನಿಯೋ ದ್ವೀಪದ ಉತ್ತರ ಭಾಗ.

(3) ತುರುಕರಿಗೆ ಸೇರಿರುವ ಏಷ್ಯಾ ಮೈನರ್, ಸಿರಿಯ, ಮೆಸೊಪೊಟೋಮಿಯ ಮತ್ತು ಅರೇಬಿಯದ ಕೆಲವು ಭಾಗ ಅಥವಾ ಏಷ್ಯದ ತುರ್ಕಿ.

(4) ಹಿಂದೂಚೀಣದಲ್ಲಿ ಫ್ರೆಂಚರ ಪೋಷಣೆಯಲ್ಲಿರುವ ಟಾಂಕಿಂಗ್, ಅನಾಂ ಮತ್ತು ಕ್ಯಾಂಬೋಡಿಯ ಅಥವಾ ಹಿಂದೂಚೀಣ, ಮತ್ತು ಇಂಡಿಯಾ ದೇಶದಲ್ಲಿ ಫ್ರೆಂಚರಿಗೆ ಸೇರಿರುವ ಪುದುಚೇರಿ ಮೊದಲಾದ ಪಟ್ಟಣಗಳು ಫ್ರೆಂಚರ ವಶದಲ್ಲಿವೆ.

(5) ಗೋವ ಮೊದಲಾದ ಪಟ್ಟಣಗಳು ಪೋರ್ಚುಗೀಸರಿಗೆ ಸೇರಿವೆ.

(6) ಅಮೆರಿಕದ ಸಂಯುಕ್ತಸಂಸ್ಥಾನದವರಿಗೆ ಸೇರಿದ ಫಿಲಿಪೈನ್ ದ್ವೀಪಗಳು.

(7) ಹಾಲೆಂಡ್ ದೇಶದವರಿಗೆ (ಡಚ್ಚರಿಗೆ) ಸೇರಿದ ಸುಮಾತ್ರ, ಜಾವಾ, ಸಿಲಬಿಸ್, ಸಂಡ ಮೊದಲಾದ ದ್ವೀಪಗಳು ಅಥವಾ ಡಚ್ ಈಸ್ಟಿಂಡಿಯಾ ದ್ವೀಪಗಳು.

(8) ಜರ್ಮನರಿಗೆ ಸೇರಿದ್ದ ಚೀಣ ದೇಶದ ಪೂರ್ವ ಭಾಗದಲ್ಲಿರುವ ಕೈಚೋ ಎಂಬ ಸಣ್ಣ ಪ್ರದೇಶ. ಇದು ಈಗ ಜಪಾನರ ವಶದಲ್ಲಿದೆ.

ಈ ಖಂಡದಲ್ಲಿರುವ ಸ್ವತಂತ್ರ ರಾಜ್ಯಗಳು ಯಾವುವೆಂದರೆ.—ಜಪಾನ್ ಚಕ್ರಾಧಿಪತ್ಯ, ಚೀಣ ಚಕ್ರಾಧಿಪತ್ಯ, ಅಫ್ಘಾನಿಸ್ಥಾನ, ಪರ್ಷಿಯ, ಅರೇಬಿಯ ಮತ್ತು ಸಯಾಂ. ಜಪಾನ್ ದೇಶದಲ್ಲಿ ಸಾಂಕುಶ ಪ್ರಭುತ್ವವೂ, ಚೀಣ ದೇಶದಲ್ಲಿ ಪ್ರಜಾಪ್ರತಿನಿಧಿ ಪ್ರಭುತ್ವವೂ ಇರುವುದು. ಆದರೆ ಅಲ್ಲಿ ಆಗಾಗ ಗಲಭೆಗಳು ಆಗುತ್ತಲೇ ಇರುವುವು. ಅಫ್ಘಾನಿಸ್ಥಾನದಲ್ಲಿ ಅಮೀರರೆಂಬ ಮಹಮ್ಮದೀಯ

ರಾಜರೂ, ಪರ್ಷಿಯದಲ್ಲಿ ಷಹ ಎಂಬ ಮುಹಮ್ಮದೀಯ ರಾಜರೂ ನಿರಂಕುಶ ಪ್ರಭುತ್ವವನ್ನು ಮಾಡುತ್ತಿರುವರು. ಅರೇಬಿಯ ದೇಶದ ಒಳಭಾಗದಲ್ಲಿ ಸ್ವತಂತ್ರರಾಗಿ ನಿರಂಕುಶ ಪ್ರಭುಗಳಾಗಿರುವ ಅನೇಕ ಸಣ್ಣ ಸಣ್ಣ ರಾಜರಿದಾರೆ. ಸಯಾಂ ದೇಶದ ರಾಜರೂ ನಿರಂಕುಶ ಪ್ರಭುಗಳು.

## ಇಂಡಿಯಾ ಚಕ್ರಾಧಿಪತ್ಯ

**ವಿಸ್ತೀರ್ಣ, ಮೇರೆಗಳು ಮತ್ತು ಸನ್ನಿವೇಶ.**—ಇಂಡಿಯಾ ದೇಶವು ಉ. ಅ. 8 ಡಿಗ್ರಿಗಳಿಂದ 38 ಡಿಗ್ರಿಗಳವರೆಗೆ ಪ್ರಸರಿಸಿದೆ. ಕರ್ಕಾಟಕ ಸಂಕ್ರಾಂತಿ ವೃತ್ತವು ಈ ದೇಶದ ಮಧ್ಯ ಭಾಗವನ್ನು ಹಾದು ಹೋಗಿದೆ. ಇದರ ವಿಸ್ತೀರ್ಣ (ಬರ್ಮ ವಿನಾ) ಸುಮಾರು 15 ಲಕ್ಷ ಚ. ಮೈ. ಗಳು. ಎಂದರೆ ಏಷ್ಯಾಖಂಡದ ⅛ ದಷ್ಟು, ಅಥವಾ ಬ್ರಿಟಿಷ್ ದ್ವೀಪಗಳ 12ರಷ್ಟು ಆಗುವುದು.

ಈ ದೇಶದ ಉತ್ತರದಲ್ಲಿ ಅಗಾಧವಾದ ದೊಡ್ಡ ಗೋಡೆಯಂತಿರುವ ಅತ್ಯುನ್ನತವಾದ ಹಿಮಾಲಯ ಪರ್ವತಸ್ತೋಮವಿರುವುದು. ಈ ಪರ್ವತಸ್ತೋಮದಲ್ಲಿ ಕಣಿವೆ ದಾರಿಗಳೇ ಅಪೂರ್ವ. ಇರುವ ಕೆಲವು ಕಣಿವೆ ದಾರಿಗಳೂ ಕೂಡ ಬಹು ಎತ್ತರವಾಗಿಯೂ ಕಡಿದಾಗಿಯೂ ಇರುವುದರಿಂದ ಶತ್ರುಗಳು ಸುಲಭವಾಗಿ ಈ ಎಲ್ಲೆಯನ್ನು ಹಾದು ಬರಲಾರರು. ಹಿಮಾಲಯಪರ್ವತದ ಕೊನೆಯಿಂದ ದಕ್ಷಿಣಕ್ಕೆ ಅನೇಕ ಪರ್ವತಗಳು ಒಂದಕ್ಕೊಂದು ಸೇರಿದಂತೆ ಹಬ್ಬಿರುವುವಲ್ಲದೆ, ಬರ್ಮಾದೇಶದಿಂದ ಇಂಡಿಯಾದೇಶಕ್ಕೆ ಜನರು ಬಾರದಂತೆ ಇವು ತಡೆಯಾಗಿರುವುವು. ಹಿಂದೂಕುಷ್ ಪರ್ವತವೂ, ಅದರ ಶಾಖೆಗಳೂ, ಸುಲೇಮಾನ್, ಹಾಲಾ ಬೆಟ್ಟಗಳೂ ವಾಯುವ್ಯದಲ್ಲಿವೆ. ಬೆಲೂಚಿಸ್ಥಾನ, ಅಫ್ಘಾನಿಸ್ಥಾನಗಳಿಂದ ಇಂಡಿಯಾದೇಶಕ್ಕೆ ಬರಲು ಈ ಭಾಗದಲ್ಲಿ ಕೆಲವು ಕಣಿವೆಯ ದಾರಿಗಳಿವೆ. ಪೂರ್ವದಲ್ಲಿ ಪಾರ್ಸಿಯವರೂ, ಗ್ರೀಕರೂ, ಅಫ್ಘಾನರೂ, ಮೊಗಲರೂ ಈ ಕಣಿವೆಗಳ ಮಾರ್ಗವಾಗಿ ನಮ್ಮ ದೇಶಕ್ಕೆ ನುಗ್ಗಿ ಬಂದರು. ಈಗ ಹೀಗೆ ಶತ್ರುಗಳು ನುಗ್ಗದಿರಲು ಈ ದಾರಿಗಳ ಪಕ್ಕದಲ್ಲಿರುವ ದೇಶವನ್ನೆಲ್ಲಾ ಬ್ರಿಟಿಷರು ತಮ್ಮ ಸ್ವಾಧೀನದಲ್ಲಿಟ್ಟುಕೊಂಡು ಅಲ್ಲಲ್ಲಿ ಬಲವಾದ ಕೋಟೆಗಳನ್ನು ಕಟ್ಟಿ, ದಂಡನ್ನಿಟ್ಟಿರುವರು. ಇಂಡಿಯಾದೇಶದ ಉಳಿದ ಕಡೆಗಳಲ್ಲಿ ಸಮುದ್ರವೇ ಮೇರೆಯಾಗಿರುವುದು. ಎಂದರೆ ಸಾಮಾನ್ಯವಾಗಿ ಈ ದೇಶಕ್ಕೆ ಎಲ್ಲಾ ಕಡೆಗಳಲ್ಲಿಯೂ ಸ್ವಾಭಾವಿಕವಾದ ಮೇರೆಗಳಿವೆಯೆಂದು ಹೇಳಿದಂತಾಯಿತು.

ಯುರೋಪಿನ ಮತ್ತು ಏಷ್ಯಾ ಖಂಡಗಳ ದಕ್ಷಿಣ ಭಾಗದಲ್ಲಿ ಮೂರು ಪರ್ಯಾಯದ್ವೀಪಗಳಿರುವುವು. ಇಟಲಿ ಮತ್ತು ಇಂಡಿಯಾ ಪರ್ಯಾಯದ್ವೀಪಗಳು ಮಧ್ಯ ಭಾಗದಲ್ಲಿವೆ. ಆದುದರಿಂದ ಈ ಪರ್ಯಾಯದ್ವೀಪಗಳ ಸನ್ನಿವೇಶವು ವ್ಯಾಪಾರಾಭಿವೃದ್ಧಿಗೆ ಅನುಕೂಲವಾಗಿದೆ. ಆದರೆ ಇಟಲಿ ಬಳಿ ಅನೇಕ ದ್ವೀಪಗಳೂ

ಸುತ್ತಲೂ ನೆಲದಿಂದ ಆವರಿಸಲ್ಪಟ್ಟ ಸಮುದ್ರವೂ ಇದೆ. ಇಂಡಿಯಾದೇಶದ ಒಳ ದ್ವೀಪಗಳಿಲ್ಲದೆ ದಕ್ಷಿಣದಲ್ಲಿ ಅಗಾಧವಾದ ಹಿಂದೂಸಾಗರವಿರುವುದರಿಂದ ಇಂಡಿಯಾ ದೇಶದ ಸನ್ನಿವೇಶವು ವ್ಯಾಪಾರಕ್ಕೆ ಇಟಲಿ ದೇಶದಷ್ಟು ಅನುಕೂಲ ವಾಗಿಲ್ಲ.

**ತೀರದ ಲಕ್ಷಣ.**—ಈ ದೇಶದ ತೀರವು ಸಾಮಾನ್ಯವಾಗಿ ನೇರವಾಗಿರುವುದು. ಸಮುದ್ರ ಶಾಖೆಗಳೂ, ಬಂದರುಗಳೂ, ದ್ವೀಪಗಳೂ ಕಡಿಮೆ. ಪಶ್ಚಿಮದಲ್ಲಿ ಕಚ್ ಖಾರಿಯೂ, ಕಾಂಬೇ ಖಾರಿಯೂ, ಕಚ್‌ರನ್ ಎಂಬ ಸರೋವರವೂ ಇರುವುದು. ಆದರೆ ಇವು ಮರಳಿನಿಂದ ಮುಚ್ಚಿ ಹೋಗುತ್ತ ಬರುವುದರಿಂದ ಆಳವಾಗಿಲ್ಲ. ಪಶ್ಚಿಮ ತೀರದಲ್ಲಿ ಉತ್ಕೃಷ್ಟವಾದ ಬಂದರೆನಿಸಿಕೊಂಡಿರುವುದು ಬೊಂಬಾಯಿ ಒಂದೇ. ದಕ್ಷಿಣದಲ್ಲಿರುವ ಮನ್ನಾರ್ ಕೊಲ್ಲಿಯೂ, ಪಾಕ್ ಜಲಸಂಧಿಯೂ ಸಹ ವಿಶೇಷ ಆಳವಾಗಿಲ್ಲ. ಪೂರ್ವ ತೀರದಲ್ಲಿ ಸಮುದ್ರಶಾಖೆಗಳಾಗಲಿ ಸ್ವಾಭಾವಿಕವಾದ ಬಂದರುಗಳಾಗಲಿ ಇಲ್ಲ. ಮುಂಗಾರುಗಾಳಿ ಬೀಸುವ ಕಾಲದಲ್ಲಿ ಸಮುದ್ರದ ಪ್ರವಾಹವು ಹರಿದು ಪೂರ್ವ ಪಶ್ಚಿಮ ತೀರಗಳಿಗೆ ಮರಳನ್ನು ತಂದುಹಾಕಿ ಆಳವನ್ನು ಕಡಿಮೆ ಮಾಡುತ್ತಿರುವುದು. ಪಶ್ಚಿಮ ತೀರದಲ್ಲಿರುವ ಕರಾಚಿಯಲ್ಲಿಯೂ, ಪೂರ್ವ ತೀರದಲ್ಲಿರುವ ಮದ್ರಾಸಿನಲ್ಲಿಯೂ ಕೋಟ್ಯಂತರ ರೂಪಾಯಿಗಳನ್ನು ವೆಚ್ಚಮಾಡಿ ಜನರೇ ಬಂದರುಗಳನ್ನು ಕಟ್ಟಿಕೊಂಡಿರುವರು. ಎಂದರೆ ಈ ರೇವುಪಟ್ಟಣಗಳಲ್ಲಿ ಸ್ವಾಭಾವಿಕವಾದ ಬಂದರುಗಳಿಲ್ಲ, ಕೃತಕವಾದ ಬಂದರುಗಳಿರುವುವು. ಕಲ್ಕತ್ತ ರೇವುಪಟ್ಟಣವು ಹೂಗ್ಲಿ ನದಿಯ ಮುಖದಲ್ಲಿದ್ದರೂ, ವಿಶೇಷ ಹಣವನ್ನು ಖರ್ಚುಮಾಡಿ ಆ ನದಿಯ ಮುಖದಲ್ಲಿ ಸದಾ ಮಣ್ಣನ್ನು ಹೊರಕ್ಕೆ ಸಾಗಿಸಬೇಕಾಗಿರುವುದು.

ಈ ದೇಶದ ನೈರುತ್ಯಕ್ಕೆ ನೂರಾರು ಮೈಲಿಗಳ ದೂರದಲ್ಲಿ ಲಕಡೀವ್ (ಲಕ್ಷದ್ವೀಪ) ಮತ್ತು ಮಾಲ್ಡೀವ್ ಎಂಬ ಕಾರಲ್ (ಹವಳ) ಹುಳುಗಳಿಂದ ನಿರ್ಮಿತವಾದ ದ್ವೀಪಗಳಿರುವುವು. ಇವುಗಳಲ್ಲಿ ತೆಂಗಿನ ಮರವು ವಿಶೇಷವಾಗಿ ಬೆಳೆಯುವುದೇ ವಿನಾ ಇನ್ನೇನೂ ಪ್ರಯೋಜನವಿಲ್ಲ. ಇವೆರಡೂ ದ್ವೀಪಗಳೂ ಒಬ್ಬ ಸುಲ್ತಾನನ ಆಳಿಕೆಯಲ್ಲಿವೆ. ಈತನು ಸಿಂಹಳ ದ್ವೀಪದ ಗೌರ್ನರಿಗೆ ಪೊಗದಿಯನ್ನು ಕೊಡುತ್ತಾನೆ. ಈ ದೇಶಕ್ಕೆ ಪೂರ್ವದಲ್ಲಿ ಇಂಡಿಯಾದೇಶಕ್ಕೂ, ಬರ್ಮಾಕ್ಕೂ ಮಧ್ಯೆ ಅಂಡಮಾನ್ ಮತ್ತು ನಿಕೋಬಾರ್ ಎಂಬ ದ್ವೀಪಗಳಿರುವುವು. ಭಾರಿ ತಪ್ಪುಮಾಡಿ ದ್ವೀಪಾಂತರ ಸಜಾ ವಿಧಿಸಲ್ಪಟ್ಟ ಖೈದಿಗಳನ್ನು ಇಂಡಿಯಾದೇಶದಿಂದ ಅಂಡಮಾನ್ ದ್ವೀಪಗಳಿಗೆ ಕಳುಹಿಸುತ್ತಾರೆ.

ಇಂಡಿಯಾದೇಶದ ತೀರದಳತೆ ಸುಮಾರು 3,600 ಮೈಲಿ. ಅಂದರೆ ಸರಾಸರಿ 416 ಚ.ಮೈ. ವಿಸ್ತೀರ್ಣಕ್ಕೆ ಒಂದು ಮೈಲಿ ತೀರವಿರುವುದು. ಇದೇ

ಸರಾಸರಿಯು ಬ್ರಿಟಿಷ್ ದ್ವೀಪಗಳಲ್ಲಿ 21: 1, ಏಷ್ಯಾ ಖಂಡದಲ್ಲಿ 500: 1. ಹೀಗೆ ತೀರವು ಇಷ್ಟು ನೇರವಾಗಿರುವುದರಿಂದ ಈ ದೇಶದ ಜನರಿಗೆ ಪೂರ್ವಕಾಲದಿಂದಲೂ ಸಮುದ್ರಯಾನದಲ್ಲ ಅಥವಾ ನೀರಿನಮೇಲೆ ಪರದೇಶಗಳಿಗೆ ಹೋಗಿಬರುವುದರಲ್ಲಿ ಇಂಗ್ಲೆಂಡ್, ಜಪಾನ್ ಮೊದಲಾದ ದೇಶದ ಜನರಿಗಿರುವಷ್ಟು ಅಭಿರುಚಿಯಿಲ್ಲ. ಈ ದೇಶದವರು ಮಾಡುವ ಪರದೇಶ ವ್ಯಾಪಾರವು ಸಾಮಾನ್ಯವಾಗಿ ಇತರ ದೇಶದವರ ಕೈಯುಲ್ಲಿಯೇ ಇದೆ. ಎಂದರೆ ಇತರ ದೇಶದವರು ತಾವಾಗಿ ನಮ್ಮ ದೇಶಕ್ಕೆ ಬಂದು ವ್ಯಾಪಾರಮಾಡುವರೇ ಹೊರತು ನಮ್ಮ ದೇಶದವರು ಇತರ ದೇಶಗಳಿಗೆ ಹೋಗಿ ವ್ಯಾಪಾರ ಮಾಡುವುದು ಬಹಳ ಕಡಿಮೆ. ಸಮುದ್ರ ತೀರವು ಕಡಿಮೆಯಾಗಿರುವುದರಿಂದ ಈ ದೇಶಕ್ಕೆ ಮತ್ತೊಂದು ಕೊರತೆಯುಂಟಾಗಿದೆ. ಅದೇನೆಂದರೆ ಒಳಭಾಗದ ದೇಶಗಳು ಸಮುದ್ರಕ್ಕೆ ದೂರವಾಗಿರುವುದರಿಂದ, ಅಲ್ಲಿ ಶೀತೋಷ್ಣಗಳ ವ್ಯತ್ಯಾಸಗಳು ಅಧಿಕವಾಗಿ, ತೀರಪ್ರದೇಶಗಳಲ್ಲ ವಾತ್ರ ಹವ ಸ್ವಲ್ಪ ಮಟ್ಟಿಗೆ ಸಮಧಾತುವಾಗಿರುತ್ತದೆ.

**ಮೇಲ್ಮೈಯ್ಯ ಲಕ್ಷಣ.**—ಇಂಡಿಯಾದೇಶವನ್ನು ಸ್ವಾಭಾವಿಕವಾಗಿ ಎರಡು ಭಾಗಗಳಾಗಿ ಎಣಿಸುವುದು ಪೂರ್ವಕಾಲದಿಂದಲೂ ರೂಢಿಯಾಗಿದೆ. ವಿಂಧ್ಯ ಪರ್ವತಗಳಿಗೆ ಉತ್ತರದಲ್ಲಿರುವ ಭಾಗವನ್ನು ಉತ್ತರ ಇಂಡಿಯಾ ಅಥವಾ ಹಿಂದೂಸ್ಥಾನವೆಂದೂ, ದಕ್ಷಿಣಕ್ಕಿರುವ ಭಾಗವನ್ನು ದಕ್ಷಿಣ ಇಂಡಿಯಾ ಅಥವಾ ದಖನ್ ಎಂದೂ ಕರೆಯುವರು. ಉತ್ತರ ಭಾಗವು ಸಾಧಾರಣವಾಗಿ ಮೈದಾನ, ದಕ್ಷಿಣ ಭಾಗವು ಬಹಳ ಮಟ್ಟಿಗೆ ಬೆಟ್ಟಸೀಮೆ ಮತ್ತು ಪ್ರಸ್ಥಭೂಮಿ. ಪುರಾತನ ಕಾಲದಲ್ಲಿ ಈ ಎರಡು ಭಾಗಗಳಿಗೂ ಒಟ್ಟು ಭರತವರ್ಷವೆಂದು ಹೆಸರಿಟ್ಟಿದ್ದರು.

ಈ ದೇಶದ ಮೇಲ್ಮೈಯ್ಯ ಲಕ್ಷಣವನ್ನು ವಿಶದವಾಗಿ ತಿಳಿಯಲು ಈ ದೇಶವನ್ನು ಏಳು ಭಾಗಗಳಾಗಿ ವಿಭಾಗಿಸಬಹುದು:—(1) ಹಿಮಾಲಯ ಪರ್ವತ ಪ್ರದೇಶ, (2) ಸಿಂಧೂನದಿಯ ಮೈದಾನ, (3) ಗಂಗಾನದಿಯ ಮೈದಾನ, (4) ಮಧ್ಯ ಇಂಡಿಯ ಪ್ರಸ್ಥಭೂಮಿ, (5) ದಖನ್ ಪ್ರಸ್ಥಭೂಮಿ, (6) ಪೂರ್ವ ತೀರದ ಮೈದಾನ, (7) ಪಶ್ಚಿಮ ತೀರದ ಮೈದಾನ. 13/6

(1) **ಹಿಮಾಲಯ ಪರ್ವತ ಪ್ರದೇಶ.**—ಪ್ರಪಂಚದಲ್ಲೆಲ್ಲಾ ಅತ್ಯುನ್ನತವಾದ ಹಿಮಾಲಯ ಪರ್ವತವು ಈ ದೇಶದ ಉತ್ತರ ಮೇರೆಯಾಗಿರುವುದು. ಇದು ಕಾಶ್ಮೀರದಿಂದ ಅಸ್ಸಾಂವರೆಗೂ ಸುಮಾರು 1,500 ಮೈಲಿ ದೂರ ಪ್ರಸರಿಸಿದೆ. ಕೆಲವು ಭೂಪಟಗಳಲ್ಲಿ ಇದು ಒಂದೇ ಪಙ್ಕ್ತಿಯಾಗಿ ಕಂಡುಬಂದರೂ, ಇವುಗಳಲ್ಲಿ ಅನೇಕ ಸಾಲುಗಳಿರುವುವು. ಈ ಸಾಲುಗಳಲ್ಲಿ ಮುಖ್ಯವಾದುವು ಮೂರು. ಸಿಂಧೂ ಗಂಗಾ ನದಿಗಳ ಮೈದಾನಗಳಿಗೆ ಉತ್ತರದಲ್ಲಿರುವ '**ದಕ್ಷಿಣ ಪಙ್ಕ್ತಿ**'ಯೇ ಮೊದಲನೆಯದು. ಈ ಸಾಲು ಹೆಚ್ಚು ಎತ್ತರ

ವಾಗಿಯೂ ಇಲ್ಲ, ನೇರವಾಗಿಯೂ ಇಲ್ಲ. ಉಪ್ಪಿನ ಬೆಟ್ಟವೂ, ಶಿವಾಲಿಕ್ ಬೆಟ್ಟಗಳೂ ಈ ಸಾಲಿಗೆ ಸೇರಿದುವು. **'ಮಧ್ಯದ ಪಙ್ಕ್ತಿ'**ಯೇ ಎರಡನೆಯದು. ಇದಕ್ಕೆ ಜಾಸ್ಕರ್ ಶ್ರೇಣಿಯೆಂತಲೂ ಹೆಸರು. ಇದು ಬಹಳ ಎತ್ತರವಾಗಿದೆ. **'ಉತ್ತರ ಪಙ್ಕ್ತಿ'**ಯು ಮೂರನೆಯದು. ಇದು ಪಶ್ಚಿಮದಲ್ಲಿ ಅಸಂಗ ಪರ್ವತದಿಂದ ಟಿಬೆಟ್ ದೇಶದ ಪೂರ್ವದ ಎಲ್ಲೆಯುವರೆಗೂ ಪ್ರಸರಿಸಿದೆ. ಈ ಸಾಲಿಗೂ ಎರಡನೆಯ ಸಾಲಿಗೂ ಮಧ್ಯೆ ಕಾಶ್ಮೀರದ ಕಣಿವೆ ಇದೆ. ಈ ಉತ್ತರ ಪಙ್ಕ್ತಿ ಬಹಳ ಉನ್ನತವಾದುದು. ಹೀಗೆ ಹಬ್ಬಿರುವ ಮುಖ್ಯವಾದ ಮೂರು ಸಾಲುಗಳಿಂದ ಕೂಡಿದ ಹಿಮಾಲಯ ಪರ್ವತವು 150ರಿಂದ 250 ಮೈಲಿಯಷ್ಟು ಅಗಲವಾಗಿರುವುದು. ಇದರ ಸರಾಸರಿ ಎತ್ತರ 20,000 ಅಡಿಗಿಂತ ಹೆಚ್ಚಾಗಿರುವುದು. ಅಲ್ಲಲ್ಲಿ ಬಹಳ ಎತ್ತರವಾದ ಶಿಖರಗಳು ಅನೇಕವಾಗಿವೆ. ಇವುಗಳಲ್ಲಿ ಅಸಂಗ ಪರ್ವತ (26,000 ಅಡಿ), ಧವಳಗಿರಿ (26,000 ಅಡಿ), ಗೌರೀಶಂಕರ ಅಥವಾ ಎವರೆಸ್ಟ್ (29,002 ಅಡಿ), ಕಾಂಚನಗಂಗ (28,000 ಅಡಿ) ಎಂಬಿವು ಮುಖ್ಯವಾದುವು. ಗೌರೀಶಂಕರದಷ್ಟು ಎತ್ತರವಾದ ಶಿಖರವು ಪ್ರಪಂಚದಲ್ಲಿನ್ನೆಲ್ಲಿಯೂ ಇಲ್ಲ.

ಈ ಹಿಮಾಲಯ ಪರ್ವತಗಳಿಂದ ನಮ್ಮ ದೇಶಕ್ಕೆ ಅನೇಕ ಪ್ರಯೋಜನಗಳುಂಟು:—(1) ಉತ್ತರದ ಕಡೆಯಿಂದ ಶತ್ರುಗಳು ನಮ್ಮ ದೇಶಕ್ಕೆ ಪ್ರವೇಶಿಸದಂತೆ ತಡೆಯಾಗಿರುವುದು. (2) ಈ ದೇಶದ ಮುಂಗಾರು ಗಾಳಿಗಳನ್ನು ಹೊರಗೆ ಹೋಗದಂತೆ ತಡೆದು ಅವು ಈ ದೇಶದಲ್ಲಿಯೇ ಅಧಿಕವಾದ ಮಳೆಯನ್ನು ಸುರಿಸುವಂತೆ ಮಾಡುವುದು. (3) ಟಿಬೆಟ್ ದೇಶದ ಅತಿ ಶೀತವಾದ ಗಾಳಿಗಳು ಈ ದೇಶಕ್ಕೆ ಬೀಸದಂತೆ ತಡೆಯುವುದು. ಈ ಪರ್ವತಗಳಲ್ಲಿ 17,000 ಅಡಿಗಳ ಎತ್ತರದ ಮೇಲೆ ಸದಾ ಹಿಮವು ತುಂಬಿರುವುದರಿಂದಲೂ, ಇದರ ತಪ್ಪಲುಗಳಲ್ಲಿ ವಿಶೇಷವಾಗಿ ಮಳೆ ಬೀಳುವುದರಿಂದಲೂ ಈ ಪರ್ವತದಿಂದ ಅನೇಕ ನದಿಗಳು ಸದಾ ತುಂಬಿ ಹರಿಯುತ್ತಿರುವುವು. ಈ ನದಿಗಳು ಮಣ್ಣು ಮೆಕ್ಕಲನ್ನು ತಂದು ಹಾಕಿ ಉತ್ತರ ಇಂಡಿಯವನ್ನೆಲ್ಲ ಬಹಳ ಮಟ್ಟಿಗೆ ಫಲವತ್ತಾಗಿ ಮಾಡಿವೆ. (4) ಸಿಂಧು ಗಂಗಾನದಿಗಳ ಮೈದಾನಗಳಲ್ಲಿ ಬೇಸಿಗೆಯಲ್ಲಿ ಸೆಕೆ ಹೆಚ್ಚಾಗಿರುವುದರಿಂದ ಅಲ್ಲಿರುವ ಶ್ರೀಮಂತರು ಈ ಪರ್ವತದ ತಪ್ಪಲಿನಲ್ಲಿರುವ ಸಿಂಲಾ, ಡಾರ್ಜಿಲಿಂಗ್ ಮೊದಲಾದ ಪಟ್ಟಣಗಳಿಗೆ ಹೋಗಿ ಬಿಸಿಲು ಕಾಲದಲ್ಲಿ ಅಲ್ಲಿಯೇ ವಾಸಮಾಡುವರು. (5) ಈ ಪರ್ವತದ ಕೆಳಭಾಗದ ತಪ್ಪಲಿನಲ್ಲಿರುವ ಕಾಡುಗಳಲ್ಲಿ ನಾನಾ ಜಾತಿಯ ದೊಡ್ಡ ದೊಡ್ಡ ಮರಗಳು ಬೆಳೆಯುವುವು.

ಹಿಮಾಲಯ ಪರ್ವತಗಳಿಗೆ ಪಶ್ಚಿಮದಲ್ಲಿ ಅಫ್ಘಾನಿಸ್ಥಾನದೊಳಕ್ಕೆ ಹಬ್ಬಿರುವ ಹಿಂದೂಕುಷ್ ಪರ್ವತವಿದೆ. ಇದಕ್ಕೆ ದಕ್ಷಿಣದಲ್ಲಿ ಅನೇಕ ಪರ್ವತಗಳು

ಉತ್ತರ ದಕ್ಷಿಣವಾಗಿ ಪ್ರಸರಿಸಿವೆ. ಇವುಗಳಲ್ಲಿ ಮುಖ್ಯವಾದುವು ಸುಲೇಮಾನ್ ಮತ್ತು ಹಾಲಾ ಅಥವಾ ಖಿರ್ತಾರಿ ಬೆಟ್ಟಗಳು. ಈ ಪರ್ವತಗಳು ಹಿಮಾಲಯ ಪರ್ವತದಷ್ಟು ಎತ್ತರವಾಗಿಲ್ಲ. ಇವುಗಳ ಮೇಲೆ ಮಳೆ ಬೀಳುವುದೂ ಬಹಳ ಕಡಿಮೆ. ಆದುದರಿಂದ ಇವು ಬೆಂಗಾಡು ಪ್ರದೇಶಗಳಾಗಿವೆ. ಆದರೆ ಇವುಗಳಲ್ಲಿ ಅಲ್ಲಲ್ಲಿ ಸಣ್ಣ ಸಣ್ಣ ನದಿಗಳು ಹರಿಯುವುದರಿಂದ ಇವುಗಳ ಕಣಿವೆಗಳ ಮೂಲಕ ವಾಯುವ್ಯ ದಿಕ್ಕಿನಿಂದ ಇಂಡಿಯಾ ದೇಶಕ್ಕೆ ಶತ್ರುಗಳು ಬರಲು ಅವಕಾಶವಾಗಿರುವುದು.

ಹಿಮಾಲಯುಗಳಿಗೆ ಪೂರ್ವದಲ್ಲಿ ಇಂಡಿಯಾ ದೇಶಕ್ಕೂ, ಬರ್ಮಾ ದೇಶಕ್ಕೂ ಮಧ್ಯೆ ಪಾಟ್‌ಕೈ, ನಾಗ, ಲೂಷೈ, ಯೋಮ ಎಂಬ ಪರ್ವತಗಳಿರುವುವು. ಇವು ಅಷ್ಟು ಎತ್ತರವಾಗಿಲ್ಲ. ಆದರೆ ಇಲ್ಲಿ ಮಳೆ ವಿಶೇಷವಾಗಿ ಬೀಳುವುದರಿಂದ ಅತಿದಟ್ಟವಾದ ಕಾಡುಗಳಿರುವುವು. ಅಲ್ಲದೆ ಈ ಪರ್ವತಗಳು ಇಂಡಿಯ ಬರ್ಮಗಳಿಗೆ ಮಧ್ಯೆ ಈ ದೇಶಕ್ಕೆ ಸ್ವಾಭಾವಿಕವಾದ ಮೇರೆಯಾಗಿವೆ.

(2) **ಸಿಂಧೂನದಿಯ ಮೈದಾನ.**—ಈ ಮೈದಾನವು ಖಿರ್ತಾರಿ ಮತ್ತು ಸುಲೆಮಾನ್ ಪರ್ವತಗಳಿಗೂ, ಥಾರ್ ಮರುಭೂಮಿಗೂ ಮಧ್ಯದಲ್ಲಿದೆ. ಇದು ಸಮುದ್ರ ಮಟ್ಟಕ್ಕಿಂತ ಸುಮಾರು 1,000 ಅಡಿಗಳಷ್ಟು ಮಾತ್ರ ಎತ್ತರವಾಗಿರುವುದು. ಸಿಂಧೂ ಮತ್ತು ಅದರ ಉಪನದಿಗಳು ಪರ್ವತಗಳಿಂದ ತಂದ ಮಣ್ಣು ಮೆಕ್ಕಲಿನಿಂದ ಈ ನೆಲವುಂಟಾಗಿರುವುದರಿಂದ, ಕ್ಷೇತ್ರವು ಬಹು ಫಲವತ್ತಾಗಿರುವುದು. ಆದರೆ ಈ ಮೈದಾನಗಳಲ್ಲಿ ಮಳೆ ಬೀಳುವುದು ಬಹಳ ಕಡಿಮೆಯಾದುದರಿಂದ ಇಷ್ಟು ಫಲವತ್ತಾದ ಕ್ಷೇತ್ರವು ನೀರಾವರಿಯಿಲ್ಲದ ಕಡೆಗಳಲ್ಲಿ ವ್ಯವಸಾಯಕ್ಕೆ ಉಪಯೋಗವಿಲ್ಲದೆ ಮರಳುಕಾಡಿನಂತಿರುವುದು. ನದಿಗಳ ಕಾಲುವೆಗಳಿಂದ ನೀರನ್ನು ಹಾಯಿಸುವುದಕ್ಕೆ ಅನುಕೂಲವಿರುವ ಕಡೆಗಳಲ್ಲಿ ಮಾತ್ರ ವ್ಯವಸಾಯವು ಚೆನ್ನಾಗಿ ನಡೆಯುತ್ತಿದೆ.

(3) **ಗಂಗಾನದಿಯ ಮೈದಾನ.**—ಈ ಮೈದಾನವು ಥಾರ್ ಮರುಭೂಮಿಯಿಂದ ಬಂಗಾಳಕೊಲ್ಲಿಯವರೆಗೂ, ಹಿಮಾಲಯ ಪರ್ವತದಿಂದ ಮಧ್ಯ ಇಂಡಿಯ ಪ್ರಸ್ಥಭೂಮಿಯವರೆಗೂ ವಿಸ್ತರಿಸಿದೆ. ನದಿಗಳಿಂದಲೇ ಈ ಮೈದಾನವು ನಿರ್ಮಿತವಾಗಿರುವುದರಿಂದ ಎಲ್ಲಾ ಕಡೆಗಳಲ್ಲಿಯೂ ನೆಲವು ಬಹು ಫಲವತ್ತಾಗಿದೆ. ಅಗೆದು ನೋಡಿದರೆ 500 ಅಡಿ ಆಳದವರೆಗೂ ಫಲವತ್ತಾದ ಮಣ್ಣು ಸಿಕ್ಕುವುದೇ ಹೊರತು ಕಲ್ಲು ಸಿಕ್ಕುವುದಿಲ್ಲ. ಇಲ್ಲಿ ಮಳೆ ಹೆಚ್ಚಾಗಿ ಬೀಳುವುದರಿಂದ ಸಸ್ಯಗಳು ಬಹು ಸೊಂಪಾಗಿ ಬೆಳೆಯುವುವು. ಸಿಂಧು ಗಂಗಾನದಿಗಳ ಮೈದಾನಗಳು ಒಂದಕ್ಕೊಂದು ಸೇರಿದಂತೆ ಇವೆ. ಇವು ಇಂಡಿಯಾ ದೇಶದ ವಿಸ್ತೀರ್ಣದಲ್ಲಿ 5 ಭಾಗವನ್ನೂ, ಜನಸಂಖ್ಯೆಯಲ್ಲಿ ¼ ಭಾಗವನ್ನೂ

ಒಳಗೊಂಡಿವೆ. ಪ್ರಪಂಚದಲ್ಲಿ ಇನ್ನೆಲ್ಲಿಯೂ ಇಂತಹ ಜನಭರಿತವಾದ ದೊಡ್ಡ ಮೈದಾನವೇ ಇಲ್ಲ.

(4) **ಮಧ್ಯಇಂಡಿಯಾ ಪ್ರಸ್ಥಭೂಮಿ.**—ಈ ಪ್ರಸ್ಥಭೂಮಿಯು ವಿಂಧ್ಯಪರ್ವತಕ್ಕೂ ಸಿಂಧು ಗಂಗಾ ನದಿಗಳ ಮೈದಾನಕ್ಕೂ ಮಧ್ಯೆ ಇದೆ. ಇದಕ್ಕೆ ಪಶ್ಚಿಮದಲ್ಲಿ ಅರಾವಳೀ ಬೆಟ್ಟಗಳಿರುವುವು. ದಕ್ಷಿಣಕ್ಕೆ ಸಾತ್ಪುರ ಪರ್ವತವೂ, ವಿಂಧ್ಯ ಪರ್ವತವೂ, ವಿಂಧ್ಯ ಪರ್ವತದ ಶಾಖೆಯಾದ ಕೈಮೂರ್ ಬೆಟ್ಟಗಳೂ ಇವೆ. ಈ ಪ್ರಸ್ಥಭೂಮಿಯ ನೈರುತ್ಯ ಭಾಗಕ್ಕೆ ಮಾಳವ ಪ್ರಸ್ಥಭೂಮಿಯೆಂದೂ ಹೆಸರುಂಟು. ಈ ಪ್ರಸ್ಥಭೂಮಿಯ ಉತ್ತರ ಭಾಗವು ಸಾಮಾನ್ಯವಾಗಿ ಮರುಭೂಮಿಯಾಗಿಯೂ ದಕ್ಷಿಣ ಭಾಗವು ಸಾಮಾನ್ಯವಾಗಿ ಫಲವತ್ತಾದ ಪ್ರದೇಶವಾಗಿಯೂ ಇವೆ.

(5) **ದಖನ್ ಪ್ರಸ್ಥಭೂಮಿ.**—ವಿಂಧ್ಯ ಪರ್ವತದಿಂದ ಸ್ವಲ್ಪ ಹೆಚ್ಚು ಕಡಿಮೆ ಕನ್ಯಾಕುಮಾರಿ ಭೂಶಿರದವರೆಗೂ ಈ ಪ್ರಸ್ಥಭೂಮಿ ಹಬ್ಬಿದೆ. ಪೂರ್ವದಲ್ಲಿ ಪೂರ್ವ ಘಟ್ಟಗಳೂ, ಪಶ್ಚಿಮದಲ್ಲಿ ಪಶ್ಚಿಮ ಘಟ್ಟಗಳೂ ಇದಕ್ಕೆ ಮೇರೆಗಳಾಗಿವೆ. ಈ ಪ್ರಸ್ಥಭೂಮಿಗೆ ಉತ್ತರದಲ್ಲಿ ವಿಂಧ್ಯ ಮತ್ತು ಸಾತ್ಪುರ ಪರ್ವತಗಳೂ, ಗಾವಿಲ್‌ಘರ್ ಬೆಟ್ಟ ಮಹದೇವ ಬೆಟ್ಟ, ಅಮರಕಂಟಕವೆಂಬ ಬೆಟ್ಟ, ಛೋಟಾನಾಗಪುರದ ಬೆಟ್ಟಗಳು ಮೊದಲಾದ ಬೆಟ್ಟಗಳೂ ಇವೆ. ಸಮುದ್ರ ಮಟ್ಟಕ್ಕಿಂತ ಈ ಪ್ರಸ್ಥಭೂಮಿ 1,000 ಅಡಿಯಿಂದ 3,000 ಅಡಿಯಷ್ಟು ಎತ್ತರವಾಗಿದೆ. ನೀಲಗಿರಿ ಬೆಟ್ಟ, ಪಳ್ನಿ ಬೆಟ್ಟ, ಆನೆಮಲೆ ಬೆಟ್ಟ ಮೊದಲಾದ ಅನೇಕವಾದ ಬೆಟ್ಟಗಳು ಈ ಪ್ರಸ್ಥಭೂಮಿಯಲ್ಲಿ ಅಡಕವಾಗಿರುವುವು. ನೀಲಗಿರಿಯಲ್ಲಿರುವ ದೊಡ್ಡಬೆಟ್ಟವೆಂಬುದೇ ಈ ಪ್ರಸ್ಥಭೂಮಿಯಲ್ಲಿ ಅತ್ಯಂತ ಎತ್ತರವಾದ ಶಿಖರ. ಇದು 8,760 ಅಡಿ ಎತ್ತರವಾಗಿದೆ. ಪಶ್ಚಿಮ ಘಟ್ಟಗಳು ಈ ಪ್ರಸ್ಥಭೂಮಿಗೆ ಪಶ್ಚಿಮದಲ್ಲಿ ಎತ್ತರವಾದ ಗೋಡೆಯಂತಿವೆ. ಇವುಗಳಲ್ಲಿ ಕಣಿವೆ ದಾರಿಗಳು ಕಡಿಮೆ. ಬೊಂಬಾಯಿ ಪಟ್ಟಣದ ಸಮೀಪದಲ್ಲಿರುವ ಥಾಲ್‌ಘಾಟ್ ಮತ್ತು ಭೋರ್‌ಘಾಟ್‌ಗಳೂ, ನೀಲಗಿರಿಗೆ ಪಶ್ಚಿಮದಲ್ಲಿರುವ ಪಾಲಘಾಟ್ ಕಂಡಿಯೂ ಮುಖ್ಯವಾದ ಕಣಿವೆ ಮಾರ್ಗಗಳಾಗಿವೆ. ಈ ಪ್ರಸ್ಥಭೂಮಿಯು ಪಶ್ಚಿಮದಿಂದ ಪೂರ್ವಕ್ಕೆ ಇಳಿಜಾರಾಗಿದೆ. ಪೂರ್ವ ಘಟ್ಟಗಳು ತಗ್ಗಾಗಿಯೂ, ಅನೇಕ ದೊಡ್ಡ ಕಣಿವೆ ಮಾರ್ಗಗಳುಳ್ಳವುಗಳಾಗಿಯೂ ಇವೆ. ಈ ಮಾರ್ಗಗಳ ಮೂಲಕ ಗೋದಾವರಿ ಮೊದಲಾದ ನದಿಗಳು ಪೂರ್ವ ತೀರದ ಮೈದಾನವನ್ನು ಪ್ರವೇಶಿಸುವುವು.

(6) **ಪೂರ್ವತೀರದ ಮೈದಾನ.**—ಈ ಮೈದಾನವು ಗಂಗಾನದಿಯ ಮುಖದಿಂದ ಕನ್ಯಾಕುಮಾರಿ ಭೂಶಿರದವರೆಗೂ ಪೂರ್ವ ಘಟ್ಟಗಳಿಂದ ಬಂಗಾಳ

ಕೊಲ್ಲಿಯುವರೆಗೂ ವಿಸ್ತರಿಸಿದೆ. ಈ ಮೈದಾನವು ದಕ್ಷಿಣದಲ್ಲಿ ಬಹಳ ಅಗಲವಾಗಿದೆ. ಉತ್ತರದಲ್ಲಿ ಅಗಲ ಕಡಿಮೆ. ಸಾಧಾರಣವಾಗಿ ಈ ಪ್ರದೇಶದ ನೆಲವೆಲ್ಲ ಫಲವತ್ತಾಗಿದೆ. ಮಹಾನದಿ, ಗೋದಾವರಿ, ಕೃಷ್ಣ, ಕಾವೇರಿ ಮೊದಲಾದ ನದೀಮುಖಜಭೂಮಿಗಳನ್ನು ಇದು ಒಳಗೊಂಡಿದೆ. ಪೂರ್ವತೀರದ ಸಮೀಪದಲ್ಲಿ ಚಿಲ್ಕ ಮತ್ತು **ಪುಲಿಕಾಟ್** ಸರೋವರಗಳಿವೆ. ಆದರೆ ಈ ತೀರದಲ್ಲಿ ಉತ್ತಮವಾದ ಬಂದರು ಒಂದಾದರೂ ಇಲ್ಲ. ಸರ್ಕಾರದವರು ಬಹಳ ಹಣವನ್ನು ವೆಚ್ಚಮಾಡಿ ಮದ್ರಾಸು ಬಂದರನ್ನು ಕಟ್ಟಿರುವರು. ಪೂರ್ವತೀರಕ್ಕೆ ಚೋಳಮಂಡಲತೀರವೆಂದೂ ಹೆಸರುಂಟು.

(7) **ಪಶ್ಚಿಮತೀರದ ಮೈದಾನ.**—ಇದು ಪಶ್ಚಿಮ ಘಟ್ಟಗಳಿಗೂ, ಅರೇಬಿಯನ್ ಸಮುದ್ರಕ್ಕೂ ಮಧ್ಯೆ ಕಾಂಬೆ ಖಾರಿಯಿಂದ ಕನ್ಯಾಕುಮಾರೀ ಭೂಶಿರದವರೆಗೂ ಹಬ್ಬಿದೆ. ಇದರ ಅಗಲ ಸುಮಾರು 40 ಮೈಲಿ. ಆದರೆ ಇದು ಪೂರ್ವತೀರದ ಮೈದಾನದಷ್ಟು ಅಗಲವಾಗಿಲ್ಲ. ಇಲ್ಲಿ ದೊಡ್ಡ ನದಿಗಳೂ, ನದೀಮುಖಗಳೂ ಇಲ್ಲ. ಆದರೂ ನೆಲವು ಬಹು ಫಲವತ್ತಾಗಿದೆ. ಪಶ್ಚಿಮತೀರದ ದಕ್ಷಿಣ ಭಾಗಕ್ಕೆ ಮಲಬಾರ್ ತೀರವೆಂದು ಹೆಸರು. ಪಶ್ಚಿಮತೀರದಲ್ಲಿರುವ ಬೊಂಬಾಯಿ ರೇವುಪಟ್ಟಣವು ಉತ್ತಮವಾದ ಸ್ವಾಭಾವಿಕವಾದ ಬಂದರನ್ನುಂಟಾಗಿದೆ. ಇದರ ಹತ್ತಿರ ಬೊಂಬಾಯಿ ಎಂಬ ದ್ವೀಪವಿದೆ. ಇದಕ್ಕೆ ಪೂರ್ವದಲ್ಲಿ ದ್ವೀಪಕ್ಕೂ ತೀರಪ್ರದೇಶಕ್ಕೂ ಮಧ್ಯೆ ಇರುವ ಬೊಂಬಾಯಿ ಬಂದರಿಗೆ ಸಮುದ್ರದ ಕಡೆಯಿಂದ ಬರುವ ಬಿರುಗಾಳಿ ಮತ್ತು ಮರಳಿನ ಪ್ರವಾಹ ಬಾರದಂತೆ ಈ ದ್ವೀಪವು ತಡೆಯಾಗಿರುವುದು.

**ವಾಯುಗುಣ ಮತ್ತು ಮಳೆ; ವಾಯುಗುಣ.**—ಒಂದು ದೇಶದ ವಾಯುಗುಣವನ್ನು ತಿಳಿಯಬೇಕಾದರೆ, ಹಿಂದೆ ಸಾಮಾನ್ಯ ವಿವರಣೆಯಲ್ಲಿ ಹೇಳಿರುವಂತೆ ಆ ದೇಶದ ಅಕ್ಷಾಂಶ, ಎತ್ತರ, ಸಮುದ್ರ ಸಾಮೀಪ್ಯ ಮೊದಲಾದ ಆಧಾರಗಳನ್ನು ತಿಳಿಯಬೇಕು. ಆದುದರಿಂದ ಈಗ ಆ ಆಧಾರಗಳನ್ನು ವಿಚಾರಿಸೋಣ.

ಇಂಡಿಯಾದೇಶವು ಉತ್ತರ ಅಕ್ಷಾಂಶ 8 ಡಿಗ್ರಿಗಳಿಂದ 38 ಡಿಗ್ರಿಗಳವರೆಗೆ ವಿಸ್ತರಿಸಿದೆ. ಕರ್ಕಾಟಕ ಸಂಕ್ರಾಂತಿ ವೃತ್ತವು ದೇಶದ ಮಧ್ಯೆ ಹಾದು ಹೋಗಿ ಈ ದೇಶವನ್ನು ಸುಮಾರಾಗಿ ಸಮವಾಗಿರುವ ಎರಡು ಭಾಗಗಳಾಗಿ ವಿಂಗಡಿಸಿದೆ. ಈ ಭಾಗಗಳಲ್ಲಿ ಉತ್ತರದ ಅರ್ಧ ಭಾಗವು ಸಮಶೀತೋಷ್ಣವಲಯದಲ್ಲಿಯೂ, ದಕ್ಷಿಣದ ಅರ್ಧ ಭಾಗವು ಉಷ್ಣವಲಯದಲ್ಲಿಯೂ ಇದೆ. ಸಾಮಾನ್ಯವಾಗಿ ಉತ್ತರಾರ್ಧಕ್ಕಿಂತ ದಕ್ಷಿಣಾರ್ಧದಲ್ಲಿ ಸರಾಸರಿ ಉಷ್ಣವು ಹೆಚ್ಚಾಗಿಯೇ ಇರುವುದು. ಅಲ್ಲಿಂದ ದಕ್ಷಿಣಕ್ಕೆ ಹೋದಷ್ಟೂ ಉಷ್ಣ ಹೆಚ್ಚು

ವುದು. ಸಾಮಾನ್ಯವಾಗಿ ಬೊಂಬಾಯಿಗಿಂತಲೂ ಮದ್ರಾಸಿನಲ್ಲಿ ಸೆಕೆ ಹೆಚ್ಚು, ಮದ್ರಾಸಿಗಿಂತ ತುತ್ತುಕುಡಿಯಲ್ಲಿ ಉಷ್ಣ ಹೆಚ್ಚು. ಉತ್ತರಾರ್ಧವೂ ಉಷ್ಣ ವಲಯದ ಪಕ್ಕದಲ್ಲಿರುವುದು. ಈ ಕಾರಣಗಳಿಂದ ಇಂಡಿಯಾದೇಶವೆಲ್ಲ ಸಾಮಾನ್ಯ ವಾಗಿ ಉಷ್ಣ ದೇಶವೆಂದು ಹೇಳಬಹುದು.

ಎತ್ತರ ಹೆಚ್ಚಿದಷ್ಟೂ ಉಷ್ಣ ಕಡಿಮೆಯಾಗುವುದರಿಂದ ಹಿಮಾಲಯ ಪರ್ವತಗಳಲ್ಲಿ ಚಳಿ ಹೆಚ್ಚು. ಆ ಪರ್ವತದಲ್ಲಿ 17,000 ಅಡಿ ಎತ್ತರದ ಮೇಲೆ ಹಿಮಪಜ್ಜಿತ್ತುಯಿರುವುದು. ಸಿಂಧು ಗಂಗಾ ನದಿಗಳ ಬೈಲುಗಳು ಸಮುದ್ರ ಮಟ್ಟಕ್ಕಿಂತ ಹೆಚ್ಚು ಎತ್ತರವಾಗಿಲ್ಲದುದರಿಂದ ಅಲ್ಲಿ ಸೆಕೆ ಹೆಚ್ಚು. ದಖನ್ ಪ್ರಸ್ಥಭೂಮಿ ಮತ್ತು ಮಧ್ಯ ಇಂಡಿಯಾ ಪ್ರಸ್ಥಭೂಮಿಗಳ ಎತ್ತರ ವಾದ ಭಾಗಗಳಲ್ಲಿ ಸೆಕೆ ಕಡಿಮೆ. ಪರ್ವತ ಪ್ರಸ್ಥಭೂಮಿಗಳ ಮೇಲೆ ಬೇಸಿಗೆ ಯಲ್ಲಿ ವಾಯುಗುಣವು ತಂಪಾಗಿರುವುದರಿಂದ ಯೂರೋಪಿಯನ್ ಜನರೂ, ಶ್ರೀಮಂತರೂ ಬಿಸಲು ಕಾಲದಲ್ಲಿ ಅಲ್ಲಿ ವಾಸಮಾಡುವರು. ಮದರಾಸಾಧಿಪತ್ಯ ದಲ್ಲಿರುವ ನೀಲಗಿರಿ ಬೆಟ್ಟ ಮತ್ತು ಕೊಡೆಕಾನಲ್, ಬೊಂಬಾಯಿ ಆಧಿಪತ್ಯ ದಲ್ಲಿರುವ ಮಹಾಬಲೇಶ್ವರ, ಉತ್ತರ ಇಂಡಿಯಾದಲ್ಲಿರುವ ಸಿಂಲಾ, ಡಾರ್ಜಿಲಿಂಗ್ ಎಂಬಿವು ಈ ಬಗೆಯ ಸ್ಥಳಗಳಿಗೆ ಉದಾಹರಣೆಗಳಾಗಿವೆ.

ಈ ದೇಶದಲ್ಲಿ ಸಮುದ್ರಶಾಖೆಗಳೂ, ಪರ್ಯಾಯದ್ವೀಪಗಳೂ ಬಹು ಕಡಿಮೆ ಯಾಗಿರುವುದರಿಂದ ದೇಶದ ಒಳಭಾಗವು ಸಮುದ್ರಕ್ಕೆ ದೂರವಾಗಿರುವುದು. ಇದರಿಂದ ಇಲ್ಲಿ ಬೇಸಿಗೆಯಲ್ಲಿ ಸೆಕೆ ಹೆಚ್ಚು, ಚಳಿಗಾಲದಲ್ಲಿ ಚಳಿ ಹೆಚ್ಚು. ಆದರೆ ಸಮುದ್ರತೀರದಲ್ಲಿರುವ ಪ್ರದೇಶಗಳ ಮೇಲೆ ಸಮುದ್ರದ ಗಾಳಿ ಬೀಸುವುದರಿಂದ ಬೇಸಗೆಯಲ್ಲಿ ಸೆಕೆಯೂ ಚಳಿಗಾಲದಲ್ಲಿ ಚಳಿಯೂ ಸ್ವಲ್ಪ ಕಡಿಮೆಯಾಗಿ ಕಾಣು ವುದು. ಆದುದರಿಂದ ಬೊಂಬಾಯಿಗಿಂತ ಉತ್ತರದಲ್ಲಿ (ಹೆಚ್ಚು ಸಂಖ್ಯೆಯ ಅಕ್ಷಾಂಶದಲ್ಲಿ) ಲಾಹೋರ್ ಪಟ್ಟಣವಿದ್ದರೂ, ಅಲ್ಲಿ ಬೊಂಬಾಯಿಗಿಂತ ಶೀತೋಷ್ಣಗಳ ವ್ಯತ್ಯಾಸ ಹೆಚ್ಚಾಗಿ ಕಾಣುವುದು.

ಆದರೆ ಬೇಸಗೆಯಲ್ಲಿ ಮುಂಗಾರು ಮಳೆ ಬೀಳುವುದರಿಂದ ಸಮುದ್ರಕ್ಕೆ ದೂರವಾಗಿರುವ ಒಳದೇಶದ ಪ್ರದೇಶಗಳಲ್ಲಿ ಸೆಕೆ ಸ್ವಲ್ಪ ಮಟ್ಟಿಗೆ ಕಡಿಮೆ ಯಾಗಿಯೇ ಇರುವುದು.

**ಮಳೆ.**—ಇಂಡಿಯಾ ದೇಶದಲ್ಲಿ ಬೀಸುವ ಮುಖ್ಯವಾದ ಗಾಳಿಗಳು ಎರಡು:—ಮುಂಗಾರು ಗಾಳಿ ಅಥವಾ ನೈಋತ್ಯ ಮಾರುತ. ಹಿಂಗಾರು ಗಾಳಿ ಅಥವಾ ಈಶಾನ್ಯ ಮಾರುತ. ಇವೆರಡೂ ಗೊತ್ತಾದ ಕಾಲದಲ್ಲಿ ಗೊತ್ತಾದ ದಿಕ್ಕಿ ನಿಂದ ಬೀಸುವುದರಿಂದ ಇವುಗಳನ್ನು ಕ್ಲೃಪ್ತ ಕಾಲ ಮಾರುತಗಳೆಂದು ಕರೆಯ ಬಹುದು. ಮುಂಗಾರು ಗಾಳಿ ಮೇ ತಿಂಗಳಿಂದ ಸೆಪ್ಟೆಂಬರ್ ತಿಂಗಳವರೆಗೂ

(ಅಂದರೆ ವೈಶಾಖ ಮಾಸದಿಂದ ಭಾದ್ರಪದ ಮಾಸದವರೆಗೂ) ಬೀಸುವುದು. ಹಿಂಗಾರುಗಾಳಿ ಅಕ್ಟೋಬರ್ ತಿಂಗಳಿಂದ ಡಿಸೆಂಬರ್ ತಿಂಗಳವರೆಗೂ ಎಂದರೆ (ಆಶ್ವಯುಜ ಮಾಸದಿಂದ ಮಾರ್ಗಶಿರ ಮಾಸದವರೆಗೂ) ಬೀಸುವುದು. ಈ ಗಾಳಿಗಳಿಂದ ಮಳೆ ಬಿದ್ದು ನದಿಕೆರೆಗಳು ತುಂಬಿ ಪೈರುಗಳು ಹುಲುಸಾಗಿ ಬೆಳೆಯುವುವು. ಸೆಕೆಯೂ ತಗ್ಗುವುದು. ಆದುದರಿಂದ ಈ ಗಾಳಿಗಳು ಇಂಡಿಯಾದೇಶಕ್ಕೆ ಅತ್ಯಂತ ಪ್ರಯೋಜನಕಾರಿಗಳಾಗಿವೆ.

ಈ ಗಾಳಿಗಳುಂಟಾಗುವ ಬಗೆಯನ್ನೂ, ಅವುಗಳು ಬೀಸುವ ಮಾರ್ಗವನ್ನೂ ಹಿಂದೆ ಏಷ್ಯಾ ಖಂಡದ ಸಾಮಾನ್ಯ ವಿವರಣೆಯಲ್ಲಿ ತಕ್ಕಮಟ್ಟಿಗೆ ವಿಶದವಾಗಿ ವಿವರಿಸಿದೆ. ಸೂರ್ಯನು ಬೇಸಗೆಯಲ್ಲಿ ಸಮಭಾಜಕ ವೃತ್ತಕ್ಕೂ ಕರ್ಕಾಟಕ ಸಂಕ್ರಾಂತಿ ವೃತ್ತಕ್ಕೂ ಮಧ್ಯದಲ್ಲಿರುವ ಪ್ರದೇಶಗಳಲ್ಲಿ ಸ್ವಲ್ಪ ಹೆಚ್ಚು ಕಡಿಮೆ ನೇರವಾಗಿ ತಲೆಯ ಮೇಲೆ ಕಾಣಿಸುವುದರಿಂದಲೂ, ಇಂಡಿಯಾದೇಶಕ್ಕೆ ದಕ್ಷಿಣದಲ್ಲಿ ವಿಸ್ತಾರವಾದ ಹಿಂದೂಸಾಗರವಿರುವುದರಿಂದಲೂ, ಭೂಭಾಗ ಜಲಭಾಗಗಳೆರಡೂ ಹೆಚ್ಚಾಗಿ ಕಾಯುವುವು. ಜಲಭಾಗಕ್ಕಿಂತ ಭೂಭಾಗವು ಹೆಚ್ಚಾಗಿ ಕಾಯುವುದರಿಂದ, ಗಾಳಿಯು ಹಗುರವಾಗಿ ದಕ್ಷಿಣದ ಕಡೆಗೆ ಬೀಸುವುದು. ಮುಂಗಾರುಗಾಳಿ ಮಳೆಯ ಮೋಡಗಳಿಂದ ಕೂಡಿದ ಹಿಂದೂಸಾಗರದ ಕಡೆಯಿಂದ ಇಂಡಿಯಾದೇಶದ ಮೇಲೆ ಬೀಸುವುದು. ಈ ಮುಂಗಾರುಗಾಳಿ ಇಂಡಿಯಾದೇಶದ ಮೇಲೆ ಬೀಸುವಾಗ ಎರಡು ಕವಲಾಗಿ ಒಡೆದು ಅರಬ್ಬಿ ಸಮುದ್ರದ ಕಡೆಯಿಂದ ಒಂದೂ, ಬಂಗಾಳಕೊಲ್ಲಿಯ ಕಡೆಯಿಂದ ಇನ್ನೊಂದೂ ಬೀಸುವುದು.

ಅರಬ್ಬಿ ಸಮುದ್ರದ ಕಡೆಯಿಂದ ಬೀಸುವ ಮುಂಗಾರು ಗಾಳಿ ಪಶ್ಚಿಮ ಘಟ್ಟಗಳಿಂದ ತಡೆಯಲ್ಪಟ್ಟು ಪಶ್ಚಿಮ ತೀರದ ಮೈದಾನದಲ್ಲಿ ವರ್ಷಕ್ಕೆ ಸರಾಸರಿ 120 ಅಂಗುಲದಷ್ಟು ಮಳೆಯನ್ನು ಸುರಿಸುವುದು. ಈ ಗಾಳಿ ಮುಂದರಿದು ದಖನ್ ಪ್ರಸ್ಥಭೂಮಿಯನ್ನು ಪ್ರವೇಶಿಸುವಾಗ ಇದರಲ್ಲಿ ಬಹಳಮಟ್ಟಿಗೆ ಮೋಡಗಳು ಕಡಿಮೆಯಾಗಿರುವುದರಿಂದ ಪಶ್ಚಿಮ ಘಟ್ಟಗಳ ಪೂರ್ವ ಭಾಗದಲ್ಲಿ 30–40 ಅಂಗುಲದಷ್ಟು ಮಾತ್ರ ಮಳೆಯಾಗುವುದು. ಈ ಗಾಳಿ ಇನ್ನೂ ಪೂರ್ವಕ್ಕೆ ಹೋದಹಾಗೆಲ್ಲಾ ಮಳೆಯು ಇನ್ನೂ ಕಡಮೆಯಾಗುವುದು. ರಾಜಪುತ್ರಸ್ಥಾನದ ಮಾರ್ಗವಾಗಿ ಈ ಗಾಳಿ ಹೋಗುವಾಗ ಅರಾವಳೀ ಬೆಟ್ಟಗಳು ಇದನ್ನು ಸ್ವಲ್ಪಮಟ್ಟಿಗೆ ತಡೆಯುವುದರಿಂದ ಅಲ್ಲಿಯೂ ಸ್ವಲ್ಪ ಮಳೆಯಾಗುವುದು. ಆದರೆ ಈ ಬೆಟ್ಟಗಳು ಹೆಚ್ಚು ಎತ್ತರವಾಗಿಯೂ, ಈ ಗಾಳಿಗೆ ತೀರ ಅಡ್ಡವಾಗಿಯೂ ಇಲ್ಲದುದರಿಂದ ರಾಜಪುತ್ರಸ್ಥಾನವು ಸಾಮಾನ್ಯವಾಗಿ ಮಳೆಯಿಲ್ಲದ ಮರುಭೂಮಿಯಾಗಿದೆ. ಅಲ್ಲಿಂದ ಮುಂದೆ ಈ ಗಾಳಿ ಹಿಮಾಲಯ ಪರ್ವತಗಳವರೆಗೂ ಬೀಸಿ

ಕೊಂಡು ಹೋಗಿ, ಅವುಗಳಿಂದ ತಡೆಯಲ್ಪಟ್ಟು ಮಳೆಯೆಲ್ಲವನ್ನೂ ಅಲ್ಲಿ ಸುರಿಸಿ ಬಿಡುವುದು. ಹಿಮಾಲಯ ಪರ್ವತಗಳು ಬಹಳ ಎತ್ತರವಾಗಿರುವುದರಿಂದ, ಈ ಗಾಳಿಯು ಅವನ್ನು ಹಾದು ಟಿಬೆಟ್ಟಿಗೆ ಹೋಗುವಾಗ ಸಂಪೂರ್ಣವಾಗಿ ಜಲ ರಹಿತವಾಗುವುದು. ಈ ಮುಂಗಾರು ಗಾಳಿ ಸಿಂಧುದೇಶ, ಬೆಲೂಚಿಸ್ಥಾನಗಳ ಮೇಲೆ ಬೀಸುವುದಿಲ್ಲವಾದುದರಿಂದ, ಆ ಪ್ರದೇಶಗಳಲ್ಲಿ ಮಳೆ ಬೀಳುವುದೇ ಅಪರೂಪ.

ಬಂಗಾಳಕೊಲ್ಲಿಯ ಕಡೆಯಿಂದ ಬೀಸುವ ಮುಂಗಾರು ಗಾಳಿ ಬಂಗಾಳ ದೇಶದ ಮೇಲೆ ಹಾದು ಹಿಮಾಲಯ ಪರ್ವತಗಳಿಂದ ತಡೆಯಲ್ಪಟ್ಟು, ಅಲ್ಲಿ ಎರಡು ಕವಲಾಗಿ ಒಡೆದು, ಒಂದು ಅಸ್ಸಾಮಿಗೂ ಇನ್ನೊಂದು ಪಂಜಾಬಿನ ಕಡೆಗೂ ಹೋಗುವುದು. ಬಂಗಾಳದಿಂದ ಒಳಭಾಗಕ್ಕೆ ಹೋದಹಾಗೆಲ್ಲ ಗಾಳಿಯಲ್ಲಿ ಮೋಡ ಕಡಿಮೆಯಾಗಿ ಮಳೆಯೂ ಕಡಿಮೆಯಾಗುವುದು. ಬಂಗಾಳಕ್ಕಿಂತ ಸಂಯುಕ್ತ ಪ್ರಾಂತಗಳಲ್ಲಿ ಮಳೆ ಕಡಿಮೆ. ಅಲ್ಲಿಗಿಂತ ಪಂಜಾಬಿನಲ್ಲಿ ಕಡಿಮೆ. ಅಸ್ಸಾಮಿನಲ್ಲಿರುವ ಖಾಸಿ ಬೆಟ್ಟವು ಬಹು ಕಡಿದಾಗಿ 5,000 ಅಡಿಯಷ್ಟು ಎತ್ತರ ವಾಗಿರುವುದರಿಂದ ಮೋಡಗಳಿಂದ ಕೂಡಿ ಬಂಗಾಳ ಮೈದಾನದ ಮೇಲೆ ಬೀಸಿ ಕೊಂಡು ಬರುವ ಮುಂಗಾರುಗಾಳಿ ಈ ಬೆಟ್ಟದಿಂದ ತಡೆಯಲ್ಪಟ್ಟು ಮೇಲಕ್ಕೇರಿ ಆ ಬೆಟ್ಟದಲ್ಲಿರುವ ಚಿರಾಪುಂಜಿ ಎಂಬ ಸ್ಥಳದಲ್ಲಿ ವಿಪರೀತವಾಗಿ ಮಳೆಯನ್ನು ಸುರಿಸುವುದು. ಚಿರಾಪುಂಜಿಯಲ್ಲಿ ವರ್ಷಕ್ಕೆ ಸುಮಾರು 500 ಅಂಗುಲ ಮಳೆ ಯಾಗುವುದು. ಕೆಲವು ವೇಳೆ 700–800 ಅಂಗುಲದಷ್ಟು ಮಳೆಯಾಗುವುದೂ ಉಂಟು. ಇಲ್ಲಿ ಬೀಳುವಷ್ಟು ಮಳೆ ಪ್ರಪಂಚದಲ್ಲಿನ್ನೆಲ್ಲಿಯೂ ಬೀಳುವುದಿಲ್ಲ.

ಮಧ್ಯಇಂಡಿಯ ಪ್ರಸ್ಥಭೂಮಿಗೆ ಅರಬ್ಬೀ ಸಮುದ್ರದ ಮುಂಗಾರು ಗಾಳಿಯಿಂದಲೂ, ಬಂಗಾಳ ಕೊಲ್ಲಿಯ ಮುಂಗಾರು ಗಾಳಿಯಿಂದಲೂ ಸ್ವಲ್ಪ ಮಟ್ಟಿಗೆ ಮಳೆ ಬೀಳುವುದು. ಆದರೆ ಮಳೆಯಾಗುವುದು ಕಡಮೆ.

ಸೆಪ್ಟೆಂಬರ್ ತಿಂಗಳ ಅಂತ್ಯ ಭಾಗದಿಂದ ಸೂರ್ಯನು ಸಮಭಾಜಕ ವೃತ್ತದ ದಕ್ಷಿಣಕ್ಕೆ ಹೋಗುತ್ತಿರುವಂತೆ ಕಾಣಿಸುವುದರಿಂದ ಉತ್ತರ ಇಂಡಿಯ ಮೊದ ಲಾದ ಭೂಭಾಗಗಳಲ್ಲಿ ಸೆಕೆ ಕಡಿಮೆಯಾಗುವುದು. ಆಗ ಬಂಗಾಳಕೊಲ್ಲಿಯ ಕಡೆಯಿಂದ ಬೀಸುವ ಮುಂಗಾರುಗಾಳಿ ಬಂಗಾಳವನ್ನು ದಾಟಿ ಹೋಗ ಲಾರದು. ಇದಲ್ಲದೆ ಬರ್ಮ ದೇಶದ ಉತ್ತರ ಭಾಗದಿಂದ ಎಂದರೆ ಈಶಾನ್ಯ ದಿಕ್ಕಿ ನಿಂದ ನೆಲದ ಗಾಳಿ ಬೀಸುವುದರಿಂದ ಈ ಮುಂಗಾರು ಗಾಳಿ ಹಿಂದಿರುಗಿ ಈಶಾನ್ಯ ದಿಕ್ಕಿನಿಂದ ದಕ್ಷಿಣ ಇಂಡಿಯ, ಸಿಂಹಳ ದ್ವೀಪಗಳ ಕಡೆಗೆ ಬೀಸುವುದು. ಇದನ್ನು ಹಿಂಗಾರು ಗಾಳಿ ಅಥವಾ ಈಶಾನ್ಯ ಮಾರುತವೆಂದು ಕರೆಯುವರು. ಈ ಗಾಳಿ ಯಿಂದ ಪೂರ್ವ ತೀರದ ಮೈದಾನದಲ್ಲಿ ಹೆಚ್ಚಾಗಿಯೂ, ದಖನಾ ಪ್ರಸ್ಥಭೂಮಿ

ುಲ್ಲಿ ತಕ್ಕಮಟ್ಟಿಗೂ ಮಳೆಯಾಗುವುದು. ಪೂರ್ವಘಟ್ಟಗಳು ತಗ್ಗಾಗಿಯೂ ುಧ್ಯೆ ಮಧ್ಯೆ ವಿಶಾಲವಾದ ಕಣಿವೆಗಳುಳ್ಳವಾಗಿಯೂ ಇರುವುದೇ ಹೀಗಾಗು ುದಕ್ಕೆ ಕಾರಣವಾಗಿದೆ. ನಮ್ಮ ಮೈಸೂರು ಸೀಮೆಯಲ್ಲಿ ಎತ್ತರವಾದ ಅನೇಕ ುಡ್ಡಗಳಿರುವುದರಿಂದ ಈ ಗಾಳಿ ಬೀಸುವ ಕಾಲದಲ್ಲಿ ಎಂದರೆ (ಮುಖ್ಯವಾಗಿ ಶ್ವಯುಜ ಮಾಸದಲ್ಲಿ) ಹೆಚ್ಚಾಗಿ ಮಳೆ ಸುರಿದು ಕೆರೆಕಟ್ಟೆಗಳು ತುಂಬಿ ೋಗುವುವು.

ಈ ಮುಂಗಾರು ಹಿಂಗಾರು ಗಾಳಿಗಳಲ್ಲದೆ ಆವರ್ತ ಮಾರುತಗಳು ಸುಳಿಗಾಳಿ ಅಥವಾ ಸೈಕ್ಲೋನ್) ಬಂಗಾಳ ಕೊಲ್ಲಿಯಲ್ಲಿಯೂ, ಅರಬ್ಬೀ ಸಮುದ್ರದಲ್ಲಿಯೂ ಬೀಸುವುವು. ಅನೇಕವೇಳೆ ಇವುಗಳಿಂದ ಮಳೆ ಬರುವುದೂ ಉಂಟು. ಮುಂಗಾರು, ಹಿಂಗಾರುಗಳ ಸಂಧಿಕಾಲದಲ್ಲಿ ಈ ಸುಳಿಗಾಳಿಗಳು ೀಸುವುದು ಹೆಚ್ಚು. ಈ ಸುಳಿಗಾಳಿಗಳಿಂದ ಕೆಲವು ವೇಳೆ ಮನೆಗಳೂ ಮರ ಗಳೂ ಬಿದ್ದುಹೋಗಿ ನಷ್ಟವಾಗುವುದೂ ಉಂಟು.

ಒಟ್ಟಿನಲ್ಲಿ ಇಂಡಿಯಾದೇಶದಲ್ಲಿ ಬೀಳುವ ಮಳೆಯನ್ನು ಯೋಚಿಸಿ ನೋಡಿ ದರೆ ಮಳೆಯು ಪಶ್ಚಿಮ ತೀರದ ಮೈದಾನದಲ್ಲಿಯೂ, ಬಂಗಾಳ, ಅಸ್ಸಾಂಗಳ ಲ್ಲಿಯೂ ಅತ್ಯಧಿಕವಾಗಿ ಬೀಳುವುದು. ಪೂರ್ವ ತೀರದ ಮೈದಾನದಲ್ಲಿಯೂ, ಗಂಗಾನದಿಯ ಮೈದಾನದಲ್ಲಿಯೂ, ಬಂಗಾಳದ ಪಶ್ಚಿಮ ದಿಕ್ಕಿನ ಎಲ್ಲೆಯಿಂದ ಡೆಲ್ಲಿಯವರೆಗೂ ಸುಮಾರಾಗಿ ಮಳೆಯು ಹೆಚ್ಚಾಗಿ ಬೀಳುವುದು. ದಖನ್ ಮತ್ತು ಮಧ್ಯ ಇಂಡಿಯ ಪ್ರಸ್ಥಭೂಮಿಗಳಲ್ಲಿ ಸ್ವಲ್ಪಮಟ್ಟಿಗೆ ಬೀಳುವುದು. ರಾಜಪುತ್ರಸ್ಥಾನದ ಪಶ್ಚಿಮ ಭಾಗದಲ್ಲಿಯೂ, ಸಿಂಧುದೇಶ, ಬೆಲೂಚಿಸ್ಥಾನಗಳ ಲ್ಲಿಯೂ ಮಳೆ ಬೀಳುವುದು ಬಹಳ ಕಡಿಮೆ. ಮೊದಲನೆಯ ಪ್ರದೇಶವನ್ನು ಅತಿ ವೃಷ್ಟಿ ಪ್ರದೇಶವೆಂದೂ, ನಾಲ್ಕನೆಯದನ್ನು ಅನಾವೃಷ್ಟಿ ಪ್ರದೇಶವೆಂದೂ, ಎರಡು ಮೂರನೆಯದನ್ನು ಸಾಮಾನ್ಯವೃಷ್ಟಿ ಪ್ರದೇಶಗಳೆಂದೂ ಕರೆಯಬಹುದು.

**ನದಿಗಳು.**—ಇಂಡಿಯಾದೇಶದಲ್ಲಿ ಅನೇಕ ನದಿಗಳಿರುವುವು. ಇವು ಸಾಮಾನ್ಯವಾಗಿ ಪರ್ವತಗಳಲ್ಲಿ ಹುಟ್ಟಿ ಸ್ವಲ್ಪ ದೂರ ಪರ್ವತದ ತಪ್ಪಲುಗಳ ಲ್ಲಿಯೂ ಕಣಿವೆಗಳಲ್ಲಿಯೂ ವೇಗವಾಗಿ ಹರಿದು, ಆಮೇಲೆ ಮೈದಾನಕ್ಕೆ ಇಳಿದು ಅಲ್ಲಿ ನಿಧಾನವಾಗಿ ಬಹು ದೂರ ಪ್ರವಹಿಸಿ, ಸಮುದ್ರದ ಸಮೀಪದಲ್ಲಿ ವಿಶಾಲ ವಾದ ನದೀಮುಖಜಭೂಮಿಗಳನ್ನು ನಿರ್ಮಿಸಿಕೊಂಡು, ಸಣ್ಣ ಸಣ್ಣ ಶಾಖೆ ಗಳಾಗಿ ಒಡೆದು, ಅನೇಕ ಮುಖಗಳಾಗಿ ಸಮುದ್ರವನ್ನು ಸೇರುವುವು. (ಗಂಗಾ ನದಿಯೊಂದು ವಿನಾ) ಉಳಿದ ನದಿಗಳು ಹಡಗುಗಳ ಸಂಚಾರಕ್ಕೆ ಅನುಕೂಲ ವಾಗಿಲ್ಲ. ಆದರೆ ವ್ಯವಸಾಯಕ್ಕೆ ನೀರನ್ನು ಒದಗಿಸಿಕೊಳ್ಳಲು ಬಹಳ ಉಪಯೋಗ ವಾಗಿವೆ.

ಈ ನದಿಗಳನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು :—(1) ಹಿಮಾಲಯ ಪರ್ವತದ ನದಿಗಳು, (2) ವಿಂಧ್ಯ ಪರ್ವತದ ಅಥವಾ ಮಧ್ಯ ಇಂಡಿಯದ ನದಿಗಳು, (3) ದಕ್ಷಿಣ ಇಂಡಿಯದ ನದಿಗಳು.

(1) **ಹಿಮಾಲಯ ಪರ್ವತದ ನದಿಗಳು.**—ಹಿಮಾಲಯದ ಉತ್ತರಕ್ಕೆ ಟಿಬೆಟ್ ದೇಶದಲ್ಲಿ ಮಾನಸ ಸರೋವರವೆಂಬ ಪ್ರಸಿದ್ಧವಾದ ಹಿಮಸರೋವರವಿದೆ. ಆ ಸರೋವರದಲ್ಲಿ ಅಥವಾ ಅದರ ಹತ್ತಿರದಲ್ಲಿ ಸಿಂಧು ಮತ್ತು ಅದರ ಉಪನದಿಯಾದ ಶತದ್ರು, ಗಂಗಾ ಮತ್ತು ಅದರ ಉಪನದಿಗಳಾದ ಗೋಗ್ರ, ಯಮುನಾ, ಬ್ರಹ್ಮಪುತ್ರ ಈ ನದಿಗಳು ಹುಟ್ಟುತ್ತವೆ. ಆದುದರಿಂದ ಮಾನಸ ಸರೋವರವು ಹಿಮಾಲಯದಲ್ಲಿ ಹುಟ್ಟುವ ನದಿಗಳಿಗೆ ಮಾತೃಸ್ಥಾನವಾಗಿದೆ ಎನ್ನಬಹುದು.

**ಸಿಂಧು ನದಿ.**—ಇದು ಮಾನಸ ಸರೋವರಕ್ಕೆ ಉತ್ತರದಲ್ಲಿರುವ ಕೈಲಾಸ ಪರ್ವತದಲ್ಲಿ ಹುಟ್ಟಿ, ವಾಯುವ್ಯಾಭಿಮುಖವಾಗಿ ಕಾಶ್ಮೀರದ ಕಣಿವೆಯಲ್ಲಿ ಹರಿದು, ಅನಂಗ ಪರ್ವತವನ್ನು ಬಳಸಿಕೊಂಡು, ಅದರ ಸಮೀಪದಲ್ಲಿ 14,000 ಅಡಿ ಆಳವಾದ ಅತಿಕಡಿದಾದ ಕಣಿವೆಯನ್ನು ಭೇದಿಸಿಕೊಂಡು, ಮೈದಾನಕ್ಕೆ ಪ್ರವೇಶಿಸಿ, ಕಾಬೂಲ್, ಪಂಚನದಿ ಮೊದಲಾದ ಉಪನದಿಗಳನ್ನು ಸ್ವೀಕರಿಸಿ, ದಕ್ಷಿಣಕ್ಕೆ ಹರಿದು, ಅನೇಕ ಮುಖಗಳಿಂದ ಅರಬ್ಬೀ ಸಮುದ್ರವನ್ನು ಸೇರುವುದು.

ಈ ನದಿಯ ಉದ್ದ 1,800 ಮೈಲಿ. ಇದರಲ್ಲಿ 800 ಮೈಲಿ ದೂರ ಪರ್ವತ ಪ್ರದೇಶವಾಗಿರುವುದರಿಂದ ಈ ಭಾಗದಲ್ಲಿ ಇದಕ್ಕೆ ಉಪನದಿಗಳಾವುವೂ ಇಲ್ಲ; ಹಿಮಾಲಯ ಪರ್ವತದ ಹಿಮದ ನೀರು ಮಾತ್ರ ಬಂದು ಸೇರುವುದು. ಇದು ಮೈದಾನಕ್ಕೆ ಬಂದ ಒಡನೆಯೇ ಈ ನದಿಗೆ ಬಲಗಡೆಯಲ್ಲಿ ಕಾಬೂಲ್ ಮೊದಲಾದ ಉಪನದಿಗಳು ಬಂದು ಸೇರುವುವು. ಆದರೆ ಈ ನದಿ ಅಲ್ಪವೃಷ್ಟಿ ಪ್ರದೇಶದಿಂದ ಹರಿದು ಬರುವುದರಿಂದ ಇದರಲ್ಲಿ ನೀರು ಕಡಿಮೆ; ಈ ನದಿಗಳ ಕಣಿವೆಗಳು ಕಾರವಾನ್ ಮಾರ್ಗಗಳಿಗೆ ಅನುಕೂಲವಾಗಿರುವುವು. ಈ ನದಿಗೆ ಎಡಗಡೆಯಲ್ಲಿ ಜೀಲಂ, ಚೀನಾಬ್, ರಾವಿ, ಬೀಯಾಸ್, ಶತದ್ರುಗಳೆಂಬ ಐದು ನದಿಗಳು ಒಂದಕ್ಕೊಂದು ಒಟ್ಟಾಗಿ ಸೇರಿ, ಪಂಚನದಿಯೆಂಬ ಹೆಸರಿನಿಂದ ಸಿಂಧುವನ್ನು ಸೇರುವುದು. ಈ ಉಪನದಿಗಳೂ ಹಿಮಾಲಯ ಪರ್ವತದಲ್ಲಿಯೇ ಹುಟ್ಟುವುವು.

ಪಂಚನದಿಗಳ ಸಂಗಮ ಸ್ಥಾನಕ್ಕೆ ಸ್ವಲ್ಪ ದೂರ ಆಚೆ ಸಿಂಧು ನದಿಯು ದಕ್ಷಿಣಾಭಿಮುಖವಾಗಿ ಮರುಭೂಮಿಯಲ್ಲಿ ಹರಿಯುವುದು. ಈ ಪ್ರದೇಶದಲ್ಲಿ ಉಪನದಿಗಳಾವುವೂ ಇಲ್ಲ. ಇಲ್ಲಿ ಮಳೆ ಬೀಳುವುದೂ ಅಪೂರ್ವ. ಆದುದರಿಂದ ಈ ನದಿಯಲ್ಲಿ ಸಾಮಾನ್ಯವಾಗಿ ನೀರು ಬಹಳ ಸ್ವಲ್ಪವಾಗಿದೆ. ಆದರೆ ಪ್ರವಾಹ

ಕಾಲದಲ್ಲಿ ಮಾತ್ರ ನೀರು ದಡಗಳ ಮೇಲೆ ಉರುಳಿ ವಿಶೇಷ ನಷ್ಟವನ್ನುಂಟು ಮಾಡುವುದಲ್ಲದೆ, ಆಗಾಗ ಪಾತ್ರವನ್ನು ವಿಸ್ತರಿಸಿಕೊಂಡು ಹರಿಯುವುದೂ ಉಂಟು.

ಹೈದರಾಬಾದ್ ಪಟ್ಟಣಕ್ಕೆ ದಕ್ಷಿಣದಲ್ಲಿ ಈ ನದಿಯ ಮುಖಜಭೂಮಿ ಪ್ರಾರಂಭವಾಗುವುದು. ಅಲ್ಲಿ ಈ ನದಿ ಅನೇಕ ಶಾಖೆಗಳಾಗಿ ಒಡೆದು, ನಿಧಾನವಾಗಿ ಹರಿಯುತ್ತ ಸಮುದ್ರವನ್ನು ಸೇರುವುದು. ಈ ಶಾಖೆಗಳ ತುಂಬ ಮಣ್ಣು ತುಂಬಿಕೊಂಡು ಪಾತ್ರವು ಆಗಾಗ ಬದಲಾಯಿಸುವುದುಂಟು. ಈ ನದಿಯ ಮುಖದ ಸಮೀಪದಲ್ಲಿ ಕರಾಚಿ ಎಂಬ ರೇವುಪಟ್ಟಣವಿದೆ. ಸಿಂಧು ನದಿಯ ಮೈದಾನದ ಪ್ರದೇಶದ ವ್ಯಾಪಾರವೆಲ್ಲ ಈ ಪಟ್ಟಣದ ಮೂಲಕವಾಗಿಯೇ ನಡೆಯುವುದು.

**ಗಂಗಾನದಿ.**—ಇದು ಇಂಡಿಯಾದೇಶದ ನದಿಗಳಲ್ಲೆಲ್ಲಾ ಅತಿಮುಖ್ಯವಾದುದು. ಇದು ಹಿಮಾಲಯ ಪರ್ವತದ ಗಂಗೋತ್ರಿ ಎಂಬ ಸ್ಥಳದಲ್ಲಿ ಹುಟ್ಟಿ, ಅಲಕನಂದವೆಂಬ ಇನ್ನೊಂದು ಪರ್ವತಪ್ರವಾಹದೊಡನೆ ಸೇರಿ, ಹರಿದ್ವಾರದ ಸಮೀಪದಲ್ಲಿ ಪರ್ವತದಿಂದಿಳಿದು, ಆಗ್ನೇಯಾಭಿಮುಖವಾಗಿ ಮೈದಾನದ ಮೇಲೆ ಬಹು ದೂರ ಹರಿದು, ಅನೇಕ ಉಪನದಿಗಳನ್ನು ಒಳಕೊಂಡು, ರಾಜಮಹಲ್ ಬೆಟ್ಟದ ಹತ್ತಿರ ಅನೇಕ ಶಾಖೆಗಳಾಗಿ ಕವಲೊಡೆದು, ಬ್ರಹ್ಮಪುತ್ರಾ ನದಿಯ ಶಾಖೆಗಳೊಡನೆ ಸೇರಿ, ಅನೇಕ ಮುಖಗಳಿಂದ ಬಂಗಾಳ ಕೊಲ್ಲಿಗೆ ಬೀಳುತ್ತದೆ.

ಗಂಗಾನದಿಯ ಉಪನದಿಗಳಲ್ಲಿ ಎಡಗಡೆ ಗೋಮತಿ, ಗೋಗ್ರ ಎಂಬಿವೂ, ಬಲಗಡೆ ಯಮುನ, ಶೋಣ ಎಂಬಿವೂ ಮುಖ್ಯವಾದುವು. ಇವುಗಳಲ್ಲಿ ಶೋಣ ವಿನಾ ಉಳಿದುವು ಹಿಮಾಲಯ ಪರ್ವತದಲ್ಲಿ ಅಥವಾ ಅದರ ಸಮೀಪದಲ್ಲಿ ಹುಟ್ಟಿ, ಬಹುದೂರ ಮೈದಾನದ ಮೇಲೆ ನಿಧಾನವಾಗಿ ಹರಿದು, ಗಂಗಾನದಿಗೆ ಬಂದು ಬೀಳುವುವು. ಯಮುನಾ ನದಿಯೂ ಗಂಗಾನದಿಯ ಮೂಲದ ಸಮೀಪದಲ್ಲಿಯೇ ಹುಟ್ಟಿ, ಜೊತೆಯಲ್ಲಿಯೇ ಹರಿದು, ಅಲಹಾಬಾದಿನ ಸಮೀಪದಲ್ಲಿ ಗಂಗಾನದಿಯೊಂದಿಗೆ ಸಂಗಮವಾಗುವುದು.

ಗಂಗಾನದಿಯೂ ಇದರ ಉಪನದಿಗಳೂ ಹಿಮಾಲಯದ ಹಿಮಜಲದಿಂದ ಪೋಷಿತವಾಗಿರುವುದರಿಂದಲೂ, ಹೆಚ್ಚಾಗಿ ಮಳೆ ಬೀಳುವ ಪ್ರದೇಶಗಳಲ್ಲಿ ಹರಿಯುವುದರಿಂದಲೂ ಇವುಗಳಲ್ಲಿ ಯಾವಾಗಲೂ ನೀರು ಯಥೇಚ್ಛವಾಗಿರುವುದು. ಇವು ಫಲವತ್ತಾದ ಮೈದಾನದ ಮೇಲೆ ನಿಧಾನವಾಗಿ ಹರಿಯುವುದರಿಂದ ವ್ಯವಸಾಯಕ್ಕೆ ಅನುಕೂಲವಾದ ಅನೇಕ ಕಾಲುವೆಗಳನ್ನು ತೆಗೆದಿರುವರು. ಈ ಕಾಲುವೆಗಳು ಸಣ್ಣ ಸಣ್ಣ ಜಹಜುಗಳ ಪ್ರಯಾಣಕ್ಕೂ ಅನುಕೂಲ ವಾಗಿವೆ

ಗಂಗಾನದಿ ಯಾವಾಗಲೂ ಜಹಜುಗಳಿಂದಲೂ, ದೋಣಿಗಳಿಂದಲೂ ತುಂಬಿರು ವುದು. ಇದರ ಮೇಲೆ ಒಂದು ಲಕ್ಷಕ್ಕೆ ಹೆಚ್ಚು ದೋಣಿಗಳು ಸದಾ ಸಂಚರಿಸು ತ್ತಿರುವುವು. ವ್ಯಾಪಾರಕ್ಕೂ ಐಶ್ವರ್ಯಕ್ಕೂ ಪ್ರಸಿದ್ಧವಾದ ಮತ್ತು ಹಿಂದೂ ಜನರಿಗೆ ಪುಣ್ಯಸ್ಥಳಗಳಾದ ಕಾಶಿ, ಅಲಹಾಬಾದ್ ಮೊದಲಾದ ಅನೇಕ ದೊಡ್ಡ ಪಟ್ಟಣಗಳು ಈ ನದಿಯ ದಡದಲ್ಲಿರುವುವು.

ಭಾಗೀರಥಿ ಅಥವಾ ಹುಗ್ಲಿ ಎಂಬುದು ಗಂಗಾನದೀ ಮುಖದ ಶಾಖೆಗಳಲ್ಲಿ ಮುಖ್ಯವಾದುದು. ಇದರ ತೀರದಲ್ಲಿ ಕಲ್ಕತ್ತ ಪಟ್ಟಣವಿರುವುದು. ಈ ನದಿಯು ಮರಳನ್ನೂ ಮಣ್ಣನ್ನೂ ತಂದು ಸದಾ ಪಾತ್ರವನ್ನು ಅಲ್ಲಲ್ಲಿ ಆಳವಿಲ್ಲದ ಹಾಗೆ ಮಾಡುತ್ತಿರುವುದರಿಂದಲೂ ಸಮುದ್ರದಿಂದ ಉಬ್ಬಿದ ಪ್ರವಾಹವು ವೇಗವಾಗಿ ನುಗ್ಗುವುದರಿಂದಲೂ ಹುಗ್ಲಿ ನದಿಯು ಹಡಗುಗಳ ಸಂಚಾರಕ್ಕೆ ಅಷ್ಟು ಅನುಕೂಲವಾಗಿಲ್ಲ.

**ಬ್ರಹ್ಮಪುತ್ರಾನದಿ.**—ಇದು ಮಾನಸ ಸರೋವರದ ಸಮೀಪದಲ್ಲಿ ಹುಟ್ಟಿ, ಪೂರ್ವಾಭಿಮುಖವಾಗಿ ಟಿಬೆಟ್ ದೇಶದಲ್ಲಿ 700 ಮೈಲಿಗಳ ದೂರ ಹರಿದು, ಹಿಮಾಲಯ ಪರ್ವತವನ್ನು ಬಳಸಿಕೊಂಡು, ಅಸ್ಸಾಂ ದೇಶವನ್ನು ಪ್ರವೇಶಿಸಿ, ಪಶ್ಚಿಮವಾಹಿನಿಯಾಗಿ ಹರಿದು, ಗಾರೋಬೆಟ್ಟಗಳ ದಕ್ಷಿಣಕ್ಕೆ ತಿರುಗಿ, ಗಂಗಾ ನದಿಯ ಮುಖದ ಶಾಖೆಗಳೊಂದಿಗೆ ಸೇರಿ ಅನೇಕ ಮುಖಗಳಿಂದ ಬಂಗಾಳ ಕೊಲ್ಲಿಗೆ ಬೀಳುತ್ತದೆ.

ಈ ನದಿಯು ಇಂಡಿಯಾದೇಶದಲ್ಲಿ 600 ಮೈಲಿ ದೂರ ಮೈದಾನದಲ್ಲಿ ಹರಿಯುವುದು. ಈ ನದಿಯ ಉಪನದಿಗಳು ಹೆಚ್ಚು ಮಳೆ ಬೀಳುವ ಗಾರೋ ಮೊದಲಾದ ಬೆಟ್ಟಗಳಲ್ಲಿ ಹುಟ್ಟಿ ಹರಿಯುವುದರಿಂದ ಹೆಚ್ಚು ನೀರನ್ನು ತರುವುವು. ಆದರೆ ಇವು ಇಕ್ಕಟ್ಟಾದ ಕಣಿವೆಗಳಲ್ಲಿ ಹರಿದು ಬರುವುದರಿಂದ ವ್ಯವಸಾಯಕ್ಕೂ ಹಡಗಿನ ಸಂಚಾರಕ್ಕೂ ಉಪಯೋಗವಾಗಿಲ್ಲ. ಬ್ರಹ್ಮಪುತ್ರಾನದಿಯ ಮೇಲೆ ಮಾತ್ರ ಸ್ವಲ್ಪ ದೂರದವರೆಗೆ ಸಣ್ಣ ಜಹಜುಗಳು ಸಂಚರಿಸುವುವು.

ಗಂಗೆ, ಬ್ರಹ್ಮಪುತ್ರಾ ಮತ್ತು ಅಸ್ಸಾಂ ದೇಶದ ಮೆಗ್ನಾ ಈ ಮೂರು ನದಿಗಳೂ ಮುಖಭಾಗದಲ್ಲಿ ಒಂದಕ್ಕೊಂದು ಸೇರಿರುವುವು. ಈ ನದೀಮುಖಜ ಭೂಮಿ 200 ಮೈಲಿ ಅಗಲವಾಗಿರುವುದು. ಇದರಲ್ಲಿ 14 ದೊಡ್ಡ ಶಾಖೆಗಳೂ, ನೂರಾರು ಸಣ್ಣ ಶಾಖೆಗಳೂ, ಸಾವಿರಾರು ಸಣ್ಣ ಸಣ್ಣ ದ್ವೀಪಗಳೂ ಇವೆ. ಈ ದ್ವೀಪಗಳು ಯಾವಾಗಲೂ ಕೆಸರಾಗಿ ದಟ್ಟವಾದ ಕಾಡುಗಳಿಂದ ಕೂಡಿರು ವುವು. ಅನಾರೋಗ್ಯಕರವಾದ ಈ ದ್ವೀಪಗಳಿಗೆ ಸುಂದರವನವೆಂಬ ಹೆಸರು ಕೊಡಲ್ಪಟ್ಟಿದೆ.

(2) **ವಿಂಧ್ಯ ಪರ್ವತದ ನದಿಗಳು.**—ವಿಂಧ್ಯಪರ್ವತದಲ್ಲಿಯೂ ಮತ್ತು ಅದರ ಶಾಖೆಯಾದ ಅಮರಕಂಟಕಬೆಟ್ಟದಲ್ಲಿಯೂ ಕೆಲವು ನದಿಗಳು ಹುಟ್ಟುತ್ತವೆ. ಅವುಗಳಲ್ಲಿ ಮುಖ್ಯವಾದುವು ಚಂಬಲ್, ಬೆಟ್ವ ಎಂಬವು. ಇವು ಯಮುನಾ ನದಿಗೆ ಬೀಳುತ್ತವೆ. ಅರಾವಳೀಬೆಟ್ಟಗಳಲ್ಲಿ ಹುಟ್ಟಿ ಕಚ್ ಖಾರಿಯನ್ನು ಸೇರುವ ಲೂನೀನದಿಯೂ, ಮಾಳವ ಪ್ರಸ್ಥಭೂಮಿಯಲ್ಲಿ ಹುಟ್ಟಿ ಕಾಂಬೆ ಖಾರಿಯನ್ನು ಸೇರುವ ಸಬರಮತಿ, ಮಾಹೀ ನದಿಗಳೂ ಸಾಮಾನ್ಯ ಲಕ್ಷಣಗಳಲ್ಲಿ ವಿಂಧ್ಯಪರ್ವತದಲ್ಲಿ ಹುಟ್ಟುವ ನದಿಗಳನ್ನೇ ಹೋಲುವುವು. ಶೋಣಾನದಿಯು ಅಮರಕಂಟಕದಲ್ಲಿ ಹುಟ್ಟಿ ಗಂಗಾನದಿಗೆ ಬೀಳುವುದು.

ಹಿಮಾಲಯ ಪರ್ವತದ ನದಿಗಳಿಗೂ, ವಿಂಧ್ಯ ಪರ್ವತದ ನದಿಗಳಿಗೂ ಸಾಮಾನ್ಯ ಲಕ್ಷಣಗಳಲ್ಲಿರುವ ಮುಖ್ಯ ವ್ಯತ್ಯಾಸಗಳು :—

(i) ಹಿಮಾಲಯ ಪರ್ವತ ಪ್ರದೇಶದಲ್ಲ ಮಳೆ ಬೀಳುವುದು ಹೆಚ್ಚು. ವಿಂಧ್ಯಪರ್ವತಪ್ರದೇಶದಲ್ಲಿ ಮಳೆ ಕಡಿಮೆ. ಇದಲ್ಲದೆ ಹಿಮಾಲಯದ ಎತ್ತರವಾದ ತಪ್ಪಲುಗಳಲ್ಲಿ ಬೇಸಗೆಯಲ್ಲಿ ಹಿಮವು ಕರಗಿ ತನ್ನಲ್ಲಿ ಹುಟ್ಟುವ ನದಿಗಳಿಗೆ ನೀರನ್ನು ಹೆಚ್ಚಾಗಿ ಒದಗಿಸುತ್ತದೆ. ವಿಂಧ್ಯಪರ್ವತದಲ್ಲಿ ಹಿಮವಿಲ್ಲದಿರುವುದರಿಂದ ವಿಂಧ್ಯಪರ್ವತದ ನದಿಗಳು ಬೇಸಗೆಯಲ್ಲಿ ಬಹುಮಟ್ಟಿಗೆ ಬತ್ತಿಹೋಗುವುವು. ಎಂದರೆ ಹಿಮಾಲಯದ ನದಿಗಳಲ್ಲಿ ಎಲ್ಲಾ ಋತುಗಳಲ್ಲಿಯೂ ನೀರು ಯಥೇಚ್ಛವಾಗಿರುವುದು. ವಿಂಧ್ಯ ಪರ್ವತದ ನದಿಗಳಲ್ಲಿ ಮಳೆಗಾಲದಲ್ಲಿ ಮಾತ್ರ ನೀರು ಹೆಚ್ಚಾಗಿರುವುದು.

(ii) ಹಿಮಾಲಯದ ನದಿಗಳು ಉದ್ದವಾಗಿ, ಚಪ್ಪಟೆಯಾದ ಮೈದಾನದ ಮೇಲೆ ನಿಧಾನವಾಗಿ ಹರಿಯುತ್ತವೆ. ವಿಂಧ್ಯಪರ್ವತದ ನದಿಗಳು ಅಷ್ಟು ಉದ್ದವಾಗಿಲ್ಲದೆ ಬೆಟ್ಟದ ಕಣಿವೆಗಳಲ್ಲಿ ವೇಗವಾಗಿ ಹರಿಯುತ್ತವೆ.

(iii) ಹಿಮಾಲಯದ ನದಿಗಳು ಫಲವತ್ತಾದ ಮೈದಾನದಲ್ಲಿ ನಿಧಾನವಾಗಿ ಹರಿಯುವುದರಿಂದ ಕಾಲುವೆಗಳನ್ನು ತೆಗೆದು ವ್ಯವಸಾಯಕ್ಕೆ ನೀರನ್ನು ವಿಶೇಷವಾಗಿ ಉಪಯೋಗಿಸಿಕೊಳ್ಳುತ್ತಿರುವರು. ನೀರು ಆಳವಾಗಿರುವುದರಿಂದ ಸಣ್ಣ ಹಡಗುಗಳ ಸಂಚಾರಕ್ಕೂ ಅನುಕೂಲವಾಗಿವೆ. ವಿಂಧ್ಯಪರ್ವತದ ನದಿಗಳಲ್ಲಿ ಅನೇಕ ತಿಂಗಳು ನೀರು ಕಡಿಮೆಯಾಗಿರುವುದರಿಂದಲೂ, ಪ್ರವಾಹವು ವೇಗವಾಗಿ ಕಲ್ಲುನೆಲದ ಮೇಲೆ ಹರಿಯುವುದರಿಂದಲೂ ಕಾಲುವೆಗಳನ್ನು ತೆಗೆಯುವುದೂ ಸಾಧ್ಯವಲ್ಲ. ತೆಗೆದರೆ ಪ್ರಯೋಜನಕರವಾಗಿಯೂ ಇರುವುದಿಲ್ಲ. ಈ ನದಿಗಳು ಹಡಗಿನ ಸಂಚಾರಕ್ಕೆ ಅನುಕೂಲವಾಗಿಲ್ಲವೆಂದು ಹೇಳಬೇಕಾದುದೇ ಇಲ್ಲ.

(3) **ದಕ್ಷಿಣ ಇಂಡಿಯಾದೇಶದ ನದಿಗಳು.**—ವಿಂಧ್ಯಪರ್ವತಕ್ಕೆ ಆಗ್ನೇಯದಲ್ಲಿ ಅಮರಕಂಟಕ ಬೆಟ್ಟಗಳ ಹತ್ತಿರ ನರ್ಮದಾ ನದಿಯೂ ಮಹದೇವ

ಬೆಟ್ಟಗಳ ಹತ್ತಿರ ತಪತೀ ನದಿಯೂ ಹುಟ್ಟಿ, ಇಕ್ಕಟ್ಟಾದ ಕಣಿವೆಗಳಲ್ಲಿ ಪಶ್ಚಿಮಾಭಿಮುಖವಾಗಿ ಹರಿದು ಅರಬ್ಬೀ ಸಮುದ್ರಕ್ಕೆ ಬೀಳುತ್ತವೆ. ಹೀಗೆ ಇಕ್ಕಟ್ಟಾದ ಕಣಿವೆಗಳಲ್ಲಿ ಹರಿಯುವುದರಿಂದ ದೊಡ್ಡ ಉಪನದಿಗಳಿಗೆ ಅವಕಾಶವಿಲ್ಲ. ವ್ಯವಸಾಯಕ್ಕೆ ಸ್ಥಳವಿಸ್ತಾರ ಕಡಿಮೆ. ಈ ನದಿಗಳು ರಮ್ಯವಾದ ಕಣಿವೆಗಳಲ್ಲಿ ಅತಿರಭಸದಿಂದ ಹರಿದು ಕೊನೆಗೆ ಸ್ವಲ್ಪ ದೂರ ಮಾತ್ರ ಮೈದಾನದಲ್ಲಿ ಹರಿಯುವುದರಿಂದ ಇವುಗಳ ಮುಖದ ಹತ್ತಿರ ಮಣ್ಣು ಮೆಕ್ಕಲು ಸೇರುವುದಿಲ್ಲ. ಆದುದರಿಂದ ನದೀಮುಖಜಭೂಮಿಗಳಿಲ್ಲ. ಮುಖಭಾಗದಲ್ಲಿ 100 ಮೈಲಿಗಳವರೆಗೂ ಸಣ್ಣ ಹಡಗುಗಳು ಸಂಚರಿಸಬಹುದು.

**ಮಹಾನದಿ.**—ಮಧ್ಯಪ್ರಾಂತಗಳಲ್ಲಿ ಹುಟ್ಟಿ ಮೊದಲು ಉತ್ತರಕ್ಕೂ ಅನಂತರ ಪೂರ್ವಕ್ಕೂ ಹರಿದು, ಕಟಕ್ ಪಟ್ಟಣದ ಹತ್ತಿರ ಶಾಖೆಗಳಾಗಿ ಒಡೆದು ಅನೇಕ ಮುಖಗಳಿಂದ ಬಂಗಾಳ ಕೊಲ್ಲಿಗೆ ಬೀಳುತ್ತದೆ. ಈ ನದಿಯೂ, ಇದರ ಉಪನದಿಗಳೂ ಹುಟ್ಟುವ ಬೆಟ್ಟಗಳಲ್ಲಿ ಮಳೆಯು ಹೆಚ್ಚಾಗಿ ಬೀಳುವುದರಿಂದ ಮಳೆಗಾಲದಲ್ಲಿ ಇದರಲ್ಲಿ ನೀರು ಹೆಚ್ಚಾಗಿರುವುದು.

ಈ ಮೂರು ನದಿಗಳು ವಿನಾ ದಕ್ಷಿಣ ಇಂಡಿಯದ ಮುಖ್ಯವಾದ ಇತರ ನದಿಗಳೆಲ್ಲ ಪಶ್ಚಿಮಘಟ್ಟಗಳಲ್ಲಿ ಹುಟ್ಟಿ ಪೂರ್ವಕ್ಕೆ ಹರಿದು ಬಂಗಾಳಕೊಲ್ಲಿಗೆ ಬೀಳುತ್ತವೆ. ದಕ್ಷಿಣಇಂಡಿಯದ ಮುಖ್ಯ ಜಲವಿಭಾಗಸ್ಥಾನವಾದ ಪಶ್ಚಿಮಘಟ್ಟಗಳು ಅರಬ್ಬೀಸಮುದ್ರಕ್ಕೆ ಸಮೀಪದಲ್ಲಿರುವುದರಿಂದ, ಆ ಬೆಟ್ಟಗಳಿಂದ ಪಶ್ಚಿಮಕ್ಕೆ ಹರಿಯುವ ಹೊಳೆಗಳು ಬಹಳ ಚಿಕ್ಕವಾಗಿರುವುವಲ್ಲದೆ ವೇಗವಾಗಿಯೂ ಹರಿಯುವುವು. ಆದುದರಿಂದ ಇವು ವ್ಯವಸಾಯಕ್ಕಾಗಲಿ ಹಡಗಿನ ಸಂಚಾರಕ್ಕಾಗಲಿ ಉಪಯೋಗವಾಗಿಲ್ಲ. ಮೈಸೂರು ದೇಶದಲ್ಲಿ ಗೇರುಸೊಪ್ಪ ಎಂಬ ಪ್ರಸಿದ್ಧವಾದ ಜಲಪಾತವಿರುವ ಶರಾವತಿಯೇ ಈ ಹೊಳೆಗಳಲ್ಲಿ ಮುಖ್ಯವಾದುದು. ಈ ನದಿಯು ನಾಲ್ಕು ಭಾಗಗಳಾಗಿ ಗೇರುಸೊಪ್ಪೆಯಲ್ಲಿ 900 ಅಡಿ ಎತ್ತರದಿಂದ ಧುಮ್ಮಿಕ್ಕುವುದು; ಇದು ಪ್ರಪಂಚದಲ್ಲೆಲ್ಲಾ ಅತ್ಯಂತ ದೊಡ್ಡದಾದ ಜಲಪಾತವೆನ್ನಿಸಿಕೊಂಡಿದೆ. ಪಶ್ಚಿಮಘಟ್ಟಗಳಿಂದ ಪೂರ್ವಕ್ಕೆ ಹರಿಯುವ ನದಿಗಳು ಉದ್ದವಾಗಿವೆ. ಅವುಗಳ ಕೆಳಭಾಗಗಳು ಫಲವತ್ತಾದ ಮೈದಾನಗಳಲ್ಲಿ ನಿಧಾನವಾಗಿ ಹರಿಯುತ್ತ ಮಳೆಗಾಲದಲ್ಲಿ ತುಂಬಿ ಹರಿಯುವುವು. ಆದರೆ ಬೇಸಗೆಯಲ್ಲಿ ನೀರು ಬಹಳ ಕಡಿಮೆಯಾಗುವುದು. ಅವುಗಳಿಗೆ ಅಣೆಯನ್ನು ಕಟ್ಟಿ ಕಾಲುವೆಗಳನ್ನು ತೋಡಿ, ನೀರು ಹಾಯಿಸಿಕೊಂಡು ವ್ಯವಸಾಯಕ್ಕೆ ಉಪಯೋಗಿಸಿಕೊಳ್ಳುವರು. ಈ ನದಿಗಳಿಂದ ಹಡಗಿನ ಸಂಚಾರಕ್ಕೆ ಪ್ರಯೋಜನವಿಲ್ಲ. ನದಿಗಳ ಆಳ ಸಾಲದು. ಅವುಗಳ ಪಾತ್ರಗಳಲ್ಲಿ ಬಂಡೆಗಳು ಹೆಚ್ಚು. ಈ ನದಿಗಳಲ್ಲಿಗ ಮುಖ್ಯವಾದುವು ಗೋದಾವರಿ, ಕೃಷ್ಣ ಮತ್ತು ಕಾವೇರಿ.

**ಗೋದಾವರಿ ನದಿ.**—ಅರಬ್ಬೀ ಸಮುದ್ರಕ್ಕೆ 50 ಮೈಲಿ ದೂರದಲ್ಲಿ ಪಶ್ಚಿಮಘಟ್ಟಗಳಲ್ಲಿ ನಾಸಿಕದ ಹತ್ತಿರ ಹುಟ್ಟಿ, ಆಗ್ನೇಯಾಭಿಮುಖವಾಗಿ ಹೈದರಾಬಾದು ಸೀಮೆಯಲ್ಲಿ ಹರಿದು, ಆಳವಾದ ಕಮರಿಯೊಂದರ ಮೂಲಕ ಪೂರ್ವಘಟ್ಟಗಳನ್ನು ದಾಟಿ, ಪೂರ್ವತೀರದ ಮೈದಾನಗಳಲ್ಲಿ ಹರಿದು, ಅನೇಕ ಶಾಖೆಗಳಾಗಿ ಒಡೆದು ಬಂಗಾಳಕೊಲ್ಲಿಯನ್ನು ಸೇರುತ್ತದೆ. ಇದು ದಕ್ಷಿಣ ಇಂಡಿಯದ ನದಿಗಳಲ್ಲೆಲ್ಲ ದೊಡ್ಡದು. ಸುಮಾರು 900 ಮೈಲಿಯಷ್ಟು ಅಥವಾ ಇಂಡಿಯಾದೇಶದಲ್ಲೆಲ್ಲಾ ಅತ್ಯಂತ ಉದ್ದವಾದ ಸಿಂಧು ನದಿಯ ಅರ್ಧದಷ್ಟು ಉದ್ದವಾಗಿದೆ. ಪ್ರಾಣಹಿತ, ಮಂಜೀರ ಮೊದಲಾದ ಉಪನದಿಗಳು ಇದಕ್ಕೆ ಬಂದು ಸೇರುವುವು. ಇದರ ಮುಖಜಭೂಮಿಯು ಬಹು ಫಲವತ್ತಾಗಿದೆ. ಇದು ಪೂರ್ವತೀರದ ಮೈದಾನದಲ್ಲಿ ಸಿಧಾನವಾಗಿಯೂ ಅಗಲವಾಗಿಯೂ ಹರಿಯುವುದರಿಂದ ವ್ಯವಸಾಯಕ್ಕೆ ಬಹಳ ಉಪಯೋಗಕರವಾಗಿದೆ. ಧವಳೇಶ್ವರ, ರಾಜಮಹೇಂದ್ರಗಳ ಬಳಿ ಈ ನದಿಗೆ ಭಾರೀಅಣೆಗಳನ್ನು ಕಟ್ಟಿರುವರು.

**ಕೃಷ್ಣಾನದಿ.**—ಪಶ್ಚಿಮಘಟ್ಟಗಳಲ್ಲಿ ಮಹಾಬಲೇಶ್ವರದ ಹತ್ತಿರ ಹುಟ್ಟಿ, ಸುಮಾರಾಗಿ ಪೂರ್ವಕ್ಕೆ ಹರಿದು, ಬಂಗಾಳ ಕೊಲ್ಲಿಗೆ ಬೀಳುತ್ತದೆ. ಪಶ್ಚಿಮ ಘಟ್ಟಗಳಲ್ಲಿ ಹುಟ್ಟಿ, ಬೊಂಬಾಯಿ ಆಧಿಪತ್ಯದ ದಕ್ಷಿಣಕ್ಕೆ ಹರಿಯುವ ಭೀಮಾನದಿಯೂ, ಮೈಸೂರು ಸೀಮೆಯಲ್ಲಿ ಹುಟ್ಟಿ, ಉತ್ತರಕ್ಕೆ ಹರಿಯುವ ತುಂಗಭದ್ರಾ ನದಿಯೂ ಇದರ ಮುಖ್ಯವಾದ ಉಪನದಿಗಳು. ಕೃಷ್ಣಾನದಿಗೂ ಇದರ ಉಪನದಿಗಳಿಗೂ ಅಲ್ಲಲ್ಲಿ ಅಣೆಕಟ್ಟುಗಳನ್ನು ಕಟ್ಟಿ ಕಾಲುವೆಗಳನ್ನು ತೆಗೆದಿರುವರು. ಬೆಜವಾಡ, ಗುಂಟೂರು ಪಟ್ಟಣಗಳ ಬಳಿ ಇರುವ ಕೃಷ್ಣಾನದಿಯ ಅಣೆಕಟ್ಟುಗಳು ಬಹು ಮುಖ್ಯವಾದುವು. ತುಂಗಭದ್ರಾನದಿಯ ಉಪನದಿಯಾದ ವೇದಾವತಿಗೆ ಮೈಸೂರು ಸೀಮೆಯಲ್ಲಿರುವ ಮಾರೀಕಣಿವೆಯ ಬಳಿ ಬಲವಾದ ಅಣೆಕಟ್ಟನ್ನು ಕಟ್ಟಿ ಅತಿವಿಶಾಲವಾದ ಕೆರೆಯನ್ನು ಮಾಡಿರುವರು.

**ಕಾವೇರಿ ನದಿ.**—ಇದು ಪಶ್ಚಿಮಘಟ್ಟಕ್ಕೆ ಸೇರಿದ ಕೊಡಗಿನಲ್ಲಿ ತಲಕಾವೇರಿ ಎಂಬ ಸ್ಥಳದಲ್ಲಿ ಹುಟ್ಟಿ, ಮೈಸೂರು ದೇಶದಲ್ಲಿ ಹರಿದು, ಅನೇಕ ಉಪನದಿಗಳನ್ನು ಹೊಂದಿ, ಶಿವನಸಮುದ್ರದ ಹತ್ತಿರ ಪೂರ್ವಘಟ್ಟಗಳನ್ನು ಭೇದಿಸಿಕೊಂಡು, ಪೂರ್ವತೀರದ ಮೈದಾನದಲ್ಲಿ ಹರಿದು, ತಿರುಚನಾಪಳ್ಳಿಯ ಹತ್ತಿರ ಶಾಖೆಗಳಾಗಿ ಒಡೆದು ಬಂಗಾಳ ಕೊಲ್ಲಿಗೆ ಬೀಳುತ್ತದೆ. ಈ ಶಾಖೆಗಳಲ್ಲಿ ಮುಖ್ಯವಾದ ಕೊಲ್ಲಡವೆಂಬುದು ಉತ್ತರಕ್ಕೆ ಹರಿದು, ಕಡಲೂರಿಗೆ ದಕ್ಷಿಣದಲ್ಲಿ ಸಮುದ್ರವನ್ನು ಸೇರುವುದು. ಈ ನದಿ ಬಹಳ ದೂರ ಮೈದಾನದಲ್ಲಿ ಹರಿಯುವುದರಿಂದ ತಿರುಚನಾಪಳ್ಳಿ, ತಂಜಾವೂರು ಜಿಲ್ಲೆಗಳಲ್ಲಿ ಇದರಿಂದ ಅನೇಕ ಕಾಲುವೆಗಳನ್ನು ತೆಗೆದಿರುವರು. ಮೈಸೂರು ಸೀಮೆಯಲ್ಲಿ ಈ ನದಿಗೂ, ಇದರ ಉಪ

ನದಿಗಳಿಗೂ ಅಣೆಕಟ್ಟುಗಳನ್ನು ಕಟ್ಟಿ, ಕಾಲುವೆಗಳನ್ನು ತೋಡಿದಾರೆ. ನಮ್ಮ ಸರಕಾರದವರು ಈ ನದಿಗೆ ಕನ್ನಂಬಾಡಿಯ ಬಳಿ ಭಾರಿಅಣೆಕಟ್ಟನ್ನು ಕಟ್ಟಿ, ಕೃಷ್ಣ ರಾಜಸಾಗರವೆಂಬ ದೊಡ್ಡ ಕೆರೆಯನ್ನು ಮಾಡಿರುವರು. ಈ ನದಿಯಲ್ಲಿ ಅಲ್ಲಲ್ಲಿ ಕೆಲವು ದ್ವೀಪಗಳಿವೆ. ಇವುಗಳಲ್ಲಿ ಮೈಸೂರು ಸೀಮೆಯಲ್ಲಿರುವ ಶ್ರೀರಂಗಪಟ್ಟಣ, ಶಿವನಸಮುದ್ರಗಳೂ, ತಿರುಚನಾಪಳ್ಳಿಯ ಬಳಿ ಇರುವ ಶ್ರೀರಂಗವೂ ಮುಖ್ಯ ವಾದುವು.

ಉತ್ತರ ಪೆನ್ನಾರ್, ಪಾಲಾರ್, ದಕ್ಷಿಣ ಪೆನ್ನಾರ್, ವೇಗೈ ಮತ್ತು ತಾಮ್ರಪರ್ಣಿ ಎಂಬಿವು ಇತರ ಸಣ್ಣ ನದಿಗಳು. ಇವು ತಕ್ಕಮಟ್ಟಿಗೆ ವ್ಯವ ಸಾಯಕ್ಕೆ ಅನುಕೂಲವಾಗಿವೆ.

**ನೀರಾವರಿ ಕೆಲಸ.**—ಯಾವ ಪ್ರದೇಶದ ನೆಲವು ಫಲವತ್ತಾಗಿಯೂ, ಸೆಕೆ ಹೆಚ್ಚಾಗಿಯೂ, ಮಳೆ ಕಡಿಮೆಯಾಗಿಯೂ ಇರುವುದೋ ಆ ಪ್ರದೇಶದಲ್ಲಿ ಬತ್ತ ಮೊದಲಾದ ಬೆಲೆಯುಳ್ಳ ಪೈರುಗಳನ್ನು ಬೆಳೆಯಬೇಕಾದರೆ ಪುರುಷ ಪ್ರಯತ್ನ ದಿಂದ ನೀರನ್ನು ಒದಗಿಸಬೇಕಾಗುವುದು. ಹೀಗೆ ನೀರನ್ನು ಒದಗಿಸುವ ಏರ್ಪಾಡು ಗಳಿಗೆ ನೀರಾವರಿ ಕೆಲಸವೆಂದು ಹೆಸರು. ಇಂಡಿಯಾದೇಶದಲ್ಲಿ ಸುವೃಷ್ಟಿ ಪ್ರದೇಶಗಳಲ್ಲಿ ವಿನಾ ಇತರ ಭಾಗಗಳಲ್ಲಿ ಮಳೆ ಬೀಳುವುದು ಕಡಿಮೆ. ಇಲ್ಲವೆ ಕೆಲವು ತಿಂಗಳುಗಳಲ್ಲಿ ಮಾತ್ರ ಬೀಳುವುದು. ಆದುದರಿಂದ ಈ ದೇಶದ ಅನೇಕ ಪ್ರದೇಶಗಳಲ್ಲಿ ನೀರಾವರಿಯ ಏರ್ಪಾಡಿನ ಆವಶ್ಯಕತೆ ಬಹಳವಾಗಿ ಬೇಕಾಗಿರು ವುದು.

ನೀರಾವರಿಯ ಕೆಲಸವು ಚೆನ್ನಾಗಿ ನಡೆಯಬೇಕಾದರೆ, ನೀರನ್ನು ಸರಬರಾಯಿ ಮಾಡಬೇಕಾದ ಆವಶ್ಯಕತೆಯೂ, ಹಾಗೆ ಸರಬರಾಯಿ ಮಾಡುವುದಕ್ಕೆ ತಕ್ಕ ಅನುಕೂಲ್ಯಗಳೂ, ನೀರಾವರಿಯ ಲಾಗೋಡಿಗೆ ತಕ್ಕಷ್ಟು ಲಾಭವೂ ಇರಬೇಕು.

ಪಂಜಾಬಿನಲ್ಲಿ ತೆಗೆದಿರುವಷ್ಟು ನದಿಯ ಕಾಲುವೆಗಳನ್ನು ಪ್ರಪಂಚದ ಯಾವ ಭಾಗದಲ್ಲಿಯೂ ತೆಗೆದಿಲ್ಲ. ಇಲ್ಲಿ ಪೂರ್ವಕಾಲದಲ್ಲಿ ಬೆಂಗಾಡಾಗಿದ್ದ ಪ್ರದೇಶ ಗಳೆಲ್ಲ ಈಗ ಈ ಕಾಲುವೆಗಳಿಂದ ಫಲವತ್ತಾದ ಕ್ಷೇತ್ರಗಳಾಗಿವೆ. ಈ ಪ್ರಾಂತದಲ್ಲಿ ಇಷ್ಟು ಅದ್ಭುತವಾದ ನೀರಾವರಿ ಕೆಲಸ ನಡೆಯುವುದಕ್ಕೆ ಮುಖ್ಯ ಕಾರಣ ಗಳಾವುವೆಂದರೆ.—(1) ಮೆಕ್ಕಲು ಮಣ್ಣಿನಿಂದ ಕೂಡಿ ಭೂಮಿ ಬಹು ಫಲ ವತ್ತಾಗಿರುವುದು. ಆದುದರಿಂದ ಕಾಲುವೆಗಳನ್ನು ತೆಗೆದ ಲಾಗೋಡಿಗೆ ತಕ್ಕ ಲಾಭವು ದೊರೆಯುವುದು. (2) ಮಳೆ ಬಹಳ ಕಡಿಮೆಯಾದುದರಿಂದ ನೀರನ್ನು ಒದಗಿಸದಿದ್ದರೆ ಯಾವ ಪೈರೂ ಬೆಳೆಯಲಾರದು. ಈ ಪ್ರದೇಶದಲ್ಲಿ ಸಿಂಧೂ ನದಿಯೂ, ಅದರ ಉಪನದಿಗಳೂ ಒಂದಕ್ಕೊಂದು ಸಮೀಪದಲ್ಲಿ ಹರಿಯುವುವು. ಈ ನದಿಗಳು ಮಳೆಯ ನೀರನ್ನೂ, ಹಿಮದ ನೀರನ್ನೂ ಹೊಂದಿ ಸದಾ ತುಂಬಿ

ಹರಿಯುತ್ತಿರುವುವು. ಆದುದರಿಂದ ಈ ಪ್ರದೇಶದಲ್ಲಿ ಕಾಲುವೆಗಳನ್ನು ತೋಡು ವುದರಿಂದ ಉಪಯೋಗವು ಹೆಚ್ಚಾಗಿರುವುದು. (3) ಈ ಪ್ರದೇಶದಲ್ಲಿ ಹಳ್ಳ ತಿಟ್ಟುಗಳೂ, ಕಲ್ಲುನೆಲವೂ ಹೆಚ್ಚಾಗಿಲ್ಲವಾದುದರಿಂದ ಕಾಲುವೆಗಳನ್ನು ತೋಡು ವುದಕ್ಕೆ ಲಾಗೋಡು ಹೆಚ್ಚಾಗುವುದಿಲ್ಲ. ಈ ಅನುಕೂಲ್ಯಗಳಿಂದ ಸರ್ಕಾರ ದವರು ಅನೇಕ ಕಾಲುವೆಗಳನ್ನು ತೋಡಿಸಿ ಗೋಧಿಯ ಬೆಳೆಗೆ ಅನುಕೂಲಪಡಿ ಸಿರುವರು.

ಪಂಜಾಬ್ ದೇಶವನ್ನು ಬಿಟ್ಟರೆ ಸಂಯುಕ್ತ ಪ್ರಾಂತಗಳಲ್ಲಿ ನದಿಯ ಕಾಲುವೆ ಗಳು ಬಹಳ ವಿಶೇಷವಾಗಿವೆ. ಅಲ್ಲಿ ಗಂಗಾ ಯಮುನಾ ನದಿಗಳಿಂದ ಅನೇಕ ಕಾಲುವೆಗಳನ್ನು ತೆಗೆದಿರುವರು. ಹರಿದ್ವಾರದ ಸಮೀಪದಿಂದ ಹೊರಡುವ ಮೇಲಣ 'ಗಂಗಾನದಿಯ ಕಾಲುವೆ' ಎಂಬುದು 450 ಮೈಲಿಗಳಷ್ಟು ಎಂದರೆ ಸುಮಾರು ಕಾವೇರಿ ನದಿಯಷ್ಟು ಉದ್ದವಾಗಿರುವುದು. ಇದರಿಂದ ಕವಲೊಡೆ ದಿರುವ ಕಾಲುವೆಗಳ ಉದ್ದವನ್ನೆಲ್ಲಾ ಸೇರಿಸಿದರೆ 4,500 ಮೈಲಿಯಾಗುವುದು. ಈ ಕಾಲುವೆಯೊಂದರಿಂದಲೇ 1,500 ಚ. ಮೈಲಿಯಷ್ಟು ಭೂಮಿಗೆ ನೀರು ಸರಬರಾಯಿ ಆಗುವುದು. ಪಂಜಾಬು, ಸಂಯುಕ್ತ ಪ್ರಾಂತಗಳಲ್ಲಿರುವ ಕಾಲುವೆ ಗಳಿಂದ ಪ್ರಯೋಜನ ಎಷ್ಟಿರಬಹುದೆಂಬುದನ್ನು ನೀವೇ ಯೋಚಿಸಿ ನೋಡಿ.

ಸಿಂಧುನದಿಯಲ್ಲಿ ಬೇಸಗೆಯಲ್ಲಿ ನೀರು ಕಡಿಮೆಯಾಗುವುದರಿಂದ ದಡದ ಸಮೀಪದಲ್ಲಿ ಮಾತ್ರ ಸ್ವಲ್ಪದೂರಕ್ಕೆ ನೀರು ಹತ್ತುವುದು. ಪ್ರವಾಹವು ಹೆಚ್ಚಾಗಿ ಬರುವ ಮಳೆಗಾಲದಲ್ಲಿ ಯಥೇಚ್ಛವಾಗಿ ಕಾಲುವೆಗಳಲ್ಲಿ ನೀರು ತುಂಬಿ ಹರಿಯುವುದು.

ಉತ್ತರ ಇಂಡಿಯದಲ್ಲಿ ನದಿಗಳ ಕಾಲುವೆಗಳಿಂದಲ್ಲದೆ ಬಾವಿಗಳಿಂದಲೂ ಜಮೀನುಗಳಿಗೆ ನೀರನ್ನು ಹಾಯಿಸುವರು. ಇಲ್ಲಿ ತಕ್ಕಮಟ್ಟಿಗೆ ಮಳೆ ಬೀಳು ವುದರಿಂದ, ಬಾವಿಗಳಲ್ಲಿ ಮೇಲೆಯೇ ನೀರು ಸಿಕ್ಕುವುದು. ನೆಲವು ಕಲ್ಲುನೆಲವಲ್ಲ ದುದರಿಂದ ತೋಡುವ ಲಾಗೋಡು ಕಡಿಮೆಯಾಗಿದೆ.

ಮಧ್ಯ ಇಂಡಿಯ ಮತ್ತು ದಖನ್ ಪ್ರಸ್ಥಭೂಮಿಗಳಲ್ಲಿ ನದಿಗಳು ಕಡಮೆ. ಅಲ್ಲದೆ ಇರುವ ಒಂದೆರಡು ನದಿಗಳಲ್ಲಿ ಬೇಸಗೆಯಲ್ಲಿ ನೀರು ಕಡಿಮೆಯಾಗಿರು ವುದು. ಅವು ಆಳವಾದ ಪಾತ್ರಗಳಲ್ಲಿ ಹರಿಯುವುವು. ಆದುದರಿಂದ ಈ ಪ್ರದೇಶ ಗಳಲ್ಲಿ ನದಿಗಳ ಕಾಲುವೆಗಳು ವಿಶೇಷವಾಗಿಲ್ಲ. ಆದರೆ ಅಲ್ಲಲ್ಲಿ ನದಿಗಳಿಗೆ ಅಣೆಕಟ್ಟು ಗಳನ್ನು ಕಟ್ಟಿ, ನೀರನ್ನು ತಡೆದು ಕಾಲುವೆಗಳ ಮೂಲಕ ಜಮೀನುಗಳಿಗೆ ಹಾಯಿಸಿಕೊಳ್ಳುತ್ತಾರೆ. ಈ ಪ್ರದೇಶಗಳಲ್ಲಿ ಹಳ್ಳ ತಿಟ್ಟುಗಳು ಹೆಚ್ಚಾಗಿರು ವುದರಿಂದ, ಹರಿಯುವ ನೀರಿಗೆ ಅಡ್ಡಲಾಗಿ ಏರಿಗಳನ್ನು ಕಟ್ಟಿ ಅನೇಕ ಕೆರೆಗಳನ್ನು ಮಾಡಿರುವರು. ಆದರೆ ಈ ಕೆರೆಗಳಲ್ಲಿ ಯಾವಾಗಲೂ ನೀರಿರುವುದು ಕಡಿಮೆ.

ಮೈಸೂರು ಸೀಮೆಯಲ್ಲಿ ಪೂರ್ವಕಾಲದಿಂದಲೂ ಅನೇಕ ರಾಜರೂ, ಪಾಳೆಯಗಾರರೂ, ಶ್ರೀಮಂತರೂ ಅನೇಕ ಕೆರೆಗಳನ್ನು ಕಟ್ಟಿಸಿ ವ್ಯವಸಾಯಕ್ಕೆ ಅನುಕೂಲಪಡಿಸಿರುವರು. ಈ ಸೀಮೆಯಲ್ಲಿ ಒಟ್ಟು ಸುಮಾರು 29,000 ಕೆರೆಗಳಿವೆ. ಕಡೂರು ಡಿಸ್ಟ್ರಿಕ್ಟಿನಲ್ಲಿರುವ ಮದಗದ ಕೆರೆಯೂ, ಶಿವಮೊಗ್ಗ ಡಿಸ್ಟ್ರಿಕ್ಟಿನಲ್ಲಿರುವ ಸೂಳೆಯಕೆರೆಯೂ ಇವುಗಳಲ್ಲಿ ಬಹಳ ದೊಡ್ಡವು. ನಮ್ಮ ಸರ್ಕಾರದವರು ಈಚೆಗೆ ಮಾರಿಕಣಿವೆಯಕೆರೆಯನ್ನು ಕಟ್ಟಿಸಿರುವರು. ಕೃಷ್ಣರಾಜ ಸಾಗರವನ್ನು ಕಟ್ಟಿಸುತ್ತಿರುವರು.

ಸಿಂಧು ಗಂಗಾ ನದಿಗಳ ಮೈದಾನಗಳಲ್ಲಿ ನೆಲವು ಒಂದೇ ಮಟ್ಟವಾಗಿರುವುದರಿಂದ ಕೆರೆಗಳನ್ನು ಕಟ್ಟುವುದು ಸಾಧ್ಯವಲ್ಲ. ಉತ್ತರ ಇಂಡಿಯಾದಲ್ಲಿ ನದಿಗಳ ಕಾಲುವೆಗಳೂ, ದಕ್ಷಿಣ ಇಂಡಿಯಾದಲ್ಲಿ ಕೆರೆಗಳೂ ನೀರಾವರಿ ಕೆಲಸಕ್ಕೆ ಮುಖ್ಯ ಆಧಾರಗಳಾಗಿವೆ. ಪೂರ್ವತೀರದ ಮೈದಾನದಲ್ಲಿಯೂ ಅನೇಕ ಕಾಲುವೆಗಳಿವೆ. ದಖನ್ನಿನಲ್ಲಿ ಬಾವಿಗಳೂ ಕಡಿಮೆ. ನೀರು ಆಳದಲ್ಲಿರುವುದು. ಕಲ್ಲುನೆಲದಲ್ಲಿ ಬಾವಿ ತೋಡುವುದು ದುಬಾರಿಯಾಗುವುದು. ಆದರೆ ಅಲ್ಲಲ್ಲಿ ತಲಪರಿಗೆಗಳನ್ನು ಮಾಡಿರುತ್ತಾರೆ. ಇವುಗಳಲ್ಲಿ ನೀರು ಮೇಲುಗಡೆಯೇ ಸಿಕ್ಕುವುದರಿಂದ ಇವುಗಳನ್ನು ತೋಡುವುದು ಲಾಭಕರವಾಗಿದೆ.

**ಸರೋವರಗಳು.**—ಈ ದೇಶದಲ್ಲಿ ಸರೋವರಗಳು ಬಹಳ ಕಡಿಮೆ. ಚಿಲ್ಕ ಪುಲಿಕಾಟ್ ಎಂಬ ಉಪ್ಪುನೀರಿನ ಸರೋವರಗಳು ಸಮುದ್ರತೀರದಲ್ಲಿರುವುವು. ಜಹಜುಗಳಿಗೆ ತಕ್ಕಷ್ಟು ಆಳವಾಗಿಲ್ಲದುದರಿಂದ ಈ ಸರೋವರಗಳಿಂದ ವಿಶೇಷ ಪ್ರಯೋಜನವಿಲ್ಲ. ಇವುಗಳ ಮೇಲೆ ಸಣ್ಣ ದೋಣಿಗಳು ಮಾತ್ರ ಸಂಚರಿಸುವುವು.

ರಾಜಪುತ್ರಸ್ಥಾನದಲ್ಲಿ ಅಲ್ಲಲ್ಲಿ ಕೆಲವು ಉಪ್ಪುನೀರಿನ ಸರೋವರಗಳಿವೆ. ಇವುಗಳಲ್ಲಿ ಸಾಂಬರ್ ಎಂಬುದು ದೊಡ್ಡದು. ಇದರ ನೀರಿನಿಂದ ಉಪ್ಪನ್ನು ತಯಾರುಮಾಡುತ್ತಾರೆ.

ಗೋದಾವರಿ, ಕೃಷ್ಣಾನದಿಗಳ ಮುಖದ ಮಧ್ಯಪ್ರದೇಶದಲ್ಲಿರುವ ಕೋಲೇರ್ ಎಂಬುದೂ, ಕಾಶ್ಮೀರದಲ್ಲಿರುವ ವೂಲೂರ್‌ದಾಲ್ ಎಂಬುದೂ ಸಿಹಿನೀರಿನ ಸರೋವರಗಳಾಗಿವೆ. ವೂಲೂರ್ ಸರೋವರವು ನೋಡುವುದಕ್ಕೆ ಅತ್ಯಂತ ರಮಣೀಯವಾಗಿದೆ. ಕೋಲೇರ್ ಸರೋವರವು ಮಳೆಗಾಲದಲ್ಲಿ 100 ಮೈಲಿಯಷ್ಟು ವಿಸ್ತೀರ್ಣವುಳ್ಳುದಾಗುವುದು. ಇತರ ಕಾಲಗಳಲ್ಲಿ ಕೆಸರಿನಿಂದ ಕೂಡಿ ಜವುಗು ಯಾಗಿರುವುದು.

**ಸಸ್ಯಗಳು, ಕಾಡುಗಳು.**—ಒಂದು ಪ್ರದೇಶದಲ್ಲಿ ಕಾಡುಗಳು ಹೆಚ್ಚಾಗಿದ್ದರೆ ಅದರಿಂದ ಅನೇಕ ಪ್ರಯೋಜನಗಳುಂಟು:—

(1) ದಟ್ಟವಾಗಿ ಮರಗಳು ಬೆಳೆದಿರುವ ಕಾಡುಗಳಲ್ಲಿ ನೆರಳು ಹೆಚ್ಚಾಗಿರುವುದರಿಂದ ತಂಪು ಹೆಚ್ಚು. ಇದರಿಂದ ಸುತ್ತುಮುತ್ತಿನ ಪ್ರದೇಶಗಳಲ್ಲಿ ಸೆಕೆ ಸ್ವಲ್ಪ ಕಡಿಮೆಯಾಗುವುದು.

(2) ಇದೇ ಕಾರಣದಿಂದಲೇ ಮೋಡಗಳು ಕಾಡುಗಳ ಕಡೆಗೆ ಎಳೆಯಲ್ಪಟ್ಟು ಅಲ್ಲಿ ಹೆಚ್ಚು ಮಳೆ ಬೀಳುವಂತೆ ಮಾಡುವುದು.

(3) ಕಾಡುಗಳು ನಾಶವಾಗದಂತೆ ಮರಗಳನ್ನು ಕಡಿಯುವುದರಿಂದ ಸೌದೆಯೂ, ತೊಲೆಗಳೂ, ಹಲಗೆಗಳೂ ಸಿಕ್ಕುವುವು.

(4) ಮಳೆಯಿಲ್ಲದ ಕಾಲದಲ್ಲಿ ಕಾಡಿನ ಹುಲ್ಲುಗಾವಲುಗಳಲ್ಲಿ ದನಕರುಗಳಿಗೆ ಬೇಕಾದಷ್ಟು ಮೇವು ಸಿಕ್ಕುವುವು.

(5) ಕಾಡುಗಳಲ್ಲಿ ದೊರೆಯುವ ಗೋಂದು, ಮೇಣ, ಜೇನುತುಪ್ಪ, ನಾರು, ಬೇರು ಮೊದಲಾದ ಪಸಾರೆ ದಿನಸುಗಳನ್ನೂ, ಔಷಧಕ್ಕೆ ಬರುವ ಮೂಲಿಕೆಗಳನ್ನೂ ಸಂಗ್ರಹಿಸಿ ಕಾಡುಜನರು ಜೀವನ ಮಾಡುವರು. ಮೈಸೂರು ದೇಶದ ಕಾಡುಕುರುಬರೂ, ನೀಲಗಿರಿಯ ತೋದರೂ, ವಿಂಧ್ಯಪರ್ವತದ ಗೊಂಡರೂ ಮತ್ತು ಬಂಗಾಳದ ಸಂತಾಳರೂ ಈ ರೀತಿ ಜೀವನಮಾಡುವವರಾಗಿದ್ದಾರೆ.

ಹಿಮಾಲಯ ಪರ್ವತಗಳ ತಪ್ಪಲುಗಳಲ್ಲಿಯೂ, ಅಸ್ಸಾಂ ಪ್ರಾಂತದಲ್ಲಿಯೂ, ಪಶ್ಚಿಮ ಘಟ್ಟಗಳ ತಪ್ಪಲುಗಳಲ್ಲಿಯೂ ದೊಡ್ಡ ದೊಡ್ಡ ಕಾಡುಗಳಿವೆ. ಮಧ್ಯ ಇಂಡಿಯ, ದಕ್ಷಿಣ ಇಂಡಿಯಗಳ ಬೆಟ್ಟ ಸೀಮೆಯಲ್ಲಿ ಸಾಮಾನ್ಯವಾದ ಕಾಡುಗಳಿರುವುವು.

ಈ ಕಾಡುಗಳಲ್ಲಿ ಮುಖ್ಯವಾಗಿ ತೇಗ, ಸಾಲ, ಕರಿಯಮರ, ದೇವದಾರು, ಶ್ರೀಗಂಧ, ಬಿದಿರು ಮುಂತಾದ ಮರಗಳು ಬೆಳೆಯುವುವು. **ತೇಗದಮರವು** ಹತ್ತರಿ ಹಿಡಿದರೆ ಬಹು ನಯವಾಗುವುದು. ಅದಕ್ಕೆ ಗೆದ್ದಲು ಹಿಡಿಯುವುದಿಲ್ಲ. ಆದುದರಿಂದ ಈ ಮರವು ಮನೆಯ ಮುಟ್ಟುಗಳಿಗೂ, ಕುರ್ಚಿ, ಬೀರು ಮೊದಲಾದ ಸಾಮಾನುಗಳನ್ನು ಮಾಡುವುದಕ್ಕೂ ಉಪಯೋಗವಾಗಿದೆ. ಹೆಚ್ಚಾಗಿ ಮಳೆ ಬೀಳುವ ಪಶ್ಚಿಮ ಘಟ್ಟಗಳಲ್ಲಿಯೂ, ಬರ್ಮಾ ದೇಶದಲ್ಲಿಯೂ ಈ ಮರವು ವಿಶೇಷವಾಗಿ ಬೆಳೆಯುವುದು. ಹಿಮಾಲಯದ ತಪ್ಪಲುಗಳಲ್ಲಿ ಚಳಿ ಹೆಚ್ಚಾಗಿರುವುದರಿಂದ ಇದು ಅಲ್ಲಿ ಬೆಳೆಯುವುದಿಲ್ಲ. **ಸಾಲವೃಕ್ಷವು** ಹಿಮಾಲಯದ ತಪ್ಪಲುಗಳಲ್ಲಿಯೂ, ಪಶ್ಚಿಮ ಘಟ್ಟಗಳಲ್ಲಿಯೂ, ಮಧ್ಯ ಪ್ರಾಂತಗಳಲ್ಲಿಯೂ ಹೆಚ್ಚಾಗಿ ಬೆಳೆಯುವುದು. ಇದು ಮನೆಯ ಮುಟ್ಟುಗಳಿಗೂ, ರೈಲು ರಸ್ತೆಗಳಿಗೆ ಹಾಕುವ ಅಡ್ಡಪಟ್ಟಿಗಳಿಗೂ ಉಪಯೋಗವಾಗುತ್ತದೆ. **ಕರಿಯಮರ** ಪಶ್ಚಿಮ

ಘಟ್ಟಗಳಲ್ಲಿ ವಿಶೇಷವಾಗಿ ಬೆಳೆಯುತ್ತದೆ. ಇದು ಬಹಳ ಗಟ್ಟಿಯಾಗಿ, ಬಹು ನುಣುಪಾಗಿ ಹೊಳೆಯುವಂತೆ ಇರುವುದು. ಇದಕ್ಕೆ ಹತ್ತುರಿ ಹಿಡಿಯಬಹುದು. ಇದರಿಂದ ನಾಜೋಕಾದ ಸಾಮಾನುಗಳನ್ನು ಮಾಡುವರು. **ದೇವದಾರು ವೃಕ್ಷವು** ಹಿಮಾಲಯಗಳಲ್ಲಿ ವಿಶೇಷವಾಗಿ ಬೆಳೆಯುತ್ತದೆ. ಇದೂ ಮರ ಮುಟ್ಟುಗಳಿಗೆ ಉಪಯೋಗವಾಗುತ್ತದೆ. **ಶ್ರೀಗಂಧದಮರವು** ಮೈಸೂರು ಸೀಮೆಯಲ್ಲಿ ಹೆಚ್ಚಾಗಿ ಬೆಳೆಯುತ್ತದೆ. ಇದರಿಂದ ಸೊರಬ, ಸಾಗರಗಳಲ್ಲಿರುವ ಗೂಡಿಗರು ಕೆತ್ತನೆಯ ಕೆಲಸವನ್ನು ಮಾಡುತ್ತಾರೆ. ಇದರ ಎಣ್ಣೆ ಔಷಧಿಗಳಿಗೂ, ಪರಿಮಳದ್ರವ್ಯಗಳಿಗೂ ಉಪಯೋಗವಾಗುತ್ತದೆ. ಈಚೆಗೆ ಮೈಸೂರು, ಬೆಂಗಳೂರುಗಳಲ್ಲಿ ಈ ಎಣ್ಣೆಯನ್ನು ತೆಗೆಯುವ ಕಾರ್ಖಾನೆಗಳನ್ನಿಟ್ಟಿದ್ದಾರೆ. **ಬಿದಿರು** ದಕ್ಷಿಣ ಇಂಡಿಯದ ಎಲ್ಲಾ ಭಾಗಗಳಲ್ಲಿಯೂ ಹೇರಳವಾಗಿ ಬೆಳೆಯುವುದು. ಇದರ ಉಪಯೋಗವು ಎಲ್ಲರಿಗೂ ತಿಳಿದೇ ಇದೆ. **ಅರಳಿ, ಆಲ** ಮೊದಲಾದ ಮರಗಳಿಂದ ಹೆಚ್ಚು ಪ್ರಯೋಜನವಿಲ್ಲ. **ತೆಂಗು, ತಾಳೆ, ಈಚಲು, ಬಗಿನಿ** ಮರಗಳು ದಕ್ಷಿಣ ಇಂಡಿಯದಲ್ಲಲ್ಲದೆ, ಮುಖ್ಯವಾಗಿ ಸಮುದ್ರ ತೀರಗಳಲ್ಲಿ ವಿಶೇಷವಾಗಿ ಬೆಳೆಯುತ್ತವೆ.

**ಸಿಂಕೋನ** ಎಂಬ ದಕ್ಷಿಣ ಅಮೆರಿಕದ ಮರವನ್ನು ಹಿಮಾಲಯಗಳಲ್ಲಿಯೂ, ಪಶ್ಚಿಮ ಘಟ್ಟಗಳಲ್ಲಿಯೂ ಅಲ್ಲಲ್ಲಿ ಹಾಕಿರುವರು. ಇದರ ತೊಗಟೆಯಿಂದ ಜ್ವರವನ್ನು ನಿವಾರಣೆ ಮಾಡುವ ಕ್ವಿನೀನ್ ಎಂಬ ಔಷಧವು ತಯಾರಾಗುತ್ತದೆ. **ಕಾಸರೀನ** ಎಂಬ ಮರವು ನೆಲದ ಜೌಗನ್ನು ಕಡಿಮೆ ಮಾಡುವುದು. ನೀರು ಹೆಚ್ಚಾಗಿರುವ ಭಾಗಗಳಲ್ಲಿ ಇದನ್ನು ಬೆಳೆಸುತ್ತಾರೆ. ಇದರ ಸೌದೆ ಅತ್ಯುತ್ತಮವಾದುದು.

**ಕೃಷಿಯಿಂದ ಬೆಳೆಯುವ ಸಸ್ಯಗಳು.**—ಇಂಡಿಯಾದೇಶದಲ್ಲಿ ಉಷ್ಣ ಹೆಚ್ಚಾಗಿರುವುದರಿಂದ ಫಲವತ್ತಾದಕ್ಷೇತ್ರಗಳೂ, ನೀರಿಗೆ ಸೌಕರ್ಯವೂ ಇರುವ ಕಡೆಗಳಲ್ಲೆಲ್ಲಾ ನಾನಾಬಗೆಯ ಸಸ್ಯಗಳು ಬೆಳೆಯುವುವು. ಮುಖ್ಯವಾದ ಸಸ್ಯಗಳ ಬೆಳೆವಳಿಕೆಗೆ ಆವಾವ ಸೌಕರ್ಯಗಳು ಬೇಕು ಎಂಬುದು ಸಾಮಾನ್ಯ ವಿವರಣೆಯಲ್ಲಿ ನಿಮಗೆ ತಿಳಿದಿರುವುದು. ಈಗ ಆ ವಿಷಯಗಳನ್ನು ನೆನಪಿಗೆ ತಂದುಕೊಳ್ಳುವುದು ಒಳ್ಳೆಯದು.

**ರಾಗಿ, ಜೋಳ, ನವಣೆ** ಎಂಬ ಧಾನ್ಯಗಳು ಇಂಡಿಯಾದೇಶದಲ್ಲಿ ಅರ್ಧಕ್ಕಿಂತ ಹೆಚ್ಚು ಜನರಿಗೆ ಮುಖ್ಯವಾದ ಆಹಾರವಸ್ತುಗಳಾಗಿವೆ. ಇವುಗಳನ್ನು ಮಳೆ ಕಡಿಮೆಯಾಗಿ ಬೀಳುವ ಮರಳುಮಿಶ್ರವಾದ ನೆಲವುಳ್ಳ ಪ್ರದೇಶಗಳಲ್ಲಿ ಬೆಳೆಯುತ್ತಾರೆ. ಮೈಸೂರು ಸೀಮೆಯಲ್ಲಿ ರಾಗಿಯೂ, ಮದರಾಸಾಧಿಪತ್ಯದಲ್ಲಿ ನವಣೆಯೂ, ಬೊಂಬಾಯಿ ಮಧ್ಯಪ್ರಾಂತ್ಯಗಳಲ್ಲಿ ಜೋಳವೂ ವಿಶೇಷವಾಗಿ ಬೆಳೆಯುತ್ತವೆ.

**ಬತ್ತ ಅಥವಾ ಅಕ್ಕಿ.**—ಇದು ಈ ದೇಶದಲ್ಲಿ ಕಾಲುಪಾಲು ಜನರಿಗೆ ಆಹಾರವಾಗಿದೆ. ಮಳೆ ಹೆಚ್ಚಾಗಿ ಬೀಳುವ ಪಶ್ಚಿಮತೀರದ ಮೈದಾನ ಮತ್ತು ಬಂಗಾಳಗಳಲ್ಲಿಯೂ, ಅನೇಕವಾಗಿ ನದಿಗಳ ಕಾಲುವೆಗಳನ್ನು ಮಾಡಿರುವ ಸಂಯುಕ್ತಪ್ರಾಂತಗಳಲ್ಲಿಯೂ, ಪೂರ್ವತೀರದ ನದೀಮುಖಜಭೂಮಿಗಳಲ್ಲಿಯೂ ಬತ್ತವನ್ನು ವಿಶೇಷವಾಗಿ ಬೆಳೆಯುತ್ತಾರೆ. ದಖನ್ನಿನಲ್ಲಿ ಅಲ್ಲಲ್ಲಿ ಕೆರೆಗಳ ಮತ್ತು ಬಾವಿಗಳ ಆಸರೆಯಿಂದ ಬತ್ತವನ್ನು ಬೆಳೆ ಮಾಡುತ್ತಾರೆ.

ಮಳೆ ಕಡಿಮೆಯಾಗಿ ಬೀಳುವ ಪಂಜಾಬಿನಲ್ಲಿ ಚಳಿಗಾಲದಲ್ಲಿ **ಗೋಧಿ**ಯನ್ನು ಬೆಳೆಯುವರು. ಪಂಜಾಬು ದೇಶವನ್ನು ಇಂಡಿಯಾದೇಶದ ಗೋಧಿಯ ಕಣಜವೆಂದು ಹೇಳಬಹುದು. ಮಧ್ಯಪ್ರಾಂತ, ಬೊಂಬಾಯಿ, ಮೈಸೂರುಗಳಲ್ಲಿಯೂ ಸ್ವಲ್ಪಮಟ್ಟಿಗೆ ಗೋಧಿ ಬೆಳೆಯುವುದು.

ತೊಗರಿ, ಕಡಲೆ, ಉದ್ದು, ಹೆಸರು, ಅವರೆ, ಹುರುಳಿ ಮೊದಲಾದ **ಬೇಳೆ**ಯಾಗುವ **ದ್ವಿದಳ ಧಾನ್ಯಗಳು** ಇಂಡಿಯಾದೇಶದ ಎಲ್ಲಾ ಭಾಗಗಳಲ್ಲಿಯೂ ಬೆಳೆಯುವುವು. ಆದರೆ ಸಂಯುಕ್ತಪ್ರಾಂತ, ಪಂಜಾಬುಗಳಲ್ಲಿ ಇವು ಬೆಳೆಯುವುದು ಹೆಚ್ಚು.

**ಕಬ್ಬು.**—ಸಂಯುಕ್ತ ಪ್ರಾಂತ, ಪಂಜಾಬ್, ಬಿಹಾರಗಳಲ್ಲಿಯೂ, ಮದ್ರಾಸಾಧಿಪತ್ಯದ ನದೀತೀರಗಳಲ್ಲಿಯೂ ವಿಶೇಷವಾಗಿ ಕಬ್ಬನ್ನು ಬೆಳೆಯುತ್ತಾರೆ. ನಮ್ಮ ದೇಶದಲ್ಲಿ ಕಬ್ಬಿನಿಂದ ಸಕ್ಕರೆಯನ್ನು ಮಾಡುವುದು ಕಡಿಮೆ. ಸಾಮಾನ್ಯವಾಗಿ ಬೆಲ್ಲವನ್ನು ಮಾಡುತ್ತಾರೆ.

ಮೈಸೂರು ಸೀಮೆಯ ಮಲೆನಾಡಿನಲ್ಲಿಯೂ, ಕೊಡಗು ದೇಶದಲ್ಲಿಯೂ, ನೀಲಗಿರಿ, ವೈನಾಡು ಬೆಟ್ಟಗಳ ಪೂರ್ವ ಭಾಗದ ತಪ್ಪಲುಗಳಲ್ಲಿಯೂ ವಿಶೇಷವಾಗಿ **ಕಾಫಿ**ಯನ್ನು ಬೆಳೆಯುತ್ತಾರೆ. ಈಚೆಗೆ ಬ್ರೆಜಿಲ್ ದೇಶದಲ್ಲಿ ಹೆಚ್ಚಾಗಿ ಕಾಫಿ ಬೆಳೆಯುತ್ತಿರುವುದರಿಂದ ನಮ್ಮ ದೇಶದ ಕಾಫಿಗೆ ಗಿರಾಕಿ ಕಡಿಮೆಯಾಗುತ್ತಿದೆ.

ಅಸ್ಸಾಮಿನಲ್ಲಿ ವಿಶೇಷವಾಗಿಯೂ, ಹಿಮಾಲಯ ಪರ್ವತಗಳ ಮತ್ತು ನೀಲಗಿರಿ ಬೆಟ್ಟಗಳ ತಪ್ಪಲುಗಳಲ್ಲಿ ಸ್ವಲ್ಪಮಟ್ಟಿಗೂ **ಟೀ** ಬೆಳೆಯುವುದು.

ಮೆಣಸು, ಏಲಕ್ಕಿ ಮೊದಲಾದ **ಸಂಬಾರದ ದಿನಸುಗಳು** ಮಲಬಾರ್ ತೀರದಲ್ಲಿ ವಿಶೇಷವಾಗಿ ಬೆಳೆಯುತ್ತವೆ. ಮೆಣಸಿನಕಾಯಿ ಇಂಡಿಯಾದೇಶದ ಎಲ್ಲಾ ಭಾಗಗಳಲ್ಲಿಯೂ ಬೆಳೆಯಾಗುತ್ತದೆ.

ಎಳ್ಳು, ನೆಲಗಡಲೆ ಮತ್ತು ಕುಸುಮೆ ಇವೇ ಈ ದೇಶದಲ್ಲಿ ಬೆಳೆಯುವ ಮುಖ್ಯವಾದ **ಎಣ್ಣೆಯ ಬೀಜಗಳು.** ಇವು ಎಲ್ಲಾ ಭಾಗಗಳಲ್ಲಿಯೂ ಬೆಳೆಯುತ್ತವೆ. ಕುಸುಮೆಯ ಎಣ್ಣೆಯನ್ನು ಬೊಂಬಾಯಿ ಆಧಿಪತ್ಯದಲ್ಲಿ ವಿಶೇಷ

ವಾಗಿ ಉಪಯೋಗಿಸುವರು. ನೆಲಗಡಲೆಯು ಪುದುಚೇರಿ ರೇವುಪಟ್ಟಣ ದಿಂದ ಫ್ರಾನ್ಸ್ ದೇಶಕ್ಕೆ ವಿಶೇಷವಾಗಿ ರಫ್ತಾಗುವುದು. ಎಳ್ಳಿನಲ್ಲಿ ಎಣ್ಣೆ ತೆಗೆಯುವ ಗಾಣಗಳು ನಮ್ಮ ದೇಶದ ಎಲ್ಲಾ ಭಾಗಗಳಲ್ಲಿಯೂ ಹೇರಳ ವಾಗಿವೆ.

ಅನೇಕ ವಿಧವಾದ **ಹಣ್ಣುಗಳೂ,** ಬಗೆಬಗೆಯ **ಕಾಯಿಪಲ್ಯಗಳೂ** ಎಲ್ಲಾ ಕಡೆಗಳಲ್ಲಿಯೂ ಬೆಳೆಯುತ್ತವೆ. ಈಚೆಗೆ ನಮ್ಮ ದೇಶದವರು ಇತರ ದೇಶ ಗಳ ತರಕಾರಿಗಳನ್ನೂ, ಹಣ್ಣುಹಂಪಲುಗಳನ್ನೂ ಬೆಳೆಯಲು ತೊಡಗಿರುವರು. ಯೂರೋಪು ಖಂಡದ ಶೀತಪ್ರದೇಶಗಳಲ್ಲಿ ಬೆಳೆಯುವ ಸೇಬಿನ ಹಣ್ಣನ್ನು ಬೆಂಗಳೂರು, ಪೂನಾ, ಕಾಶ್ಮೀರ ಮೊದಲಾದ ಎತ್ತರವಾದ ಪ್ರದೇಶಗಳಲ್ಲಿ ಬೆಳೆಯು ತ್ತಿರುವರು. ಆಸ್ಟ್ರೇಲಿಯ ಖಂಡದಲ್ಲಿ ಬೆಳೆಯುವ ದೊಡ್ಡದಾದ ಮತ್ತು ಬೀಜವಿಲ್ಲದ ಒಂದು ಜಾತಿಯ ಕಿತ್ತಳೆಯನ್ನು ಬೆಂಗಳೂರಿನಲ್ಲಿ ಬೆಳೆಯುತ್ತಿರು ವರು. ಅಮೆರಿಕ ಖಂಡದ ಆಲೂಗಡ್ಡೆಯು ಈ ದೇಶದ ಎಲ್ಲಾ ಭಾಗಗಳಲ್ಲಿಯೂ ಬೆಳೆಯುತ್ತದೆ. ಹೀಗೆಯೇ ಬಟಾನಿ, ಕೋಸುಗಡ್ಡೆ ಮೊದಲಾದ ಯೂರೋಪಿನ ತರಕಾರಿಗಳೂ ಅಲ್ಲಲ್ಲಿ ಬೆಳೆಯಾಗುತ್ತಿವೆ.

ಈ ದೇಶದಲ್ಲಿ ಮೇಲೆ ವಿವರಿಸಿರುವ ಆಹಾರಕ್ಕೆ ಉಪಯೋಗವಾದ ಸಸ್ಯ ಗಳಲ್ಲದೆ, ವ್ಯವಸಾಯದಿಂದ ಇತರ ಸಸ್ಯಗಳನ್ನೂ ಬೆಳೆಯುವುದುಂಟು. ಇವು ಗಳಲ್ಲಿ ಮುಖ್ಯವಾದುವನ್ನು ಮುಂದೆ ವಿವರಿಸಿದೆ.

**ಹತ್ತಿ.**—ಮಳೆ ಕಡಿಮೆಯಾಗಿ ಬೀಳುವ ಫಲವತ್ತಾದ ಕರಿಯಮಣ್ಣಿನ ಕ್ಷೇತ್ರವಿರುವ ಬೊಂಬಾಯಿ, ಮಧ್ಯಪ್ರಾಂತ, ಹೈದರಾಬಾದು, ಮೈಸೂರು, ತಿನ್ನವೆಲ್ಲಿಗಳಲ್ಲಿ ಬೆಳೆಯುತ್ತದೆ. ಇದರ ಸ್ವಲ್ಪ ಭಾಗವನ್ನು ಬೊಂಬಾಯಿ, ಅಹಮುದಾಬಾದ್ ಮೊದಲಾದ ಪಟ್ಟಣಗಳಲ್ಲಿರುವ ಕಾರ್ಖಾನೆಗಳಲ್ಲಿ ಯಂತ್ರ ಗಳನ್ನು ಉಪಯೋಗಿಸಿ ಬಟ್ಟೆಗಳನ್ನು ಮಾಡುವರು. ಮುಖ್ಯವಾಗಿ ಹೆಚ್ಚು ಭಾಗವನ್ನು ಇಂಗ್ಲೆಂಡಿಗೆ ರಫ್ತುಮಾಡುವರು. ಇಂಡಿಯಾದೇಶದ ಹತ್ತಿಯು ಅಷ್ಟು ಉತ್ತಮವಾದುದಲ್ಲ. ಈಚೆಗೆ ಅಲ್ಲಲ್ಲಿ ಅಮೆರಿಕ ಖಂಡದ ಹತ್ತಿಯನ್ನೂ, ಕಾಂಬೋಡಿಯದ ಹತ್ತಿಯನ್ನೂ ಬೆಳೆಯಲಾರಂಭಿಸಿರುವರು.

**ನೀಲಿ.**—ಇದು ಮುಖ್ಯವಾಗಿ ಬಿಹಾರದಲ್ಲಿಯೂ, ಸ್ವಲ್ಪಮಟ್ಟಿಗೆ ಸಂಯುಕ್ತ ಪ್ರಾಂತಗಳಲ್ಲಿಯೂ ಬೆಳೆಯುವುದು.

**ಅಫೀಮು.**—ಮಾಳವ ಮತ್ತು ಬಿಹಾರಗಳಲ್ಲಿ ವಿಶೇಷವಾಗಿ ತಯಾರಾ ಗುತ್ತದೆ. ಇದು ಚೀಣಾದೇಶಕ್ಕೆ ವಿಶೇಷವಾಗಿ ರಫ್ತಾಗುತ್ತಿತ್ತು. ಈಚೆಗೆ ಆ ದೇಶದ ಜನರು ಇದರ ಸೇವನೆಯಿಂದುಂಟಾಗುವ ಕೆಡಕನ್ನು ತಿಳಿದು, ಇದರ

ಅಮುದನ್ನು ನಿಲ್ಲಿಸಿರುವರು. ಈಗ ಇದನ್ನು ಮುಖ್ಯವಾಗಿ ಔಷಧಿಗಳಿಗೆ ಮಾತ್ರ ಉಪಯೋಗಿಸುವರು.

**ಹೊಗೆಯಸೊಪ್ಪು.**—ಬಂಗಾಳಾ ಮತ್ತು ಸಂಯುಕ್ತ ಪ್ರಾಂತಗಳಲ್ಲಿಯೂ, ಕೃಷ್ಣಾ, ಗೋದಾವರಿ ನದಿಗಳಲ್ಲಿರುವ ಸಣ್ಣ ಸಣ್ಣ ದ್ವೀಪಗಳಲ್ಲಿಯೂ ವಿಶೇಷವಾಗಿ ಬೆಳೆಯುತ್ತದೆ.

**ಸಣಬು.**—ಇದು ಭೂಮಿಯ ಸಾರವನ್ನು ಬಹಳ ಬೇಗ ಹೀರಿಕೊಳ್ಳುವುದರಿಂದ ಬಹಳ ಫಲವತ್ತಾದ ಬಂಗಾಳಾ ದೇಶದಲ್ಲಿ ಮಾತ್ರ ವಿಶೇಷವಾಗಿ ಬೆಳೆಯುವುದು.

**ಪ್ರಾಣಿಗಳು.**—ಉಷ್ಣವಲಯದ **ದುಷ್ಟ ಮೃಗಗಳು** ಈ ದೇಶದ ಕಾಡುಗಳಲ್ಲಿ ಅನೇಕವಾಗಿವೆ. ಸಿಂಹವು ಗುಜರಾತಿನಲ್ಲಿ ಮಾತ್ರ ಇರುವುದು. ಆನೆ ಬಂಗಾಳದಲ್ಲಿಯೂ, ಮೈಸೂರು ಸೀಮೆಯಲ್ಲಿಯೂ ಇರುವುದು. ಘೇಂಡಾಮೃಗವು ಜೌಗಿನ ಪ್ರದೇಶಗಳಲ್ಲಿಯೂ, ಮುಖ್ಯವಾಗಿ ಬಂಗಾಳಾದಲ್ಲಿಯೂ ವಿಶೇಷವಾಗಿರುವುದು. ಹುಲಿ, ಚಿರತೆ, ಕರಡಿ, ಕಾಡುಹಂದಿ, ಕಾಡುಕೋಣ, ತೋಳ, ನರಿ ಮೊದಲಾದ ಮೃಗಗಳು ಸಾಮಾನ್ಯವಾಗಿ ಎಲ್ಲಾ ಕಡೆಗಳಲ್ಲಿಯೂ ಇರುವುವು.

ಕಾಡುಕತ್ತೆಗಳು ಸಿಂಧೂ ದೇಶದಲ್ಲಿಯೂ, ಕಾಡುಮೇಕೆಗಳೂ, ಕಸ್ತೂರೀ ಮೃಗವೂ ಹಿಮಾಲಯದ ತಪ್ಪಲುಗಳಲ್ಲಿಯೂ ಇವೆ. ಜಿಂಕೆಗಳೂ, ಕೋತಿಗಳೂ, ಪಕ್ಷಿಗಳೂ, ಸರ್ಪಗಳೂ, ಕ್ರಿಮಿಗಳೂ ಎಲ್ಲಾ ಭಾಗಗಳಲ್ಲಿಯೂ ಇವೆ. ಸಮುದ್ರ, ನದಿ, ಕೆರೆಗಳಲ್ಲಿ ಮೊಸಳೆಗಳೂ, ಮೀನುಗಳೂ ಇವೆ. **ಮೀನು** ಹಿಡಿಯುವುದರಿಂದ ಸಾವಿರಾರು ಜನರು ಜೀವನಮಾಡುತ್ತಾರೆ. ಆದರೆ ಯೂರೋಪ್ ಖಂಡದ ನದಿಗಳಲ್ಲಿ ಸಿಕ್ಕುವಷ್ಟು ಮೀನು ನಮ್ಮ ದೇಶದ ನದಿಗಳಲ್ಲಿ ಸಿಕ್ಕುವುದಿಲ್ಲ.

ಪಾಕ್ ಜಲಸಂಧಿಯ ಬಳಿ ಮುತ್ತಿನ ಚಿಪ್ಪುಗಳು ವಿಶೇಷವಾಗಿ ಸಿಕ್ಕುತ್ತವೆ. ಅಸ್ಸಾಮಿನ ಕಾಡುಗಳಲ್ಲಿ ರೇಷ್ಮೆ ಹುಳುಗಳು ವಿಶೇಷವಾಗಿರುವುವು. ಇವುಗಳ ಗೂಡುಗಳಿಂದ ಟಸ್ಸರ್ ಎಂಬ ಒರಟಾದ ರೇಷ್ಮೆ ದೊರೆಯುವುದು. ಅನೇಕ ಕಡೆ ರೇಷ್ಮೆ ಹುಳುಗಳನ್ನು ಸಾಕುವರು. ಕಾಡುಗಳಲ್ಲಿ ಅರಗಿನ ಹುಳುಗಳು ಅರಗನ್ನೂ, ಜೇನುಹುಳುಗಳು ಜೇನುತುಪ್ಪವನ್ನೂ ಕೊಡುತ್ತವೆ.

ಈ ದೇಶದಲ್ಲಿ ಎಲ್ಲಾ ಸಾಧು ಮೃಗಗಳನ್ನೂ ಸಾಕುವರು. ಪಂಜಾಬ್, ಸಂಯುಕ್ತಪ್ರಾಂತ, ಮಧ್ಯಪ್ರಾಂತಗಳಲ್ಲಿ ವಿಶೇಷವಾಗಿ ಕುದುರೆಗಳನ್ನು ಸಾಕುತ್ತಾರೆ. ನಮ್ಮ ದೇಶದ ಕುದುರೆಗಳು ಉತ್ತಮವಾದುವಲ್ಲ. ಆದುದರಿಂದ ಆಸ್ಟ್ರೇಲಿಯ, ಅರೇಬಿಯ, ಪರ್ಷಿಯ ದೇಶಗಳಿಂದ ಒಳ್ಳೆಯ ಜಾತಿಯ ಕುದುರೆ

ಗಳನ್ನು ನಮ್ಮ ದೇಶಕ್ಕೆ ತರುವರು. ಸಿಂಧು ದೇಶ, ರಾಜಪುತ್ರಸ್ಥಾನ, ಪಂಜಾಬುಗಳಲ್ಲಿ ಒಂಟೆಗಳನ್ನು ಸವಾರಿಗೂ, ಹೊರೆಹೊರುವುದಕ್ಕೂ ವಿಶೇಷವಾಗಿ ಉಪಯೋಗಿಸುತ್ತಾರೆ. ಕತ್ತೆ, ದನ, ಎಮ್ಮೆ, ಆಡು, ಕುರಿಗಳನ್ನು ಸಾಮಾನ್ಯವಾಗಿ ಎಲ್ಲಾ ಕಡೆಗಳಲ್ಲಿಯೂ ಸಾಕುತ್ತಾರೆ. ಆದರೆ ಪಂಜಾಬಿನಲ್ಲಿ ಕತ್ತೆಗಳೂ ಮತ್ತು ಹೇಸರಕತ್ತೆಗಳೂ, ಮದ್ರಾಸಿನಲ್ಲಿ ಕುರಿಗಳೂ, ಹಿಮಾಲಯ ಪರ್ವತಗಳ ತಪ್ಪಲುಗಳಲ್ಲಿ ಆಡುಗಳೂ ವಿಶೇಷವಾಗಿವೆ.

ದನದ ತೊಗಲನ್ನೂ ಕುರಿಯ ಉಣ್ಣೆಯನ್ನೂ ಈ ದೇಶದಿಂದ ಸಾಮಾನ್ಯವಾಗಿ ಇಂಗ್ಲೆಂಡು ಮೊದಲಾದ ದೇಶಗಳಿಗೆ ರಫ್ತು ಮಾಡುತ್ತಾರೆ. ಇವುಗಳನ್ನು ಸ್ವಲ್ಪಮಟ್ಟಿಗೆ ಮಾತ್ರ ಇಲ್ಲಿಯೇ ಉಪಯೋಗಿಸಿಕೊಂಡು, ತೊಗಲಿನ ಸಾಮಾನುಗಳನ್ನೂ, ಉಣ್ಣೆಯ ಬಟ್ಟೆಗಳನ್ನೂ ತಯಾರುಮಾಡುವರು.

**ಖನಿಜಗಳು.**—ಇಂಗ್ಲೆಂಡು, ಚೀಣ ಮೊದಲಾದ ದೇಶಗಳಲ್ಲಿರುವಷ್ಟು ಖನಿಜಗಳು ನಮ್ಮ ದೇಶದಲ್ಲಿಲ್ಲ. ಇಲ್ಲಿನ ಜನರಿಗೆ ಇರುವ ಖನಿಜಗಳನ್ನು ತೆಗೆಯುವುದಕ್ಕೆ ಕುಶಲತೆಯೂ, ಬಂಡವಾಳವೂ, ಅನುಕೂಲವೂ ಸಾಲದು.

ಮೈಸೂರು ದೇಶಕ್ಕೆ ಸೇರಿದ ಕೋಲಾರದಲ್ಲಿ ಭಾರಿಯ ಯಂತ್ರಗಳನ್ನು ಉಪಯೋಗಿಸಿ 5,000 ಅಡಿ ಆಳದವರೆಗೂ ಗಣಿಗಳನ್ನು ತೋಡಿ ಚಿನ್ನದ ಅದುರನ್ನು ತೆಗೆದು, ಅದನ್ನು ಪುಡಿಮಾಡಿ, ಜಾಲಿಸಿ **ಚಿನ್ನ**ವನ್ನು ಪ್ರತ್ಯೇಕಿಸುವರು. ಈ ಕೆಲಸವು ಮುಖ್ಯವಾಗಿ ಯೂರೋಪಿಯನ್ ಜನರ ಕೈಯಲ್ಲಿರುವುದು. ವಜ್ರಗಳು ಅಪೂರ್ವವಾಗಿ ಗೋದಾವರೀ ತೀರದಲ್ಲಿ ಸಿಕ್ಕುವುವು. ಬಂಗಾಳದಲ್ಲಿ **ಪೆಟ್ಲುಪ್ಪು** ಸಿಕ್ಕುವುದು. ಅಸ್ಸಾಮಿನಲ್ಲಿ ಈಚೆಗೆ **ಸೀಮೆಯೆಣ್ಣೆ**ಯ ಬಾವಿಗಳು ಸಿಕ್ಕಿವೆ. ಉಕ್ಕು ಮಾಡುವುದಕ್ಕೆ ಉಪಯೋಗವಾಗುವ **ಮ್ಯಾಂಗನೀಸ್** ಎಂಬ ಲೋಹವು ಮದ್ರಾಸು, ಮಧ್ಯಪ್ರಾಂತ, ಮೈಸೂರು ಸೀಮೆಗಳಲ್ಲಿ ಸಿಕ್ಕಿರುತ್ತದೆ. ಇದು ಗಂಜಾಂ ಜಿಲ್ಲೆಯಲ್ಲಿರುವ ಗೋಪಾಲಪುರದ ಗಣಿಗಳಲ್ಲಿ ಸಿಕ್ಕುವಷ್ಟು ಪ್ರಪಂಚದಲ್ಲಿ ಇನ್ನಾವ ಗಣಿಗಳಲ್ಲಿಯೂ ಸಿಕ್ಕುವುದಿಲ್ಲ.

ಈ ದೇಶದ ಎಲ್ಲಾ ಭಾಗಗಳಲ್ಲಿಯೂ **ಕಬ್ಬಿಣದ** ಅದುರು ಸಿಕ್ಕುವುದು. ಆದರೆ ಕಬ್ಬಿಣವನ್ನು ತಯಾರುಮಾಡಲು ಕಬ್ಬಿಣದ ಗಣಿಗಳ ಸಮೀಪದಲ್ಲಿಯೇ ಕಲ್ಲಿದ್ದಲೂ ಸುಣ್ಣಕಲ್ಲೂ ಸಿಕ್ಕುವುದು ಅಪೂರ್ವ. ಬಂಗಾಳದ ರಾಣಿಗಂಜ್ ಡಿಸ್ಟ್ರಿಕ್ಟಿನಲ್ಲಿ ಮಾತ್ರ ಕಬ್ಬಿಣ ಕಲ್ಲಿದ್ದಲುಗಳು ಸಮೀಪದಲ್ಲಿಯೇ ಸಿಕ್ಕಿವೆ. ಇದರಿಂದ ಅಲ್ಲಿ ಅನೇಕ ವರ್ಷಗಳಿಂದಲೂ ಕಬ್ಬಿಣವನ್ನು ತಯಾರುಮಾಡುತ್ತಿರುವರು. ಈಚೆಗೆ ತಾತಾ ಕಂಪೆನಿಯವರು ಮಧ್ಯಪ್ರಾಂತಗಳಲ್ಲಿರುವ ಸಾಕ್ಚಿ ಎಂಬ ಸ್ಥಳದಲ್ಲಿ ಉಕ್ಕನ್ನು ತಯಾರುಮಾಡಿಸುತ್ತಿರುವರು. **ಕಲ್ಲಿದ್ದಲು** ಬಂಗಾಳದಲ್ಲಲ್ಲದೆ ಮಧ್ಯಪ್ರಾಂತದ ವರೋರ ಎಂಬ ಸ್ಥಳದಲ್ಲಿಯೂ, ನರ್ಮದಾ ನದಿಯ

ಬೈಲಿನಲ್ಲಿಯೂ ಹೈದರಾಬಾದಿನ ಸಿಂಗರೇಣಿ ಎಂಬ ಸ್ಥಳದಲ್ಲಿಯೂ ಸಿಕ್ಕಿದೆ. ಈ ದೇಶದಲ್ಲಿ ಸಿಕ್ಕುವ ಕಲ್ಲಿದ್ದಲನ್ನು ಮುಖ್ಯವಾಗಿ ರೈಲ್ವೆ ಕಂಪೆನಿಯವರೇ ಉಪಯೋಗಿಸುತ್ತಿರುವರು. ಆದರೆ ಇಲ್ಲಿ ಸಿಕ್ಕುವ ಕಲ್ಲಿದ್ದಲು ಸಾಲದುದರಿಂದ ಇಂಗ್ಲೆಂಡ್ ಮೊದಲಾದ ದೇಶಗಳಿಂದಲೂ ಕಲ್ಲಿದ್ದಲು ಈ ದೇಶಕ್ಕೆ ಆಮದಾಗುತ್ತಿರುವುದು.

ಸಮುದ್ರ ತೀರಗಳಲ್ಲಿಯೂ, ಸಾಂಬರ್ ಸರೋವರದ ತೀರದಲ್ಲಿಯೂ ಉಪ್ಪುನೀರಿನಿಂದ ಉಪ್ಪನ್ನು ತಯಾರುಮಾಡುತ್ತಾರೆ. ಸಾಲ್ಟ್ ರೇಂಜ್ ಅಥವಾ ಉಪ್ಪಿನ ಬೆಟ್ಟದಲ್ಲಿ ಉಪ್ಪಿನ ಹರಳುಗಳು ನೆಲದ ಮೇಲೆಯೇ ಸಿಕ್ಕುತ್ತವೆ. ಈ ದೇಶದಲ್ಲಿ ಸಿಕ್ಕುವ ಉಪ್ಪಿನ ಜೊತೆಗೆ ಇಂಗ್ಲೆಂಡು, ಅರೇಬಿಯ ದೇಶಗಳಿಂದಲೂ ಉಪ್ಪು ಆಮದಾಗುತ್ತಿರುವುದು.

**ಕೈಗಾರಿಕೆಗಳು.**—ಹಿಂದಿನ ಕಾಲದಲ್ಲಿ ಈ ದೇಶವು ಕೈವಾಡ ಬಣ್ಣಾಂತರ ಕೈಗಾರಿಕೆಗಳಿಗೂ, ಕುಶಲವಿದ್ಯೆಗಳಿಗೂ ಬಹು ಪ್ರಸಿದ್ಧಿಯನ್ನು ಪಡೆದಿತ್ತು. ಢಾಕಾ ಪಟ್ಟಣದಲ್ಲಿ ತಯಾರಾಗುತ್ತಿದ್ದ ಬಹು ಸೂಕ್ಷ್ಮವಾದ ಮಸ್ಲಿನ್ ಬಟ್ಟೆಗಳು 'ನೆಯ್ದ ಗಾಳಿಯ ಪೊರೆ' ಎನ್ನಿಸಿಕೊಂಡು ಯೂರೊಪಿನಲ್ಲೆಲ್ಲಾ ಪ್ರಸಿದ್ಧವಾಗಿದ್ದುವು. ಇದಲ್ಲದೆ ರೇಷ್ಮೆಯ ಬಟ್ಟೆಗಳನ್ನು ನೇಯುವುದು, ಮರದಲ್ಲಿ ಕೆತ್ತಿನೆಯ ವಿಗ್ರಹಗಳನ್ನು ಮಾಡುವುದು, ಚಿನ್ನ, ಬೆಳ್ಳಿ, ದಂತಗಳ ಕೆಲಸವನ್ನು ಮಾಡುವುದು ಮೊದಲಾದ ಅನೇಕ ಕೈಗಾರಿಕೆಗಳಲ್ಲಿ ನಮ್ಮ ಜನರು ಹೆಸರುವಾಸಿಯನ್ನು ಪಡೆದಿದ್ದರು. ಸುಮಾರು 100 ವರ್ಷದಿಂದೀಚೆಗೆ ಈ ಕೈಗಾರಿಕೆಗಳಲ್ಲಿ ಅನೇಕವು ಕ್ಷೀಣಗತಿಗೆ ಬಂದಿವೆ. ಯೂರೊಪು ಖಂಡದಲ್ಲಿ ಅನೇಕ ಬಗೆಯ ಹಬೆಯ ಯಂತ್ರಗಳನ್ನು ನಿರ್ಮಿಸಿ ಅವುಗಳ ಸಹಾಯದಿಂದ ಪದಾರ್ಥಗಳನ್ನು ಜಾಗ್ರುತೆಯಾಗಿಯೂ, ಅಗ್ಗವಾಗಿಯೂ ತಯಾರುಮಾಡುತ್ತಿರುವರು. ಈ ಅಗ್ಗವಾದ ಸಾಮಾನುಗಳು ನಮ್ಮ ದೇಶಕ್ಕೆ ಆಮದಾಗುತ್ತಿರುವುದರಿಂದ ಇಲ್ಲಿ ಕೈಯಿಂದ ಮಾಡಿದ ಸ್ವದೇಶಿ ಸಾಮಾನುಗಳಿಗೆ ಗಿರಾಕಿಯಿಲ್ಲದೆಹೋಗಿ ನಮ್ಮ ಈ ಕೈಗಾರಿಕೆಗಳು ಮೂಲೆಗೆ ಬಿದ್ದುವು. ಈಚೆಗೆ ನಮ್ಮ ದೇಶದಲ್ಲಿಯೂ ಹಬೆಯ ಯಂತ್ರಗಳ ಸಹಾಯದಿಂದ ಬಟ್ಟೆ ಮೊದಲಾದ ಸಾಮಾನುಗಳನ್ನು ತಯಾರುಮಾಡುತ್ತಿರುವರು.

ನಮ್ಮ ದೇಶದಲ್ಲಿ ಈಗಲೂ ಕೂಡ **ಕೈವಾಡ ಬಣ್ಣಾಂತರದ ಕೈಗಾರಿಕೆಗಳು** ಸ್ವಲ್ಪ ಮಟ್ಟಿಗೆ ನಡೆಯುತ್ತಲಿವೆ. ಇವು ಮುಖ್ಯವಾಗಿ ಹಿಂದಿನ ಕಾಲದ ರಾಜಧಾನಿಗಳಲ್ಲಿಯೂ, ಯಾತ್ರಾಸ್ಥಳಗಳಲ್ಲಿಯೂ ನೆಲೆಗೊಂಡಿವೆ. ಇವುಗಳಲ್ಲಿ ಮುಖ್ಯವಾದುವನ್ನು ಕೆಳಗೆ ವಿವರಿಸಿದೆ:—

**ರೇಷ್ಮೆಯ ಬಟ್ಟೆಗಳು.**—ಬಂಗಾಳ, ಗುಜರಾತ್ ಪ್ರಾಂತಗಳಲ್ಲಿಯೂ ಪೂನ, ಬೆಂಗಳೂರು, ಕಂಚಿ, ಮಧುರೆ, ಕುಂಬಕೋಣ ಈ ಪಟ್ಟಣಗಳಲ್ಲಿಯೂ

ತಯಾರಾಗುತ್ತವೆ. ನಾಜೋಕಾದ ಸೀರೆ, ರುಮಾಲು, ಮುಗುಟ ಮೊದಲಾದು ವನ್ನು ಮಾಡುವುದಕ್ಕೆ ಹಸ್ತಕೌಶಲವು ಹೆಚ್ಚಾಗಿ ಬೇಕಾಗಿರುವುದರಿಂದ ಇವು ಗಳನ್ನು ಯಂತ್ರಗಳಿಂದ ಅಗ್ಗವಾಗಿ ತಯಾರುಮಾಡುವುದು ಕಷ್ಟ. ಆದುದರಿಂದ ಇವನ್ನು ಈಗಲೂ ಕೈಯಿಂದಲೇ ತಯಾರುಮಾಡುತ್ತಿರುವರು.

**ಉಣ್ಣೆಯ ಬಟ್ಟೆಗಳು.**—ಇವು ಅನೇಕ ಕಡೆಗಳಲ್ಲಿ ತಯಾರಾಗುವುವು. ಅನೇಕ ಊರುಗಳಲ್ಲಿ ಕಂಬಳಿಗಳನ್ನು ತಯಾರುಮಾಡುವರು. ಮೈಸೂರು ದೇಶದ ದಾವಣಗೆರೆಯ ಕಂಬಳಿಗಳು 200 ರೂಪಾಯಿಗಳವರೆಗೂ ಬೆಲೆ ಬಾಳು ತ್ತವೆಯಾದುದರಿಂದ ಲೋಕಪ್ರಸಿದ್ಧವಾಗಿವೆ. ಪೂರ್ವದಲ್ಲಿ ಕಾಶ್ಮೀರದಲ್ಲಿ ಆಡಿನ ಉಣ್ಣೆಯಿಂದ ಅತ್ಯುತ್ತಮವಾದ ಶಾಲುಗಳನ್ನು ಮಾಡುತ್ತಿದ್ದರು. ಈಚೆಗೆ ಯೂರೊಪಿನಿಂದ ಬರುವ ಅಗ್ಗವಾದ ಶಾಲುಗಳು ಹೆಚ್ಚಿ ಕಾಶ್ಮೀರದಲ್ಲಿ ಶಾಲು ಗಳು ತಯಾರಾಗುವುದು ಬಹಳ ಕಡಿಮೆಯಾಗಿದೆ. ಮದ್ರಾಸಾಧಿಪತ್ಯದ ಎಲ್ಲೋರು ಮತ್ತು ಮಚಲೀಬಂದರುಗಳಲ್ಲಿಯೂ, ಬೆಂಗಳೂರಿನಲ್ಲಿಯೂ ಉಣ್ಣೆ ಯಿಂದ ರತ್ನಕಂಬಳಿಗಳನ್ನು ಮಾಡುತ್ತಾರೆ.

ಒರಟಾದ ಹಚ್ಚಡದಂತಹ **ಹತ್ತಿಯ ಬಟ್ಟೆಗಳು** ಈಗಲೂ ಅಲ್ಲಲ್ಲಿ ಸ್ವಲ್ಪ ಮಟ್ಟಿಗೆ ಕೈಮಗ್ಗಗಳಿಂದಲೇ ತಯಾರಾಗುತ್ತಿವೆ.

ಹಿತ್ತಾಳೆ, ತಾಮ್ರದ ಪಾತ್ರೆಗಳನ್ನು ಮಾಡುವುದೂ, ಚಿನ್ನ, ಬೆಳ್ಳಿಯ ಒಡವೆಗಳನ್ನು ಮಾಡುವುದೂ, ಮರದ ಕೆಲಸವೂ ಸಾಮಾನ್ಯವಾಗಿ ಎಲ್ಲಾ ದೊಡ್ಡ ಪಟ್ಟಣಗಳಲ್ಲಿಯೂ ನಡೆಯುತ್ತಿವೆ. ಮೈಸೂರು ಸೀಮೆಯ ಸೊರಬ, ಸಾಗರ ಗಳಲ್ಲಿರುವ ಗೂಡಿಗರು ಮಾಡುವ ಗಂಧದಮರದ ಕೆತ್ತನೆಯ ಸಾಮಾನುಗಳು ಲೋಕಪ್ರಸಿದ್ಧವಾಗಿವೆ. ಅಮೃತಸರ, ಕಾಶಿ, ಮುರ್ಷಿದಾಬಾದ್, ವಿಶಾಖ ಪಟ್ಟಣಗಳು **ದಂತದ ಕೆಲಸಕ್ಕೆ** ಪ್ರಸಿದ್ಧವಾಗಿವೆ.

ಮಡಕೆಗಳನ್ನೂ, ಹೆಂಚುಗಳನ್ನೂ ಸಾಮಾನ್ಯವಾಗಿ ಎಲ್ಲಾ ಕಡೆಗಳಲ್ಲಿಯೂ ಮಾಡುತ್ತಾರೆ. ಸಿಂಧೂದೇಶದಲ್ಲಿ ಪೊರ್ಸಿಲೇನ್ ಎಂಬ ಮಣ್ಣಿನ ಪಾತ್ರೆಗಳು ಸ್ವಲ್ಪ ಮಟ್ಟಿಗೆ ತಯಾರಾಗುತ್ತವೆ.

ಈ ದೇಶದ ಹಬೆಯ ಯಂತ್ರಗಳ ಸಹಾಯದಿಂದ ದೊಡ್ಡ ಕಾರ್ಖಾನೆ ಗಳಲ್ಲಿ ನಡೆಯುವ ಕೈಗಾರಿಕೆಗಳು ಆವುವೆಂಬುದನ್ನು ಈಗ ವಿಚಾರಿಸೋಣ. ಈ ಕೈಗಾರಿಕೆಗಳನ್ನು ನಡೆಯಿಸಲು ವಿಶೇಷ ಬಂಡವಾಳವೂ, ಶಾಸ್ತ್ರಜ್ಞಾನವೂ, ಕಾರ್ಯದಕ್ಷತೆಯೂ ಬೇಕು. ನಮ್ಮ ದೇಶದಲ್ಲಿರುವ ದೊಡ್ಡ ಕಾರ್ಖಾನೆಗಳಲ್ಲಿ ಅನೇಕವು ಯೂರೋಪಿಯನ್ನರ ಅಥವಾ ಪಾರ್ಸಿ ಜನರ ಕೈಯಲ್ಲಿರುವುವು.

ಈ ಕಾರ್ಖಾನೆಗಳಲ್ಲಿ **ಹತ್ತಿಯ ಬಟ್ಟೆಗಳನ್ನು** ಮಾಡುವ ಕಾರ್ಖಾನೆಗಳೇ ವಿಶೇಷವಾಗಿವೆ. ಬೊಂಬಾಯಿ ಪಟ್ಟಣದಲ್ಲಿ ಇಂತಹ ಕಾರ್ಖಾನೆಗಳು ನೂರಾರು

ಇರುವುವು. ಈ ಪಟ್ಟಣಕ್ಕೆ ಸಮೀಪದಲ್ಲಿ ಹತ್ತಿಯೂ ಸಿಕ್ಕುವುದು. ಇಲ್ಲಿನ ಗಾಳಿಯಲ್ಲಿ ತೇವವೂ ಹೆಚ್ಚಾಗಿರುವುದು. ಈಚೆಗೆ ಅಹಮದಾಬಾದ್, ಕಾನ್ಪುರ, ಕಲ್ಕತ್ತ, ಬೆಂಗಳೂರು ಮೊದಲಾದ ಇತರ ಸ್ಥಳಗಳಲ್ಲಿಯೂ ಕೆಲವು ಕಾರ್ಖಾನೆಗಳನ್ನಿಟ್ಟಿರುವರು. ಈ ದೇಶದಲ್ಲಿ ತಯಾರಾಗುವ ಬಟ್ಟು ಹತ್ತಿಯ ಬಟ್ಟೆಗಳು ನಮ್ಮ ಜನರ ಉಪಯೋಗಕ್ಕೆ ಸಾಲದು. ಅಲ್ಲದೆ ಹಸನಾದ ಬಟ್ಟೆಗಳು ಇಲ್ಲಿ ತಯಾರಾಗುವುದಿಲ್ಲ. ಆದುದರಿಂದ ನಮ್ಮ ದೇಶಕ್ಕೆ ಆಮದಾಗುವ ಸರಕುಗಳ ಪಟ್ಟಿಯಲ್ಲಿ ಇಂಗ್ಲೆಂಡಿನಿಂದ ಬರುವ ಹತ್ತಿಯ ಬಟ್ಟೆಗಳು ಅಗ್ರಸ್ಥಾನವನ್ನು ಹೊಂದಿವೆ.

ಕಾನ್ಪುರದಲ್ಲಿ **ಉಣ್ಣೆಯ ಬಟ್ಟೆ**ಗಳನ್ನು ಮಾಡುವ ಕಾರ್ಖಾನೆಗಳೂ, ಕಲ್ಕತ್ತೆಯಲ್ಲಿ ಸಣಬಿನಿಂದ **ಗೋಣಿಯ ಚೀಲ**ಗಳನ್ನು ಮಾಡುವ ಕಾರ್ಖಾನೆಗಳೂ ವಿಶೇಷವಾಗಿವೆ.

ಇವುಗಳಲ್ಲದೆ ಅನೇಕವಾದ ದೊಡ್ಡ ಪಟ್ಟಣಗಳಲ್ಲಿ ಕಾಗದ, ಸಕ್ಕರೆ, ತೊಗಲಿನ ಸಾಮಾನು, ಮಂಗಳೂರು ಹೆಂಚು ಮೊದಲಾದುವನ್ನು ತಯಾರು ಮಾಡುವ ಕಾರ್ಖಾನೆಗಳೂ, ಅಚ್ಚಿನ ಕಾರ್ಖಾನೆಗಳೂ ಏರ್ಪಾಡಾಗಿವೆ. ಗೋಧಿಯ ಹಿಟ್ಟನ್ನು ಬೀಸುವ ಯಂತ್ರಗಳೂ, ಬತ್ತವನ್ನು ಕುಟ್ಟುವ ಯಂತ್ರಗಳೂ, ಹತ್ತಿಯನ್ನು ಬಿಡಿಸುವ ಯಂತ್ರಗಳೂ ಅನೇಕ ಸ್ಥಳಗಳಲ್ಲಿ ಇಡಲ್ಪಟ್ಟಿವೆ. ಸುಮಾರು 50 ವರ್ಷಗಳಿಂದೀಚೆಗೆ ನಮ್ಮ ದೇಶದಲ್ಲಿ ಸಾವಿರಾರು ಕಾರ್ಖಾನೆಗಳು ಏರ್ಪಾಡಾಗಿವೆ.

**ವ್ಯಾಪಾರ.**—ಪೂರ್ವ ಕಾಲದಲ್ಲಿ ಪ್ರತಿ ಗ್ರಾಮದ ಜನರಿಗೆ ಬೇಕಾದ ಸಾಮಾನುಗಳನ್ನು ಸಾಮಾನ್ಯವಾಗಿ ಆ ಗ್ರಾಮದವರೇ ಬೆಳೆಯುತ್ತಿದ್ದರು ಅಥವಾ ತಯಾರುಮಾಡುತ್ತಿದ್ದರು. ಅನುಕೂಲವಾದ ರಸ್ತೆಗಳಿರಲಿಲ್ಲವಾದುದರಿಂದ ಆ ಕಾಲದಲ್ಲಿ ಒಳದೇಶದ ವ್ಯಾಪಾರವು ಹೆಚ್ಚಾಗಿ ನಡೆಯುತ್ತಿರಲಿಲ್ಲ. ಈಚೆಗೆ ಉತ್ತಮವಾದ ಗಾಡಿಯ ರಸ್ತೆಗಳೂ, ರೈಲು ಮಾರ್ಗಗಳೂ ಅನೇಕವಾಗಿ ಏರ್ಪಟ್ಟಿವೆ. ಒಂದು ಭಾಗದ ವರ್ತಮಾನವನ್ನು ಇನ್ನೊಂದು ಭಾಗಕ್ಕೆ ಕಳುಹಿಸುವುದಕ್ಕೆ ಅಂಚೆ ಮತ್ತು ತಂತಿ ಇಲಾಖೆಗಳು ಏರ್ಪಾಡಾಗಿವೆ. ಆದುದರಿಂದ ಒಳದೇಶದ ವ್ಯಾಪಾರವು ಈಗ ಹೆಚ್ಚಿದೆ. ಇದಲ್ಲದೆ ಮದರಾಸು ಮೊದಲಾದ ರೇವು ಪಟ್ಟಣಗಳಲ್ಲಿ ಹಡಗುಗಳಿಗಾಗಿ ಬಂದರುಗಳನ್ನು ಅನುಕೂಲಪಡಿಸಿರುವರು. ಇಂಗ್ಲೆಂಡು ದೇಶದ ಅನೇಕ ಹಡಗುಗಳು ನಮ್ಮ ದೇಶದ ವ್ಯಾಪಾರದ ಸರಕುಗಳನ್ನು ಸಾಗಿಸುತ್ತಲಿವೆ. ಈಗ ದೇಶದಲ್ಲಿ ಕಳ್ಳಕಾಕರ ಭೀತಿಯಾಗಲಿ, ಯುದ್ಧಗಳ ಭೀತಿಯಾಗಲಿ ಇರುವುದಿಲ್ಲ. ಆದುದರಿಂದ ಈಚೆಗೆ ನಮ್ಮ ದೇಶದವರೂ, ಪರದೇಶದವರೂ ಮಾಡುವ ವ್ಯಾಪಾರವು ಅಭಿವೃದ್ಧಿಯಾಗುತ್ತಿರುವುದು.

ಇಂಡಿಯಾದೇಶದಲ್ಲಿ ಕೃಷಿಯೇ ಜನರ ಮುಖ್ಯೋದ್ಯೋಗವಾಗಿದೆ. ಆದುದರಿಂದ ಇಲ್ಲಿಂದ ಧಾನ್ಯಗಳೂ, ಕೈಗಾರಿಕೆಗೆ ಬೇಕಾದ ಹತ್ತಿ ಮೊದಲಾದ ಸಾಮಾನುಗಳೂ ವಿಶೇಷವಾಗಿ ರಫ್ತಾಗುತ್ತವೆ. ಹತ್ತಿ, ಹತ್ತಿಯ ನೂಲು ಮತ್ತು ಒರಟಾದ ಬಟ್ಟೆಗಳು, ಸಣಬು ಮತ್ತು ಗೋಣಿಯ ಚೀಲಗಳು, ಅಕ್ಕಿ, ಎಣ್ಣೆಯ ಬೀಜಗಳು, ಗೋಧಿ, ತೊಗಲು, ಟೀಯಲೆ, ಕಾಫಿ, ಉಣ್ಣೆ, ಚಿನ್ನ, ಅಫೀಮು —ಇವು ಮುಖ್ಯವಾಗಿ ರಫ್ತಾಗುವ ಸರಕುಗಳು. ಈ ಸರಕುಗಳಲ್ಲಿ ಹತ್ತಿಯ ನೂಲು ಮತ್ತು ಬಟ್ಟೆಗಳು, ಗೋಣಿಯ ಚೀಲಗಳು, ಅಫೀಮು ಇವು ವಿನಾ ಇತರ ಸರಕುಗಳೆಲ್ಲ ಮುಖ್ಯವಾಗಿ ಬ್ರಿಟಿಷ್ ದ್ವೀಪಗಳಿಗೆ ರಫ್ತಾಗುವುವು. ಯೂರೊಪು ಖಂಡದ ಇತರ ದೇಶಗಳಿಗೂ, ಅಮೆರಿಕದ ಸಂಯುಕ್ತ ಸಂಸ್ಥಾನಗಳಿಗೂ ಸ್ವಲ್ಪಮಟ್ಟಿಗೆ ಹೋಗುವುವು. ಹತ್ತಿಯ ನೂಲು ಮತ್ತು ಬಟ್ಟೆಗಳು ಚೀಣಾದೇಶಕ್ಕೂ, ಪೂರ್ವ ಆಫ್ರಿಕಾ ಖಂಡಕ್ಕೂ ರಫ್ತಾಗುತ್ತವೆ. ಅಫೀಮು ಚೀಣಾದೇಶಕ್ಕೆ ರಫ್ತಾಗುತ್ತದೆ; ಆದರೆ ಈಚೆಗೆ ಇದು ಕಡಿಮೆಯಾಗಿದೆ. ಗೋಣಿಯ ಚೀಲಗಳು ಧಾನ್ಯಗಳನ್ನು ರಫ್ತು ಮಾಡುವ ಆಸ್ಟ್ರೇಲಿಯ, ಸಂಯುಕ್ತ ಸಂಸ್ಥಾನ, ಅರ್ಜೆಂಟೈನ ದೇಶಗಳಿಗೆ ವಿಶೇಷವಾಗಿ ರಫ್ತಾಗುತ್ತವೆ.

ಹತ್ತಿಯ ಬಟ್ಟೆ, ಕಬ್ಬಿಣದ ಸಾಮಾನು, ಯಂತ್ರಗಳು, ಕಲ್ಲಿದ್ದಲು, ಉಣ್ಣೆಯ ಬಟ್ಟೆ, ಸಾರಾಯಿ ಮತ್ತು ತೊಗಲಿನ ಸಾಮಾನು ಬ್ರಿಟಿಷ್ ದ್ವೀಪಗಳಿಂದ ನಮ್ಮ ದೇಶಕ್ಕೆ ಆಮದಾಗುತ್ತವೆ. ಸಕ್ಕರೆ ಫ್ರಾನ್ಸ್, ಜರ್ಮನಿ ದೇಶಗಳಿಂದಲೂ, ಮಾರಿಷಸ್ ಮತ್ತು ಜಾವಾ ದ್ವೀಪಗಳಿಂದಲೂ, ಸೀಮೆಯೆಣ್ಣೆಯು ಬರ್ಮ, ರಷ್ಯ, ಸಂಯುಕ್ತ ಸಂಸ್ಥಾನಗಳಿಂದಲೂ, ರೇಷ್ಮೆಯ ಬಟ್ಟೆಗಳು ಚೀಣ, ಫ್ರಾನ್ಸ್ ದೇಶಗಳಿಂದಲೂ, ಚಿನ್ನವು ಆಸ್ಟ್ರೇಲಿಯದಿಂದಲೂ, ಬೆಳ್ಳಿಯು ಮೆಕ್ಸಿಕೋ ದೇಶದಿಂದಲೂ ಇಲ್ಲಿಗೆ ಬರುತ್ತವೆ. ಆಸ್ಟ್ರೇಲಿಯ, ಪರ್ಷಿಯ, ಅಫ್ಘಾನಿಸ್ಥಾನಗಳಿಂದ ಕುದುರೆಗಳೂ, ಜಪಾನ್, ಸ್ವೀಡನ್‌ಗಳಿಂದ ದೀಪದ ಕಡ್ಡಿಗಳೂ, ಸಂಯುಕ್ತ ಸಂಸ್ಥಾನಗಳು, ಫ್ರಾನ್ಸ್, ಸ್ವಿಟ್ಜರ್ಲೆಂಡು ದೇಶಗಳಿಂದ ಗಡಿಯಾರಗಳೂ, ಬೆಲ್ಜಿಯಂ, ಆಸ್ಟ್ರಿಯ, ಜಪಾನ್ ದೇಶಗಳಿಂದ ಗಾಜಿನ ಸಾಮಾನೂ ಈ ದೇಶಕ್ಕೆ ಆಮದಾಗಿ ಬರುತ್ತಿವೆ.

ಈ ದೇಶದ ಒಟ್ಟು ಆಮದು ರಫ್ತುಗಳ ಬೆಲೆಯು ವರ್ಷಕ್ಕೆ ಸರಾಸರಿ ಸುಮಾರು 400 ಕೋಟಿ ರೂಪಾಯಿ. ಎಂದರೆ ಈ ದೇಶದ ವ್ಯಾಪಾರವು ಬ್ರಿಟಿಷ್ ದ್ವೀಪಗಳ ವ್ಯಾಪಾರದ ಕಾಲು ಪಾಲಿನಷ್ಟಿರುವುದು. ಈ ವ್ಯಾಪಾರವು ಬೊಂಬಾಯಿ ಮೊದಲಾದ ರೇವುಪಟ್ಟಣಗಳ ಮೂಲಕ ಸಮುದ್ರದ ಮಾರ್ಗವಾಗಿ ಬ್ರಿಟಿಷ್ ಹಡಗುಗಳಲ್ಲಿ ನಡೆಯುತ್ತದೆ. ಈ ವ್ಯಾಪಾರವನ್ನು ನಡೆಯಿಸಲು ವರ್ತಕರಲ್ಲಿ ವಿಶೇಷ ಬಂಡವಾಳವೂ, ಧೈರ್ಯವೂ ಬೇಕಾಗಿರುವುದರಿಂದ, ಯೂರೋಪಿ

ನವರು, ಪಾರ್ಸಿ ಜನರು, ಖೋಜಾ ಮುಸಲ್ಮಾನರು, ಗುಜರಾತಿಗಳೂ ಮಾತ್ರವೇ ವಿಶೇಷವಾಗಿ ಇತರ ದೇಶಗಳ ಸಂಗಡ ಒಟ್ಟು ವ್ಯಾಪಾರವನ್ನು ಮಾಡಿ ಧನಿಕರಾಗುತ್ತಿರುವರು. ಅಫ್ಘಾನಿಸ್ಥಾನ, ಪರ್ಷಿಯ ದೇಶಗಳ ಸಂಗಡ ಸ್ವಲ್ಪ ಮಟ್ಟಿಗೆ ಮಾತ್ರ ವ್ಯಾಪಾರವು ಭೂಮಾರ್ಗವಾಗಿ ನಡೆಯುತ್ತಿರುವುದು.

**ಮಾರ್ಗಗಳು; ಭೂಮಾರ್ಗಗಳು.**—ಹಿಂದಿನ ಕಾಲದಲ್ಲಿ ಈ ದೇಶದಲ್ಲಿ ಒಳ್ಳೆಯ ಗಾಡಿಯ ರಸ್ತೆಗಳು ಬಹು ವಿರಳವಾಗಿದ್ದುವು. ಅಶೋಕನೇ ಮೊದಲಾದ ಹಿಂದೂ ಚಕ್ರವರ್ತಿಗಳು ಉತ್ತರ ಇಂಡಿಯದಲ್ಲಿ ಒಂದು ಕೊನೆಯಿಂದ ಮತ್ತೊಂದು ಕೊನೆಯವರೆಗೂ ರಾಜಮಾರ್ಗಗಳನ್ನು ಏರ್ಪಡಿಸಿದ್ದರು. ಆದರೆ ಅವುಗಳ ಸಂಖ್ಯೆ ಮಾತ್ರ ಹೆಚ್ಚಾಗಿರಲಿಲ್ಲ. ಈಚೆಗೆ ಈ ದೇಶದ ಎಲ್ಲಾ ಭಾಗಗಳಲ್ಲಿಯೂ ಗಾಡಿಯ ರಸ್ತೆಗಳನ್ನು ಮಾಡಿಸಿ ಆಗಾಗ ಅವುಗಳಿಗೆ ಜಲ್ಲಿಯನ್ನೂ, ಸುಣ್ಣಕಲ್ಲನ್ನೂ ಹಾಕಿ ಮಟ್ಟಮಾಡಿಸಿ ಸರಿಯಾಗಿ ಇಟ್ಟಿರುವುದರಿಂದ ಎತ್ತಿನ ಗಾಡಿಗಳೂ, ಕುದುರೆಯ ಗಾಡಿಗಳೂ, ಮೋಟಾರುಗಳೂ ಸಂಚಾರಮಾಡಲು ಬಹು ಅನುಕೂಲವಾಗಿದೆ.

ರೈಲು ಗಾಡಿಗಳನ್ನು ಎಳೆದುಕೊಂಡು ಹೋಗುವ ಹೊಗೆಯ ಯಂತ್ರವನ್ನು ಇಂಗ್ಲೆಂಡ್ ದೇಶದ ಜಾರ್ಜ್ ಸ್ಟೀವನ್‌ಸನ್ ಎಂಬಾತನು 90 ವರ್ಷಗಳ ಹಿಂದೆ ಕಂಡುಹಿಡಿದನು. ಈ ದೇಶದಲ್ಲಿ ಲಾರ್ಡ್ ಡಾಲ್‌ಹೂಸಿಯವರ ಕಾಲದಲ್ಲಿ ಮೊದಲನೆಯ ಸಲ ರೈಲು ಮಾರ್ಗವು 1853ರಲ್ಲಿ ಹಾಕಲ್ಪಟ್ಟಿತು. ಈಗ 30,000 ಮೈಲಿಗಳಿಗಿಂತ ಹೆಚ್ಚು ರೈಲು ಮಾರ್ಗಗಳಿವೆ. ವಿಶೇಷ ವ್ಯಾಪಾರವೂ ಜನಸಂಚಾರವೂ ನಡೆಯುವ ಫಲವತ್ತಾದ ಮತ್ತು ಬಹು ಜನಸಾಂದ್ರತೆಯುಳ್ಳ ಗಂಗಾನದಿಯ ಮೈದಾನವೇ ಮೊದಲಾದ ಪ್ರದೇಶಗಳಲ್ಲಿ ರೈಲು ಮಾರ್ಗಗಳು ಹೆಚ್ಚಾಗಿವೆ. ಮುಖ್ಯವಾದ ಸಮುದ್ರ ತೀರದ ರೇವುಪಟ್ಟಣಗಳಿಂದ ಒಳದೇಶದ ವ್ಯಾಪಾರ ಸ್ಥಳಗಳಿಗೂ, ಆಗಾಗ ಕ್ಷಾಮವು ಬರುವ ರಾಜಪುತ್ರಸ್ಥಾನ ಮೊದಲಾದ ಪ್ರದೇಶಗಳಿಗೂ ರಾಜ್ಯಭಾರದ ಸೌಕರ್ಯಕ್ಕಾಗಿ ರಾಜಕೀಯ ಮುಖ್ಯ ಪಟ್ಟಣಗಳಿಗೂ, ಸೈನ್ಯದ ಅನುಕೂಲಕ್ಕಾಗಿ ವಾಯುವ್ಯದ ಸರಹದ್ದಿನ ಪ್ರದೇಶಗಳಿಗೂ ರೈಲು ಮಾರ್ಗಗಳು ಹೆಚ್ಚಾಗಿ ಕಲ್ಪಿತವಾಗಿರುವುವು. ನಮ್ಮ ದೇಶದ ಮುಖ್ಯವಾದ ರೈಲು ಮಾರ್ಗಗಳನ್ನೂ ಅವು ಹಾದುಹೋಗುವ ಮುಖ್ಯ ಪಟ್ಟಣಗಳನ್ನೂ ಭೂಪಟದಲ್ಲಿ ತೋರಿಸಿ; ಅವುಗಳ ನಕ್ಷೆಯನ್ನು ಬರೆಯಿರಿ. ಈ ಮಾರ್ಗಗಳಲ್ಲಿ ಪ್ರತಿಯೊಂದರ ಪ್ರಯೋಜನವು ಹೇಗಿರಬಹುದೆಂಬುದನ್ನು ವಿವರಿಸಿ.

**ಜಲಮಾರ್ಗಗಳು.**—ಹಿಮಾಲಯದ ನದಿಗಳು ಹಡಗುಗಳ ಮತ್ತು ದೋಣಿಗಳ ಸಂಚಾರಕ್ಕೆ ಮಟ್ಟಿಗೆ ಅನುಕೂಲವಾಗಿವೆ. ಗಂಗಾನದಿಯ ಮೇಲೆ ಸಣ್ಣ ಜಹಜುಗಳು ವಿಶೇಷವಾಗಿ ಸಂಚರಿಸುವುವು. ಬ್ರಹ್ಮಪುತ್ರಾ ನದಿಯ

ಮೇಲೂ, ಹಿಮಾಲಯದ ಇತರ ನದಿಗಳ ಮೇಲೂ ದೋಣಿಗಳು ಸಂಚರಿಸುವವು. ದಕ್ಷಿಣ ಇಂಡಿಯದ ನದಿಗಳಲ್ಲಿ ಅನೇಕ ತಿಂಗಳು ನೀರು ಕಡಿಮೆಯಾಗಿರುವುದರಿಂದಲೂ, ಬಂಡೆಗಳು ಹೆಚ್ಚಾಗಿರುವುದರಿಂದಲೂ ಸಾಮಾನ್ಯವಾಗಿ ದೋಣಿಗಳು ಸಂಚರಿಸಲಾರವು.

ಸೂಯೆಸ್ ಕಾಲುವೆ ನಿರ್ಮಾಣವಾಗುವುದಕ್ಕೆ ಮೊದಲು ಇಂಡಿಯಾದಿಂದ ಯೂರೋಪಿಗೆ ವ್ಯಾಪಾರವು ಕೆಲವು ಕಾಲ ಪರ್ಷಿಯ, ಅರೇಬಿಯಗಳ ಮೂಲಕ ಭೂಮಾರ್ಗವಾಗಿಯೂ, ಅನಂತರ ಗುಡ್‌ಹೋಪ್ ಭೂಶಿರದ ಮಾರ್ಗವಾಗಿ ಜಲಮಾರ್ಗವಾಗಿಯೂ ನಡೆಯುತ್ತಿತ್ತು. ಈಗ ಈ ವ್ಯಾಪಾರವೆಲ್ಲ ಸೂಯೆಸ್ ಕಾಲುವೆಯ ಮಾರ್ಗವಾಗಿಯೇ ನಡೆಯುವುದು. ಯೂರೋಪಿನೊಡನೆ ಅಲ್ಲದೆ ಇತರ ಖಂಡಗಳೊಡನೆಯೂ ಸ್ವಲ್ಪ ಮಟ್ಟಿಗೆ ವ್ಯಾಪಾರ ನಡೆಯುವುದು. ಬೊಂಬಾಯಿಯಿಂದ ಮಾರಿಷಸ್ ದ್ವೀಪ, ದಕ್ಷಿಣ ಆಫ್ರಿಕಗಳಿಗೂ, ಮದರಾಸು, ಕಲ್ಕತ್ತಗಳಿಂದ ಬರ್ಮ, ಚೀಣ, ಜಪಾನ್, ಆಸ್ಟ್ರೇಲಿಯಗಳಿಗೂ ವ್ಯಾಪಾರದ ಹಡಗುಗಳು ಸಂಚರಿಸುತ್ತಲಿರುವುವು. ತುತ್ತುಕುಡಿ, ನಾಗಪಟ್ಟಣಗಳಿಂದ ಸಿಂಹಳದ್ವೀಪದ ಸಂಗಡ ವ್ಯಾಪಾರವು ನಡೆಯುತ್ತಿರುವುದು. ಈ ದೇಶದ ತೀರಪ್ರದೇಶದಲ್ಲಿರುವ ಸಣ್ಣ ಸಣ್ಣ ಬಂದರುಗಳಲ್ಲಿ ಹಡಗುಗಳು ಸಾಮಾನುಗಳನ್ನು ಭರ್ತಿಮಾಡಿಕೊಂಡು ಬೊಂಬಾಯಿ ಮೊದಲಾದ ದೊಡ್ಡ ರೇವುಪಟ್ಟಣಗಳಿಗೆ ಸಾಗಿಸುತ್ತವೆ.

**ಅಂಚೆ ಮತ್ತು ತಂತಿ ಆಫೀಸ್.**—ವ್ಯಾಪಾರಕ್ಕೆ ಅನುಕೂಲವಾಗಿಯೂ, ಇತರ ವರ್ತಮಾನಗಳನ್ನು ಊರಿಂದೂರಿಗೆ ಕಳುಹಿಸುವುದಕ್ಕೂ ಅಂಚೆ ಮತ್ತು ತಂತಿ ಇಲಾಖೆಗಳು ಈ ದೇಶದಲ್ಲಿ ಈಚೆಗೆ ಏರ್ಪಾಡಾಗಿವೆ. ತಂತಿಯ ಆಫೀಸುಗಳು ಎಲ್ಲಾ ದೊಡ್ಡ ಪಟ್ಟಣಗಳಲ್ಲಿಯೂ ಇರುವುವು. ರೈಲ್ವೆಯ ಸ್ಟೇಷನ್ನುಗಳಿಗಂತೂ ತಂತಿ ಆಫೀಸ್ ಅತ್ಯಾವಶ್ಯಕ. ನೆಲದ ಮೇಲಿರುವ ಈ ಒಳದೇಶದ ತಂತಿಗಳಲ್ಲದೆ ಈ ದೇಶದಿಂದ ಇತರ ದೇಶಗಳಿಗೂ ಸಮುದ್ರದ ಅಡಿಯಲ್ಲಿ ತಂತಿಗಳನ್ನು ಹಾಕಿರುವರು. ಇವುಗಳನ್ನು ಕೇಬಲ್‌ಗಳೆಂದು ಕರೆಯುವರು. ಇಂಡಿಯಾ ದೇಶಕ್ಕೂ ಯೂರೋಪಿಗೂ ಮುಖ್ಯವಾದ ಎರಡು ಕೇಬಲ್‌ಗಳಿರುವುವು. ಒಂದು ಬೊಂಬಾಯಿಯಿಂದ ಸೂಯೆಸ್ ಕಾಲುವೆಯ ಮಾರ್ಗವಾಗಿ ಹೋಗಿರುವುದು. ಇನ್ನೊಂದು ಕರಾಚಿಯಿಂದ ಬುಷೈರಿಗೂ, ಅಲ್ಲಿಂದ ಟೆಹಿರಾನ್ ಮಾರ್ಗವಾಗಿ ನೆಲದಮೇಲೂ ಹೋಗಿರುವುದು. ಯೂರೋಪಿನಿಂದ ಚೀಣ, ಆಸ್ಟ್ರೇಲಿಯ ಮೊದಲಾದ ದೇಶಗಳಿಗೆ ಹೋಗುವ ತಂತಿಗಳಿಗೆ ಈ ದೇಶದ ತೀರದಿಂದ ಹಬ್ಬಿರುವ ತಂತಿಗಳು ಸೇರಿಸಲ್ಪಟ್ಟಿವೆ. ಈ ದೇಶದಿಂದ ಚೀಣಾ ದೇಶಕ್ಕೆ ಭಾಮೊ ಮೂಲಕವಾಗಿಯೂ, ಸಯಾಮಿಗೆ ಮೌಲ್ಮಿನ್ ಮೂಲಕವಾಗಿಯೂ ಭೂಮಾರ್ಗವಾಗಿ ತಂತಿಗಳನ್ನೂ ಹಾಕಿರುವರು.

**ಜನಸಾಂದ್ರತೆ. —** ಈ ದೇಶದ ಒಟ್ಟು ಜನಸಂಖ್ಯೆಯು 32 ಕೋಟಿ ಅಂದರೆ ಪ್ರಪಂಚದ ಒಟ್ಟು ಜನಸಂಖ್ಯೆಯಲ್ಲಿ $\frac{1}{6}$ ಭಾಗ ಜನರು ಇಲ್ಲಿ ವಾಸ ಮಾಡುವರು. ಸರಾಸರಿ ಜನಸಂಖ್ಯೆಯು 1 ಚ. ಮೈ. ಗೆ 200 ಆಗುವುದು. ಈ ಸರಾಸರಿಯು ಬ್ರಿಟಿಷ್ ದ್ವೀಪಗಳಲ್ಲಿ 1 : 340, ಯುರೋಪಿನಲ್ಲಿ 1 : 100, ಪರ್ಷ್ಯದಲ್ಲಿ 1 : 57.

ಈ ದೇಶದಲ್ಲಿ ಕೃಷಿಯೇ ಜನಗಳಿಗೆ ಮುಖ್ಯವಾದ ಉದ್ಯೋಗವಾಗಿರುವುದರಿಂದ ಮಳೆ ಹೆಚ್ಚಾಗಿ ಬೀಳುವ ಫಲವತ್ತಾದ ಮೈದಾನದ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಜನಸಾಂದ್ರತೆ ಹೆಚ್ಚಾಗಿರುವುದು. ಬಂಗಾಳ, ಬಿಹಾರಗಳಲ್ಲಿ ಜನರು ಬಹು ಒತ್ತಾಗಿ ವಾಸಮಾಡುತ್ತಾರೆ. ಅಲ್ಲಿ 1 ಚ. ಮೈಲಿಗೆ 500 ಜನರಿರುವರು. ಹೀಗೆಯೇ ಪಶ್ಚಿಮ ತೀರದ ಮೈದಾನದಲ್ಲಿಯೂ ಜನಸಾಂದ್ರತೆ ಹೆಚ್ಚಾಗಿರುವುದು. ಆದರೆ ಅಸ್ಸಾಮಿನಲ್ಲಿ ಮಳೆಯು ಹೆಚ್ಚಾಗಿದ್ದರೂ, ಬೆಟ್ಟಗುಡ್ಡಗಳು ಹೆಚ್ಚಾಗಿರುವುದರಿಂದ ಜನಸಾಂದ್ರತೆ ಕಡಿಮೆಯಾಗಿದೆ. ಪೂರ್ವತೀರದ ಮೈದಾನದಲ್ಲಿಯೂ, ಸಂಯುಕ್ತ ಪ್ರಾಂತಗಳಲ್ಲಿಯೂ ಮಳೆ ಕಡಿಮೆಯಾದರೂ, ನದಿಗಳ ಕಾಲುವೆಗಳು ಹೆಚ್ಚಾಗಿರುವುದರಿಂದ ಜನಸಾಂದ್ರತೆ ಹೆಚ್ಚಾಗಿರುವುದು. ದಖನ್ ಮತ್ತು ಮಧ್ಯ ಇಂಡಿಯ ಪ್ರಸ್ಥಭೂಮಿಗಳಲ್ಲಿಯೂ, ಪಂಜಾಬಿನಲ್ಲಿಯೂ ಜನಸಾಂದ್ರತೆ ಕಡಿಮೆ. ರಾಜಪುತ್ರಸ್ಥಾನ, ಸಿಂಧುದೇಶದ ವಾಯುವ್ಯದ ಸರಹದ್ದಿನ ಪ್ರಾಂತಗಳಲ್ಲಿ ಜನಸಾಂದ್ರತೆ ಅತ್ಯಲ್ಪವಾಗಿರುವುದು.

**ಪಟ್ಟಣಗಳು ಮತ್ತು ಅವುಗಳ ಅಭಿವೃದ್ಧಿಗೆ ಕಾರಣಗಳು.**—ಈ ದೇಶದಲ್ಲಿ ಶೇಕಡ 90 ಪಾಲು ಜನರು ಹಳ್ಳಿಗಳಲ್ಲಿ ವಾಸಮಾಡುವರು. 10 ಪಾಲು ಜನರು ಮಾತ್ರ ಪಟ್ಟಣಗಳಲ್ಲಿಯೂ, ಷಹರುಗಳಲ್ಲಿಯೂ ವಾಸಮಾಡುವರು. 5,000ಕ್ಕಿಂತ ಹೆಚ್ಚು ಜನರು ವಾಸಮಾಡುವ ಊರನ್ನು ಪಟ್ಟಣವೆಂದೂ, ಒಂದು ಲಕ್ಷಕ್ಕಿಂತ ಹೆಚ್ಚು ಜನರು ವಾಸಮಾಡುವ ಊರನ್ನು ಷಹರೆಂದೂ ಇಂಡಿಯಾ ಸರ್ಕಾರದವರು ಗಣಿಸುವರು. ಈ ದೇಶದಲ್ಲಿ ಒಟ್ಟು 29 ಷಹರುಗಳು ಮಾತ್ರ ಇವೆ. ಇಂಗ್ಲೆಂಡ್ ಮೊದಲಾದ ದೇಶಗಳಲ್ಲಿಯಾದರೋ ಷಹರುಗಳ ಸಂಖ್ಯೆಯು ಬಹು ಹೆಚ್ಚಾಗಿರುವುದು. ಇಂಗ್ಲೆಂಡಿನಲ್ಲಿ ಅರ್ಧಕ್ಕೆ ಹೆಚ್ಚು ಜನರು ಪಟ್ಟಣ ಅಥವಾ ಷಹರುಗಳಲ್ಲಿ ವಾಸಮಾಡುವರು. ನಮ್ಮ ದೇಶದಲ್ಲಿ ಕೃಷಿಯೂ, ಆ ದೇಶಗಳಲ್ಲಿ ಕೈಗಾರಿಕೆ ಮತ್ತು ವ್ಯಾಪಾರವೂ ಮುಖ್ಯವಾದ ಉದ್ಯೋಗಗಳಾಗಿರುವುದೇ ಈ ವ್ಯತ್ಯಾಸಕ್ಕೆ ಕಾರಣ.

ನಮ್ಮ ದೇಶದಲ್ಲಿ ಕೈಗಾರಿಕೆ, ವ್ಯಾಪಾರಗಳು ಹೆಚ್ಚಿದ ಹಾಗೆಲ್ಲ ಪಟ್ಟಣ, ಷಹರುಗಳ ಸಂಖ್ಯೆಯೂ, ಪರಿಮಾಣವೂ ಹೆಚ್ಚುತ್ತಲಿವೆ. ಕರಾಚಿ, ಬೊಂಬಾಯಿ,

ಮದರಾಸು, ಕಲ್ಕತ್ತ ಮೊದಲಾದ ಪಟ್ಟಣಗಳು 300 ವರ್ಷಗಳಿಂದೀಚೆಗೆ ಪ್ರಾಮುಖ್ಯವನ್ನು ಪಡೆದಿವೆ. ಆದರೆ ಹೈದರಾಬಾದು, ಕಾಶಿ, ಅಲಹಾಬಾದ್ ಮೊದಲಾದ ಪಟ್ಟಣಗಳು ಹಿಂದಿನ ಕಾಲದಿಂದಲೂ ಪ್ರಸಿದ್ಧವಾಗಿವೆ. ಪಟ್ಟಣಗಳೂ, ಷಹರುಗಳೂ ವೃದ್ಧಿಯಾಗಲು ಕಾರಣಗಳೇನೆಂಬುದನ್ನು ಸಾಮಾನ್ಯ ವಿವರಣೆಯಲ್ಲಿ ಹಿಂದೆಯೇ ವಿವರಿಸಿದೆ. ಈಗ ಅವುಗಳನ್ನು ನೆನಪಿಗೆ ತಂದುಕೊಳ್ಳಿ. ಹಿಂದಿನ ಕಾಲದ ಮತ್ತು ಈಗಿನ ರಾಜಧಾನಿಗಳು, ಈಗಿನ ಕಂಟೋನ್ಮೆಂಟುಗಳು, ಯಾತ್ರಾಸ್ಥಳಗಳು, ಕೈಗಾರಿಕೆ ಸ್ಥಳಗಳು, ವ್ಯಾಪಾರಾಭಿವೃದ್ಧಿಗೆ ಅನುಕೂಲವಾದ ಸನ್ನಿವೇಶವನ್ನೂ, ಮಾರ್ಗಗಳನ್ನೂ ಹೊಂದಿರುವ ಸ್ಥಳಗಳು—ಇವು ದೊಡ್ಡ ಪಟ್ಟಣಗಳಾಗಿರುವುವು. ಒಂದು ಪಟ್ಟಣಕ್ಕೆ ಈ ಅನುಕೂಲ್ಯವು ಎಷ್ಟೆಷ್ಟಿರುವುದೋ ಅಷ್ಟಷ್ಟು ಅದು ದೊಡ್ಡದಾಗುವುದು.

**ಜನಗಳ ಕುಲ, ಮತ, ಭಾಷೆ, ನಾಗರಿಕತೆ ಮುಂತಾದುವು.— ಕುಲಗಳು.**—ಈ ದೇಶದ ಜನಗಳನ್ನು ನಾಲ್ಕು ಪಂಗಡಗಳಾಗಿ ಅಥವಾ ಕುಲದವರಾಗಿ ಭಾಗಿಸಬಹುದು.

(1) **ಆರ್ಯರು.**—4,000 ವರ್ಷಗಳ ಹಿಂದೆ ಯಾವುದೋ ಒಂದು ಕಾಲದಲ್ಲಿ ಪುರಾತನಾರ್ಯರು ಮಧ್ಯ ಏಷ್ಯಾದಿಂದ ಹಿಂದೂಕುಷ್ ಪರ್ವತವನ್ನೂ, ಖೈಬರ್ ಕಣಿವೆಯನ್ನೂ ದಾಟಿ ಇಂಡಿಯಾದೇಶಕ್ಕೆ ಬಂದರೆಂದು ಹೇಳುತ್ತಾರೆ. 1,000 ವರ್ಷಗಳಿಂದೀಚೆಗೆ ಆಫ್ಘನರು, ಮೊಗಲರು ಮೊದಲಾದ ಆರ್ಯಕುಲದ ಜನರು ಮೇಲೆ ಹೇಳಿದ ಮಾರ್ಗವಾಗಿಯೇ ಈ ದೇಶಕ್ಕೆ ದಂಡೆತ್ತಿ ಬಂದು ಇಲ್ಲಿಯೇ ನೆಲಸಿದರು. ಈ ಆರ್ಯರು ಅಥವಾ ಬಿಳಿಯ ಜನರು ಮುಖ್ಯವಾಗಿ ಉತ್ತರ ಇಂಡಿಯದ—ಪಂಜಾಬ್, ಕಾಶ್ಮೀರ ರಾಜಪುತ್ರಸ್ಥಾನಗಳಲ್ಲಿ ನೆಲಸಿರುವರು. ದಕ್ಷಿಣ ಇಂಡಿಯದಲ್ಲಿರುವ ಬ್ರಾಹ್ಮಣರೂ ಕೊಂಚಮಟ್ಟಿಗೆ ಈ ಕುಲಕ್ಕೆ ಸೇರಿದವರೆಂದು ಹೇಳುತ್ತಾರೆ.

(2) **ದ್ರಾವಿಡರು.**—ಇವರು ಕಪ್ಪಾಗಿಯೂ, ಕುಳ್ಳಾಗಿಯೂ ಇರುವರು. ಇವರ ಮೂಲಸ್ಥಾನವು ಈ ದೇಶವೇ ಎಂದು ಅನೇಕರು ಅಭಿಪ್ರಾಯಪಡುವರು. ಬಂಗಾಳದ ಜನರೂ, ದಕ್ಷಿಣ ಇಂಡಿಯದ ಅನೇಕ ಜನರೂ ಈ ಬುಡಕಟ್ಟಿಗೆ ಸೇರಿದವರೆಂದು ಶಾಸ್ತ್ರಜ್ಞರು ಹೇಳುವರು.

(3) **ಮಂಗೋಲಿಯನ್ನರು.** — ಬರ್ಮಾ ದೇಶದಲ್ಲಿರುವ ಜನರೂ, ಅಸ್ಸಾಂ, ನೇಪಾಳ, ಭೂತಾನಗಳಲ್ಲಿರುವ ಅನೇಕ ಭಾಗದ ಜನರೂ ಮಂಗೋಲಿಯನ್ ಕುಲಕ್ಕೆ ಸೇರಿದವರಾಗಿ ಅಥವಾ ಹಳದಿಯ ಜನರಾಗಿದ್ದಾರೆ.

(4) **ನೀಗ್ರೋ ಜನರು.**—ಅಂಡಮಾನ್ ದ್ವೀಪದಲ್ಲಿರುವ ಕಾಡುಜನರು ನೀಗ್ರೋ ಕುಲಕ್ಕೆ ಸೇರಿದವರು. ಇವರು ಬಹಳ ಕುಳ್ಳರು; ಕರ್ರಗೆ ಕಪ್ಪಾ

ರುವರು. ಪೂರ್ವದಲ್ಲಿ ಇವರು ಬಟ್ಟೆಯನ್ನು ಉಡುವುದಕ್ಕೂ ತಿಳಿಯದಷ್ಟು ಅನಾಗರಿಕರಾಗಿದ್ದರು.

ಮೇಲೆ ಹೇಳಿದ ನೀಗ್ರೋ ಬುಡಕಟ್ಟಿನ ಜನಗಳು ಅನೇಕ ಕಡೆ ವಿವಾಹ ಸಂಬಂಧದಿಂದ ಒಬ್ಬರಲ್ಲೊಬ್ಬರು ಕಲೆತುಹೋಗಿ ಅನೇಕರು ಮಿಶ್ರಕುಲದವರಾಗಿರುವರು.

**ಮತಗಳು.**—ಈ ದೇಶದಲ್ಲಿ 2 ಭಾಗ ಜನರು ಹಿಂದೂಮತದವರು. ಇವರು ಪ್ರತಿಯೊಂದು ಊರಿನಲ್ಲಿಯೂ ದೇವಸ್ಥಾನಗಳನ್ನು ಕಟ್ಟಿಕೊಂಡು ವಿಗ್ರಹಗಳನ್ನು ಪ್ರತಿಷ್ಠೆಮಾಡಿ ಅವುಗಳನ್ನು ಪೂಜಿಸುವರು. ಅದರಲ್ಲಿ ಅನೇಕ ಜಾತಿಗಳಿರುವುವು. ಒಂದು ಜಾತಿಯ ಜನರು ಇನ್ನೊಂದು ಜಾತಿಯವರೊಂದಿಗೆ ಊಟ ಉಪಚಾರಗಳನ್ನು ಮಾಡುವುದಿಲ್ಲ. ಮದುವೆಯನ್ನೂ ಮಾಡಿಕೊಳ್ಳುವುದಿಲ್ಲ. ಆದರೆ ಇವರೆಲ್ಲರೂ ವೇದಶಾಸ್ತ್ರ ಪುರಾಣಗಳನ್ನೂ ಭಗವಂತನ ರಾಮಾದ್ಯವತಾರಗಳನ್ನೂ ನಂಬುವರು.

ಈ ದೇಶದಲ್ಲಿ 2,500 ವರ್ಷಗಳ ಹಿಂದೆ ಗೌತಮಬುದ್ಧನೆಂಬ ಮಹಾಪುರುಷನು ಬೌದ್ಧಮತವನ್ನು ಸ್ಥಾಪಿಸಿದನು. ಈ ಮತವು ಬಹಳ ಪ್ರಬಲಸ್ಥಿತಿಗೆ ಬಂದು ಈ ದೇಶವಲ್ಲೆಲ್ಲಾ ಪ್ರಚಾರಕ್ಕೆ ಬಂದುದಲ್ಲದೆ ಟಿಬೆಟ್, ಚೀಣಾ, ಜಪಾನ್, ಬರ್ಮ, ಸಿಂಹಳದ್ವೀಪ ಮೊದಲಾದ ದೇಶಗಳಿಗೂ ಹರಡಿಕೊಂಡಿತು. ಆದರೆ ಅತ್ಯಲ್ಪ ಕಾಲದಲ್ಲಿ ಈ ಮತವು ನಮ್ಮ ದೇಶದಲ್ಲಿ ಕ್ಷೀಣವಾಯಿತು. ಬಿಹಾರದಲ್ಲಿರುವ ಗಯಾ ಪಟ್ಟಣವು ಇವರ ಮುಖ್ಯ ಯಾತ್ರಾಸ್ಥಳವಾಗಿದೆ. ಈಗ ಈ ದೇಶದಲ್ಲಿ ಸುಮಾರು ಒಂದು ಕೋಟಿ ಬೌದ್ಧರಿರುವರು.

ಈ ದೇಶದಲ್ಲಿ ಬೌದ್ಧಮತವು ಹುಟ್ಟಿದ ಕಾಲದಲ್ಲಿ ಜೈನಮತವೂ ಹುಟ್ಟಿತು. ಹಿಂದುಗಳೂ, ಬೌದ್ಧರೂ, ಜೈನರೂ ಪುನರ್ಜನ್ಮವಿದೆಯೆಂದೂ, ಈ ಜನನ ಮರಣಗಳು ತಪ್ಪುವುದೇ ಮುಕ್ತಿಯೆಂದೂ ನಂಬುವರು. ಇತರ ಮತದವರು ಸಾಮಾನ್ಯವಾಗಿ ಪುನರ್ಜನ್ಮವನ್ನು ನಂಬುವುದಿಲ್ಲ. ಜೈನರು ಮುಖ್ಯವಾಗಿ ಮೈಸೂರು ಸೀಮೆಯಲ್ಲಿಯೂ, ಅರಾವಳಿ ಬೆಟ್ಟಗಳ ಬಳಿಯಲ್ಲಿಯೂ, ಕಾಶಿಯ ಸಮೀಪದಲ್ಲಿಯೂ ಇರುವರು. ಇವರ ಒಟ್ಟು ಸಂಖ್ಯೆ ಸುಮಾರು 11 ಲಕ್ಷ.

ಈ ಮತಗಳಲ್ಲದೆ ಅರೇಬಿಯ ದೇಶದಲ್ಲಿ ಕ್ರಿ. ಶ. ಏಳನೆಯ ಶತಮಾನದಲ್ಲಿ ಮಹಮ್ಮದನೆಂಬ ಮಹಾಪುರುಷನಿಂದ ಸ್ಥಾಪಿಸಲ್ಪಟ್ಟ ಮಹಮ್ಮದೀಯ ಮತವೂ ಈ ದೇಶದಲ್ಲಿ ನೆಲೆಗೊಂಡಿದೆ. ಈ ದೇಶದ ಒಟ್ಟು ಜನಸಂಖ್ಯೆಯಲ್ಲಿ ಸುಮಾರು 1 ಭಾಗದ ಜನರು ಮಹಮ್ಮದೀಯರು. ಉತ್ತರ ಇಂಡಿಯಾದೇಶದಲ್ಲಿ ಇವರ ಸಂಖ್ಯೆ ಹೆಚ್ಚು. ಕಾಶ್ಮೀರದಲ್ಲಿಯೂ, ಸಿಂಧೂದೇಶದಲ್ಲಿಯೂ ಮುಸಲ್ಮಾನರೇ ಹಿಂದೂಗಳಿಗಿಂತ ಹೆಚ್ಚಾಗಿರುವರು. ದಕ್ಷಿಣ ಇಂಡಿಯ ದೇಶದಲ್ಲಿ ಇವರ

ಸಂಖ್ಯೆ ಕಡಿಮೆ. ಪುರಾತನ ದೇವಸ್ಥಾನಗಳು ದಕ್ಷಿಣ ಇಂಡಿಯದಲ್ಲಿ ಹೆಚ್ಚು; ಮಶೀದಿಗಳು ಉತ್ತರಇಂಡಿಯದಲ್ಲಿ ಹೆಚ್ಚು. ಈ ವ್ಯತ್ಯಾಸಗಳಿಗೆ ಕಾರಣ ವೇನೆಂದರೆ, ಮಹಮ್ಮದೀಯರು ಮೊದಲು ಉತ್ತರ ಇಂಡಿಯವೆಲ್ಲವನ್ನೂ ಆವರಿಸಿ ಕೊಂಡು ಅಲ್ಲಿ ಬಹುಕಾಲ ಆಳುತ್ತಿದ್ದರು. ಅನಂತರ ದಕ್ಷಿಣ ಇಂಡಿಯದಲ್ಲಿ ಸ್ವಲ್ಪ ಭಾಗವನ್ನು ಮಾತ್ರ ಗೆದ್ದು ಆಳುತ್ತಿದ್ದರು.

ಈ ಮಹಮ್ಮದೀಯ ಮತಕ್ಕೂ ಹಿಂದೂ ಮತಕ್ಕೂ ಮಧ್ಯಸ್ಥವಾಗಿರುವ ಸಿಕ್ ಮತವು ಪಂಜಾಬಿನಲ್ಲಿ ಹುಟ್ಟಿ, ಅಲ್ಲಿಯೇ ವಿಶೇಷವಾಗಿ ನೆಲೆಗೊಂಡಿದೆ.

ಕ್ರೈಸ್ತ ಮತವು ಏಸುಕ್ರಿಸ್ತನೆಂಬ ಮಹಾತ್ಮನಿಂದ ಸುಮಾರು 2,000 ವರ್ಷಗಳ ಹಿಂದೆ ಪಾಲಸ್ಟೈನ್ ದೇಶದಲ್ಲಿ ಸ್ಥಾಪಿಸಲ್ಪಟ್ಟಿತು. ಕ್ರಿ. ಶ. ಆರನೆಯ ಶತಮಾನದಲ್ಲಿ ಕೆಲವು ಕ್ರೈಸ್ತರು ಕೊಚ್ಚಿನ್, ತಿರುವಾಂಕೋರು ಮೊದಲಾದ ಪಶ್ಚಿಮ ತೀರದ ಪ್ರದೇಶಗಳಲ್ಲಿ ನೆಲೆಸಿದರು. ಪೋರ್ಚುಗೀಸರು ತಮ್ಮ ಕಾಲದಲ್ಲಿ ಅನೇಕ ಜನರನ್ನು ಕ್ರೈಸ್ತ ಮತಕ್ಕೆ ಸೇರಿಸಿದರು. ಈಗಲೂ ಕ್ರೈಸ್ತ ಪಾದ್ರಿಗಳು ತಮ್ಮ ಮತಕ್ಕೆ ಹಲವರನ್ನು ಸೇರಿಸಿಕೊಳ್ಳುತ್ತಿರುವರು. ಈ ದೇಶದಲ್ಲಿರುವ ಯುರೊಪಿಯನರೆಲ್ಲರೂ ಕ್ರೈಸ್ತ ಮತದವರು. ಈಗ ಈ ದೇಶದಲ್ಲಿ 30 ಲಕ್ಷ ಜನರು ಈ ಮತಕ್ಕೆ ಸೇರಿದವರಾಗಿದ್ದಾರೆ.

ಏಹೂದ್ಯಮತ ಕೊಚಿನ್‌ನಲ್ಲೂ, ಪಾರ್ಸಿ ಮತವು ಬೊಂಬಾಯಿಯಲ್ಲಿಯೂ ಕೆಲವು ಜನಗಳಿಂದ ಅವಲಂಬಿಸಲ್ಪಟ್ಟಿದೆ. ಅನಾಗರಿಕರಾದ ಕಾಡುಜನರು ಮರ, ಕಲ್ಲು ಮೊದಲಾದ ದೇವತೆಗಳಿಗೆ ಬಲಿಕೊಡುವ ಚೈತನ್ಯಪೂಜಕರಾಗಿರುವರು. ಸಾಮಾನ್ಯವಾಗಿ ಪ್ರಪಂಚದಲ್ಲಿರುವ ಮುಖ್ಯವಾದ ಮತಗಳೆಲ್ಲ ಈ ದೇಶದಲ್ಲಿ ಇರುವುವೆಂದು ಹೇಳಬಹುದು.

**ಭಾಷೆಗಳು.**—ಈ ದೇಶದಲ್ಲಿ ಸುಮಾರು 130 ಭಾಷೆಗಳು ಪ್ರಚಾರದಲ್ಲಿವೆ. ಉತ್ತರ ಇಂಡಿಯದಲ್ಲಿ ಆಡುವ ಬಂಗಾಳಿ, ಹಿಂದಿ, ದಕ್ಷಿಣ ಇಂಡಿಯದಲ್ಲಿ ಆಡುವ ಗುಜರಾತಿ, ಮರಾಠಿ ಮೊದಲಾದ ಭಾಷೆಗಳು ಸಂಸ್ಕೃತ ಭಾಷೆಯಿಂದ ಹುಟ್ಟಿದವುಗಳಾಗಿವೆ. ಹಿಂದೂಸ್ಥಾನಿ ಭಾಷೆಯು ಈ ದೇಶದ ಎಲ್ಲಾ ಭಾಗಗಳಲ್ಲಿಯೂ ಇರುವುದಲ್ಲದೆ ಸಾಮಾನ್ಯವಾಗಿ ಮಹಮ್ಮದೀಯರಿಗೆ ಮಾತೃಭಾಷೆಯಾಗಿದೆ; ಮತ್ತು ವ್ಯವಹಾರದಲ್ಲಿ ಸಿಪಾಯಿಗಳಿಗೂ, ವರ್ತಕರಿಗೂ ಸ್ವಲ್ಪ ಮಟ್ಟಿಗೆ ತಿಳಿದಿರುವುದು. ಈಚೆಗೆ ಇಂಗ್ಲಿಷು ಭಾಷೆಯು ಈ ದೇಶದ ಎಲ್ಲಾ ಕಡೆಗಳಲ್ಲಿಯೂ ಪ್ರಚುರವಾಗುತ್ತಲಿದೆ. ದಕ್ಷಿಣ ಇಂಡಿಯದಲ್ಲಿ ತಮಿಳು, ಕನ್ನಡ, ತೆಸುಗು, ಮಲೆಯಾಳ, ತುಳು ಎಂಬ ಪಂಚದ್ರಾವಿಡ ಭಾಷೆಗಳು ಪ್ರಚುರವಾಗಿವೆ. ಈ ಮುಖ್ಯವಾದ ಭಾಷೆಗಳಲ್ಲದೆ ಇನ್ನೂ ಅನೇಕ ಭಾಷೆಗಳು ಅಲ್ಲಲ್ಲಿ ಅನೇಕ ಪಂಗಡದ ಜನರಿಗೆ ಮಾತೃಭಾಷೆಗಳಾಗಿವೆ.

**ನಾಗರಿಕತೆ.**—ಈ ದೇಶದ ಜನಗಳು ಸಾಮಾನ್ಯವಾಗಿ ನಾಗರಿಕತೆಯುಳ್ಳವರಾಗಿಯೇ ಇರುವರು. ಹಲವರು ಸಂಪೂರ್ಣ ನಾಗರಿಕತೆಯನ್ನು ಪಡೆದಿರುವರು. ಕೆಲವರು ಅಲ್ಪ ನಾಗರಿಕರಾಗಿ ಅಥವಾ ಅನಾಗರಿಕರಾಗಿಯೇ ಇರುವರು.

ಉತ್ತರ ಇಂಡಿಯದ ನದಿಯ ಮೈದಾನಗಳಲ್ಲಿ ಜನಸಾಂದ್ರತೆ ಹೆಚ್ಚಾಗಿರುವುದರಿಂದಲೂ, ಮಾರ್ಗಗಳು ವಿಶೇಷವಾಗಿರುವುದರಿಂದಲೂ ಜನರು ಪರಸ್ಪರ ಕಲೆತು ಅನೇಕ ವಿಷಯಗಳನ್ನು ತಿಳಿದುಕೊಂಡು ಹೆಚ್ಚು ನಾಗರಿಕರಾಗಲು ಅನುಕೂಲವಾಗಿರುವುದು. ಈ ಪ್ರದೇಶಗಳಲ್ಲಿ ಫಲವತ್ತಾದ ನೆಲವೂ, ಅನುಕೂಲವಾದ ನೀರಾವರಿಯೂ ಇರುವುದರಿಂದ ಅಲ್ಪ ಶ್ರಮದಿಂದ ಹೆಚ್ಚಾಗಿ ಪೈರುಗಳನ್ನು ಬೆಳೆಯಬಹುದು. ಆದುದರಿಂದ ಜನರ ಐಶ್ವರ್ಯ ಹೆಚ್ಚುವುದಕ್ಕೂ ಅನುಕೂಲವಾಗಿದೆ. ಈ ಅನುಕೂಲ್ಯಗಳಿಂದ ಬಂಗಾಳಾದೇಶದ ಜನರು ಬಹು ನಾಗರಿಕರಾಗಿರುವರು. ಆದರೆ ತಕ್ಕಷ್ಟು ಬಲಿಷ್ಠರಾಗಿಲ್ಲ. ಪಂಜಾಬ್, ಸಂಯುಕ್ತಪ್ರಾಂತ, ಬಿಹಾರಗಳಲ್ಲಿ ಪೈರುಗಳನ್ನು ಬೆಳೆಯುವುದಕ್ಕೆ ಹೆಚ್ಚು ಶ್ರಮವು ಬೇಕಾಗಿರುವುದರಿಂದ ಅಲ್ಲಿನ ಜನಗಳು ಹೆಚ್ಚು ಬಲಿಷ್ಠರಾಗಿರುವರು. ಆದರೆ ಬಂಗಾಳಿಗಳಷ್ಟು ಜಾಣರಲ್ಲ.

ಹಿಮಾಲಯ, ಅರಾವಳಿ ಮೊದಲಾದ ಪರ್ವತ ಪ್ರದೇಶಗಳಲ್ಲಿ ಸಂಚಾರ ಮಾಡುವುದು ಕಷ್ಟವಾದುದರಿಂದ ಜನರು ಪರಸ್ಪರ ಕಲೆಯುವುದು ಕಡಿಮೆ. ಆದುದರಿಂದ ಅಲ್ಲಿ ವಾಸಿಸುವ ಘೂರ್ಕರೇ ಮೊದಲಾದ ಜನರು ಅಷ್ಟು ನಾಗರಿಕರಾಗಿಲ್ಲ. ಆದರೆ ಈ ಜನರು ಶ್ರಮಪಟ್ಟು ಕಲ್ಲುನೆಲದಲ್ಲಿ ಪೈರನ್ನು ತೆಗೆಯಬೇಕಾಗಿರುವುದರಿಂದಲೂ, ಸೆಕೆ ಕಡಿಮೆಯಾಗಿರುವುದರಿಂದಲೂ ಇವರು ಶ್ರಮವನ್ನು ಸಹಿಸಬಲ್ಲವರಾಗಿಯೂ, ದೃಢಕಾಯರಾಗಿಯೂ ಇರುವರು. ಈ ಕಾರಣದಿಂದ ನೇಪಾಳದ ಘೂರ್ಕರು, ಪಂಜಾಬಿನ ಸಿಕ್ಕರು, ವಾಯವ್ಯ ಸರಹದ್ದಿನ ಪಠಾಣರು, ರಾಜಪುತ್ರರು, ದಖನ್ ಪ್ರಸ್ಥಭೂಮಿಯ ಮರಾಟಿಯವರು ಮೊದಲಾದವರು ಇಂಡಿಯಾದೇಶದ ಸೈನ್ಯಕ್ಕೆ ಸೇರಲು ಉತ್ತಮವಾದ ವೀರರೆಂದು ಸರ್ಕಾರದಿಂದ ಭಾವಿಸಲ್ಪಟ್ಟಿರುವರು. ಮೈದಾನದ ಜನಗಳು ಹೆಚ್ಚು ನಾಗರಿಕರು; ಆದರೆ ಹೆಚ್ಚು ಬಲಿಷ್ಠರಲ್ಲ. ಬೆಟ್ಟಗುಡ್ಡಗಳ ಜನರು ಹೆಚ್ಚು ಬಲಿಷ್ಠರು; ಆದರೆ ಅಷ್ಟು ನಾಗರಿಕರಲ್ಲ ಎಂದು ಸಾಮಾನ್ಯವಾಗಿ ಹೇಳಬಹುದು. ಈ ಸಾಮಾನ್ಯ ನಿಯಮವು ಎಲ್ಲಾ ದೇಶಗಳಿಗೂ ಅನ್ವಯಿಸುವುದು.

**ಉಡುಪು.**—ಈ ದೇಶದಲ್ಲಿ ಸೆಕೆ ಹೆಚ್ಚಾಗಿರುವುದರಿಂದ ಜನಗಳು ಸಾಮಾನ್ಯವಾಗಿ ಹತ್ತಿಯ ಬಟ್ಟೆಗಳನ್ನು ಹಾಕಿಕೊಳ್ಳುವರು. ಆದರೆ ಉತ್ತರ ಇಂಡಿಯದ ವಾಯುವ್ಯ ಭಾಗದಲ್ಲಿ ಚಳಿಗಾಲದಲ್ಲಿ ಚಳಿ ಬಹಳ ಹೆಚ್ಚಾಗಿರುವುದರಿಂದ ಅಲ್ಲಿ

ಉಣ್ಣೆಯ ಬಟ್ಟೆಗಳನ್ನು ಹಾಕಿಕೊಳ್ಳುವುದು ಹೆಚ್ಚು. ದಖನ್ನಿನ ಎತ್ತರವಾದ ಭಾಗಗಳಲ್ಲಿಯೂ ಹೀಗೆಯೇ ಉಣ್ಣೆಯ ಬಟ್ಟೆಗಳನ್ನು ಧರಿಸುವುದು ಹೆಚ್ಚು. ಐಶ್ವರ್ಯವಂತರು ಫ್ಲಾನಲ್ ಬಟ್ಟೆ, ಶಾಲು ಮೊದಲಾದ ಬೆಲೆ ಬಾಳುವ ಉಣ್ಣೆಯ ಬಟ್ಟೆಗಳನ್ನೂ, ಬಡವರು ಕಂಬಳಿ ಮೊದಲಾದ ಅಗ್ಗವಾದ ಉಣ್ಣೆಯ ಬಟ್ಟೆಗಳನ್ನೂ ಹಾಕಿಕೊಳ್ಳುವರು. ಸಾಮಾನ್ಯವಾಗಿ ಎಲ್ಲಾ ಭಾಗಗಳಲ್ಲಿಯೂ ಬೇಸಗೆಯ ಕಾಲದಲ್ಲಿ ಐಶ್ವರ್ಯವಂತರು ರೇಷ್ಮೆಯ ಅಥವಾ ನಾರಿನ ಬಟ್ಟೆಗಳನ್ನು ಹಾಕಿಕೊಳ್ಳುವರು.

**ಆಹಾರ.**—ಈ ದೇಶದ ಜನರ ಮುಖ್ಯವಾದ ಆಹಾರ ಜೋಳ, ರಾಗಿ ಮೊದಲಾದ ಧಾನ್ಯಗಳು. ಆದರೆ ಬಂಗಾಳ, ಪಶ್ಚಿಮತೀರದ ಮೈದಾನ ಮೊದಲಾದ ಬತ್ತ ಬೆಳೆಯುವ ಪ್ರದೇಶಗಳಲ್ಲಿ ಅಕ್ಕಿಯೇ ಮುಖ್ಯವಾದ ಆಹಾರವಾಗಿದೆ. ಪಂಜಾಬ್ ಮೊದಲಾದ ಪ್ರದೇಶಗಳಲ್ಲಿ ಗೋಧಿ ಹೆಚ್ಚಾಗಿ ಬೆಳೆದರೂ, ಅದು ಇತರ ದೇಶಗಳಿಗೆ ರಫ್ತಾಗಿ ಅದರ ಬೆಲೆ ಹೆಚ್ಚಿರುವುದರಿಂದ ಐಶ್ವರ್ಯವಂತರು ಮಾತ್ರ ಗೋಧಿಯ ರೊಟ್ಟಿಯನ್ನು ತಿನ್ನುತ್ತಾರೆ. ಬಡವರು ಅಗ್ಗವಾದ ಜೋಳ ಮೊದಲಾದ ಧಾನ್ಯಗಳನ್ನೇ ಉಪಯೋಗಿಸುವುದು ಹೆಚ್ಚು. ತೊಗರಿ, ಕಡಲೆ ಮೊದಲಾದ ದ್ವಿದಳ ಧಾನ್ಯಗಳನ್ನೂ, ತುಪ್ಪ, ಎಣ್ಣೆ ಮೊದಲಾದ ಮೇದೋಜನಕ ಪದಾರ್ಥಗಳನ್ನೂ ಸಾಮಾನ್ಯವಾಗಿ ಎಲ್ಲರೂ ಉಪಯೋಗಿಸುವರು. ಬಂಗಾಳದಲ್ಲಿಯೂ, ತೀರಪ್ರದೇಶಗಳಲ್ಲಿಯೂ ಮೀನುಗಳು ಹೆಚ್ಚಾಗಿ ಸಿಕ್ಕುವುದರಿಂದ ಅಲ್ಲಿ ಅವುಗಳನ್ನು ತಿನ್ನುವುದು ಬಹಳ ರೂಢಿಯಾಗಿದೆ. ಈ ಉಷ್ಣದೇಶದಲ್ಲಿ ಮಾಂಸಾಹಾರವು ಅಷ್ಟು ಹಿತಕರವಾಗಿಲ್ಲದಿರುವುದರಿಂದಲೂ, ಹಿಂದುಗಳಲ್ಲಿ ಅನೇಕ ಜಾತಿಯ ಜನರಿಗೆ ಪ್ರಾಣಿವಧೆಯು ಶಾಸ್ತ್ರ ನಿಷಿದ್ಧವಾಗಿರುವುದರಿಂದಲೂ, ಈ ದೇಶದಲ್ಲಿ ಮಾಂಸವನ್ನು ತಿನ್ನುವುದು ಇತರ ದೇಶಗಳಿಗಿಂತ ಬಹಳ ಕಡಿಮೆಯಾಗಿದೆ.

**ನಡತೆ.**—ಇಂಡಿಯಾದೇಶದ ಜನರು ವಿನೀತರು, ಮತಾಭಿಮಾನಿಗಳು ಮತ್ತು ಸಭ್ಯರು. ಇವರಲ್ಲಿ ಐಕಮತ್ಯ ಕಡಿಮೆ. ಇದಕ್ಕೆ ಈ ದೇಶದ ವಿಸ್ತಾರವೂ ಒಂದು ಮುಖ್ಯ ಕಾರಣವಾಗಿದೆ. ಇವರಲ್ಲಿ ಸಾಹಸವೂ, ಪರದೇಶಗಳಿಗೆ ಹೋಗಿ ಇತರರನ್ನು ನೋಡಿ ವಿಷಯಗಳನ್ನು ಕಲಿಯಬೇಕೆಂಬ ಆಶೆಯೂ ಕಡಿಮೆ. ಇದಕ್ಕೆ ಈ ದೇಶದ ತೀರಲಕ್ಷಣವೂ, ಸನ್ನಿವೇಶವೂ, ಭೂಗುಣವೂ ಮುಖ್ಯ ಕಾರಣಗಳಾಗಿವೆ. ಆದರೆ ದೇವರು ಕೊಟ್ಟುದರಲ್ಲಿ ತೃಪ್ತರಾಗಿ, ನಿಶ್ಚಿಂತರಾಗಿ ಕಾಲ ಕಳೆಯಬೇಕೆಂಬ ಆಸೆ ಮಾತ್ರ ಇವರಲ್ಲಿ ಸಾಮಾನ್ಯವಾಗಿದೆ. ಇದಕ್ಕೆ ಮುಖ್ಯ ಕಾರಣ ಇವರ ಮತಾಭಿಮಾನವೇ. ಇಂಗ್ಲಿಷು ವಿದ್ಯಾಭ್ಯಾಸವೂ, ಪರದೇಶಗಳಿಗೆ ಹೋಗಿಬರುವುದೂ ಈಚೆಗೆ ಹೆಚ್ಚುತ್ತಲಿವೆ. ಆದರೆ ಪರದೇಶದವರ ದೇಶಾಭಿಮಾನ,

ಏಕಮತ್ಯ, ಸಾಹಸ ಮೊದಲಾದ ಸುಗುಣಗಳು ಇನ್ನೂ ವಿಶೇಷವಾಗಿ ನಮ್ಮವರಲ್ಲಿ ಪ್ರಬಲವಾಗಿಲ್ಲ.

**ರಾಜ್ಯಭಾರ ಕ್ರಮ.**—ಇಂಡಿಯಾದೇಶವೂ; ಬರ್ಮಾದೇಶವೂ ಸೇರಿ ಇಂಡಿಯಾ ಚಕ್ರಾಧಿಪತ್ಯವೆನ್ನಿಸಿಕೊಂಡಿದೆ. ಬ್ರಿಟಿಷ್ ದ್ವೀಪಗಳ ರಾಜರೇ ಇದಕ್ಕೆ ಚಕ್ರವರ್ತಿಗಳಾಗಿರುವರು. ಆದುದರಿಂದ ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಇದು ಅಧೀನ ಚಕ್ರಾಧಿಪತ್ಯವಾಗಿಯೂ, ಬ್ರಿಟಿಷರಿಗೆ ಅಧೀನ ರಾಷ್ಟ್ರವಾಗಿಯೂ ಇದೆ. ಬ್ರಿಟಿಷ್ ದ್ವೀಪಗಳ ರಾಜರು ತಮಗೆ ಸೇರಿದ ರಾಷ್ಟ್ರಗಳನ್ನೆಲ್ಲಾ ಮಂತ್ರಿಗಳ ಸಹಾಯದಿಂದ ಪಾರ್ಲಿಮೆಂಟೆಂಬ ಪ್ರಜಾಪ್ರತಿನಿಧಿ ಸಭೆಯ ಸಲಹೆಯಂತೆ ಆಳುತ್ತಾರೆ. ಇಂಡಿಯಾ ಚಕ್ರಾಧಿಪತ್ಯದ ರಾಜ್ಯಭಾರ ಸಂಬಂಧವಾದ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವುದಕ್ಕೆ ಇಂಗ್ಲೆಂಡಿನಲ್ಲಿ 'ಸೆಕ್ರಿಟರಿ ಆಫ್ ಸ್ಟೇಟ್' ಎಂಬ ಒಬ್ಬ ಮುಖ್ಯ ಮಂತ್ರಿ ಇದಾನೆ.

ಇಂಡಿಯಾದೇಶದಲ್ಲಿ ಸರ್ವಾಧಿಕಾರಮಾಡುವ ಬ್ರಿಟಿಷ್ ಅಧಿಕಾರಿಗೆ 'ವೈಸಿರಾಯಿ' ಎಂದು ಹೆಸರು. ವೈಸಿರಾಯಿ(ಅಥವಾ ರಾಜಪ್ರತಿನಿಧಿ)ಯವರು ಐದು ವರ್ಷಗಳಿಗೊಂದಾವೃತ್ತಿ ನಮ್ಮ ಚಕ್ರವರ್ತಿಗಳಿಂದ ನಿಯಮಿಸಲ್ಪಡುವರು. ಇವರ ಸಹಾಯಕ್ಕಾಗಿ ಒಂದು ಕೌನ್ಸಿಲ್ ಅಥವಾ ಆಲೋಚನಾ ಸಭೆ ಇದೆ. ವೈಸಿರಾಯಿಯವರೂ, ಇವರ ಕೌನ್ಸಿಲರ್‌ಗಳೂ ಈ ದೇಶದ ಆಡಳಿತಕ್ಕೆ ಸಂಬಂಧಪಟ್ಟ ತೆರಿಗೆ ಹಾಕುವುದು, ಕಾನೂನುಗಳನ್ನು ಜಾರಿ ಮಾಡುವುದು ಮೊದಲಾದ ಎಲ್ಲಾ ಕೆಲಸಗಳನ್ನೂ ನಡೆಯಿಸುವರು. ಅಲ್ಲದೆ ಈ ದೇಶದಲ್ಲಿರುವ ಆಶ್ರಿತರಾಜರ ಮತ್ತು ವಾಯವ್ಯ ಸರಹದ್ದಿನಲ್ಲಿರುವ ಸ್ವತಂತ್ರ ರಾಜರ ಸಂಗಡ ಕೌಲು ಕರಾರುಗಳನ್ನು ಮಾಡಿಕೊಳ್ಳುವರು. ಕಾನೂನುಗಳನ್ನು ಮಾಡುವುದಕ್ಕೆ ನ್ಯಾಯವಿಧಾಯಕ ಸಭೆಯೊಂದಿದೆ. ಈ ಸಭೆಯಲ್ಲಿ ವೈಸಿರಾಯಿಯವರೂ, ಅವರ ಕೌನ್ಸಿಲರ್‌ಗಳೂ, ಅವರಿಂದ ನೇಮಿಸಲ್ಪಟ್ಟ ಸಾಮಾಜಿಕರೂ ಅಲ್ಲದೆ, ಪ್ರಜೆಗಳಿಂದ ಚುನಾಯಿಸಲ್ಪಟ್ಟ ಪ್ರತಿನಿಧಿಗಳೂ ಇರುತ್ತಾರೆ. ಈ ಪ್ರತಿನಿಧಿಗಳು ರಾಜ್ಯಾಡಳಿತಕ್ಕೆ ಸಂಬಂಧಪಟ್ಟ ಅನೇಕ ವಿಷಯಗಳನ್ನು ಕುರಿತು ತಮ್ಮ ಸಲಹೆಗಳನ್ನು ಕೊಡಬಹುದು. ಅವುಗಳಲ್ಲಿ ಉಚಿತವೆಂದು ತೋರಿದುವನ್ನು ವೈಸಿರಾಯಿಯವರು ಅಂಗೀಕರಿಸುವರು.

ಇಂಡಿಯಾದೇಶವನ್ನು ಬ್ರಿಟಿಷ್ ಇಂಡಿಯ, ಆಶ್ರಿತ ಸಂಸ್ಥಾನಗಳು, ಸ್ವತಂತ್ರ ಸಂಸ್ಥಾನಗಳು, ಯೂರೋಪಿನವರಿಗೆ ಸೇರಿದ ಇತರ ರಾಷ್ಟ್ರಗಳು ಎಂದು ನಾಲ್ಕು ಭಾಗಗಳಾಗಿ ವಿಂಗಡಿಸಬಹುದು. ಬ್ರಿಟಿಷರೇ ಸ್ವತಂತ್ರವಾಗಿ ಆಳುವ ಭಾಗಕ್ಕೆ ಬ್ರಿಟಿಷ್ ಇಂಡಿಯವೆಂದು ಹೆಸರು. ಇದನ್ನು 14 ಪ್ರಾಂತಗಳಾಗಿ ವಿಭಾಗಿಸಿರುವರು. ಈ ವಿಭಾಗದಲ್ಲಿ ಮದರಾಸು ಮೊದಲಾದ ಆಧಿಪತ್ಯ

ಗಳಿಗೆ ಗೌರ್ನರುಗಳನ್ನೂ, ಸಂಯುಕ್ತ ಪ್ರಾಂತಗಳು ಮೊದಲಾದ ಪ್ರಾಂತಗಳಿಗೆ ಲೆಫ್ಟಿನೆಂಟ್ ಗೌರ್ನರುಗಳನ್ನೂ ಅಥವಾ ಚೀಫ್ ಕಮಿಷನರುಗಳನ್ನೂ ನಿಯಮಿಸಿದಾರೆ. ಗೌರ್ನರುಗಳನ್ನೂ ಚಕ್ರವರ್ತಿಗಳೇ ನಿಯಮಿಸುವರು. ಇತರರನ್ನು ವೈಸಿರಾಯಿಯವರು ಚಕ್ರವರ್ತಿಯವರ ಅನುಮತಿಯನ್ನು ಪಡೆದು ತಾವೇ ನಿಯಮಿಸುವರು. ಎಲ್ಲಾ ಮುಖ್ಯ ಪ್ರಾಂತಗಳಲ್ಲಿಯೂ ನ್ಯಾಯವಿಧಾಯಕ ಸಭೆಗಳಿವೆ.

ಪ್ರತಿಯೊಂದು ಆಧಿಪತ್ಯ ಅಥವಾ ದೊಡ್ಡ ಪ್ರಾಂತಗಳನ್ನೂ ಡಿಸ್ಟ್ರಿಕ್ಟು ಗಳಾಗಿ ವಿಭಾಗಿಸಿದಾರೆ. ಪ್ರತಿ ಡಿಸ್ಟ್ರಿಕ್ಟಿನಲ್ಲಿಯೂ ಕಂದಾಯ ವಸೂಲಿ, ಜನಗಳ ರಕ್ಷಣೆ ಮೊದಲಾದ ಕೆಲಸಗಳನ್ನೆಲ್ಲ ನೋಡಿಕೊಳ್ಳುವುದಕ್ಕೆ ಕಲೆಕ್ಟರ್ ಎಂಬ ಒಬ್ಬ ಮುಖ್ಯಾಧಿಕಾರಿಯೂ, ಆತನ ಕೈಕೆಳಗೆ ಇತರ ಅನೇಕ ಸಹಾಯಾಧಿಕಾರಿಗಳೂ ಇರುವರು. ಇದಲ್ಲದೆ ಪ್ರತಿ ಪ್ರಾಂತದಲ್ಲಿಯೂ ರಾಜ್ಯದ ಆಡಳಿತದ ವಿಚಾರಗಳನ್ನು ಬೇರೆ ಬೇರೆ ಇಲಾಖೆ ಅಥವಾ ಬಾಬುಗಳಾಗಿ ವಿಂಗಡಿಸಿದಾರೆ. ರೆವಿನ್ಯೂ, ಪೊಲೀಸು, ವಿದ್ಯಾಭ್ಯಾಸ ಮೊದಲಾದ ಪ್ರತಿಯೊಂದು ಇಲಾಖೆಗೂ ಒಬ್ಬ ಮುಖ್ಯಾಧಿಕಾರಿಯೂ ಆತನ ಕೈಕೆಳಗೆ ಅನೇಕ ಸಹಾಯಾಧಿಕಾರಿಗಳೂ ಇರುವರು. ನ್ಯಾಯವಿಚಾರಣೆಗೋಸ್ಕರ ಮದರಾಸು, ಬೊಂಬಾಯಿ, ಕಲ್ಕತ್ತ, ಅಲಹಾಬಾದುಗಳಲ್ಲಿ ಹೈಕೋರ್ಟುಗಳೂ, ಇತರ ಪ್ರಾಂತಗಳಲ್ಲಿ ಚೀಫ್ ಕೋರ್ಟುಗಳೂ ಏರ್ಪಾಡಾಗಿವೆ. ಈ ದೊಡ್ಡ ಕೋರ್ಟುಗಳ ಅಧಿಕಾರಕ್ಕೆ ಒಳಪಟ್ಟ ಸಣ್ಣ ಕೋರ್ಟುಗಳು ಎಲ್ಲಾ ಡಿಸ್ಟ್ರಿಕ್ಟುಗಳಲ್ಲಿಯೂ, ತಾಲ್ಲೂಕುಗಳಲ್ಲಿಯೂ ಇವೆ.

ಈ ದೇಶದ ಜನರಿಗೆ ತಮ್ಮ ದೇಶದ ರಾಜ್ಯಭಾರದಲ್ಲಿ ಆಸಕ್ತಿಯೂ, ಅನುಭವವೂ ಹೆಚ್ಚಲು ಪ್ರತಿಯೊಂದು ದೊಡ್ಡ ಪಟ್ಟಣದಲ್ಲಿಯೂ ಮ್ಯುನಿಸಿಪಾಲಿಟಿಗಳೆಂಬ ಪೌರಕಾರ್ಯನಿರ್ವಾಹಕ ಸಂಘಗಳು ಏರ್ಪಾಡಾಗಿವೆ. ಮ್ಯುನಿಸಿಪಾಲಿಟಿಯವರು ತೆರಿಗೆಗಳನ್ನು ವಸೂಲುಮಾಡಿ ಗ್ರಾಮಪಾಕೀಜ, ನೀರಿನ ಸರಬರಾಯಿ, ಬೆಳಕಿಡುವುದು ಮೊದಲಾದ ಪಟ್ಟಣದ ಅಭಿವೃದ್ಧಿಗೆ ಸಂಬಂಧಪಟ್ಟ ಕೆಲಸಗಳನ್ನು ನಿರ್ವಹಿಸುತ್ತಾರೆ. ಈ ಕೆಲಸಗಳನ್ನು ನೋಡಿಕೊಳ್ಳುವುದಕ್ಕೆ ಮ್ಯುನಿಸಿಪಲ್ ಕೌನ್ಸಿಲ್‌ಗಳೆಂಬ ಸಭೆಗಳಿರುವುವು. ಈ ಸಭೆಯಲ್ಲಿ ಸಾಮಾಜಿಕರು ಮುಖ್ಯವಾಗಿ ಜನಗಳಿಂದಲೇ ಚುನಾಯಿಸಲ್ಪಡುವರು. ಪ್ರಜೆಗಳ ಪ್ರತಿನಿಧಿಗಳು ಈ ಕೌನ್ಸಿಲ್‌ಗಳಲ್ಲಿಯೇ ಅಲ್ಲದೆ ಇತರ ಪ್ರಾಂತಗಳ ಮತ್ತು ಇಂಡಿಯದ ನ್ಯಾಯವಿಧಾಯಕ ಸಭೆಗಳಲ್ಲಿಯೂ ಇರುವರು. ಜನಗಳಿಗೆ ರಾಜಕೀಯ ವಿಚಾರದಲ್ಲಿ ಹೆಚ್ಚಾದ ಅಧಿಕಾರಗಳನ್ನೂ, ಸ್ವಾತಂತ್ರ್ಯವನ್ನೂ ಕೊಡಬೇಕೆಂದು ಇಂಡಿಯಾ ವೈಸಿರಾಯಿಯವರಾಗಿದ್ದ ಲಾರ್ಡ್ ಚೆಮ್ಸ್‌ಫರ್ಡ್‌ರವರೂ, ಇಂಡಿಯಾ ಸ್ಟೇಟ್ ಸೆಕ್ರಿಟೆರಿಗಳಾದ ಮಾಂಟೆಗ್ಯೂರವರೂ ಏರ್ಪಾಡುಮಾಡಿದರು.

ಬ್ರಿಟಿಷರು ಆಳುವುದಕ್ಕೆ ಆರಂಭಿಸಿದಮೇಲೆ ನಮ್ಮ ದೇಶದಲ್ಲಿ ಪರರಾಜರ ಕಾಟವೂ, ಒಳದೇಶದ ಯುದ್ಧಗಳೂ, ಠಕ್ಕರೇ ಮೊದಲಾದ ಗಂಟುಕಳ್ಳರ ಹೆದರಿಕೆಯೂ ತಪ್ಪಿ ಜನರ ಕ್ಷೇಮವು ಹೆಚ್ಚುವಂತಾಯಿತು. ಜನಗಳ ಸೌಕರ್ಯಕ್ಕಾಗಿ ಆಸ್ಪತ್ರೆ, ಸ್ಕೂಲು, ಪೋಸ್ಟಾಫೀಸು, ತಂತಿ, ರೈಲುಮಾರ್ಗ ಮೊದಲಾದ ಅನೇಕ ಏರ್ಪಾಡುಗಳು ವೃದ್ಧಿಹೊಂದುತ್ತಲೇ ಇವೆ. ವ್ಯಾಪಾರವೂ ಅಭಿವೃದ್ಧಿಗೆ ಬಂದಿದೆ. ಕ್ಷೀಣವಾಗಿದ್ದ ಕೈಗಾರಿಕೆಗಳು ಅಭಿವೃದ್ಧಿಗೆ ಬರಲು ತಕ್ಕ ಏರ್ಪಾಡುಗಳು ನಡೆಯುತ್ತಲಿವೆ. ದೇಶದ ಸಂಪತ್ತು ಹೆಚ್ಚಾಗಲು ಭೂಲಕ್ಷಣ ಮೊದಲಾದ ಸ್ವಾಭಾವಿಕ ಲಕ್ಷಣಗಳು ಬಹು ಸಹಾಯಕರಗಳಾಗಿವೆ.

## ಇಂಡಿಯಾದೇಶದ ರಾಜಕೀಯ ವಿಭಾಗಗಳು ಮತ್ತು ಮುಖ್ಯ ಪಟ್ಟಣಗಳು

### ಬ್ರಿಟಿಷ್ ಇಂಡಿಯ

ಇಂಡಿಯಾದೇಶವನ್ನು ಬ್ರಿಟಿಷ್ ಇಂಡಿಯ, ಆಶ್ರಿತ ಸಂಸ್ಥಾನಗಳು, ಸ್ವತಂತ್ರ ಸಂಸ್ಥಾನಗಳು ಮತ್ತು ಇತರ ಯೂರೋಪಿಯನರಿಗೆ ಸೇರಿದ ರಾಷ್ಟ್ರಗಳು ಎಂದು ನಾಲ್ಕು ಭಾಗಗಳಾಗಿ ವಿಂಗಡಿಸಬಹುದು. ಇವುಗಳನ್ನು ಭೂಪಟದಲ್ಲಿ ಬೇರೆ ಬೇರೆ ಬಣ್ಣಗಳಿಂದ ತೋರಿಸಿರುವುದರಿಂದ ನೋಡಿ ಗೊತ್ತುಮಾಡಬಹುದು. ಇವುಗಳಲ್ಲೆಲ್ಲ ವಿಸ್ತೀರ್ಣದಲ್ಲಿಯೂ, ಜನಸಂಖ್ಯೆಯಲ್ಲಿಯೂ ಬ್ರಿಟಿಷ್ ಇಂಡಿಯವೇ ಬಹು ದೊಡ್ಡದು. ಆಶ್ರಿತ ಸಂಸ್ಥಾನಗಳು ಎರಡನೆಯವು. ಉಳಿದುವು ಬಹಳ ಚಿಕ್ಕವು.

ಬ್ರಿಟಿಷರೇ ಸ್ವಂತವಾಗಿ ಆಳುವ ಬ್ರಿಟಿಷ್ ಇಂಡಿಯದ ವಿಸ್ತೀರ್ಣ (ಬರ್ಮ ವಿನಾ) 12 ಲಕ್ಷ ಚ. ಮೈಲಿಗಳು; ಜನಸಂಖ್ಯೆ 23 ಕೋಟಿ. ಎಂದರೆ ಈ ದೇಶದ ಒಟ್ಟು ವಿಸ್ತೀರ್ಣದಲ್ಲಿ $\frac{3}{5}$ ಭಾಗವನ್ನೂ, ಒಟ್ಟು ಜನಸಂಖ್ಯೆಯಲ್ಲಿ $\frac{3}{4}$ ಭಾಗವನ್ನೂ ಇದು ಒಳಗೊಂಡಿದೆ. ಬ್ರಿಟಿಷ್ ಇಂಡಿಯವನ್ನು 14 ವಿಭಾಗಗಳಾಗಿ ಭಾಗಿಸಿರುವರು. ಅವು ಯಾವುವೆಂದರೆ:—ಗೌರ್ನರುಗಳ ಕೈಕೆಳಗಿರುವ ಬಂಗಾಳ, ಬೊಂಬಾಯಿ, ಮದರಾಸು ಆಧಿಪತ್ಯಗಳು. ಲೆಫ್ಟಿನೆಂಟ್ ಗೌರ್ನರುಗಳ ಕೈಕೆಳಗಿರುವ ಬಿಹಾರ ಮತ್ತು ಒರಿಸ್ಸಾ, ಸಂಯುಕ್ತ ಪ್ರಾಂತಗಳು ಮತ್ತು ಚೀಫ್ ಕಮಿಷನರುಗಳ ಕೈಕೆಳಗಿರುವ ಅಸ್ಸಾಂ, ಮಧ್ಯಪ್ರಾಂತಗಳು, ವಾಯವ್ಯದ ಸರಹದ್ದಿನ ಪ್ರಾಂತ, ಬ್ರಿಟಿಷ್ ಬೆಲೂಚಿಸ್ಥಾನ, ಅಜ್ಮೀರ್, ಕೊಡಗು ಮತ್ತು ಅಂಡಮಾನ ದ್ವೀಪಗಳೆಂಬ ಚಿಕ್ಕ ಪ್ರಾಂತಗಳು. ಇವುಗಳಲ್ಲಿ ಕೊನೆಯ ನಾಲ್ಕೂ ಬಹಳ ಚಿಕ್ಕವು.

ಈ ವಿಭಾಗಗಳ ವಿವರಣೆಯು ಇಂಡಿಯಾದೇಶದ ಸಾಮಾನ್ಯ ವಿವರಣೆಯಿಂದಲೇ ಸ್ಪಷ್ಟವಾಗುವುದು. ಈಗ ಅವುಗಳ ಸನ್ನಿವೇಶ ಕ್ರಮದಲ್ಲಿ ಒಂದೊಂ

ದಾಗಿ ತೆಗೆದುಕೊಂಡು ಪ್ರತಿಯೊಂದರ ವಿಷಯದಲ್ಲಿಯೂ ಕೆಲವು ಮುಖ್ಯ ವಿಷಯಗಳನ್ನೂ, ಮುಖ್ಯ ಪಟ್ಟಣಗಳನ್ನೂ ಕೆಳಗೆ ವಿವರಿಸಲಾಗಿದೆ.

## ಬಂಗಾಳ

1911ರಲ್ಲಿ ಈಗಿನ ನಮ್ಮ ಚಕ್ರವರ್ತಿಗಳಾದ ಐದನೆಯ ಜಾರ್ಜ್‌ರವರು ತಮ್ಮ ಕಿರೀಟಧಾರಣೆಯ ಮಹೋತ್ಸವಕ್ಕಾಗಿ ನಮ್ಮ ದೇಶಕ್ಕೆ ದಯಮಾಡಿಸಿದ್ದಾಗ ಬಂಗಾಳ ದೇಶಕ್ಕೆ ಒಬ್ಬ ಗೌರ್ನರನ್ನು ನಿಯಮಿಸಿ, ಕಲ್ಕತ್ತೆಯಲ್ಲಿದ್ದ ಈ ದೇಶದ ರಾಜಧಾನಿಯನ್ನು ಕಲ್ಕತ್ತೆಯಿಂದ ಡೆಲ್ಲಿಗೆ ಬದಲಾಯಿಸಿದರು. ಇದಕ್ಕೆ ಮುಂಚೆ ಬಂಗಾಳವು ಒಬ್ಬ ಲೆಫ್ಟಿನೆಂಟು ಗೌರ್ನರ ವಶದಲ್ಲಿತ್ತು.

ಬಂಗಾಳವು ಗಂಗಾನದಿಯ ಫಲವತ್ತಾದ ಬೈಲಿನಲ್ಲಿರುವುದರಿಂದಲೂ, ಇಲ್ಲಿ ಮಳೆ ಹೆಚ್ಚಾಗಿ ಬೀಳುವುದರಿಂದಲೂ ಇಂಡಿಯಾದೇಶದಲ್ಲೆಲ್ಲಾ ಈ ಆಧಿಪತ್ಯದಲ್ಲಿಯೇ ಜನಸಾಂದ್ರತೆಯೂ ಸಂಪದಭಿವೃದ್ಧಿಯೂ ಅತ್ಯಧಿಕವಾಗಿದೆ.

**ಮುಖ್ಯವಾದ ಪಟ್ಟಣಗಳು; ಕಲ್ಕತ್ತ.**—ಇದು ಗಂಗಾನದಿಯ ಮುಖಗಳಲ್ಲೊಂದಾದ ಹೂಗ್ಲಿಯ ದಡದಲ್ಲಿ ಸಮುದ್ರಕ್ಕೆ 70 ಮೈಲಿಗಳ ದೂರದಲ್ಲಿದೆ. ಇದಕ್ಕೆ ಶಾಖಾನಗರವಾದ ಹೌರ ಪಟ್ಟಣವನ್ನು ಸೇರಿಸಿದರೆ ಈ ಪಟ್ಟಣದ ಒಟ್ಟು ಜನಸಂಖ್ಯೆ 12 ಲಕ್ಷಕ್ಕೆ ಮೀರುವುದು. ಇಂಡಿಯಾದೇಶದಲ್ಲೆಲ್ಲಾ ಇಷ್ಟು ಪ್ರಜೆಗಳಿಂದ ಕೂಡಿದ ಪಟ್ಟಣವು ಇನ್ನಾವುದೂ ಇಲ್ಲ. ಇದರ ಪ್ರಾಮುಖ್ಯಕ್ಕೆ ಅಥವಾ ಬೆಳವಳಿಕೆಗೆ ಮುಖ್ಯ ಕಾರಣಗಳೇನಿರಬಹುದೆಂಬುದನ್ನು ಯೋಚಿಸಿ ನೋಡಿ. ಹೂಗ್ಲಿ ನದಿಯಮೇಲೆ ಕಲ್ಕತ್ತೆಗೆ ದೊಡ್ಡ ಜಹಜುಗಳು ಬರುವುವು. ಅತಿ ಫಲವತ್ತಾದ ಗಂಗಾನದಿಯ ಮೈದಾನದಲ್ಲಿ ಬೆಳೆಯುವ ಬತ್ತ, ಸಣಬು ಮೊದಲಾದ ಸಾಮಾನುಗಳೂ, ಅಸ್ಸಾಮಿನಲ್ಲಿ ಬೆಳೆಯುವ ಟೀಯಲೆಯೂ ಇಲ್ಲಿಂದ ರಫ್ತಾಗುವುವು. ಗಂಗಾನದಿಯ ಬೈಲಿನ ಜನರಿಗೆ ಬೇಕಾಗುವ ವಿದೇಶದ ಸಾಮಾನುಗಳು ಈ ಪಟ್ಟಣದ ಮೂಲಕ ಆಮದಾಗುವುವು. ಇಲ್ಲಿಂದ ದೇಶದ ಒಳಭಾಗಕ್ಕೆ ಅನೇಕ ರೈಲುಮಾರ್ಗಗಳಿವೆ. ಗಂಗಾನದಿಯಮೇಲೆ ಹಡಗುಗಳು ಹೋಗಿಬರಬಹುದು. ಈ ಪಟ್ಟಣದ ಸಮೀಪದಲ್ಲಿರುವ ರಾಣೀಗಂಜಿನಲ್ಲಿ ಕಲ್ಲಿದ್ದಲು ಹೆಚ್ಚಾಗಿ ಸಿಕ್ಕುವುದರಿಂದ ಅನೇಕ ಕೈಗಾರಿಕೆಗಳೂ, ಮುಖ್ಯವಾಗಿ ಗೋಣೀಚೀಲಗಳನ್ನು ತಯಾರುಮಾಡುವುದೂ ಇಲ್ಲಿ ನಡೆಯುವುವು. ಇದಲ್ಲದೆ ಈ ಪಟ್ಟಣವು ಬಂಗಾಳಾಧಿಪತ್ಯಕ್ಕೆ ರಾಜಧಾನಿಯಾಗಿದೆ. ಪೂರ್ವದಲ್ಲಿ ಇಂಡಿಯಾದೇಶಕ್ಕೆಲ್ಲಾ ರಾಜಧಾನಿಯಾಗಿತ್ತು. ಈ ಪಟ್ಟಣದಲ್ಲಿ ಅತಿವಿಶಾಲವಾದ ಸೌಧಗಳಿವೆ. ಆದುದರಿಂದ ಇದನ್ನು 'ಅರಮನೆಗಳ ನಗರ' ಎಂದು ಕರೆಯುತ್ತಾರೆ.

**ರಾಣೀಗಂಜ್.**—ಕಲ್ಕತ್ತೆಗೆ ವಾಯುವ್ಯದಲ್ಲಿ ದಾಮೋದರ ನದಿಯ ಕಣಿವೆಯಲ್ಲಿದೆ. ಸಾಮಾನ್ಯವಾಗಿ ಇಂಡಿಯಾದೇಶದ ರೈಲುಮಾರ್ಗಗಳ ಹೊಗೆಯ ಯಂತ್ರಗಳಿಗೆ ಬೇಕಾದ ಕಲ್ಲಿದ್ದಲೆಲ್ಲಾ ಇಲ್ಲಿಯೇ ದೊರೆಯುವುದು. ಇದರ ಸಮೀಪದಲ್ಲಿ ಕಬ್ಬಿಣವೂ ಸಿಕ್ಕುವುದರಿಂದ ಕಬ್ಬಿಣದ ಕಾರ್ಖಾನೆಗಳೂ ಸ್ಥಾಪಿಸಲ್ಪಟ್ಟಿವೆ.

**ಡಕ್ಕಾ.**—ಇದು ಕಲ್ಕತ್ತೆಗೆ ಈಶಾನ್ಯದಲ್ಲಿ ಬ್ರಹ್ಮಪುತ್ರಾ ನದಿಯ ಮುಖದ ಶಾಖೆಗಳಲ್ಲೊಂದರ ದಡದಲ್ಲಿದೆ. ಹಿಂದಿನ ಕಾಲದಲ್ಲಿ ಇಲ್ಲಿ ಅತಿಸೂಕ್ಷ್ಮವಾದ ಮಸ್ಲಿನ್ ಬಟ್ಟೆಗಳು ತಯಾರಾಗುತ್ತಿದ್ದವು. ಈಗ ಈ ಕೈಗಾರಿಕೆ ಕ್ಷೀಣವಾಗಿ ಹೋಗಿದೆ. ಆದರೆ ಇಲ್ಲಿ ಸಣಬಿನ ಕಾರ್ಖಾನೆಗಳು ಹೆಚ್ಚಾಗಿವೆ.

**ಚಿಟಗಾಂಗ್.**—ಇದು ಬಂಗಾಳಕೊಲ್ಲಿಯ ತೀರದಲ್ಲಿರುವ ಒಂದು ರೇವು ಪಟ್ಟಣ. ಅಸ್ಸಾಂ ಪ್ರಾಂತಕ್ಕೆ ಇಲ್ಲಿಂದ ರೈಲುಮಾರ್ಗವನ್ನು ಮಾಡಿರುವುದರಿಂದ ಅಲ್ಲಿನ ವ್ಯಾಪಾರವು ಹೆಚ್ಚಾಗಿ ಈ ಪಟ್ಟಣದ ಮೂಲಕ ನಡೆಯುವುದು.

**ಡಾರ್ಜಿಲಿಂಗ್.**—ಇದು ಹಿಮಾಲಯದ ತಪ್ಪಲಿನಲ್ಲಿರುವ ಆರೋಗ್ಯಸ್ಥಳ. ಬೇಸಗೆಯಲ್ಲಿ ಬಂಗಾಳದ ಗೌರ್ನರವರು ಇಲ್ಲಿ ವಾಸಮಾಡುವರು.

## ಅಸ್ಸಾಂ

ಬಂಗಾಳ ಆಧಿಪತ್ಯಕ್ಕೆ ಈಶಾನ್ಯದಲ್ಲಿರುವ ಈ ಪ್ರಾಂತದಲ್ಲಿ ಬೆಟ್ಟಗುಡ್ಡಗಳು ವಿಶೇಷವಾಗಿವೆ. ಇಲ್ಲಿ ಯೂರೋಪಿಯನ್ ಪ್ಲಾಂಟರುಗಳು ಟೀಯಲೆಯನ್ನು ವಿಶೇಷವಾಗಿ ಬೆಳೆಯುವರು. ಈ ಪ್ರಾಂತದಲ್ಲಿರುವ ಚಿರಾಪುಂಜಿಯಲ್ಲಿ ಬೀಳುವಷ್ಟು ಮಳೆ ಪ್ರಪಂಚದಲ್ಲಿ ಇನ್ನೆಲ್ಲಿಯೂ ಬೀಳುವುದಿಲ್ಲ. ಈ ಪ್ರಾಂತವು ಒಬ್ಬ ಚೀಫ್ ಕಮಿಷನರವರ ಆಳಿಕೆಗೆ ಒಳಪಟ್ಟಿದೆ. ಖಾಸಿಬೆಟ್ಟಗಳ ತಪ್ಪಲಿನಲ್ಲಿರುವ **ಷಿಲಾಂಗ್** ಎಂಬುದು ಮುಖ್ಯ ಪಟ್ಟಣ. ಬ್ರಹ್ಮಪುತ್ರಾ ನದಿಯ ಉಪನದಿಯ ದಡದಲ್ಲಿರುವ ಸಿಲ್ಹೆಟ್ ಎಂಬುದು ಟೀ ಮತ್ತು ಅಕ್ಕಿ ಇವುಗಳನ್ನು ರಫ್ತುಮಾಡುವ ಸ್ಥಳವಾಗಿದೆ.

## ಬಿಹಾರ ಮತ್ತು ಒರಿಸ್ಸಾ

ಬಂಗಾಳಕ್ಕೆ ಪಶ್ಚಿಮದಲ್ಲಿ ಈ ಪ್ರಾಂತವಿದೆ. ಇಲ್ಲಿ ಮಳೆ ಅತ್ಯಧಿಕವಾಗಿಲ್ಲ. ಗೋಧಿಯೂ, ಅಫೀಮೂ ಹೆಚ್ಚಾಗಿ ಬೆಳೆಯುವುದು. ಜನಸಾಂದ್ರತೆ ಹೆಚ್ಚಾಗಿದೆ.

**ಮುಖ್ಯ ಪಟ್ಟಣ; ಪಾಟ್ನ.**—ಇಲ್ಲಿ ಈ ಪ್ರಾಂತದ ಲೆಫ್ಟಿನೆಂಟ್ ಗೌರ್ನರು ವಾಸಮಾಡುವರು. ಇದು ಫಲವತ್ತಾದ ಮೈದಾನದ ಮಧ್ಯಭಾಗದಲ್ಲಿ ಗಂಗಾನದಿಯ ದಡದಲ್ಲಿರುವುದರಿಂದ ದೊಡ್ಡ ವ್ಯಾಪಾರಸ್ಥಳವಾಗಿದೆ. ಅಫೀಮೂ,

ನೀಲಿಯೂ ಇಲ್ಲಿಂದ ವಿಶೇಷವಾಗಿ ರಫ್ತಾಗುತ್ತದೆ. ಪೂರ್ವಕಾಲದಲ್ಲಿ ಮೌರ್ಯ ರಾಜಧಾನಿಯಾಗಿದ್ದ ಪಾಟಲೀಪುತ್ರವೆಂಬ ನಗರವು ಇದರ ಬಳಿಯಲ್ಲಿ ಇತ್ತು.

ಪಾಟ್ನಾಕ್ಕೆ ದಕ್ಷಿಣದಲ್ಲಿರುವ **ಗಯೆ** ಬೌದ್ಧರಿಗೂ ಮತ್ತು ಹಿಂದುಗಳಿಗೂ ಯಾತ್ರಾಸ್ಥಳವಾಗಿದೆ. ಈ ಪಟ್ಟಣದ ಸಮೀಪದಲ್ಲಿರುವ ಅಶ್ವತ್ಥವೃಕ್ಷದ ಕೆಳಗೆ ಕುಳಿತು ಧ್ಯಾನಮಾಡುತ್ತಿದ್ದಾಗ ಗೌತಮ ಬುದ್ಧನಿಗೆ ಮೋಕ್ಷಜ್ಞಾನ ಪ್ರಾಪ್ತವಾಯಿತೆಂದು ಬೌದ್ಧರು ಹೇಳುತ್ತಾರೆ. ಇದರ ಸಮೀಪದಲ್ಲಿಯೇ ಗಂಗಾಧರದೇವರ ಗುಡಿಯೂ, ಶಿಲೆಯಲ್ಲಿ ಕೆತ್ತಿದ ವಿಷ್ಣುಪಾದವೂ ಇವೆ. ಈ ವಿಷ್ಣುಪಾದದ ಮೇಲೆ ಪಿಂಡವನ್ನು ಹಾಕಿದರೆ ಪಿತೃಗಳಿಗೆ ಮುಕ್ತಿಯಾಗುವು ದೆಂದು ಹಿಂದೂ ಜನಗಳು ನಂಬಿದಾರೆ.

ಮಹಾನದೀಮುಖಜಭೂಮಿಯ ಮೇಲು ಭಾಗದಲ್ಲಿರುವ ಕಟಕ್ ಎಂಬುದು ಒರಿಸ್ಸಾ ದೇಶಕ್ಕೆ ಮುಖ್ಯ ಪಟ್ಟಣ. ಇಲ್ಲಿ ಬೆಳ್ಳಿಯ ಪಾತ್ರೆಗಳು ತಯಾರಾಗುವುದು ಹೆಚ್ಚು. ಸ್ವಲ್ಪ ವ್ಯಾಪಾರವೂ ನಡೆಯುವುದು. ಇದಕ್ಕೆ ದಕ್ಷಿಣದಲ್ಲಿ ಮಹಾನದಿಯ ಮುಖಗಳಲ್ಲೊಂದರ ಬಳಿ ಸಮುದ್ರತೀರದಲ್ಲಿರುವ ಪೂರಿ ಅಥವಾ ಜಗನ್ನಾಥವೆಂಬ ಪಟ್ಟಣವು ಹಿಂದೂಗಳ ಯಾತ್ರಾಸ್ಥಳವಾಗಿದೆ.

## ಸಂಯುಕ್ತ ಪ್ರಾಂತಗಳು

ಆಗ್ರ ಮತ್ತು ಅಯೋಧ್ಯೆಗಳೆಂಬ ಎರಡು ಪ್ರಾಂತಗಳನ್ನೊಳಗೊಂಡಿರುವ ಈ ಪ್ರಾಂತವು ಪಂಜಾಬಿಗೂ ಬಿಹಾರಕ್ಕೂ ಮಧ್ಯದಲ್ಲಿದೆ. ಈ ಪ್ರಾಂತದಲ್ಲಿ ಮಳೆಯು ಸಾಮಾನ್ಯವಾಗಿ ಬಿದ್ದರೂ ಪೈರು ಬೆಳೆಯುವುದು ಬಹಳ ಹೆಚ್ಚು. ಇದಕ್ಕೆ ಗಂಗಾ, ಯಮುನಾ, ಗೋಮತೀ ನದಿಗಳೂ, ಅವುಗಳ ಕಾಲುವೆಗಳೂ ಮುಖ್ಯ ಕಾರಣವಾಗಿವೆ. ಪಂಜಾಬನ್ನು ಬಿಟ್ಟರೆ ಇಲ್ಲಿ ಬೆಳೆಯುವಷ್ಟು ಗೋಧಿ ಇನ್ನಾವ ಪ್ರಾಂತದಲ್ಲೂ ಬೆಳೆಯುವುದಿಲ್ಲ. ಅಫೀಮು, ಕಬ್ಬುಗಳ ಬೆಳೆಗೆ ಈ ರಾಷ್ಟ್ರವು ಈ ದೇಶದಲ್ಲೆಲ್ಲಾ ಮೊದಲನೆಯದಾಗಿದೆ. ಹತ್ತಿಯೂ ಇಲ್ಲಿ ಹೆಚ್ಚಾಗಿ ಬೆಳೆಯುವುದು. ಹಿಂದೂಗಳ ಯಾತ್ರಾಸ್ಥಳಗಳು ವಿಶೇಷವಾಗಿವೆ.

**ಮುಖ್ಯ ಪಟ್ಟಣಗಳು; ಅಲಹಾಬಾದ್.**—ಇಲ್ಲಿ ಈ ಪ್ರಾಂತಗಳ ಲೆಫ್ಟಿನೆಂಟ್ ಗೌರ್ನರು ವಾಸಮಾಡುತ್ತಾರೆ. ಇದು ಗಂಗಾ ಯಮುನಾ ನದಿಗಳ ಸಂಗಮಸ್ಥಳದಲ್ಲಿರುವುದರಿಂದ ಪ್ರಯಾಗವೆಂಬ ಹೆಸರಿನಿಂದ ಹಿಂದೂಗಳಿಗೆ ಪುಣ್ಯಸ್ಥಳವೆನಿಸಿಕೊಂಡಿದೆ. ವ್ಯಾಪಾರವೂ ವಿಶೇಷವಾಗಿ ನಡೆಯುವುದಲ್ಲದೆ ವಿಶ್ವವಿದ್ಯಾನಿಲಯವೂ, ಹೈಕೋರ್ಟೂ ಇವೆ.

**ಲಕ್ನೋ.**—ಇದು ಗೋಮತೀ ನದಿಯ ತೀರದಲ್ಲಿ 2½ ಲಕ್ಷ ಜನರಿರುವ ದೊಡ್ಡ ಪಟ್ಟಣ. ಹಿಂದೆ ಅಯೋಧ್ಯೆಯ ನವಾಬರಿಗೆ ರಾಜಧಾನಿಯಾಗಿತ್ತು.

ಈಗಲೂ ಚಿನ್ನ, ಬೆಳ್ಳಿ ಮತ್ತು ದಂತದ ಕೆಲಸಗಳು ಹೆಚ್ಚಾಗಿ ನಡೆಯುತ್ತವೆ. ರಾಮಾಯಣದಲ್ಲಿ ಹೇಳಿರುವ ಪುರಾತನ ಅಯೋಧ್ಯಾ ನಗರವು ಈ ಪಟ್ಟಣದ ಸಮಿಾಪದಲ್ಲಿತ್ತೆಂದು ಹೇಳುತ್ತಾರೆ.

**ಕಾಶಿ** (ಬೆನಾರಿಸ್).—ಇದು ಗಂಗಾನದಿಯ ದಡದಲ್ಲಿದೆ. ಹಿಂದೂಗಳಿಗೆ ಅತಿಪವಿತ್ರವಾದ ಯಾತ್ರಾಸ್ಥಳವಾಗಿದೆ. ಕಾಶಿಯಲ್ಲಿ ಸಾಯುವ ಪ್ರತಿಪ್ರಾಣಿಯೂ ಮುಕ್ತಿಯನ್ನು ಹೊಂದುವುದೆಂದು ಹಿಂದೂಗಳು ನಂಬುತ್ತಾರೆ. ಸಾವಿರಾರು ಯಾತ್ರಾರ್ಥಿಗಳು ಪ್ರತಿನಿತ್ಯವೂ ಇಲ್ಲಿಗೆ ಬರುತ್ತಿರುವರು. ಇಲ್ಲಿರುವ ದೇವಸ್ಥಾನಗಳಲ್ಲಿ ವಿಶ್ವೇಶ್ವರನ ಗುಡಿಯೂ, ಕಾಲಭೈರವನ ಗುಡಿಯೂ ಬಹು ಪ್ರಸಿದ್ಧವಾದುವು. ಇಲ್ಲಿ ಬಹು ಉತ್ತಮವಾದ ಹಿತ್ತಾಳೆಯ ಪಾತ್ರೆಗಳೂ, ರೇಷ್ಮೆಯ ಬಟ್ಟೆಗಳೂ ತಯಾರಾಗುತ್ತವೆ. ಕಾಶೀಪೀತಾಂಬರಗಳು ಈ ದೇಶದಲ್ಲೆಲ್ಲಾ ಪ್ರಸಿದ್ಧವಾಗಿವೆ. ಈ ಪಟ್ಟಣದಲ್ಲಿ ಈಚೆಗೆ ಹಿಂದೂ ಯೂನಿವರ್ಸಿಟಿ ಎಂಬ ವಿಶ್ವವಿದ್ಯಾಲಯವೊಂದು ಏರ್ಪಾಡಾಗಿದೆ.

**ಆಗ್ರಾ.**—ಇದು ಯಮುನಾ ನದಿಯ ದಡದಲ್ಲಿದೆ. ಅಮೃತಶಿಲೆಯಿಂದ ಕಟ್ಟಲ್ಪಟ್ಟ ಅದ್ಭುತವಾದ 'ತಾಜ್ ಮಹಲ್' ಎಂಬ ಮಸೀದಿ ಇಲ್ಲಿದೆ. ತನ್ನ ಹೆಂಡತಿಯಾದ ಮುಂಮ್ತಾಜ್ ಮಹಲ್ ಎಂಬುವಳ ಜ್ಞಾಪಕಾರ್ಥವಾಗಿ ಷಹಜಹಾನನಿಂದ ಇದು ಕಟ್ಟಲ್ಪಟ್ಟಿತು. ಈ ಪಟ್ಟಣದಲ್ಲಿ ಅನೇಕ ರೈಲುಮಾರ್ಗಗಳು ಸಂಧಿಸುವುವು. ಇದು ಧಾನ್ಯದ ವ್ಯಾಪಾರಕ್ಕೆ ಬಹು ಪ್ರಸಿದ್ಧವಾಗಿದೆ.

**ಕಾನ್ಪುರ.**—ಇದು ಗಂಗಾನದಿಯ ದಡದಲ್ಲಿದೆ. ಇಲ್ಲಿ ಅನೇಕ ರೈಲುಮಾರ್ಗಗಳು ಸಂಧಿಸುವುದರಿಂದ ಇದರ ವ್ಯಾಪಾರ ಹೆಚ್ಚುತ್ತಲಿದೆ. ಇದರ ಸಮಿಾಪದಲ್ಲಿರುವ ಹಿಮಾಲಯದ ತಪ್ಪಲಿನ ಹುಲ್ಲುಗಾವಲುಗಳಲ್ಲಿ ದನಕುರಿಗಳು ವಿಶೇಷವಾಗಿರುವುದರಿಂದ, ತೊಗಲನ್ನು ಹದಮಾಡಿ ಜೀನು ಮೊದಲಾದ ಸಾಮಾನುಗಳನ್ನು ತಯಾರುಮಾಡುವ ಕಾರ್ಖಾನೆಗಳು ಇಲ್ಲಿ ವಿಶೇಷವಾಗಿವೆ. ಅಲ್ಲದೆ ಉಣ್ಣೆಯ ಬಟ್ಟೆಗಳೂ ಹತ್ತಿಯ ಬಟ್ಟೆಗಳೂ ತಯಾರಾಗುತ್ತವೆ. ಇದು ಕೈಗಾರಿಕೆಗಳಿಂದಲೇ ಪ್ರಾಮುಖ್ಯವನ್ನು ಪಡೆದ ಪಟ್ಟಣವಾಗಿದೆ. ಈ ಪಟ್ಟಣದಲ್ಲಿ 1857ರಲ್ಲಿ ನಡೆದ ದೊಡ್ಡ ದಂಗೆಯಲ್ಲಿ ನಾನಾಸಾಹೇಬನು ಅನೇಕ ಇಂಗ್ಲಿಷ್ ಸಿಪಾಯಿಗಳನ್ನು ಕೊಲ್ಲಿಸಿದನು.

**ಹರಿದ್ವಾರ.**—ಈ ಪಟ್ಟಣದ ಸಮಿಾಪದಲ್ಲಿ ಗಂಗಾನದಿಯು ಹಿಮಾಲಯ ಪರ್ವತದಿಂದಿಳಿದು ಮೈದಾನವನ್ನು ಪ್ರವೇಶಿಸುವುದು. ಇದು ಹಿಂದೂಗಳ ಯಾತ್ರಾಸ್ಥಳ. ಇದರ ಸಮಿಾಪದಲ್ಲಿ ರೂರ್ಕಿ, ಡೆಹರಾಡೂನ್ ಎಂಬ ಪ್ರಸಿದ್ಧವಾದ ಪಟ್ಟಣಗಳಿವೆ. ರೂರ್ಕಿಯಲ್ಲಿ ಪ್ರಸಿದ್ಧವಾದ ಇಂಜನಿಯರಿಂಗ್ ಕಾಲೇಜಿದೆ. ಡೆಹರಾಡೂನಿನಲ್ಲಿ ಪ್ರಸಿದ್ಧವಾದ ಫಾರೆಸ್ಟು ಸ್ಕೂಲಿರುವುದು.

**ಆಲಿಘರ್.**—ಇದು ಆಗ್ರಾಕ್ಕೆ ಉತ್ತರದಲ್ಲಿದೆ. ಇಲ್ಲಿ ಉತ್ತಮವಾದ ಬೀಗಗಳು ತಯಾರಾಗುತ್ತವೆ. ಮುಸಲ್ಮಾನರ ಕಾಲೇಜೊಂದಿದೆ. ಈಚೆಗೆ ಮುಸಲ್ಮಾನರ ವಿಶ್ವವಿದ್ಯಾಲಯವೊಂದನ್ನು ಇಲ್ಲಿ ಸ್ಥಾಪಿಸಿದ್ದಾರೆ.

**ಮುಸ್ಸೂರಿ ಮತ್ತು ನೈನಿಟಾಲ್.**—ಇವು ಹಿಮಾಲಯದ ಎತ್ತರವಾದ ತಪ್ಪಲಿನಲ್ಲಿವೆ. ಬೇಸಗೆಯಲ್ಲಿ ಯೂರೋಪಿಯನರು ಇಲ್ಲಿ ವಾಸಮಾಡುತ್ತಾರೆ.

**ಪಂಜಾಬ್.**—ಈ ಪ್ರಾಂತವು ಸಿಂಧು ನದಿಯೂ ಅದರ ಉಪನದಿಗಳೂ ಒಂದರ ಬಳಿಯಲ್ಲೊಂದು ಹರಿಯುವ ಮೈದಾನವನ್ನು ಒಳಗೊಂಡಿದೆ. ಪಂಜಾಬ್ ಅಂದರೆ ಐದು ನೀರು ಅಥವಾ ಐದು ನದಿಗಳು ಎಂದರ್ಥ. ಶತದ್ರು ಮೊದಲಾದ ಪಂಚನದಿಗಳ ಬೈಲುಗಳನ್ನು ಒಳಗೊಂಡಿರುವುದರಿಂದ ಈ ಪ್ರಾಂತಕ್ಕೆ ಈ ಹೆಸರು ಬಂದಿದೆ.

ಈ ಪ್ರಾಂತದಲ್ಲಿ ಮಳೆ ಬೀಳುವುದು ಬಹಳ ಕಡಿಮೆ. ಆದರೆ ಇಲ್ಲಿ ಹರಿಯುವ ಹಿಮಪೋಷಿತ ನದಿಗಳಿಂದ ಅನೇಕ ಕಾಲುವೆಗಳನ್ನು ಮಾಡಿರುವರು. ಇಲ್ಲಿ ಕಾಲುವೆಗಳನ್ನು ಮಾಡಿರುವುದನ್ನು ನೋಡಿದರೆ ಮಂತ್ರವಾದಿಯ ಆಟದಂತೆ ಅತ್ಯದ್ಭುತವಾಗಿ ತೋರುವುದು. ಪ್ರಪಂಚದ ಇನ್ನಾವ ಭಾಗದಲ್ಲಿಯೂ ಇಷ್ಟು ಒತ್ತಾದ ಕಾಲುವೆಗಳಿಲ್ಲ. ಕಾಲುವೆಗಳಿಲ್ಲದ ಭಾಗಗಳೆಲ್ಲಾ ಮರಳುಕಾಡಿನಂತಿರುವುದರಿಂದ ಈ ಪ್ರಾಂತದಲ್ಲಿ ಸರಾಸರಿ ಜನಸಾಂದ್ರತೆ ಕಡಿಮೆಯಾಗಿರುವುದು. ಪ್ರಪಂಚದಲ್ಲಿ ಬಹಳ ಹೆಚ್ಚಾಗಿ ಗೋಧಿ ಬೆಳೆಯುವ ಪ್ರದೇಶಗಳಲ್ಲಿ ಇದು ಒಂದಾಗಿದೆ. ನಮ್ಮ ದೇಶದಲ್ಲಿರುವ ಸಿಕ್ ಮತದವರೆಲ್ಲರೂ ಸಾಮಾನ್ಯವಾಗಿ ಈ ಪ್ರಾಂತದಲ್ಲಿಯೇ ವಾಸಿಸುವರು. ಇಲ್ಲಿ ಹಿಂದೂಗಳಿಗಿಂತ ಮುಸಲ್ಮಾನರ ಸಂಖ್ಯೆಯೇ ಹೆಚ್ಚು.

**ಮುಖ್ಯ ಪಟ್ಟಣಗಳು; ಲಾಹೋರ್.**—ಈ ಪಟ್ಟಣವು ಪಂಜಾಬಿನ ಮಧ್ಯಭಾಗದಲ್ಲಿ ರಾವಿ ನದಿಯ ದಡದಲ್ಲಿದೆ. ಇಲ್ಲಿ ಈ ಪ್ರಾಂತದ ಲೆಫ್ಟಿನೆಂಟ್ ಗೌರ್ನರು ವಾಸಮಾಡುತ್ತಾರೆ. ಅಲ್ಲದೆ ವಿಶ್ವವಿದ್ಯಾಲಯವೊಂದಿದೆ. ಅನೇಕ ರೈಲುಮಾರ್ಗಗಳು ಸಂಧಿಸುವುದರಿಂದ ಇಲ್ಲಿ ವ್ಯಾಪಾರ ಹೆಚ್ಚುತ್ತಲಿದೆ.

**ಅಮೃತಸರ.**—ಇದು ಲಾಹೋರಿಗೆ ಪೂರ್ವದಲ್ಲಿದೆ. ಸಿಕ್ಕರ ಯಾತ್ರಾಸ್ಥಳ. ಈ ಪಟ್ಟಣದ ಮಧ್ಯದಲ್ಲಿ ಅಮೃತಸರವೆಂಬ ಸರೋವರವಿದೆ. ಅದರ ಮಧ್ಯದಲ್ಲಿರುವ ಒಂದು ಮಂಟಪದಲ್ಲಿ ಸಿಕ್ಕರ ಪವಿತ್ರ ಗ್ರಂಥವನ್ನಿಟ್ಟಿದ್ದಾರೆ. ಈ ಸರೋವರದಲ್ಲಿ ಸ್ನಾನ ಮಾಡುವುದು ಪಾಪಹರವೆಂದು ಸಿಕ್ಕರು ನಂಬುತ್ತಾರೆ. ಈ ಸರೋವರದ ಸುತ್ತಲೂ ಮನೆಗಳೂ ವೃಕ್ಷಗಳೂ ಇರುವುದರಿಂದ ನೋಡುವುದಕ್ಕೆ ಬಹು ರಮಣೀಯವಾಗಿದೆ. ಈ ಪಟ್ಟಣದ ಮೂಲಕವಾಗಿ ಕಾಶ್ಮೀರಕ್ಕೂ

ಅಫ್ಘಾನಿಸ್ಥಾನಕ್ಕೂ ವಿಶೇಷ ವ್ಯಾಪಾರ ನಡೆಯುತ್ತದೆ. ಇಲ್ಲಿ ಶಾಲುಗಳೂ ರತ್ನಕಂಬಳಿಗಳೂ ತಯಾರಾಗುತ್ತವೆ.

ಈ ಪ್ರಾಂತವು ಅಫ್ಘಾನಿಸ್ಥಾನಕ್ಕೆ ಸಮೀಪವಾಗಿರುವ ಪ್ರಾಂತವಾಗಿರುವುದರಿಂದಲೂ, ಇಂಡಿಯಾದೇಶಕ್ಕೆ ಶತ್ರುಗಳು ಯಾವಾಗಲೂ ವಾಯುವ್ಯದ ಕಣಿವೆಗಳ ಮಾರ್ಗವಾಗಿ ಬರುತ್ತಿರುವುದರಿಂದಲೂ, ಪಂಜಾಬಿನಲ್ಲಿ ಕಂಟೋನ್ಮೆಂಟುಗಳು ವಿಶೇಷವಾಗಿವೆ. ಲೂಡಿಯಾನಾ, ಅಮೃತಸರ, ಅಂಬಾಲ ಇವು ದೊಡ್ಡ ಸೇನಾ ನಿವಾಸಸ್ಥಳಗಳಾಗಿವೆ.

**ಮುಲ್ತಾನ್.**—ಇದು ಚೀನಾಬ್ ನದಿಯ ದಡದಲ್ಲಿದೆ. ಈ ಪಟ್ಟಣದ ಮೂಲಕ ಪಂಜಾಬಿನಿಂದ ಸಿಂಧೂದೇಶ, ಅಫ್ಘಾನಿಸ್ಥಾನ, ಬೆಲೂಚಿಸ್ಥಾನಗಳಿಗೆ ವ್ಯಾಪಾರವು ಪೂರ್ವಕಾಲದಿಂದಲೂ ನಡೆಯುತ್ತಿರುವುದು.

**ದೆಹಲಿ ಅಥವಾ ಡೆಲ್ಲಿ.**—ಯಮುನಾ ನದಿಯ ದಡದಲ್ಲಿರುವ ದೊಡ್ಡ ಪಟ್ಟಣ. ಇಂಡಿಯಾದೇಶಕ್ಕೆಲ್ಲ ರಾಜಧಾನಿಯಾಗಿದೆ. ವೈಸ್‌ರಾಯಿಯವರು ಇಲ್ಲಿ ವಾಸವಾಗಿದಾರೆ. ಪೂರ್ವದಲ್ಲಿ ಪಾಂಡವರ ರಾಜಧಾನಿಯಾಗಿದ್ದ ಇಂದ್ರಪ್ರಸ್ಥ ಪಟ್ಟಣ ಇದರ ಸಮೀಪದಲ್ಲಿತ್ತೆಂದು ಹೇಳುತ್ತಾರೆ. ಇದು ಅಫ್ಘಾನರಿಗೂ, ಮೊಗಲರಿಗೂ ರಾಜಧಾನಿಯಾಗಿತ್ತು. ಅನೇಕ ರೈಲುಮಾರ್ಗಗಳು ಇಲ್ಲಿ ಸಂಧಿಸುತ್ತವೆ. ಶಾಲುಗಳನ್ನು ತಯಾರುಮಾಡುವುದು, ಮೊದಲಾದ ಕೈಗಾರಿಕೆಗಳೂ ವ್ಯಾಪಾರವೂ ವಿಶೇಷವಾಗಿ ನಡೆಯುತ್ತಿವೆ.

**ಸಿಂಲಾ.**—ಹಿಮಾಲಯ ಪರ್ವತಗಳ ತಪ್ಪಲಿನಲ್ಲಿ ಎತ್ತರವಾದ ಸ್ಥಳದಲ್ಲಿ ಈ ಪಟ್ಟಣವಿದೆ. ವೈಸ್‌ರಾಯಿಯವರು ಬೇಸಗೆಯಲ್ಲಿ ಇಲ್ಲಿ ವಾಸಮಾಡುವುದಕ್ಕೆ ಬರುತ್ತಾರೆ. ಆದುದರಿಂದ ಇದನ್ನು ಈ ದೇಶದ 'ಬೇಸಿಗೆಯ ರಾಜಧಾನಿ' ಎಂದು ಕರೆಯಬಹುದು. ಇದರ ಸಮೀಪದಲ್ಲಿ ಕಸೌಲಿ ಎಂಬ ಸ್ಥಳದಲ್ಲಿ ಹುಚ್ಚು ನಾಯಿಗಳು ಕಡಿದವರಿಗೆ ಚಿಕಿತ್ಸೆಮಾಡುವ ಆಸ್ಪತ್ರೆಯೊಂದಿದೆ.

## ವಾಯುವ್ಯ ಸರಹದ್ದಿನ ಪ್ರಾಂತಗಳು

ಇವು ಪಂಜಾಬಿಗೆ ಪಶ್ಚಿಮದಲ್ಲಿರುವ ಬೆಟ್ಟ ಗುಡ್ಡಗಳ ಸೀಮೆಗಳು. ನದಿಗಳ ಕಣಿವೆಗಳೇ ಈ ಪ್ರಾಂತದ ಮುಖ್ಯ ದುರ್ಗಗಳಾಗಿವೆ. ಅಫ್ಘಾನಿಸ್ಥಾನಕ್ಕೆ ಹೋಗುವ ಕಾರವಾನ್‌ದಾರಿಗಳೂ, ಸೈನ್ಯದ ರಸ್ತೆಗಳೂ ಈ ನದಿಗಳ ಕಣಿವೆಗಳನ್ನು ಅನುಸರಿಸಿ ಹೋಗುವುವು. ಈ ಮಾರ್ಗಗಳಲ್ಲಿ ಮುಖ್ಯವಾದುವು ಖೈಬರ್, ತುರಂ ಮತ್ತು ಬೋಲನ್ ಕಣಿವೆ ದಾರಿಗಳು. ಇವು ಕ್ರಮವಾಗಿ ಕಾಬೂಲ್, ಕುರಾಂ, ಗೋಮಾಲ್ ನದಿಗಳನ್ನು ಅನುಸರಿಸಿ ಹೋಗಿವೆ.

ಈ ಪ್ರಾಂತದಲ್ಲಿ ಮಳೆ ಬೀಳುವುದು ಬಹು ಅಪೂರ್ವ. ಜನಸಂಖ್ಯೆಯೂ ಬಹಳ ಕಡಿಮೆ. ಪಿಷಾವರ್ ಎಂಬುದು ಈ ಪ್ರಾಂತದ ಮುಖ್ಯ ಪಟ್ಟಣ. ಇಲ್ಲಿ ಚೀಫ್ ಕಮಿಾಷನರವರು ವಾಸವಾಗಿದಾರೆ.

ಈ ಪ್ರಾಂತದ ಸರಹದ್ದಿನಲ್ಲಿರುವ ಬೆಟ್ಟಗುಡ್ಡಗಳಲ್ಲಿ ಪಠಾಣರೆಂಬ ಒರಟು ಜನರು ಸಣ್ಣ ಸಣ್ಣ ಹಳ್ಳಿಗಳನ್ನು ಕಟ್ಟಿಕೊಂಡು ವಾಸಮಾಡುತ್ತಾರೆ. ಇವರು ಬಹಳ ಶೂರರು, ಯುದ್ಧಪ್ರಿಯರು ಮತ್ತು ಅನಾಗರಿಕರು. ನಮ್ಮ ದೇಶದ ಮೇಲೆ ಇವರು ನುಗ್ಗಿ ಬಾರದಂತೆಯೂ, ಕಣಿವೆಯ ದಾರಿಗಳ ಮೂಲಕ ಇತರ ಶತ್ರುಗಳು ಬಾರದಂತೆಯೂ ನೋಡಿಕೊಳ್ಳಲು, ಸರ್ಕಾರದವರು ಪಿಷಾವರ್ ವರೆಗೂ ರೈಲುಮಾರ್ಗವನ್ನು ಮಾಡಿ ಆ ಪ್ರದೇಶದಲ್ಲಿ ಸೈನ್ಯಗಳನ್ನು ಹೆಚ್ಚಾಗಿ ಇಟ್ಟಿರುವರು.

## ಬೆಲೂಚಿಸ್ಥಾನ

ಸುಲೇಮಾನ್ ಮತ್ತು ಖಿರ್ತಾರಿ ಪರ್ವತಗಳ ಶಾಖೆಗಳು ಈ ದೇಶವನ್ನೆಲ್ಲಾ ಆವರಿಸಿಕೊಂಡಿವೆ. ಇದರ ದಕ್ಷಿಣಭಾಗಕ್ಕೆ ಮಕ್ರಾನ್ ಎಂದು ಹೆಸರು. ಗುಡ್ಡಗಳು ಹೆಚ್ಚಾಗಿದ್ದರೂ ಅಲ್ಲಲ್ಲಿ ಫಲವತ್ತಾದ ಕಣಿವೆಗಳಿವೆ.

ಮೈದಾನಗಳಲ್ಲಿ ಸೆಕೆ ಹೆಚ್ಚು; ಬೆಟ್ಟಗಳ ಮೇಲೆ ಚಳಿ ಹೆಚ್ಚು. ಮುಂಗಾರು ಗಾಳಿಯು ಈ ದೇಶದಿಂದ ಪೂರ್ವಕ್ಕೆ ಬೀಸುವುದರಿಂದ ಇಲ್ಲಿ ಮಳೆಯಿಲ್ಲ. ಕ್ವೆಟ್ಟದ ಸಮಿಾಪದಲ್ಲಿ ಮಾತ್ರ ಸ್ವಲ್ಪ ಮಟ್ಟಿಗೆ ಮಳೆ ಬೀಳುವುದು. ಆದುದರಿಂದ ಅಲ್ಲಿ ಗೋಧಿಯನ್ನೂ, ಕರಬೂಜ ಮೊದಲಾದ ಹಣ್ಣುಗಳನ್ನೂ ಸ್ವಲ್ಪ ಮಟ್ಟಿಗೆ ಬೆಳೆಯುತ್ತಾರೆ. ಇತರ ಭಾಗಗಳಲ್ಲಿ ಮಳೆ ಇಲ್ಲವಾದುದರಿಂದ ಬೆಳೆಯಾಗುವುದಿಲ್ಲ. ಅಲ್ಲಲ್ಲಿ ಕೆಲವು ಜನರು ಪಶುಪಾಲನೆಯಿಂದ ಜೀವಿಸುತ್ತಿದಾರೆ. ಆದುದರಿಂದ ಈ ದೇಶದ ಜನಸಂಖ್ಯೆ ಬಹಳ ಕಡಿಮೆಯಾಗಿದೆ.

ಬೆಲೂಚಿಸ್ಥಾನದ ಉತ್ತರ ಭಾಗವು ಬ್ರಿಟಿಷರ ಸ್ವಂತ ಆಳಿಕೆಯಲ್ಲಿದೆ. ಈ ಬ್ರಿಟಿಷ್ ಬೆಲೂಚಿಸ್ಥಾನದ ಮುಖ್ಯ ಪಟ್ಟಣ **ಕ್ವೆಟ್ಟ.** ಬೋಲನ್ ಕಣಿವೆಯ ದಾರಿ ಈ ಪಟ್ಟಣದ ಮೂಲಕ ಇಂಡಿಯಾದಿಂದ ಕಾಂದಹಾರಿಗೆ ಹೋಗುವುದರಿಂದ ಇಂಗ್ಲಿಷರಿಗೆ ಈ ಪಟ್ಟಣ ಬಹು ಪ್ರಯೋಜನಕಾರಿಯಾಗಿದೆ. ಇಲ್ಲಿ ಸ್ವಲ್ಪ ಮಟ್ಟಿಗೆ ವ್ಯಾಪಾರವೂ ನಡೆಯುವುದು. ಬಲವಾದ ಕೋಟೆಯನ್ನೂ ಕಟ್ಟಿದ್ದಾರೆ. ಇದು ಸಮುದ್ರದ ಮಟ್ಟಕ್ಕೆ 5,500 ಅಡಿ ಎತ್ತರದಲ್ಲಿರುವುದರಿಂದ ಇದರ ವಾಯು ಗುಣವು ಹಿತಕರವಾಗಿದೆ. ಈಚೆಗೆ ಇಲ್ಲಿಂದ ಸಿಂಧೂದೇಶದಲ್ಲಿರುವ ಸಕ್ಕರೆಗೆ ರೈಲುಮಾರ್ಗವನ್ನು ಹಾಕಿದಾರೆ.

ಬೆಲೂಚಿಸ್ಥಾನದ ಇತರ ಭಾಗಗಳು ಸಣ್ಣ ಸಣ್ಣ ಪಾಳೆಯಗಾರರಿಗೆ ಸೇರಿವೆ. ಇವರಲ್ಲಿ ಅನೇಕರು ಕಾಲತ್ತಿನ ಖಾನರಿಗೆ ಅಧೀನರಾಗಿದಾರೆ. ಇವರೆಲ್ಲರೂ ಬ್ರಿಟಿಷರ ಪೋಷಣೆಯಲ್ಲಿದಾರೆ.

**ಅಜ್ಮೀರ್.**—ಇದು ರಾಜಪುತ್ರ ಸಂಸ್ಥಾನದ ಮಧ್ಯದಲ್ಲಿರುವ ಅಜ್ಮೀರ್ ಮತ್ತು ಮಾರ್ವಾರ ಎಂಬ ಎರಡು ಡಿಸ್ಟ್ರಿಕ್ಟುಗಳನ್ನು ಒಳಗೊಂಡಿರುವ ಬಹು ಚಿಕ್ಕ ಪ್ರಾಂತ. ಅಜ್ಮೀರು ಮರಳುಕಾಡು. ಬಾವಿಗಳಲ್ಲಿ 200–300 ಅಡಿಗಳ ಆಳದ ಕೆಳಗೆ ನೀರು ಸಿಕ್ಕುವುದು. ಮಾರ್ವಾರವು ಬೆಟ್ಟದ ಸೀಮೆ. ಇಲ್ಲಿ ಸ್ವಲ್ಪ ಮಳೆ ಬೀಳುವುದು. ಕಣಿವೆಗಳಲ್ಲಿ ಸ್ವಲ್ಪ ಮಟ್ಟಿಗೆ ವ್ಯವಸಾಯವೂ ನಡೆಯುತ್ತದೆ.

ಅಜ್ಮೀರದಲ್ಲಿ ರಾಜಪುತ್ರಸ್ಥಾನದ ಏಜಂಟರವರು ವಾಸಮಾಡುತ್ತಾರೆ. ಇದರ ಸಮೀಪದಲ್ಲಿ ಹಿಂದೂಗಳ ಯಾತ್ರಾಸ್ಥಳವಾದ ಪುಷ್ಕರಕ್ಷೇತ್ರವಿದೆ.

## ಮಧ್ಯಪ್ರಾಂತಗಳು

ಇದು ಬೆಟ್ಟದ ಸೀಮೆ. ಮಧ್ಯವಿಂಧ್ಯ ಪರ್ವತದ ಶಾಖೆಗಳು, ಸಾತ್ಪುರ ಬೆಟ್ಟ, ಮಹದೇವ ಬೆಟ್ಟಗಳು, ಚೋಟಾನಾಗಪುರದ ಗುಡ್ಡಗಳು ಇವು ಮುಖ್ಯವಾದುವು. ಇಲ್ಲಿರುವ ಬೆಟ್ಟಗಳಲ್ಲಿ ಸಾಮಾನ್ಯವಾಗಿ ಮಳೆ ಹೆಚ್ಚಾಗಿ ಬೀಳುವುದರಿಂದ ಈ ಬೆಟ್ಟಗಳು ಮೇಲೆ ಕಾಡುಗಳಿಂದ ತುಂಬಿವೆ. ಈ ಕಾಡುಗಳಲ್ಲಿ ಗೊಂಡರೇ ಮೊದಲಾದ ಅನಾಗರಿಕರಾದ ಕಾಡುಜನರು ವಾಸಮಾಡುತ್ತಾರೆ. ಈ ಬೆಟ್ಟಗಳಲ್ಲಿ ಅನೇಕ ನದಿಗಳು ಹುಟ್ಟುವುವು. ನರ್ಮದಾ, ತಪತೀ ನದಿಗಳು ಪಶ್ಚಿಮಕ್ಕೆ ಹರಿಯುತ್ತವೆ. ಗೋದಾವರಿಯ ಉಪನದಿಗಳಾದ ವರದ, ವೇಣುಗಂಗಾ, ಇಂದ್ರಾವತೀ ನದಿಗಳು ದಕ್ಷಿಣಕ್ಕೆ ಹರಿಯುವುವು. ಮಹಾನದಿಯು ಪೂರ್ವ ದಿಕ್ಕಿಗೆ ಹರಿಯುವುದು. ಶೋಣಾ ನದಿಯು ಉತ್ತರಕ್ಕೆ ಹರಿದು ಗಂಗಾನದಿಗೆ ಬೀಳುವುದು. ಈ ನದಿಗಳ ಮೈದಾನಗಳು ಬಹು ಫಲವತ್ತಾಗಿರುವುದರಿಂದ ಇಲ್ಲಿ ಗೋಧಿ, ಜೋಳ, ಹತ್ತಿ, ಎಣ್ಣೆಯ ಬೀಜಗಳು, ಬತ್ತ ಮೊದಲಾದುವನ್ನು ವಿಶೇಷವಾಗಿ ಬೆಳೆಯುತ್ತಾರೆ. ಬೀರಾರಿನಲ್ಲಿ ಫಲವತ್ತಾದ ಕಪ್ಪುಮಣ್ಣಿನ ಭೂಮಿ ಇರುವುದರಿಂದ ಅಲ್ಲಿ ಹತ್ತಿ ಬೆಳೆಯುವುದು ಬಹು ಹೆಚ್ಚು.

ಈ ಪ್ರಾಂತವು ಒಬ್ಬ ಚೀಫ್ ಕಮಿಷನರ ಕೈಕೆಳಗಿದೆ. ಹೈದರಾಬಾದಿನಲ್ಲಿಟ್ಟಿರುವ ಬ್ರಿಟಿಷ್ ಸೈನ್ಯದ ವೆಚ್ಚಕ್ಕಾಗಿ ನಿಜಾಮರವರು ಬೀರಾರನ್ನು ಬಿಟ್ಟುಕೊಟ್ಟಿದಾರೆ. ಇದು 1902ರಲ್ಲಿ ಮಧ್ಯಪ್ರಾಂತಕ್ಕೆ ಸೇರಿಸಲ್ಪಟ್ಟಿತು.

**ಮುಖ್ಯ ಪಟ್ಟಣಗಳು; ನಾಗಪುರ.**—ಇದು ಈ ಪ್ರಾಂತದ ಮುಖ್ಯ ಪಟ್ಟಣ. ಅನೇಕ ರೈಲುಮಾರ್ಗಗಳು ಇಲ್ಲಿ ಸಂಧಿಸುವುದರಿಂದ ವ್ಯಾಪಾರವು ಹೆಚ್ಚುತ್ತಲಿದೆ. ಇದರ ಸಮೀಪದಲ್ಲಿರುವ ಸಿತಬಲ್ಡಿ ಬೆಟ್ಟದ ಮೇಲೆ ಇಂಗ್ಲಿಷರು ವಿಶೇಷವಾಗಿ ವಾಸಮಾಡುತ್ತಾರೆ.

**ವರೋರ.**—ಇಲ್ಲಿ ಕಲ್ಲಿದ್ದಲೂ ಕಬ್ಬಿಣವೂ ಸಿಕ್ಕುತ್ತದೆ.

**ಜಬ್ಬಲ್ಪುರ.**—ಇದು ಅನೇಕ ರೈಲುಮಾರ್ಗಗಳು ಸಂಧಿಸುವ ದೊಡ್ಡ ವ್ಯಾಪಾರಸ್ಥಳವಾಗಿದೆ.

**ಅಮರಾವತಿ.**—ಇದು ಬೇರಾರಿನ ಮುಖ್ಯ ಪಟ್ಟಣ. ಇಲ್ಲಿ ವಿಶೇಷವಾಗಿ ಹತ್ತಿಯ ವ್ಯಾಪಾರ ನಡೆಯುವುದು.

## ಬೊಂಬಾಯಿ ಅಧಿಪತ್ಯ

ಈ ಆಧಿಪತ್ಯವು ಮೈಸೂರಿನಿಂದ ಪಂಜಾಬಿನವರೆಗೆ ಇರುವ ಇಂಡಿಯಾ ದೇಶದ ಪಶ್ಚಿಮ ಭಾಗವನ್ನು ಒಳಗೊಂಡಿದೆ. ಇದು ಅಗಲದಲ್ಲಿ ಕಡಿಮೆಯಾಗಿಯೂ ಬಹು ಉದ್ದವಾಗಿಯೂ ಇದೆ. ಈ ಆಧಿಪತ್ಯವನ್ನು—ಸಿಂಧೂದೇಶ, ಗುಜರಾತ್, ಪಶ್ಚಿಮತೀರದ ಪ್ರದೇಶ, ದಖನ್ ಪ್ರಸ್ಥಭೂಮಿಯ ಪ್ರದೇಶಗಳು ಎಂದು ನಾಲ್ಕು ಭಾಗಗಳಾಗಿ ವಿಂಗಡಿಸಬಹುದು.

**ಸಿಂಧೂದೇಶ.**—ಇದು ಮರಳುಕಾಡು. ಸಿಂಧು ನದಿಯ ದಡದ ಹತ್ತಿರ ಸ್ವಲ್ಪದೂರ ಮಾತ್ರ ವ್ಯವಸಾಯವು ನಡೆಯುವುದು. ಕರಾಚಿ, ಸಿಂಧೂದೇಶದಲ್ಲಿ ಪ್ರಸಿದ್ಧವಾದ ಪಟ್ಟಣ. ಇದು ಸಿಂಧು ನದಿಯ ಅತ್ಯಂತ ಪಶ್ಚಿಮ ಭಾಗದ ಮುಖದ ಸಮೀಪದಲ್ಲಿರುವ ರೇವುಪಟ್ಟಣ. ಇದರ ಬಂದರು ಚೆನ್ನಾಗಿದೆ. ಪಂಜಾಬ್ ಮತ್ತು ವಾಯುವ್ಯ ಸರಹದ್ದಿನ ಪ್ರಾಂತಗಳಲ್ಲಿ ಬೆಳೆಯುವ ಗೋಧಿ ರೈಲುಮಾರ್ಗಗಳ ಮೂಲಕವೂ ಮತ್ತು ನದಿಯಮೇಲೆ ದೋಣಿಗಳಲ್ಲಿಯೂ ಇಲ್ಲಿಗೆ ಬರುತ್ತದೆ. ಗೋಧಿಯ ಸುಗ್ಗಿಯಲ್ಲಿ ಈ ಬಂದರಿನಲ್ಲಿ ಹಡಗುಗಳು ಅನೇಕಾನೇಕವಾಗಿ ತುಂಬಿಹೋಗಿ ಒಂದೊಂದು ವೇಳೆ ಹೊಸದಾಗಿ ಬರುವ ಹಡಗುಗಳಿಗೆ ಸ್ಥಳವೇ ಸಿಕ್ಕುವುದಿಲ್ಲ. ಇದು ಇಂಡಿಯಾದೇಶದ ರೇವುಪಟ್ಟಣಗಳಲ್ಲೆಲ್ಲಾ ಇಂಗ್ಲೆಂಡಿಗೆ ಅತ್ಯಂತ ಸಮೀಪದಲ್ಲಿರುವುದು ಮತ್ತು ವಾಯುವ್ಯ ಸರಹದ್ದಿಗೂ ಸಮೀಪವಾಗಿದೆ. ಆದರೆ ಇದರ ಸಮೀಪದಲ್ಲಿಯೇ ಮರುಭೂಮಿ ಇರುವುದರಿಂದ ಬೊಂಬಾಯಿ, ಕಲ್ಕತ್ತಗಳಲ್ಲಿ ನಡೆಯುವಷ್ಟು ವ್ಯಾಪಾರ ಇಲ್ಲಿ ನಡೆಯುವುದಿಲ್ಲ.

ಕಾಥೆಯವಾಡಿಪರ್ಯಾಯದ್ವೀಪಕ್ಕೂ, ಅದರ ಪೂರ್ವದಿಕ್ಕಿಗೆ ಮಧ್ಯಪ್ರಾಂತಗಳವರೆಗಿರುವ ಪ್ರದೇಶಕ್ಕೂ ಒಟ್ಟಿಗೆ ಗುಜರಾತೆಂದು ಹೆಸರು. ಇಲ್ಲಿ ಅನೇಕ ಆಶ್ರಿತ ಸಂಸ್ಥಾನಗಳಿವೆ. ಸ್ವಲ್ಪ ಭಾಗ ಬೊಂಬಾಯಿ ಆಧಿಪತ್ಯಕ್ಕೆ ಸೇರಿದೆ. ಇಲ್ಲಿ ಮಳೆಯಾಗುವುದು ಕಡಿಮೆ. ಆದರೆ ಅಲ್ಲಲ್ಲಿ ಫಲವತ್ತಾದ ಪ್ರದೇಶಗಳಿವೆ. ಸಬರಮತಿಯ ತೀರದಲ್ಲಿರುವ ಅಹಮದಾಬಾದ್ ಎಂಬುದೇ ಮುಖ್ಯ ಪಟ್ಟಣ. ಇಲ್ಲಿ ಹಬೆಯ ಯಂತ್ರಗಳ ಸಹಾಯದಿಂದ ಹತ್ತಿಯ ಬಟ್ಟೆಗಳನ್ನೂ, ತೊಗಲಿನ ಸಾಮಾನುಗಳನ್ನೂ, ಕಾಗದಗಳನ್ನೂ ವಿಶೇಷವಾಗಿ ತಯಾರುಮಾಡುತ್ತಾರೆ.

ಈ ಆಧಿಪತ್ಯದ ಮಿಕ್ಕ ಎರಡು ಭಾಗಗಳು ಪಶ್ಚಿಮ ತೀರದ ಮೈದಾನ ಮತ್ತು ದಖನ್ ಪ್ರಸ್ಥಭೂಮಿಯ ಭಾಗ. ಪಶ್ಚಿಮ ತೀರದ ಮೈದಾನಗಳಲ್ಲಿ

ಮಳೆ ಹೆಚ್ಚಾಗಿ ಬೀಳುವುದರಿಂದ ಬತ್ತ ಬೆಳೆಯುತ್ತದೆ. ಪ್ರಸ್ಥಭೂಮಿಯ ಭಾಗದಲ್ಲಿ ಮಳೆ ಕಡಿಮೆಯಾದುದರಿಂದ ಜೋಳ ಮತ್ತು ಹತ್ತಿ ವಿಶೇಷವಾಗಿ ಬೆಳೆಯುವುವು. ಈ ಭಾಗಗಳಲ್ಲಿ ಹಿಂದೂಗಳು ವಿಶೇಷವಾಗಿದ್ದಾರೆ. ಇವರಲ್ಲಿ ಮರಾಟಿಯವರೇ ಹೆಚ್ಚು. ಮರಾಟಿಯವರು ದೃಢಾಂಗರಾಗಿಯೂ ಕಷ್ಟ ಸಹಿಷ್ಣುಗಳಾಗಿಯೂ ಇದಾರೆ.

ಈ ಭಾಗಗಳಲ್ಲಿರುವ ಮುಖ್ಯ ಪಟ್ಟಣಗಳು ಯಾವುವೆಂದರೆ:—

**ಬೊಂಬಾಯಿ.**—ಪಶ್ಚಿಮ ತೀರದಲ್ಲಿ ಒಂದು ದ್ವೀಪದ ಮೇಲೆ ಇರುವ ಈ ಪಟ್ಟಣವೇ ಈ ಆಧಿಪತ್ಯಕ್ಕೆ ಮುಖ್ಯ ಪಟ್ಟಣವಾಗಿದೆ. ಈ ದ್ವೀಪದ ಪೂರ್ವಕ್ಕಿರುವ ಬೊಂಬಾಯಿ ಬಂದರಿಗೆ ಪಶ್ಚಿಮದಿಂದ ಬಿರುಗಾಳಿಗಳೂ ಮರಳೂ ನುಗ್ಗದಂತೆ ಇದು ತಡೆಯಾಗಿದೆ. ಇದರ ಬಂದರು ವಿಶಾಲವಾಗಿಯೂ, ಆಳವಾಗಿಯೂ ಇರುತ್ತದೆ. ಆದುದರಿಂದ ಬೊಂಬಾಯಿಯ ಬಂದರು ಉತ್ಕೃಷ್ಟವಾದ, ಸ್ವಾಭಾವಿಕವಾದ ಬಂದರಾಗಿದೆ. ಇದಲ್ಲದೆ ಇದು ಕಲ್ಕತ್ತ ಮದರಾಸುಗಳಿಗಿಂತಲೂ ಯೂರೋಪಿಗೆ ಸಮೀಪವಾಗಿದೆ. ಇಲ್ಲಿಂದ ಇಂಡಿಯಾದೇಶದ ಮುಖ್ಯ ಭಾಗಗಳಿಗೆಲ್ಲಾ ರೈಲು ಮಾರ್ಗಗಳು ಹೋಗಿವೆ. ಆದುದರಿಂದ ಬೊಂಬಾಯಿ ರೇವುಪಟ್ಟಣದಲ್ಲಿ ವ್ಯಾಪಾರವು ಅತ್ಯಧಿಕವಾಗಿ ನಡೆಯುವುದು. ಸುತ್ತುಮುತ್ತಲೂ ವಿಶೇಷವಾಗಿ ಹತ್ತಿ ಬೆಳೆಯುವುದರಿಂದಲೂ, ಗಾಳಿಯಲ್ಲಿ ತೇವ ಹೆಚ್ಚಾಗಿರುವುದರಿಂದಲೂ ಇಲ್ಲಿ ಹತ್ತಿ ಬಟ್ಟೆಗಳನ್ನು ತಯಾರುಮಾಡುವ ಕಾರ್ಖಾನೆಗಳು ನೂರಾರು ಇವೆ. ಇಂಡಿಯಾದೇಶದಲ್ಲಿ ತಯಾರಾಗುವ ಹತ್ತಿಯ ಬಟ್ಟೆಗಳಲ್ಲಿ ಈ ಪಟ್ಟಣವೊಂದರಲ್ಲಿಯೇ ಮುಕ್ಕಾಲು ಭಾಗ ತಯಾರಾಗುವುದು. ಇಲ್ಲಿ ಕಬ್ಬಿಣದ ಸಾಮಾನು, ಹಿತ್ತಾಳೆ ತಾಮ್ರದ ಪಾತ್ರೆಗಳು, ರೇಷ್ಮೆ ಬಟ್ಟೆಗಳು ಮೊದಲಾದುವೂ ತಯಾರಾಗುತ್ತವೆ. ಜನಸಂಖ್ಯೆ, ವ್ಯಾಪಾರಗಳಲ್ಲಿ ಈ ಪಟ್ಟಣ ಕಲ್ಕತ್ತೆಗೆ ಎರಡನೆಯದಾಗಿದೆ. ನಮ್ಮ ದೇಶದಲ್ಲಿ ಕೈಗಾರಿಕೆಗಳಲ್ಲಿ ಮೊದಲನೆಯದಾಗಿದೆ. ಇಲ್ಲಿ ಸುಮಾರು 10 ಲಕ್ಷ ಜನರು ವಾಸಮಾಡುತ್ತಾರೆ.

ನೋಡುವುದಕ್ಕೆ ಈ ಪಟ್ಟಣವು ಲಂಡನ್, ಲಿವರ್‌ಪೂಲ್ ಮೊದಲಾದ ಪಾಶ್ಚಾತ್ಯದೇಶದ ನಗರಗಳಂತೆ ತೋರುವುದು. ಎತ್ತರವಾದ ಸೌಧಗಳೂ, ಸದಾ ಜನಭರಿತವಾದ ರಸ್ತೆಗಳೂ, ಎಲ್ಲಾ ಜನಾಂಗದವರೂ, ಭಾರಿ ಅಂಗಡಿಗಳೂ, ಕಾರ್ಖಾನೆಗಳೂ, ಊರೊಳಗಿನ ರೈಲುಗಾಡಿಗಳೂ (Tramways) ಎಲ್ಲೆಲ್ಲಿಯೂ ಕಾಣಬರುವುವು.

**ಪೂನ.**—ಇದು ಬೊಂಬಾಯಿಗೆ ಆಗ್ನೇಯದಲ್ಲಿದೆ. ಪೂರ್ವದಲ್ಲಿ ಇದು ಪೇಷ್ವೆಗಳ ರಾಜಧಾನಿಯಾಗಿತ್ತು. ಈಗ ಇಲ್ಲಿ ಒಂದು ಕಂಟೋನ್ಮೆಂಟಿದೆ. ರೇಷ್ಮೆಯ ಬಟ್ಟೆಗಳು ವಿಶೇಷವಾಗಿ ತಯಾರಾಗುವುವು.

Hlyy

**ಬಿಜಾಪುರ.**—ಇದು ಪೂರ್ವದಲ್ಲಿ ಬಿಜಾಪುರದ ಶಾಖೆಯ ಬಹಮನೀ ಸುಲ್ತಾನರ ರಾಜಧಾನಿಯಾಗಿತ್ತು. ಅವರು ಕಟ್ಟಿಸಿದ ಸುಂದರವಾದ ಅರಮನೆಗಳನ್ನೂ, ಮಸೀದಿಗಳನ್ನೂ ಈಗಲೂ ಇಲ್ಲಿ ನೋಡಬಹುದು.

**ಹುಬ್ಬಳ್ಳಿ.**—ಇದರ ಸುತ್ತುಮುತ್ತಲೂ ವಿಶೇಷವಾಗಿ ಹತ್ತಿ ಬೆಳೆಯುವುದರಿಂದ, ಹತ್ತಿಯನ್ನು ಬಿಡಿಸುವ ಮತ್ತು ಹತ್ತಿಯನ್ನು ಗಟ್ಟಣೆಮಾಡಿ ಕಟ್ಟುವ ಕಾರ್ಖಾನೆಗಳು ವಿಶೇಷವಾಗಿವೆ.

**ಮಹಾಬಲೇಶ್ವರ.**—ಪಶ್ಚಿಮ ಘಟ್ಟಗಳಲ್ಲಿ ಸಮುದ್ರದ ಮಟ್ಟಕ್ಕೆ 4,500 ಅಡಿಯಷ್ಟು ಎತ್ತರದ ಮೇಲಿರುವ ಈ ಪಟ್ಟಣದಲ್ಲಿ ಬೇಸಗೆಯಲ್ಲಿ ಯೂರೋಪಿಯನರು ವಾಸಮಾಡುತ್ತಾರೆ. ಬೊಂಬಾಯಿ ಗೌರ್ನರವರಿಗೆ ಇದು ಬೇಸಗೆಯ ರಾಜಧಾನಿಯಾಗಿದೆ.

**ನಾಸಿಕ.**—ಇದು ಗೋದಾವರಿಯ ಮೂಲಸ್ಥಾನದ ಬಳಿ ಇರುವ ಹಿಂದುಗಳ ಯಾತ್ರಾಸ್ಥಳವು. ಇಲ್ಲಿ ಉತ್ತಮವಾದ ಹಿತ್ತಾಳೆಯ ಪಾತ್ರೆಗಳೂ, ರೇಷ್ಮೆಯ ಬಟ್ಟೆಗಳೂ ತಯಾರಾಗುತ್ತವೆ.

## ಮದರಾಸಾಧಿಪತ್ಯ

ಮದ್ರಾಸಾಧಿಪತ್ಯವು ಚಿಲ್ಕ ಸರೋವರದಿಂದ ಕನ್ಯಾಕುಮಾರಿ ಭೂಶಿರದವರೆಗೆ ಇರುವ ಪೂರ್ವತೀರದ ಮೈದಾನದ ಭಾಗವನ್ನೂ, ಕೊಚಿನ್ ಸಂಸ್ಥಾನದಿಂದ ಬೊಂಬಾಯಿ ಆಧಿಪತ್ಯದವರೆಗೆ ಇರುವ ಪಶ್ಚಿಮ ತೀರದ ಮೈದಾನದ ಭಾಗವನ್ನೂ, ಇವೆರಡಕ್ಕೂ ಮಧ್ಯೆ ಇರುವ ಪ್ರದೇಶಗಳಲ್ಲಿ ಕೆಲವು ಭಾಗಗಳನ್ನೂ ಒಳಗೊಂಡಿದೆ. ಪೂರ್ವ ತೀರದ ಮೈದಾನದಲ್ಲಿ ಸೆಕೆ ಹೆಚ್ಚು. ವಿಶೇಷವಾಗಿ ಹಿಂಗಾರು ಮಳೆ ಬೀಳುವುದು. ನದಿಯಮುಖಜಭೂಮಿಗಳಲ್ಲಿ ನೆಲವು ಬಹು ಫಲವತ್ತಾಗಿರುವುದು. ಪಶ್ಚಿಮ ತೀರದ ಮೈದಾನದಲ್ಲಿ ಮಳೆಯೂ ಹೆಚ್ಚು, ನೆಲವೂ ಫಲವತ್ತಾಗಿರುವುದು. ಆದುದರಿಂದ ಈ ಪ್ರದೇಶಗಳಲ್ಲಿ ಬತ್ತ, ಕಬ್ಬು ಮೊದಲಾದ ಬೆಲೆ ಬಾಳುವ ಸಸ್ಯಗಳು ವಿಶೇಷವಾಗಿ ಬೆಳೆಯುತ್ತವೆ. ತಿನ್ನವೆಲ್ಲಿಯಲ್ಲಿ ಹತ್ತಿಯೂ, ಪೂರ್ವ ತೀರದಲ್ಲಿ ಅಲ್ಲಲ್ಲಿ ನೀಲಿಯೂ, ನದೀಮುಖಜ ಭೂಮಿಗಳಲ್ಲಿ ಬತ್ತ, ಕಬ್ಬುಗಳಲ್ಲದೆ ಹೊಗೆಯಸೊಪ್ಪು, ಪಶ್ಚಿಮ ತೀರದಲ್ಲಿ ಏಲಕ್ಕಿ, ಮೆಣಸು ಮೊದಲಾದ ಸಂಬಾರದ ದಿನಸುಗಳೂ ವಿಶೇಷವಾಗಿ ಬೆಳೆಯುತ್ತವೆ. ಈ ಆಧಿಪತ್ಯದ ಮಧ್ಯ ಭಾಗದ ನದಿಗಳ ಮೈದಾನಗಳಲ್ಲಿ ವಿನಾ ನೆಲವು ಹೆಚ್ಚು ಫಲವತ್ತಾಗಿಲ್ಲ. ಆದರೆ ಅನೇಕ ಕಡೆ ಕೆರೆಗಳ ಸಹಾಯದಿಂದ ಕಬ್ಬನ್ನು ಬೆಳೆ ಮಾಡುವರು. ಈ ಆಧಿಪತ್ಯದಲ್ಲಿರುವಷ್ಟು ಕೆರೆಗಳು ಇಂಡಿಯಾದೇಶದ ಇನ್ನಾವ ಪ್ರಾಂತದಲ್ಲಿಯೂ ಇಲ್ಲ.

ಮೈನಾಡಿನಲ್ಲಿ ಚಿನ್ನವೂ, ಸೇಲಮಿನಲ್ಲಿ ಕಬ್ಬಿಣವೂ ಸಿಕ್ಕುವುದು. ಚೋಳ ರಾಜರು ಹಿಂದಿನ ಕಾಲದಲ್ಲಿ ಈ ಆಧಿಪತ್ಯದ ದಕ್ಷಿಣ ಭಾಗದಲ್ಲಿ ಅನೇಕ ದೇವಾಲಯಗಳನ್ನು ಕಟ್ಟಿಸಿದರು. ಈಗಲೂ ಇಲ್ಲಿ ಅನೇಕ ಪ್ರಸಿದ್ಧವಾದ ದೇವಾಲಯಗಳಿವೆ.

ಬೊಂಬಾಯಿ, ಬಂಗಾಳಗಳಂತೆ ಈ ಆಧಿಪತ್ಯವು ಒಬ್ಬ ಗೌರ್ನರವರ ಅಧಿಕಾರಕ್ಕೆ ಒಳಪಟ್ಟಿದೆ. ಈ ಗೌರ್ನರಿಗೆ ಮಂತ್ರಾಲೋಚನೆಗೆ ಒಂದು ಸಭೆಯೂ, ಕಾನೂನುಗಳನ್ನು ಮಾಡುವುದಕ್ಕೆ ಇನ್ನೊಂದು ಸಭೆಯೂ ಸಹಾಯವಾಗಿವೆ.

**ಮುಖ್ಯ ಪಟ್ಟಣಗಳು; ಮದರಾಸು.**—ಇದು ಪೂರ್ವ ತೀರದಲ್ಲಿದೆ. ಇದು ಈ ಆಧಿಪತ್ಯಕ್ಕೆ ರಾಜಧಾನಿ. ಇಲ್ಲಿ ಒಂದು ಬಲವಾದ ಕೋಟೆಯೂ, ಸರ್ಕಾರಿ ಆಫೀಸುಗಳೂ, ಹೈಕೋರ್ಟು, ವಿಶ್ವವಿದ್ಯಾಲಯವೂ ಇರುವುವು. ಹಡಗುಗಳ ಅನುಕೂಲಕ್ಕಾಗಿ ಸರ್ಕಾರದವರು ಕೋಟ್ಯಂತರ ರೂಪಾಯಿಗಳನ್ನು ವೆಚ್ಚಮಾಡಿ ಇಲ್ಲಿ ಒಂದು ಬಂದರನ್ನು ಕಟ್ಟಿರುವರು. ಈ ಪಟ್ಟಣದಿಂದ ಸಿಂಹಳ ದ್ವೀಪ, ಬರ್ಮ, ಚೀಣ, ಜಪಾನ್‌ಗಳ ಸಂಗಡ ವ್ಯಾಪಾರವೂ ನಡೆಯುವುದು. ಪೂರ್ವ ತೀರದ ಮೈದಾನದಲ್ಲಿರುವ ರೈಲುಮಾರ್ಗಗಳಲ್ಲಿ ಅನೇಕಾನೇಕ ರೈಲು ದಾರಿಗಳು ಇಲ್ಲಿ ಸಂಧಿಸುತ್ತವೆ. ಕೈಗಾರಿಕೆಗಳು ಇಲ್ಲಿ ವಿಶೇಷವಾಗಿಲ್ಲ. ಇದರ ಜನಸಂಖ್ಯೆಯು ಸುಮಾರು 6 ಲಕ್ಷ. ಜನಸಂಖ್ಯೆಯಲ್ಲಿಯೂ, ವ್ಯಾಪಾರದಲ್ಲಿಯೂ ಈ ದೇಶಕ್ಕೆ ಇದು ಮೂರನೆಯ ಪಟ್ಟಣವಾಗಿದೆ. ಆದರೆ ಸನ್ನಿವೇಶದ ಅನುಕೂಲ್ಯದಿಂದ ಕರಾಚಿ, ರಂಗೂನ್ ಪಟ್ಟಣಗಳು ವ್ಯಾಪಾರದಲ್ಲಿ ಇದನ್ನು ಮೀರಿಸುವ ಹಾಗಿರುವುವು.

**ರಾಜಮಹೇಂದ್ರ.**—ಇದು ಗೋದಾವರೀ ನದಿಯಮುಖದ ಶಾಖೆಗಳು ಒಡೆಯುವ ಸ್ಥಳದಲ್ಲಿದೆ. ಇಲ್ಲಿಂದ ಬತ್ತವೂ, ಹೊಗೆಯಸೊಪ್ಪೂ ವಿಶೇಷವಾಗಿ ರಫ್ತಾಗುತ್ತವೆ.

**ಬಳ್ಳಾರಿ.**—ಇಲ್ಲಿ ಒಂದು ದೊಡ್ಡ ಕಂಟೋನ್ಮೆಂಟು ಇದೆ.

**ತಿರುಚನಾಪಳ್ಳಿ.**—ಇದು ಕಾವೇರಿ ಕವಲೊಡೆಯುವ ಸ್ಥಳದಲ್ಲಿ ನದಿಯ ದಡದ ಮೇಲಿದೆ. ಇದರ ಸುತ್ತಲೂ ಬತ್ತ ವಿಶೇಷವಾಗಿ ಬೆಳೆಯುವುದರಿಂದ ಇಲ್ಲಿ ಅಕ್ಕಿಯ ವ್ಯಾಪಾರ ಹೆಚ್ಚು. ಚಿನ್ನ ಬೆಳ್ಳಿಯ ಒಡವೆಗಳೂ, ಚುಟ್ಟಗಳೂ ಇಲ್ಲಿ ವಿಶೇಷವಾಗಿ ತಯಾರಾಗುತ್ತವೆ. ಇದರ ಸಮೀಪದಲ್ಲಿರುವ ಶ್ರೀರಂಗದಲ್ಲಿ ಪ್ರಸಿದ್ಧವಾದ ರಂಗನಾಥ ದೇವಾಲಯವಿದೆ. ಈ ದೇವಾಲಯವು ಏಳು ಪ್ರಾಕಾರಗಳುಳ್ಳದಾಗಿ ಬಹು ದೊಡ್ಡದಾಗಿದೆ.

**ತಂಜಾವೂರು.**—ಇದು ಕಾವೇರಿ ನದಿಯಮುಖಜಭೂಮಿಯಲ್ಲಿದೆ ತಿರುಚನಾಪಳ್ಳಿಯಂತೆ ಬತ್ತದ ವ್ಯಾಪಾರಕ್ಕೆ ಪ್ರಸಿದ್ಧವಾಗಿದೆ.

**ಮಧುರೆ.**—ಇದು ವೈಗೈ ನದಿಯ ದಡದಲ್ಲಿರುವ ಯಾತ್ರಾಸ್ಥಳ. ಇಲ್ಲಿ ಉತ್ತಮವಾದ ಹಿತ್ತಾಳೆಯ ಪಾತ್ರೆಗಳೂ, ರುಮಾಲುಗಳೂ, ಉತ್ತಮವಾದ ಚುಟ್ಟಗಳೂ ತಯಾರಾಗುತ್ತವೆ.

**ರಾಮೇಶ್ವರ.**—ಇದು ಪಾಂಬನ್ ದಾರಿಯ ಮಗ್ಗುಲಲ್ಲಿರುವ ಒಂದು ಸಣ್ಣ ದ್ವೀಪ. ಶ್ರೀರಾಮನು ಲಂಕೆಗೆ ಹೋಗುವುದಕ್ಕಾಗಿ ಇದರ ಬಳಿಯಲ್ಲಿ ಸೇತುವೆಯನ್ನು ಕಟ್ಟಿದ್ದನೆಂದು ಹಿಂದುಗಳು ಹೇಳುತ್ತಾರೆ. ಕಾಶಿಯಂತೆ ಇದು ಬಹು ಪ್ರಸಿದ್ಧವಾದ ಹಿಂದುಗಳ ಯಾತ್ರಾಸ್ಥಳವಾಗಿದೆ.

**ನಾಗಪಟ್ಟಣ ಮತ್ತು ತುತ್ತುಕುಡಿ.**—ಈ ರೇವುಪಟ್ಟಣಗಳಿಂದ ಸಿಂಹಳ ದ್ವೀಪದ ಸಂಗಡ ವ್ಯಾಪಾರವು ನಡೆಯುತ್ತದೆ.

**ಕಲ್ಲಿಕೋಟೆ.**—ಪಶ್ಚಿಮ ತೀರದಲ್ಲಿರುವ ಈ ರೇವುಪಟ್ಟಣದಲ್ಲಿ ಉತ್ತಮವಾದ ಚಕ್ಕುಬಟ್ಟೆಗಳು ತಯಾರಾಗುತ್ತವೆ.

**ಮಂಗಳೂರು.**—ಪಶ್ಚಿಮ ತೀರದಲ್ಲಿರುವ ಈ ರೇವುಪಟ್ಟಣವೂ, ಇದರ ಬಂದರೂ ತಕ್ಕಮಟ್ಟಿಗೆ ಅನುಕೂಲವಾಗಿವೆ. ಪಶ್ಚಿಮ ತೀರದ ರೈಲುಮಾರ್ಗವು ಇಲ್ಲಿನವರೆಗೂ ಹಬ್ಬಿದೆ. ಇಲ್ಲಿ ನಾಜೋಕಾದ ಆಭರಣಗಳು ತಯಾರಾಗುತ್ತವೆ.

ನೀಲಗಿರಿ ಬೆಟ್ಟಗಳ ಮೇಲಿರುವ **ಉದಕಮಂಡಲ, ಕೂನೂರು** ಮೊದಲಾದ ಪಟ್ಟಣಗಳಲ್ಲಿ ಬೇಸಗೆಯಲ್ಲಿ ಯೂರೊಪಿಯನರು ವಾಸಮಾಡುತ್ತಾರೆ. ಉದಕಮಂಡಲವು ಮದರಾಸು ಗೌರ್ನರವರಿಗೆ ಬೇಸಗೆಯ ರಾಜಧಾನಿಯಾಗಿದೆ. ನಮ್ಮ ಶ್ರೀಮನ್ ಮಹಾರಾಜರವರೂ ಬೇಸಗೆಯಲ್ಲಿ ಇಲ್ಲಿ ವಾಸಮಾಡುವುದುಂಟು.

## ಕೊಡಗು

ಇದು ಮೈಸೂರು ಸೀಮೆಗೆ ನೈರುತ್ಯದಲ್ಲಿರುವ ಬೆಟ್ಟಸೀಮೆಯ ಸಣ್ಣ ಪ್ರಾಂತ. ಇಲ್ಲಿ ಮಳೆ ಹೆಚ್ಚಾಗಿ ಬೀಳುವುದರಿಂದ ಕಾಡುಗಳು ಹೆಚ್ಚಾಗಿವೆ. ಕಾಫಿ, ಏಲಕ್ಕಿಗಳು ಹೆಚ್ಚಾಗಿ ಬೆಳೆಯುವುವು. ಕೊಡಗರು ಧೈರ್ಯಶಾಲಿಗಳು. ಮಡಕೇರಿ ಎಂಬುದು ಮುಖ್ಯ ಪಟ್ಟಣ. ಕೊಡಗಿಗೆ ಮೈಸೂರು ಸಂಸ್ಥಾನದ ಬ್ರಿಟಿಷ್ ರೆಸಿಡೆಂಟರವರೇ ಚೀಫ್ ಕಮಿಷನರಾಗಿರುವರು.

## ಅಂಡಮಾನ ದ್ವೀಪಗಳು

ಅಂಡಮಾನ ದ್ವೀಪಗಳೂ, ನಿಕೋಬಾರ್ ದ್ವೀಪಗಳೂ ಇಂಡಿಯಾಕ್ಕೂ, ಬರ್ಮಾಕ್ಕೂ ಮಧ್ಯದಲ್ಲಿವೆ. ಅಂಡಮಾನ ದ್ವೀಪಗಳ ಪೂರ್ವನಿವಾಸಿಗಳು ನೀಗ್ರೋ ಜನರಂತೆ ಕಪ್ಪಾಗಿಯೂ, ಉಣ್ಣೆಯಂತಹ ಕೂದಲುಳ್ಳವರಾಗಿಯೂ ಇರುತ್ತಾರೆ. ನಿಕೋಬಾರ್ ದ್ವೀಪಗಳಲ್ಲಿ ಮಲಯಕುಲದವರು ವಾಸವಾಗಿದಾರೆ. ಇಂಡಿಯಾ

ದೇಶದಲ್ಲಿ ಖೂನಿ ಮೊದಲಾದ ದೊಡ್ಡ ತಪ್ಪುಗಳನ್ನು ಮಾಡಿದವರನ್ನು ಅಂಡಮಾನ ದ್ವೀಪಗಳಿಗೆ ಕಳುಹಿಸುವರು. ಪೋರ್ಟ್‌ಬ್ಲೇರ್ ಎಂಬುದೇ ಇಲ್ಲಿನ ಮುಖ್ಯ ಪಟ್ಟಣ. ಇಂಡಿಯಾದೇಶದ ವೈಸರಾಯಿರವರಿಂದ ನಿಯಮಿಸಲ್ಪಟ್ಟ ಒಬ್ಬ ಚೀಫ್ ಕಮಿಷನರವರು ಈ ಪ್ರಾಂತವನ್ನು ಆಳುತ್ತಿರುವರು.

## ಬರ್ಮಾ

ಬರ್ಮಾದೇಶವು ಪೂರ್ವ ಪಶ್ಚಿಮ ಅಸ್ಸಾಂ ಮತ್ತು ಬಂಗಾಳಕೊಲ್ಲಿಗಳಿಂದ ಚೀಣ ಮತ್ತು ಸಯಾಂ ದೇಶಗಳವರೆಗೂ, ದಕ್ಷಿಣೋತ್ತರ ಕ್ರಾಭೂಸಂಧಿಯಿಂದ ಹಿಮಾಲಯ ಪರ್ವತಗಳವರೆಗೂ ವಿಸ್ತರಿಸಿದೆ. ಉತ್ತರದಲ್ಲಿ ಹಿಮಾಲಯ ಪರ್ವತಗಳು ಚೀಣಾ ದೇಶದಿಂದಲೂ, ಪಶ್ಚಿಮದಲ್ಲಿ ಪಾಟ್ಕೋ, ಲೂಷೈ ಬೆಟ್ಟಗಳು ಇಂಡಿಯಾ ದೇಶದಿಂದಲೂ ಈ ದೇಶವನ್ನು ಪ್ರತ್ಯೇಕಿಸುತ್ತವೆ.

ಬರ್ಮಾದೇಶವು ಇಂಡಿಯಾ ಚಕ್ರಾಧಿಪತ್ಯಕ್ಕೆ ಒಳಪಟ್ಟು ವೈಸರಾಯಿರವರಿಗೆ ಅಧೀನವಾಗಿರುವ ಒಬ್ಬ ಲೆಫ್ಟಿನೆಂಟು ಗೌರ್ನರವರ ಕೈಕೆಳಗಿದೆ. ಆದರೆ ಈ ದೇಶದ ಸ್ವಾಭಾವಿಕ ಲಕ್ಷಣಗಳನ್ನೂ, ಜನರ ಕುಲ, ಭಾಷೆ ಮೊದಲಾದುವನ್ನೂ ಪರಿಶೀಲಿಸಿದರೆ, ಬರ್ಮ ಮತ್ತು ಇಂಡಿಯ ದೇಶಗಳು ಬೇರೆಬೇರೆ ದೇಶಗಳಾಗಿ ಕಾಣುತ್ತವೆ.

ಈ ದೇಶದ ವಿಸ್ತೀರ್ಣ ಸುಮಾರು $2\frac{1}{4}$ ಲಕ್ಷ ಚ.ಮೈ. ಜನಸಂಖ್ಯೆ $1\frac{1}{4}$ ಕೋಟಿ. ಬರ್ಮಾದೇಶವನ್ನೂ ಸೇರಿಸಿದರೆ ಇಂಡಿಯಾ ಚಕ್ರಾಧಿಪತ್ಯದ ಒಟ್ಟು ವಿಸ್ತೀರ್ಣವು 18 ಲಕ್ಷ ಚ.ಮೈ. ಜನಸಂಖ್ಯೆ 32 ಕೋಟಿಗಳಾಗುವುದು.

ಈ ದೇಶದಲ್ಲಿ ಬೆಟ್ಟಗಳ ಸಾಲುಗಳೂ, ನದಿಯ ಬೈಲುಗಳೂ ಉತ್ತರ ದಕ್ಷಿಣವಾಗಿ ಹಬ್ಬಿವೆ. ಉತ್ತರ ಪೂರ್ವ ಭಾಗಗಳು ಪ್ರಸ್ಥಭೂಮಿಗಳಾಗಿವೆ.

ಬರ್ಮಾದೇಶದ ಉತ್ತರ ಭಾಗದಲ್ಲಿಯೂ, ಪಶ್ಚಿಮ ತೀರದಲ್ಲಿಯೂ ಮುಂಗಾರು ಮಳೆ ವಿಶೇಷವಾಗಿ ಬೀಳುವುದು. ಆದುದರಿಂದ ಈ ಭಾಗಗಳ ಬೆಟ್ಟಗಳಲ್ಲಿ ಕಾಡುಗಳು ವಿಶೇಷವಾಗಿವೆ. ಇಂಡಿಯಾ, ಬರ್ಮಾಗಳಿಗೆ ಮಧ್ಯದಲ್ಲಿರುವ ಬೆಟ್ಟಗಳು ಕಾಡುಗಳಿಂದ ತುಂಬಿರುವುದರಿಂದಲೂ, ಇವುಗಳಲ್ಲಿ ಕಾಡು ಜನರು ವಾಸವಾಗಿರುವುದರಿಂದಲೂ ಈ ಎರಡು ದೇಶಗಳ ಜನಸಂಚಾರವೂ, ವ್ಯಾಪಾರವೂ ಭೂಮಾರ್ಗವಾಗಿ ನಡೆಯುವುದಿಲ್ಲ. ಮುಖ್ಯವಾಗಿ ಸಮುದ್ರ ಮಾರ್ಗವಾಗಿಯೇ ನಡೆಯಬೇಕಾಗಿದೆ.

ಇರವಾಡಿ, ಸಿತ್ತಾಂಗ್, ಸಾಲವೆನ್ ನದಿಗಳು ಉತ್ತರದಲ್ಲಿ ಹುಟ್ಟಿ, ಪರ್ವತಗಳ ಕಣಿವೆಗಳಲ್ಲಿ ದಕ್ಷಿಣಕ್ಕೆ ಹರಿದು ಬಂಗಾಳಕೊಲ್ಲಿಗೆ ಬೀಳುವುವು. ಇವುಗಳ ಬೈಲುಗಳು ಇಕ್ಕಟ್ಟಾಗಿರುವುದರಿಂದ ದೊಡ್ಡ ಉಪನದಿಗಳು ಬಂದು ಸೇರಲು

ಅವಕಾಶವಿಲ್ಲ. ಮಳೆ ಹೆಚ್ಚಾಗಿ ಬೀಳುವುದರಿಂದ ನದಿಗಳಲ್ಲಿ ನೀರು ಅಧಿಕ ವಾಗಿರುವುದು. ಆದರೆ ಇರವಾಡಿ ವಿನಾ ಉಳಿದ ನದಿಗಳು ಬಹು ವೇಗವಾಗಿ ಹರಿಯುವುದರಿಂದ ಹಡಗುಗಳ ಸಂಚಾರಕ್ಕೆ ಅನುಕೂಲವಾಗಿಲ್ಲ. ಇರವಾಡಿ ನದಿಯ ಮೇಲೆ ರಂಗೂನ್ ಪಟ್ಟಣದಿಂದ ಭಾಮೋ ಪಟ್ಟಣದವರೆಗೂ ಸಣ್ಣ ಹಡಗುಗಳು ಸಂಚರಿಸುತ್ತವೆ.

ಇರವಾಡಿ ನದಿಯ ಬೈಲಿನಲ್ಲಿಯೂ, ಪಶ್ಚಿಮ ತೀರದ ಮೈದಾನದಲ್ಲಿಯೂ ನೀರಿನ ವಸತಿ ಹೆಚ್ಚಾಗಿ ಇರುವುದಲ್ಲದೆ ನೆಲವು ಬಹು ಫಲವತ್ತಾಗಿರುವುದರಿಂದ ಬತ್ತ ವಿಶೇಷವಾಗಿ ಬೆಳೆಯುವುದು. ಈ ದೇಶದಲ್ಲಿ ಜನಸಂಖ್ಯೆ ಕಡಿಮೆಯಾಗಿರುವುದರಿಂದ ಇಲ್ಲಿ ಬೆಳೆದ ಅಕ್ಕಿಯನ್ನು ಇತರ ದೇಶಗಳಿಗೆ ಬಹು ಹೆಚ್ಚಾಗಿ ರಫ್ತು ಮಾಡುವರು. ಈ ದೇಶದ ಕಾಡುಗಳಿಂದ ತೇಗದ ಮರ ರಫ್ತಾಗುತ್ತದೆ. ಈ ದೇಶದಲ್ಲಿ ಕೆಂಪುಗಳು ವಿಶೇಷವಾಗಿ ಸಿಕ್ಕುತ್ತವೆ. ಕೆಲವು ಭಾಗಗಳಲ್ಲಿ ಸೀಮೆಯ ಎಣ್ಣೆಯ ಬಾವಿಗಳೂ ಸಿಕ್ಕಿವೆ.

ಈ ದೇಶದ ಜನರು ಮಂಗೋಲಿಯನ್ ಕುಲಕ್ಕೆ ಸೇರಿದವರು. ಬೌದ್ಧ ಮತವನ್ನು ಅವಲಂಬಿಸಿದಾರೆ. ಚೀಣಾ ದೇಶದ ಭಾಷೆಗೆ ಸಂಬಂಧಪಟ್ಟ ಭಾಷೆಯನ್ನು ಆಡುವರು. ಇವರು ರೇಷ್ಮೆಯ ಬಟ್ಟೆಗಳನ್ನೇ ಉಡುವುದು ಹೆಚ್ಚು.

**ಪಟ್ಟಣಗಳು.**—ಈ ದೇಶದಲ್ಲಿ ಬೆಟ್ಟಸೀಮೆಯೇ ಹೆಚ್ಚು. ಪೂರ್ವಕಾಲದಲ್ಲಿ ಒಳ್ಳೆಯ ರಾಜ್ಯಭಾರವಿರಲಿಲ್ಲ. ಕೈಗಾರಿಕೆ, ವ್ಯಾಪಾರಗಳೂ ಹೆಚ್ಚಾಗಿರಲಿಲ್ಲ. ಆದುದರಿಂದ ಇಲ್ಲಿ ದೊಡ್ಡ ಪಟ್ಟಣಗಳು ಕಡಿಮೆ. ಆದರೆ ಈ ದೇಶವು ಇಂಗ್ಲಿಷರ ಕೈಸೇರಿದ ಮೇಲೆ ಕೈಗಾರಿಕೆ, ವ್ಯಾಪಾರಗಳು ಹೆಚ್ಚಿ ಹೊಸ ಹೊಸ ಪಟ್ಟಣಗಳು ಅಭಿವೃದ್ಧಿಗೆ ಬರುತ್ತಲಿವೆ.

**ರಂಗೂನ್.**—ಇದು ಇರವಾಡಿ ನದಿಯ ಮುಖದ ಸಮೀಪದಲ್ಲಿದೆ. ಇದೇ ಈ ದೇಶದ ರಾಜಧಾನಿ ಮತ್ತು ಮುಖ್ಯವಾದ ರೇವುಪಟ್ಟಣ. ಅಕ್ಕಿಯೂ, ತೇಗದ ಮರವೂ ಇಲ್ಲಿಂದ ರಫ್ತಾಗುವುವು. ಬರ್ಮಾ ದೇಶದ ಜನರು ಹಳ್ಳಿಗಳಲ್ಲಿ ವಾಸ ಮಾಡಲು ಹೆಚ್ಚು ಇಷ್ಟವುಳ್ಳವರಾಗಿರುವುದರಿಂದ, ಈ ಪಟ್ಟಣದಲ್ಲಿ ಇತರರ ಸಂಖ್ಯೆಗಿಂತ ಪಾರ್ಸಿಗಳು, ತಮಿಳರು, ಚೀಣರು ಮೊದಲಾದ ಪರದೇಶದವರ ಸಂಖ್ಯೆಯೇ ಹೆಚ್ಚಾಗಿದೆ. ಈ ಪಟ್ಟಣದ ಜನಸಂಖ್ಯೆ 3 ಲಕ್ಷ. ಆದರೆ ಮದರಾಸಿಗಿಂತ ಇಲ್ಲಿ ವ್ಯಾಪಾರವು ಹೆಚ್ಚಾಗಿ ನಡೆಯುತ್ತದೆ.

**ಮಾಂಡಲೆ.**—ಇದು ಉತ್ತರ ಭಾಗದಲ್ಲಿ ಇರವಾಡಿ ನದಿಯ ತೀರದಲ್ಲಿದೆ. ಒಳದೇಶದ ವ್ಯಾಪಾರಸ್ಥಳ. ಇದು ಪೂರ್ವದಲ್ಲಿ ಬರ್ಮಾ ದೇಶದ ದೊರೆಯ ರಾಜಧಾನಿಯಾಗಿತ್ತು.

**ಮೌಲ್ಮೇಣ.**—ಇದು ಸಾಲ್ವೆನ್ ನದಿಯ ಮುಖದಲ್ಲಿರುವ ರೇವುಪಟ್ಟಣ. ಬತ್ತವೂ, ತೊಲೆಗಳೂ ಇಲ್ಲಿಂದಲೂ ರಫ್ತಾಗುವುವು.

**ಭಾಮೋ.**—ಇದು ಚೀಣಾದೇಶದ ಸರಹದ್ದಿನಲ್ಲಿ ಇರವಾಡಿ ನದಿಯ ತೀರದಲ್ಲಿದೆ. ಇಲ್ಲಿಂದ ಭೂಮಾರ್ಗವಾಗಿ ಚೀಣಾದೇಶದೊಡನೆ ವ್ಯಾಪಾರ ನಡೆಯುವುದು ಹೆಚ್ಚು.

## II. ಆಶ್ರಿತ ಸಂಸ್ಥಾನಗಳು

ಈ ದೇಶದಲ್ಲಿ ಒಟ್ಟು 160 ಆಶ್ರಿತ ಸಂಸ್ಥಾನಗಳಿವೆ. ಇವುಗಳಲ್ಲಿ ಕೆಲವು ದೊಡ್ಡವು; ಅನೇಕ ಬಹು ಚಿಕ್ಕವು. ಇವುಗಳ ಒಟ್ಟು ವಿಸ್ತೀರ್ಣ 6 ಲಕ್ಷ ಚ.ಮೈಲಿಗಳು. ಜನಸಂಖ್ಯೆ $6\frac{1}{2}$ ಕೋಟಿ. ಎಂದರೆ ಈ ದೇಶದ ಒಟ್ಟು ವಿಸ್ತೀರ್ಣ ದಲ್ಲಿ $\frac{2}{5}$ ಭಾಗವೂ; ಜನಸಂಖ್ಯೆಯಲ್ಲಿ $\frac{1}{5}$ ಭಾಗವೂ ಆಶ್ರಿತ ಸಂಸ್ಥಾನಗಳಿಗೆ ಸೇರಿದೆ.

ಈ ಸಂಸ್ಥಾನಗಳು ದೇಶೀಯ ರಾಜರಿಂದ ಆಳಲ್ಪಡುತ್ತಿವೆ; ಈ ರಾಜರೆಲ್ಲರೂ ಚಕ್ರವರ್ತಿಯವರಿಗೆ ಅಧೀನರಾಗಿದಾರೆ. ಇತರ ದೇಶಗಳ ದೊರೆಗಳ ಬಳಿಗೆ ರಾಯಭಾರಿಗಳನ್ನು ಕಳುಹಿಸಲಿಕ್ಕೂ, ಅವರ ಸಂಗಡ ಸಂಧಿವಿಗ್ರಹಗಳನ್ನು ಮಾಡುವುದಕ್ಕೂ ಈ ರಾಜರಿಗೆ ಅಧಿಕಾರವಿಲ್ಲ. ಈ ರಾಜರಲ್ಲಿ ಅನೇಕರು ಬ್ರಿಟಿಷರಿಗೆ ಪೊಗದಿಯನ್ನು ಕೊಡುತ್ತಾರೆ. ಇದಕ್ಕೆ ಬದಲಾಗಿ ಬ್ರಿಟಿಷರು ತಮ್ಮ ಸೈನ್ಯವನ್ನು ಅವರ ರಾಜ್ಯದಲ್ಲಿರಿಸಿ, ಪರರಾಜರು ಮೇಲೆ ಬೀಳದಂತೆಯೂ, ರಾಜ್ಯದಲ್ಲಿ ದಂಗೆ ಏಳದಂತೆಯೂ ಸಂರಕ್ಷಿಸುತ್ತಿರುವರು. ತಮ್ಮ ರಾಜ್ಯವನ್ನು ಆಳುವುದರಲ್ಲಿ ಈ ದೇಶೀಯ ರಾಜರು ಸ್ವತಂತ್ರರು. ಆದರೆ ತಮ್ಮ ಪ್ರಜೆಗಳಿಗೆ ಹಿಂಸೆಯುಂಟಾದರೆ, ಒಳದೇಶದ ಆಡಳಿತಗಳಲ್ಲಿಯೂ ಬ್ರಿಟಿಷರು ಕೈಹಾಕುವರು.

ಹೈದರಾಬಾದು, ಮೈಸೂರು ಮೊದಲಾದ ದೊಡ್ಡ ಸಂಸ್ಥಾನಗಳು ವೈಸ್‌ರಾಯಿರವರಿಗೆ ಅಧೀನವಾಗಿವೆ. ಕೊಚ್ಚಿ, ಪುದುಕೋಟೆ, ಸಿಕ್ಕಿಂ ಮೊದಲಾದ ಚಿಕ್ಕ ಸಂಸ್ಥಾನಗಳು ಆಯಾ ಪ್ರಾಂತದ ಅಧಿಕಾರಿಗಳಿಗೆ ಅಧೀನವಾಗಿವೆ. ರಾಜಪುತ್ರಸ್ಥಾನ, ಮಧ್ಯಇಂಡಿಯ ಸಂಸ್ಥಾನಗಳು ಮೊದಲಾದವುಗಳಲ್ಲಿ ಒಂದೊಂದು ಗುಂಪಿಗೆ ಒಬ್ಬೊಬ್ಬ ಏಜೆಂಟ್ ಜನರಲ್ ಎಂಬ ಅಧಿಕಾರಿ ಇರುವನು. ದೊಡ್ಡ ಸಂಸ್ಥಾನಗಳಲ್ಲಿ ಪ್ರತಿಯೊಂದಕ್ಕೂ ರೆಸಿಡೆಂಟ್ ಎಂಬ ಅಧಿಕಾರಿ ಇದಾನೆ.

ಈ ಆಶ್ರಿತ ಸಂಸ್ಥಾನಗಳಲ್ಲಿ ಮುಖ್ಯವಾದುವನ್ನು ಈ ಕೆಳಗೆ ವಿವರಿಸಿದೆ.

### ಕಾಶ್ಮೀರ

ಇದು ಹಿಮಾಲಯ ಪರ್ವತಗಳ ಕಣಿವೆಯಲ್ಲಿದೆ. ಇಲ್ಲಿ ಸಿಂಧು ನದಿಯೂ ಅದರ ಉಪನದಿಗಳೂ ಹರಿಯುತ್ತವೆ. ನೆಲವು ಫಲವತ್ತಾಗಿ, ವಾಯುಗುಣವು ಹಿತಕರವಾಗಿರುವುದರಿಂದ ಯೂರೋಪು ಖಂಡದ ಸೇಬು ಮೊದಲಾದ ಹಣ್ಣುಗಳು

ಇಲ್ಲಿ ಬೆಳೆಯುತ್ತವೆ. ಇಲ್ಲಿನ ಜನರು ಆರ್ಯ ಕುಲಕ್ಕೆ ಸೇರಿದವರಾಗಿದಾರೆ; ಮುಸಲ್ಮಾನರ ಸಂಖ್ಯೆ ಹೆಚ್ಚು. ಇಲ್ಲಿನ ರಾಜನು ರಾಜಪುತ್ರ ವಂಶಕ್ಕೆ ಸೇರಿದವನು.

ಈ ಸಂಸ್ಥಾನದಲ್ಲಿ ಬಹು ರಮ್ಯವಾದ ಕಾಡುಗಳೂ, ಸರೋವರಗಳೂ ಇರುವುವಲ್ಲದೆ ಪರ್ವತಗಳ ತಪ್ಪಲುಗಳಲ್ಲಿ ಎತ್ತರಕ್ಕನುಸಾರವಾಗಿ ವಾಯು ಗುಣವೂ, ಪ್ರಕೃತಿ ಸೌಂದರ್ಯವೂ ಬೇರೆ ಬೇರೆಯಾಗಿರುವುದರಿಂದ ಈ ಪ್ರದೇಶ ವನ್ನು ನೋಡುವುದಕ್ಕೆ ಸಾವಿರಾರು ಜನರು ಬಂದುಹೋಗುತ್ತಿರುವರು. ಆದುದರಿಂದ ಈ ಸಂಸ್ಥಾನವನ್ನು 'ಇಂಡಿಯಾದೇಶದ ಸ್ವಿಟ್ಜರ್ಲೆಂಡ್' ಎಂದು ಕರೆಯಬಹುದು.

**ಶ್ರೀನಗರ.**—ಮುಖ್ಯ ಪಟ್ಟಣ ಮತ್ತು ರಾಜಧಾನಿ. ಇದು ಫಲವತ್ತಾದ ಕಾಶ್ಮೀರದ ಕಣಿವೆಯ ನಡುವೆ ಜೀಲಂ ನದಿಯ ದಡದಲ್ಲಿದೆ. ಇಲ್ಲಿ ಮರದಿಂದ ಕಟ್ಟಲ್ಪಟ್ಟಿರುವ ಮನೆಗಳು ನೋಡುವುದಕ್ಕೆ ಆಶ್ಚರ್ಯಕರವಾಗಿವೆ. ಟಿಬೆಟ್ ಮತ್ತು ಪಾಮಿರ್ ಪ್ರಸ್ಥಭೂಮಿಗಳಿಗೆ ಹೋಗುವ ಭೂಮಾರ್ಗಗಳು ಇಲ್ಲಿ ಸಂಧಿಸುವುದರಿಂದ ಇಲ್ಲಿ ತಕ್ಕಮಟ್ಟಿಗೆ ವ್ಯಾಪಾರವು ನಡೆಯುವುದು. ಇಲ್ಲಿ ಹಸನಾದ ಶಾಲುಗಳೂ, ರೇಷ್ಮೆಯ ಬಟ್ಟೆಗಳೂ ತಯಾರಾಗುವುವು. ಮರದಲ್ಲಿ ಇಲ್ಲಿನ ಜನರು ಚಿತ್ರಕೆಲಸಗಳನ್ನು ಚೆನ್ನಾಗಿ ಮಾಡುವರು.

ಈ ಸಂಸ್ಥಾನದ ಪರ್ವತದ ತಪ್ಪಲುಗಳಲ್ಲಿ ಬಹಳ ಎತ್ತರದಮೇಲೆ ಅನೇಕ ಪಟ್ಟಣಗಳಿರುವುವು. 11,000 ಅಡಿ ಎತ್ತರದಲ್ಲಿರುವ ಲೇ ಎಂಬುದು ಇವುಗಳಲ್ಲಿ ಮುಖ್ಯವಾದುದು. ಇಲ್ಲಿಂದ ಪೂರ್ವ ತುರ್ಕಿಸ್ಥಾನಕ್ಕೆ ಹೋಗುವ ಒಂದು ಕಣಿವೆಯ ಮಾರ್ಗವು ಇಲ್ಲಿರುವುದರಿಂದ ಸ್ವಲ್ಪ ವ್ಯಾಪಾರ ನಡೆಯುವುದು.

## ರಾಜಪುತ್ರಸ್ಥಾನ

ಆರಾವಳೀ ಬೆಟ್ಟದ ಸಮೀಪದ ಪ್ರದೇಶಗಳೂ, ಮಾಳವ ಪ್ರಸ್ಥಭೂಮಿಯ ಸ್ವಲ್ಪ ಭಾಗವೂ ರಾಜಪುಟಾಣ ಅಥವಾ ರಾಜಪುತ್ರಸ್ಥಾನಕ್ಕೆ ಸೇರಿವೆ. ರಾಜಪುತ್ರ ಸ್ಥಾನವು ಸಾಮಾನ್ಯವಾಗಿ ಮರುಭೂಮಿಯ ಪ್ರದೇಶ. ದಕ್ಷಿಣ ಭಾಗದಲ್ಲಿ ಮಾತ್ರ ಸ್ವಲ್ಪ ಮಳೆ ಬೀಳುವುದರಿಂದ ಹತ್ತಿ, ಜೋಳ, ಗೋಧಿ ಇವು ಬೆಳೆಯುವುವು. ಸಾಂಭರ್ ಸರೋವರದ ಬಳಿ ಉಪ್ಪನ್ನು ತಯಾರುಮಾಡುತ್ತಾರೆ.

ಇಲ್ಲಿ 18 ಸಂಸ್ಥಾನಗಳಿವೆ. ಇವುಗಳ ಮೇಲ್ವಿಚಾರಣೆಯನ್ನು ನೋಡಿ ಕೊಳ್ಳಲು ವೈಸ್‌ರಾಯರವರಿಗೆ ಅಧೀನರಾದ ಏಜಂಟ್-ಜನರಲ್ ಎಂಬ ಅಧಿಕಾರಿ ನೇಮಿಸಲ್ಪಟ್ಟು ಅಜ್ಮೀರದಲ್ಲಿರುವನು.

ರಾಜಪುತ್ರರು ಹಿಂದುಗಳು; ಅತಿಧೀರರು. ತಾವು ಸೂರ್ಯ ಚಂದ್ರ ವಂಶಗಳಿಗೆ ಸೇರಿದವರೆಂದು ಹೇಳಿಕೊಳ್ಳುವರು.

ಟ್ರಾಂಕ್ ಸಂಸ್ಥಾನ ಮಾತ್ರ ಮುಸಲ್ಮಾನ ನವಾಬರಿಗೆ ಸೇರಿದೆ. ಉಳಿದ ಸಂಸ್ಥಾನಗಳೆಲ್ಲ ರಾಜಪುತ್ರ ರಾಜರಿಗೇ ಸೇರಿವೆ.

ರಾಜಪುಟಾಣದಲ್ಲಿ ಸಂಸ್ಥಾನದ ಹೆಸರೂ, ಅದರ ಮುಖ್ಯ ಪಟ್ಟಣದ ಹೆಸರೂ ಒಂದೇ ಆಗಿದೆ. ಸಾಮಾನ್ಯವಾಗಿ ಪ್ರತಿಯೊಂದು ಮುಖ್ಯ ಪಟ್ಟಣಕ್ಕೂ ಬಲವಾದ ಕೋಟೆ ಇದೆ. ಇವುಗಳಲ್ಲಿ ಜಯಪುರ, ಉದಯಪುರ, ಜ್ಯೋತಿಪುರ, ಬಿಕನೀರ್ ಎಂಬಿವು ಮುಖ್ಯವಾದುವು. ಜಯಪುರವು ಹೆಚ್ಚಾಗಿ ವ್ಯಾಪಾರ ನಡೆಯುವ ಸ್ಥಳ ಮತ್ತು ಅತಿಸುಂದರವಾದ ಪಟ್ಟಣ. ಇಲ್ಲಿ ಅಮೃತಶಿಲೆಯಿಂದ ನಿರ್ಮಿತವಾದ ಅನೇಕ ಕಟ್ಟಡಗಳಿವೆ.

ಅರಾವಳೀ ಬೆಟ್ಟದ ಉನ್ನತವಾದ ಶಿಖರದ ಮೇಲಿರುವ ಅಬು ಎಂಬ ಪಟ್ಟಣದಲ್ಲಿ ರಾಜಪುಟಾಣರ ಏಜಂಟ್-ಜನರಲ್‍ರವರು ಬೇಸಗೆಯಲ್ಲಿ ವಾಸಮಾಡುವರು. ಇಲ್ಲಿ ಸುಂದರವಾದ ಜೈನ ದೇವಸ್ಥಾನಗಳಿವೆ.

## ಮಧ್ಯ ಇಂಡಿಯಾ ಸಂಸ್ಥಾನಗಳು

ಮಧ್ಯ ಇಂಡಿಯದಲ್ಲಿ ಅನೇಕ ಚಿಕ್ಕ ಚಿಕ್ಕ ಆಶ್ರಿತ ಸಂಸ್ಥಾನಗಳಿವೆ. ಇವುಗಳೆಲ್ಲ ಇಂದೋರಿನಲ್ಲಿ ವಾಸಮಾಡುವ ಏಜಂಟ್-ಜನರಲ್‍ರವರ ಅಧಿಕಾರಕ್ಕೆ ಒಳಪಟ್ಟಿವೆ. ಈ ಸಂಸ್ಥಾನಗಳಲ್ಲಿ ಗ್ವಾಲಿಯರ್, ಇಂದೋರ್, ಭೂಪಾಲ್, ರೀವಾ, ಪನ್ನಾ ಎಂಬುವು ಮುಖ್ಯವಾದುವು.

ಈ ಪ್ರದೇಶದ ದಕ್ಷಿಣ ಭಾಗದಲ್ಲಿ ಸಾತ್ಪುರ, ವಿಂಧ್ಯ ಪರ್ವತಗಳು ಹಬ್ಬಿವೆ. ಉತ್ತರ ಭಾಗದಲ್ಲಿ ಮಳೆ ಕಡಿಮೆ. ಉಳಿದ ಭಾಗಗಳಲ್ಲಿ ಮುಂಗಾರು ಮಳೆ ಚೆನ್ನಾಗಿ ಬೀಳುವುದು. ಚಂಬಲ್ ಮತ್ತು ಶೋಣ ಎಂಬಿವು ಇಲ್ಲಿ ಹರಿಯುವ ಮುಖ್ಯ ನದಿಗಳು.

ಈ ಪ್ರದೇಶದ ನೆಲವು ಅನೇಕ ಕಡೆಗಳಲ್ಲಿ ಫಲವತ್ತಾಗಿರುವುದರಿಂದ ಅಫೀಮು, ಹೊಗೆಯುಸೊಪ್ಪು, ಹತ್ತಿ, ಗೋಧಿ ಇವು ಬೆಳೆಯುತ್ತವೆ. ರೀವಾ ಸಂಸ್ಥಾನದಲ್ಲಿ ಕಲ್ಲಿದ್ದಲು ದೊರೆಯುವುದು.

**ಮುಖ್ಯ ಪಟ್ಟಣಗಳು; ಗ್ವಾಲಿಯರ್.**—ಇದು ಸಿಂಧ್ಯನೆಂಬ ಮರಾಟೆ ರಾಜನಿಗೆ ರಾಜಧಾನಿಯಾಗಿದೆ. ಇದರ ಕೋಟೆ ಬಹಳ ಬಲವಾದುದು.

**ಉಜ್ಜಯಿನಿ.**—ಪುರಾತನ ಕಾಲದಲ್ಲಿ ಹಿಂದೂಗಳು ಈ ಪಟ್ಟಣದಲ್ಲಿ ನಕ್ಷತ್ರಗಳನ್ನು ಪರೀಕ್ಷಿಸುವ ಯಂತ್ರಗಳನ್ನಿಟ್ಟು ತಮ್ಮ ರೇಖಾಂಶಗಳನ್ನು ಈ ಪಟ್ಟಣದಿಂದ ಎಣಿಸುತ್ತಿದ್ದರು. ವಿಕ್ರಮಾದಿತ್ಯನೆಂಬ ಪ್ರಸಿದ್ಧನಾದ ರಾಜನೂ, ಕಾಳಿ

ದಾಸ ಮೊದಲಾದ ಮಹಾಕವಿಗಳೂ ಇಲ್ಲಿ ಇದ್ದರೆಂದು ಹೇಳುತ್ತಾರೆ. ಈಗಲೂ ಇದು ಹಿಂದುಗಳ ಯಾತ್ರಾಸ್ಥಳವಾಗಿದೆ.

**ಇಂದೋರ್.**—ಇದು ಮರಾಟಿ ದೊರೆಯಾದ ಹೋಳ್ಕರನ ರಾಜಧಾನಿ. ಇದರ ಬಳಿಯಲ್ಲಿರುವ ಮೌ ಎಂಬುದು ದೊಡ್ಡ ಲಷ್ಕರ್ ಅಥವಾ ಕಂಟೋನ್ಮೆಂಟಾಗಿದೆ.

**ಭೂಪಾಲ್.**—ಇದು ನರ್ಮದಾ ನದಿಗೆ ಉತ್ತರದಲ್ಲಿದೆ. ಇದನ್ನು ಒಬ್ಬ ಪ್ರಸಿದ್ಧಳಾದ ಮುಸಲ್ಮಾನರ ರಾಣಿ ಆಳುತ್ತಿರುವಳು. ಈಗ ಆಕೆಯ ಮಗನು ನವಾಬನಾಗಿದ್ದಾನೆ.

## ಹೈದರಾಬಾದು

ಈ ಸಂಸ್ಥಾನವು ದಖನ್ ಪ್ರಸ್ಥಭೂಮಿಯ ಮಧ್ಯಭಾಗದಲ್ಲಿ ಬೊಂಬಾಯಿ, ಮದರಾಸು ಆಧಿಪತ್ಯಗಳ ಮಧ್ಯದಲ್ಲಿದೆ. ಇದು ಆಶ್ರಿತ ಸಂಸ್ಥಾನಗಳಲ್ಲೆಲ್ಲ ಅತ್ಯಂತ ದೊಡ್ಡದು. ಇದರ ವಿಸ್ತೀರ್ಣ ಸುಮಾರು 83 ಸಾವಿರ ಚ. ಮೈ.ಗಳು.

ಇಲ್ಲಿ ಗೋದಾವರಿ ಮತ್ತು ಅದರ ಉಪನದಿಗಳೂ, ಕೃಷ್ಣಾನದಿಯೂ ಸಹ ಹರಿಯುತ್ತವೆ. ವರ್ಷಕ್ಕೆ ಸುಮಾರು 40 ಅಂಗುಲ ಮಳೆಯಾಗುವುದು. ಪೂರ್ವ ಭಾಗದಲ್ಲಿ ಕೆರೆಗಳು ವಿಶೇಷವಾಗಿವೆ. ನದಿಗಳಿಂದ ಅನೇಕ ಕಾಲುವೆಗಳನ್ನೂ ತೆಗೆದಿದಾರೆ. ಹತ್ತಿ, ರಾಗಿ, ಎಣ್ಣೆಯ ಬೀಜಗಳು ವಿಶೇಷವಾಗಿ ಬೆಳೆಯುತ್ತವೆ. ಪೂರ್ವದಿಕ್ಕಿನಲ್ಲಿರುವ ಸಿಂಗರೇಣಿ ಎಂಬ ಸ್ಥಳದಲ್ಲಿ ಕಲ್ಲಿದ್ದಲು ಸಿಕ್ಕುತ್ತದೆ.

ಈ ದೇಶದ ದೊರೆಗೆ ನಿಜಾಮರೆಂದು ಹೆಸರು. ಈ ಸಂಸ್ಥಾನದಲ್ಲಿ ಹಿಂದುಗಳ ಸಂಖ್ಯೆಯೇ ಹೆಚ್ಚು. ಪೂರ್ವದಲ್ಲಿ ಪಿಂಡಾರಿಯವರ ಮತ್ತು ಮರಾಟಿಯವರ ಹಾವಳಿ ಹೆಚ್ಚಾಗಿದ್ದುದರಿಂದ ಈ ಸಂಸ್ಥಾನದ ಅನೇಕ ಪಟ್ಟಣಗಳಲ್ಲಿಯೂ, ಕೆಲವು ಹಳ್ಳಿಗಳಲ್ಲಿಯೂ ಈಗಲೂ ಬಲವಾದ ಕೋಟೆಗಳಿವೆ. ಈ ಸಂಸ್ಥಾನದಲ್ಲಿ ವ್ಯಾಪಾರವಾಗಲಿ, ಕೈಗಾರಿಕೆಗಳಾಗಲಿ ಅಷ್ಟು ಹೆಚ್ಚಾಗಿಲ್ಲ.

**ಮುಖ್ಯ ಪಟ್ಟಣಗಳು; ಹೈದರಾಬಾದು.**—ಮೂಸಿ ಎಂಬ ಸಣ್ಣ ನದಿಯ ದಡದಲ್ಲಿದೆ. ಇದು ರಾಜಧಾನಿ. ಇಲ್ಲಿ ಪಠಾಣರೂ ಅರಬರೂ ವಿಶೇಷವಾಗಿರುವರು. ದೊಡ್ಡ ಮಸೀದಿಗಳು ಅನೇಕವಾಗಿವೆ.

**ಸಿಕಂದರಾಬಾದು.**—ಇದು ಹೈದರಾಬಾದಿಗೆ 6 ಮೈಲಿ ದೂರದಲ್ಲಿದೆ. ದೊಡ್ಡ ಕಂಟೋನ್ಮೆಂಟಿರುವ ಸ್ಥಳ.

**ಗೋಲ್ಕೊಂಡ.**—ಇದು ಸಿಕಂದರಾಬಾದಿಗೆ ಪಶ್ಚಿಮದಲ್ಲಿದೆ. ಇಲ್ಲಿ ವಜ್ರಗಳು ಸಿಕ್ಕುತ್ತಿದ್ದುವು. ಹಿಂದೆ ಗೋಲ್ಕೊಂಡದ ಬಹಮನೀ ಸುಲ್ತಾನರಿಗೆ ರಾಜಧಾನಿಯಾಗಿದ್ದ ಕಾಲದಲ್ಲಿದ್ದ ಬಲವಾದ ಕೋಟೆ ಈಗಲೂ ಇದೆ.

**ಎಲ್ಲೋರ ಮತ್ತು ಅಜಂಟ.**—ವಾಯುವ್ಯ ದಿಕ್ಕಿನಲ್ಲಿರುವ ಈ ಪಟ್ಟಣಗಳಲ್ಲಿ ಗುಹೆಗಳೊಳಗಿರುವ ಪ್ರಸಿದ್ಧವಾದ ದೇವಾಲಯುಗಳಿವೆ.

## ಬರೋಡ

ಈ ಸಂಸ್ಥಾನವು ಗುಜರಾತಿನ ಮಧ್ಯದಲ್ಲಿದೆ. ಇದರ ವಿಸ್ತೀರ್ಣ ಮೈಸೂರು ಸೀಮೆಯ $\frac{1}{4}$ ಭಾಗದಷ್ಟು, ಜನಸಂಖ್ಯೆ $\frac{1}{8}$ ಭಾಗದಷ್ಟು ಆಗುವುದು. ಇಲ್ಲಿನ ದೊರೆಗೆ ಗಾಯಕವಾಡ ಎಂದು ಹೆಸರು. ಗುಜರಾತಿನ ಮತ್ತು ಕಾಥೆಯವಾಡಿ ಪರ್ಯಾಯದ್ವೀಪದ ಅನೇಕ ಸಣ್ಣ ಸಣ್ಣ ರಾಜರು ಇವರಿಗೆ ಅಧೀನರಾಗಿ ಪೊಗದಿಯನ್ನು ಕೊಡುತ್ತಿದ್ದಾರೆ.

ಕಾಂಬೇಖಾರಿಗೆ ಪೂರ್ವದಲ್ಲಿರುವ ಬರೋಡ ಮುಖ್ಯ ಪಟ್ಟಣ ಮತ್ತು ರಾಜಧಾನಿ. ಇಲ್ಲಿ ಬ್ರಿಟಿಷ್ ರೆಸಿಡೆಂಟರೂ ವಾಸವಾಗಿದಾರೆ.

## ಮೈಸೂರು

ಮೈಸೂರು ಸಂಸ್ಥಾನವು ಮದರಾಸಾಧಿಪತ್ಯಕ್ಕೆ ಪಶ್ಚಿಮದಲ್ಲಿ ದಖನ್ ಪ್ರಸ್ಥಭೂಮಿಯ ದಕ್ಷಿಣ ಭಾಗದಲ್ಲಿದೆ. ಈ ದೇಶದ ದಕ್ಷಿಣೋತ್ತರದ ಕೊನೆಗಳು 230 ಮೈಲಿಯಷ್ಟು, ಪೂರ್ವಪಶ್ಚಿಮ ಕೊನೆಗಳು 290 ಮೈಲಿಯಷ್ಟು ಉದ್ದವಾಗಿವೆ. ಇದರ ವಿಸ್ತೀರ್ಣ 29,000 ಚ. ಮೈ. ಗಳು; ಜನಸಂಖ್ಯೆ 55 ಲಕ್ಷ.

ಈ ಸಂಸ್ಥಾನದ ಪಶ್ಚಿಮ ಭಾಗದಲ್ಲಿ ಪಶ್ಚಿಮ ಘಟ್ಟಗಳೂ ಮತ್ತು ಅದರ ಶಾಖೆಗಳೂ ಇವೆ. ತುಂಗಭದ್ರಾನದಿಗೆ ಮೂಲವಾದ ವರಾಹಪರ್ವತ, ವೇದಾವತಿ ನದಿಗೆ ಮೂಲವಾದ ಬಾಬಾಬುಡನ್ ಬೆಟ್ಟ ಇವು ಈ ಶಾಖೆಗಳಲ್ಲಿ ಮುಖ್ಯವಾದುವು. ಈ ಸೀಮೆಯ ಪಶ್ಚಿಮ ಭಾಗವನ್ನು ಬೆಟ್ಟಸೀಮೆ ಅಥವಾ ಮಲೆನಾಡೆಂತಲೂ, ಉತ್ತರ ಪೂರ್ವ ಭಾಗಗಳನ್ನು ಬೈಲುಸೀಮೆಯೆಂತಲೂ ಸಾಮಾನ್ಯವಾಗಿ ಕರೆಯುಬಹುದು. ಮಲೆನಾಡಿನಲ್ಲಿ ಮಳೆ ಬೀಳುವುದು ಹೆಚ್ಚು. ಆರೋಗ್ಯ ಕಡಿಮೆ. ಮೈದಾನ ಪ್ರದೇಶದಲ್ಲಿ ಮಳೆ ಕಡಿಮೆ, ಆದರೆ ಆರೋಗ್ಯ ಹೆಚ್ಚು. ಮೈದಾನ ಪ್ರದೇಶದಲ್ಲಿಯೂ ಅಲ್ಲಲ್ಲಿ ಕೆಲವು ಗುಡ್ಡಗಳಿವೆ. ಇವುಗಳಲ್ಲಿ ಒಂದಾದ ನಂದಿದುರ್ಗದಲ್ಲಿ ಪಾಲಾರ್, ಪೆನ್ನಾರ್ ಮೊದಲಾದ ನದಿಗಳು ಹುಟ್ಟುತ್ತವೆ.

ಈ ಸೀಮೆಯ ದಕ್ಷಿಣ ಭಾಗದಲ್ಲಿ ಕಾವೇರಿಯೂ ಅದರ ಉಪನದಿಗಳೂ ಹರಿಯುವುದರಿಂದಲೂ, ಭೂಮಿಯು ಫಲವತ್ತಾಗಿರುವುದರಿಂದಲೂ ನದಿಗಳ ಕಾಲುವೆಗಳನ್ನು ತೋಡಿ ನೀರನ್ನು ಹಾಯಿಸಿಕೊಂಡು ಬತ್ತ, ಕಬ್ಬು ಮೊದಲಾದ ಪೈರುಗಳನ್ನು ಹೆಚ್ಚಾಗಿ ಬೆಳೆಯುತ್ತಾರೆ. ಮಲೆನಾಡಿನಲ್ಲಿ ಅನೇಕ ಕಡೆ ಮಳೆಯಿಂದಲೇ ಬತ್ತ ಬೆಳೆಯುವರು. ಇಲ್ಲಿನ ಗುಡ್ಡಗಳ ಮೇಲೆ ಕಾಫಿಯ ತೋಟಗಳಿವೆ. ಇಲ್ಲಿ

ಕಾಡುಗಳೂ ವಿಶೇಷವಾಗಿವೆ. ಈ ಕಾಡುಗಳಲ್ಲಿ ತೇಗ, ಶ್ರೀಗಂಧ ಮೊದಲಾದ ಮರಗಳು ಬೆಳೆಯುತ್ತವೆ. ಈ ಸೀಮೆಯ ಮಧ್ಯ ಭಾಗದಲ್ಲಿಯೂ, ಪೂರ್ವ ಭಾಗದಲ್ಲಿಯೂ ಮಳೆ ಕಡಿಮೆ, ನದಿಗಳು ಹೆಚ್ಚಾಗಿಲ್ಲ, ನೆಲವು ಅಷ್ಟು ಫಲವತ್ತಾಗಿಲ್ಲ. ಆದುದರಿಂದ ಅಲ್ಲಿ ಸಾಮಾನ್ಯವಾಗಿ ರಾಗಿ, ಜೋಳ ಮೊದಲಾದ ಧಾನ್ಯಗಳನ್ನು ಬೆಳೆಯುವರು. ಕೆರೆಗಳ ಆಸರೆ ಇರುವ ಕಡೆಗಳಲ್ಲಿ ಮಾತ್ರ ಬತ್ತ, ಕಬ್ಬುಗಳನ್ನು ಬೆಳೆಯುತ್ತಾರೆ. ಚಿತ್ರದುರ್ಗ ಡಿಸ್ಟ್ರಿಕ್ಟಿನಲ್ಲಿ ಕರೀಮಣ್ಣಿನ ನೆಲವೇ ಹೆಚ್ಚಾಗಿರುವುದರಿಂದ ಹತ್ತಿ ಚೆನ್ನಾಗಿ ಬೆಳೆಯುತ್ತದೆ.

ಪೂರ್ವ ಭಾಗದಲ್ಲಿ ಉರಿಗಂ ಮೊದಲಾದ ಕೋಲಾರದ ಚಿನ್ನದ ಗಣಿಗಳಲ್ಲಿ ಚಿನ್ನ ದೊರೆಯುವುದು. ಶಿವಮೊಗ್ಗ ಡಿಸ್ಟ್ರಿಕ್ಟಿನಲ್ಲಿ ಮ್ಯಾಂಗನೀಸ್ ಎಂಬ ಲೋಹವು ಸಿಕ್ಕುವುದು. ಕಬ್ಬಿಣದ ಅದಿರು ಅನೇಕ ಭಾಗಗಳಲ್ಲಿ ಹೇರಳವಾಗಿದ್ದರೂ ಅದನ್ನು ತೆಗೆಯುತ್ತಿಲ್ಲ. ಈಚೆಗೆ ಶಿವಮೊಗ್ಗ ಡಿಸ್ಟ್ರಿಕ್ಟಿನಲ್ಲಿರುವ ಬೆಂಕಿಪುರದ ಬಳಿ ಒಂದು ದೊಡ್ಡ ಕಬ್ಬಿಣದ ಕಾರ್ಖಾನೆಯನ್ನು ಸರ್ಕಾರದವರು ಏರ್ಪಾಡುಮಾಡಿ ಇಟ್ಟಿದ್ದಾರೆ. ಈಗ ಇದಕ್ಕೆ ಭದ್ರಾವತಿ ಎಂದು ಹೆಸರು.

ನಮ್ಮ ಸೀಮೆ ಈಚೆಗೆ ಬಹಳ ಅಭಿವೃದ್ಧಿ ಸ್ಥಿತಿಗೆ ಬಂದಿದೆ. ಶಿವನಸಮುದ್ರದಲ್ಲಿರುವ ಕಾವೇರಿಯ ಜಲಪಾತದಿಂದ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡಿ ಕೋಲಾರದ ಚಿನ್ನದ ಗಣಿಗಳಲ್ಲಿ ಕೆಲಸಮಾಡುವುದಕ್ಕೂ, ಮೈಸೂರು, ಬೆಂಗಳೂರು ಪಟ್ಟಣಗಳಲ್ಲಿ ದೀಪಗಳನ್ನು ಉರಿಸುವುದಕ್ಕೂ ಉಪಯೋಗಿಸುತ್ತಿದ್ದಾರೆ. ಉತ್ತರದಲ್ಲಿ ಹರಿಯುವ ವೇದಾವತೀ ನದಿಗೆ ಅಡ್ಡಗಟ್ಟೆಯನ್ನು ಹಾಕಿ ಮಾರೀಕಣಿವೆ ಎಂಬ ಕೆರೆಯನ್ನು ಮಾಡಿದಾರೆ. ದಕ್ಷಿಣದಲ್ಲಿ ಕನ್ನಂಬಾಡಿಯ ಬಳಿ ಕಾವೇರಿಗೆ ಅಣೆಕಟ್ಟನ್ನು ಕಟ್ಟಿ ಕೃಷ್ಣರಾಜಸಾಗರವೆಂಬ ದೊಡ್ಡ ಕೆರೆಯನ್ನು ಕಟ್ಟುತ್ತಿದಾರೆ. ನಂಜನಗೂಡಿನಿಂದ ಹರಿಹರದವರೆಗೂ ಬೆಂಗಳೂರಿನಿಂದ ಹಿಂದೂಪುರ, ಮದರಾಸುಗಳ ಕಡೆಗೂ ಇರುವ ರೈಲುಮಾರ್ಗಗಳ ಜೊತೆಗೆ ಈಚೆಗೆ ಮೈಸೂರಿನಿಂದ ಅರಸೀಕೆರೆಗೂ ಬೆಂಗಳೂರಿಂದ ಚಿಕ್ಕಬಳ್ಳಾಪುರ, ಚಿಂತಾಮಣಿಗಳ ಮಾರ್ಗವಾಗಿ ಬೌರಿಂಗಪೇಟೆಗೂ ರೈಲುಮಾರ್ಗಗಳನ್ನು ಹಾಕಿದಾರೆ. ಇನ್ನೂ ಅನೇಕ ರೈಲುಮಾರ್ಗಗಳನ್ನು ಹಾಕುವ ಮತ್ತು ಭಟ್ಕಲ್ ಬಳಿ ಒಂದು ಬಂದರನ್ನು ಏರ್ಪಡಿಸುವ ಪ್ರಯತ್ನ ನಡೆಯುತ್ತಿದೆ. ಬಲಾತ್ಕಾರ ವಿದ್ಯಾಭ್ಯಾಸವು ಈ ಸಂಸ್ಥಾನದ ಅನೇಕ ಕಡೆಗಳಲ್ಲಿ ಜಾರಿಗೆ ಬಂದಿದೆ.

**ಮುಖ್ಯ ಪಟ್ಟಣಗಳು; ಬೆಂಗಳೂರು.**—ಇಲ್ಲಿ ಈ ಸಂಸ್ಥಾನದ ಮುಖ್ಯವಾದ ಕಛೇರಿಗಳೆಲ್ಲ ಇವೆ. ಈ ಪಟ್ಟಣ ಸಮುದ್ರದ ಮಟ್ಟಕ್ಕೆ 3,000 ಅಡಿಯಷ್ಟು ಎತ್ತರವಾಗಿರುವುದರಿಂದ ವಾಯುಗುಣ ಹಿತಕರವಾಗಿದೆ. ಆದುದರಿಂದ ಇಲ್ಲಿ ಬ್ರಿಟಿಷರ ಕಂಟೋನ್ಮೆಂಟೂ ಇದೆ. ನಾಲ್ಕು ರೈಲುಮಾರ್ಗಗಳು ಸೇರು

ವುದರಿಂದ ಹೆಚ್ಚಾಗಿ ವ್ಯಾಪಾರ ನಡೆಯುವುದಲ್ಲದೆ, ಹತ್ತಿಯ ಬಟ್ಟೆಗಳೂ ರೇಷ್ಮೆಯ ಬಟ್ಟೆಗಳೂ ಜಂಖಾನೆಗಳೂ ಇಲ್ಲಿ ತಯಾರಾಗುತ್ತವೆ. ದಂಡಿನ ಜನಸಂಖ್ಯೆಯೂ ಸೇರಿದರೆ ಈ ಪಟ್ಟಣದ ಜನಸಂಖ್ಯೆ ಸುಮಾರು 2 ಲಕ್ಷ.

**ಮೈಸೂರು.**—ಇದೇ ಮೈಸೂರು ದೇಶದ ರಾಜಧಾನಿ. ಇಲ್ಲಿ ನಮ್ಮ ಶ್ರೀಮನ್ಮಹಾರಾಜರವರು ವಾಸಮಾಡುತ್ತಾರೆ. ಅತ್ಯುತ್ಕೃಷ್ಟವಾದ ಅರಮನೆ ಇದೆ. ಇಲ್ಲಿ ಮೈಸೂರು ಯೂನಿವರ್ಸಿಟಿ ಎಂಬ ವಿಶ್ವವಿದ್ಯಾಲಯವೂ ಸ್ಥಾಪಿತ ವಾಗಿದೆ. ಈ ಪಟ್ಟಣದ ಸಮೀಪದಲ್ಲಿರುವ ಚಾಮುಂಡಿ ಬೆಟ್ಟದ ಮೇಲೆ ಮೈಸೂರು ದೊರೆಗಳ ಕುಲದೇವತೆಯಾದ ಚಾಮುಂಡೇಶ್ವರಿ ಅಮ್ಮನವರ ದೇವಸ್ಥಾನವಿದೆ.

**ಶ್ರೀರಂಗಪಟ್ಟಣ.**—ಇದು ಕಾವೇರೀ ನದಿಯ ಮಧ್ಯದಲ್ಲಿರುವ ಒಂದು ದ್ವೀಪ. ಹಿಂದೆ ಹೈದರ್ ಮತ್ತು ಟಿಪ್ಪೂಸುಲ್ತಾನರ ರಾಜಧಾನಿಯಾಗಿತ್ತು. ಈಗ, ಅವರ ಗೋರಿಗಳೂ, "ದರಿಯಾದೌಲತ್ ಬಾಗ್" ಎಂಬ ವಿಹಾರ ಮಂಟಪವೂ ಇವೆ. ಈ ಪಟ್ಟಣದ ಸುತ್ತುಮುತ್ತಲೂ ವಿಶೇಷವಾಗಿ ಬತ್ತ ಬೆಳೆಯುತ್ತದೆ.

**ಸೊರಬ.**—ಇದು ಶಿವಮೊಗ್ಗ ಡಿಸ್ಟ್ರಿಕ್ಟಿನಲ್ಲಿದೆ. ಇಲ್ಲಿರುವ ಗುಡಿಗರು ಗಂಧದ ಮರದಲ್ಲಿ ಶ್ಲಾಘ್ಯವಾದ ಚಿತ್ರಕೆಲಸಗಳನ್ನು ಮಾಡುತ್ತಾರೆ.

**ಹಳೇಬೀಡು ಮತ್ತು ಬೇಲೂರು.**—ಇಲ್ಲಿ ಪ್ರಸಿದ್ಧವಾದ ಪುರಾತನ ದೇವಾಲಯಗಳಿವೆ. ಇಂತಹ ಸುಂದರವಾದ ಹಿಂದೂ ದೇವಾಲಯಗಳು ಇಂಡಿಯಾ ದೇಶದಲ್ಲಿ ಇನ್ನೆಲ್ಲಿಯೂ ಇಲ್ಲವೆಂದು ಹೇಳುತ್ತಾರೆ. ಇವುಗಳ ಗೋಡೆಗಳ ಮೇಲೆಲ್ಲಾ ಬಹು ಸುಂದರವಾದ ವಿಗ್ರಹಗಳು ಕೆತ್ತಲ್ಪಟ್ಟಿವೆ.

## ತಿರುವಾಂಕೂರು ಮತ್ತು ಕೊಚ್ಚಿ

ತಿರುವಾಂಕೂರು ಅಥವಾ ಅನಂತಶಯನ ಸಂಸ್ಥಾನವೂ, ಅದರ ಉತ್ತರ ದಲ್ಲಿರುವ ಕೊಚಿನ್ ಸಂಸ್ಥಾನವೂ, ಮದರಾಸಾಧಿಪತ್ಯದ ನೈರುತ್ಯದಿಕ್ಕಿನ ಕೊನೆ ಯಲ್ಲಿರುವ ಮಲಬಾರ್ ಎಂಬ ತೀರಪ್ರದೇಶವೂ ಫಲವತ್ತಾದ ಮೈದಾನವಾಗಿದೆ. ಆದರೆ ಒಳಭಾಗ ಮಾತ್ರ ಬೆಟ್ಟಸೀಮೆಯಾಗಿದೆ. ಇಲ್ಲಿ ಮಳೆ ವಿಶೇಷವಾಗಿ ಬೀಳುವುದು. ಬೆಟ್ಟಗಳಲ್ಲಿ ತೇಗದ ಮರವೂ, ಕಾಫಿ, ಏಲಕ್ಕಿ, ಮೆಣಸೂ ಬೆಳೆ ಯುತ್ತವೆ. ಈ ಸಂಸ್ಥಾನದ ಮಧ್ಯ ಭಾಗದಲ್ಲಿ ದೊಡ್ಡದಾದ ಒಂದು ಖಾರಿಯೂ, ತೀರದಲ್ಲಿ ಸಮುದ್ರದ ಕಾಲುವೆಯೂ ಇವೆ. ಇವುಗಳ ಮೂಲಕ ವ್ಯಾಪಾರವು ಸ್ವಲ್ಪಮಟ್ಟಿಗೆ ನಡೆಯುತ್ತದೆ.

**ತಿರುವನಂತಪುರ ಅಥವಾ ಅನಂತಶಯನ.**—ತಿರುವಾಂಕೂರಿನ ರಾಜ ಧಾನಿ. ಇಲ್ಲಿ ಅನಂತಪದ್ಮನಾಭ ದೇವರ ಪ್ರಸಿದ್ಧವಾದ ದೊಡ್ಡ ದೇವಸ್ಥಾನವಿದೆ.

ದಂತದ ಸಾಮಾನುಗಳೂ, ಚಿನ್ನ ಬೆಳ್ಳಿಯ ಒಡವೆಗಳೂ ಇಲ್ಲಿ ಬಹು ಚೆನ್ನಾಗಿ ತಯಾರಾಗುತ್ತವೆ.

**ಎರ್ನಾಕುಲಂ.**—ಕೊಚಿನ್ ಸಂಸ್ಥಾನದ ರಾಜಧಾನಿ. ಅನೇಕ ಶತಮಾನಗಳಿಂದ ನಮ್ಮ ದೇಶದಲ್ಲಿ ನೆಲೆಸಿರುವ ಯೆಹೂದ್ಯರೂ, ಕ್ರೈಸ್ತರೂ ಇದರ ಸಮೀಪದಲ್ಲಿ ವಿಶೇಷವಾಗಿದಾರೆ.

## III. ಸ್ವತಂತ್ರ ಸಂಸ್ಥಾನಗಳು

ಇಂಡಿಯಾದೇಶಕ್ಕೆ ಉತ್ತರದಲ್ಲಿ ಹಿಮಾಲಯದ ತಪ್ಪಲಿನಲ್ಲಿ ನೇಪಾಳ ಮತ್ತು ಭೂತಾನಗಳೆಂಬ ಸ್ವತಂತ್ರ ಸಂಸ್ಥಾನಗಳಿವೆ. ಈ ಸಂಸ್ಥಾನದ ರಾಜರು ಇಂಗ್ಲಿಷರ ಅಪ್ಪಣೆಯಿಲ್ಲದೆ ಇತರ ದೇಶದ ದೊರೆಗಳೊಡನೆ ಸಂಧಿವಿಗ್ರಹಗಳನ್ನು ಮಾಡುವುದಿಲ್ಲ. ಇದಕ್ಕೆ ಪ್ರತಿಯಾಗಿ ಈ ದೇಶಗಳಿಗೆ ಶತ್ರುಗಳು ಬಾರದಂತೆ ಇಂಗ್ಲಿಷರು ನೋಡಿಕೊಳ್ಳುತ್ತಿದ್ದಾರೆ.

ಈ ಎರಡು ಸಂಸ್ಥಾಗಳೂ ಬೆಟ್ಟಸೀಮೆ. ಇಲ್ಲಿ ಬಹಳ ಎತ್ತರವಾದ ಶಿಖರಗಳಿವೆ. ಮಳೆ ಹೆಚ್ಚಾಗಿ ಬೀಳುವುದರಿಂದ ಕಾಡುಗಳೂ ವಿಶೇಷವಾಗಿವೆ.

ಈ ಬೆಟ್ಟಸೀಮೆಗಳಲ್ಲಿ ಜನಸಂಖ್ಯೆ ಬಹಳ ಕಡಿಮೆ. ಆದರೆ ಇಲ್ಲಿನ ಘೂರ್ಕರೆಂಬ ಜನರು ಬಹು ಶೂರರು. ಇವರಲ್ಲನೇಕರು ಇಂಡಿಯಾದೇಶದ ಸೈನ್ಯಕ್ಕೆ ಸೇರಿ ಪ್ರಖ್ಯಾತಿಯನ್ನು ಪಡೆದಿರುವರು. ಇವರೂ ಹಿಂದೂಮತದವರು. ಈ ಘೂರ್ಕರಲ್ಲದೆ ನಿವಾರರೆಂಬ ಒಂದು ಜಾತಿಯ ಜನರು ಈ ಸಂಸ್ಥಾನಗಳಲ್ಲಿದಾರೆ. ಇವರು ಬೌದ್ಧ ಮತಸ್ಥರು. ಆದರೆ ಯುದ್ಧಪ್ರಿಯರಲ್ಲ. ಇಲ್ಲಿ ಕೈಗಾರಿಕೆಗಳೂ ವ್ಯಾಪಾರವೂ ಕಡಿಮೆ. ಟಿಬೆಟ್ ದೇಶದೊಂದಿಗೆ ಮಾತ್ರ ಸ್ವಲ್ಪ ಮಟ್ಟಿಗೆ ವ್ಯಾಪಾರವು ನಡೆಯುತ್ತದೆ.

ಸಮುದ್ರದ ಮಟ್ಟಕ್ಕಿಂತ 4,500 ಅಡಿ ಎತ್ತರದ ಮೇಲೆ ಒಂದಾನೊಂದು ಕಣಿವೆಯಲ್ಲಿರುವ **ಖಟಮಂಡು** ಎಂಬುದೇ ನೇಪಾಳ ಸಂಸ್ಥಾನದ ರಾಜಧಾನಿ. **ಪನಖ** ಎಂಬುದು ಭೂತಾನದ ರಾಜಧಾನಿ.

## IV. ಯೂರೋಪಿಯನರಿಗೆ ಸೇರಿದ ಇತರ ರಾಷ್ಟ್ರಗಳು

ಯೂರೋಪು ಖಂಡದ ಜನರು ನಮ್ಮ ಇಂಡಿಯಾದೇಶದ ಐಶ್ವರ್ಯವನ್ನು ಕೇಳಿ ಇದರೊಡನೆ ವ್ಯಾಪಾರಮಾಡಲು ನಾಲ್ಕು ಶತಮಾನಗಳ ಹಿಂದೆ ಇಲ್ಲಿಗೆ ಬಂದರಷ್ಟೆ. ಇವರಲ್ಲಿ ಮೊದಲು ಬಂದವರು ಪೋರ್ಚುಗೀಸರು. ಇವರು ಪಶ್ಚಿಮ ತೀರದಲ್ಲಿ ಕೋಟೆಗಳನ್ನು ಕಟ್ಟಿಕೊಂಡು ವ್ಯಾಪಾರಮಾಡುತ್ತಿದ್ದುದಲ್ಲದೆ ಅನೇಕ ರಾಷ್ಟ್ರಗಳನ್ನೂ ಸಂಪಾದಿಸಿದರು. ಆದರೆ ಇವರ ಪ್ರಾಬಲ್ಯವು ಜಾಗ್ರತೆಯಾಗಿ ಕಡಿಮೆಯಾಯಿತು. ಈಗ ಗೋವ, ಡಾಮನ್, ಡಯು ಎಂಬ ಮೂರು

ಪ್ರದೇಶಗಳು ಮಾತ್ರ ಇವರಿಗೆ ಸೇರಿವೆ. ಬೊಂಬಾಯಿಗೆ ದಕ್ಷಿಣದಲ್ಲಿರುವ **ಗೋವಾ** ಎಂಬ ರೇವುಪಟ್ಟಣವೇ ಇವರ ಮುಖ್ಯ ಸ್ಥಳ. ಇಲ್ಲಿ ಈಗಲೂ ಸ್ವಲ್ಪ ವ್ಯಾಪಾರ ನಡೆಯುತ್ತಿದೆ. ಡಾಮನ್, ಡಯು ಇವು ಗುಜರಾತಿನ ತೀರದಲ್ಲಿವೆ.

ಪೋರ್ಚುಗೀಸರ ಪ್ರಾಬಲ್ಯ ಕ್ಷೀಣವಾದಮೇಲೆ ಇಂಗ್ಲಿಷರೂ, ಫ್ರೆಂಚರೂ ಪ್ರಬಲಿಸಿದರು. ಫ್ರೆಂಚರು ಈ ದೇಶದ ರಾಜರ ಸಹಾಯವನ್ನು ಪಡೆದು ಕೆಲವು ಕಾಲ ಉತ್ತಮ ಸ್ಥಿತಿಯಲ್ಲಿದ್ದರು. ಆದರೆ ಇಂಗ್ಲಿಷರು 1740ರಿಂದ 1761ರ ವರೆಗೆ ಇವರೊಡನೆ ಹೋರಾಡಿ ಇವರ ಪ್ರಾಬಲ್ಯವನ್ನು ಮುರಿದರು. ಈಗ ಫ್ರೆಂಚರಿಗೆ ಸೇರಿರುವ ರಾಷ್ಟ್ರಗಳು ಯಾವುವೆಂದರೆ:—

(1) **ಪಾಂಡುಚೆರಿ ಅಥವಾ ಪುದುಚೇರಿ.**—ಇದು ಪೂರ್ವದ ತೀರ ದಲ್ಲಿದೆ. ಇಲ್ಲಿಂದ ನೆಲಗಡಲೆಯಕಾಯಿ ವಿಶೇಷವಾಗಿ ಫ್ರಾನ್ಸ್ ದೇಶಕ್ಕೆ ರಫ್ತಾಗು ವುದು. ಇದು ಇಂಡಿಯಾದೇಶದಲ್ಲಿರುವ ಫ್ರೆಂಚರ ಮುಖ್ಯ ಪಟ್ಟಣವಾಗಿದೆ.

(2) **ಕಾರೈಕಲ್.**—ಇದು ಕಾವೇರೀ ನದಿಯಮುಖದ ಸಮೀಪ ದಲ್ಲಿದೆ.

(3) **ಮಾಹಿ.**—ಇದು ಮಲಬಾರ್ ತೀರದಲ್ಲಿರುವ ಒಂದು ರೇವು ಪಟ್ಟಣ.

(4) **ಯಾನಾಂ.**—ಇದು ಗೋದಾವರೀ ನದಿಯಮುಖಜಭೂಮಿ ಯಲ್ಲಿದೆ.

(5) **ಚಂದ್ರನಗರ.**—ಇದು ಕಲ್ಕತ್ತೆಗೆ ಉತ್ತರದಲ್ಲಿ ಹೂಗ್ಲಿ ನದಿಯ ದಡದಲ್ಲಿದೆ. ಇಲ್ಲಿ ತಕ್ಕಮಟ್ಟಿಗೆ ವ್ಯಾಪಾರವೂ ನಡೆಯುತ್ತದೆ.

ಪೋರ್ಚುಗೀಸರಿಗೂ, ಫ್ರೆಂಚರಿಗೂ ಸೇರಿರುವ ಒಟ್ಟು ರಾಷ್ಟ್ರಗಳ ಜನ ಸಂಖ್ಯೆ 10 ಲಕ್ಷ ಮಾತ್ರ. ಈ ರಾಷ್ಟ್ರಗಳಲ್ಲಿ ಹೊಸದಾಗಿ ಕೋಟೆಗಳನ್ನು ಕಟ್ಟದಂತೆಯೂ, ಹೆಚ್ಚು ಸೈನ್ಯವನ್ನು ಇಡದಂತೆಯೂ ಇಂಗ್ಲಿಷರು ಇವರೊಡನೆ ಒಪ್ಪಂದ ಮಾಡಿಕೊಂಡಿದಾರೆ.

---

## ಸಿಂಹಳ ದ್ವೀಪ

**ಸನ್ನಿವೇಶ ಮತ್ತು ಸಾಮಾನ್ಯ ಲಕ್ಷಣ.**—ಇಂಡಿಯಾದೇಶಕ್ಕೆ ದಕ್ಷಿಣ ದಲ್ಲಿರುವ ಈ ದ್ವೀಪವನ್ನು ಪಾಕ್ ಜಲಸಂಧಿಯೂ, ಮನ್ನಾರ್‌ಕೊಲ್ಲಿಯೂ ಹಿಂದೂದೇಶದಿಂದ ಪ್ರತ್ಯೇಕಿಸುತ್ತವೆ. ಇವುಗಳ ಆಳ ಕಡಿಮೆಯಾಗಿರುವುದ ರಿಂದ ಹಡಗುಗಳು ಸಂಚರಿಸಲಾರವು. ಇಂಡಿಯಾದೇಶಕ್ಕೂ ಈ ದ್ವೀಪಕ್ಕೂ ಮಧ್ಯೆ ಅನೇಕ ಮರುಳುದಿಣ್ಣೆಗಳಿವೆ. ಇವುಗಳೇ ರಾಮಾಯಣದಲ್ಲಿ ವರ್ಣಿಸ ಲ್ಪಟ್ಟಿರುವ ರಾಮಸೇತುವೆ ಎಂದು ಹಿಂದುಗಳು ನಂಬಿದಾರೆ.

ಈ ದ್ವೀಪವು ಆಕಾರದಲ್ಲಿ ಮಾವಿನಕಾಯಿಯಂತಿದೆ. ಇದರ ಮಧ್ಯ ಭಾಗ ದಲ್ಲಿ ಎತ್ತರವಾದ ಪರ್ವತಗಳು ತುಂಬಿರುವುವು. ತೀರದಲ್ಲಿ ಮೈದಾನಗಳಿವೆ. ತೀರವು ಒಡೆದಿಲ್ಲ; ಅಲ್ಲಲ್ಲಿ ಕೆಲವು ಸಣ್ಣ ಖಾರಿಗಳು ಮಾತ್ರ ಇರುವುವು. ಇವುಗಳಲ್ಲಿ ತ್ರಿಂಕಾಮಲೆಯ ಖಾರಿ ಬಹಳ ಆಳವಾಗಿದೆ.

**ವಾಯುಗುಣ ಮತ್ತು ಬೆಳೆಗಳು.**—ದಕ್ಷಿಣ ಇಂಡಿಯಾದಂತೆಯೇ ಈ ದ್ವೀಪದಲ್ಲಿಯೂ ಸೆಕೆ ಹೆಚ್ಚು. ಪರ್ವತಗಳ ಮೇಲೆ ಮಾತ್ರ ವಾಯುಗುಣ ಹಿತಕರವಾಗಿದೆ. ಮುಂಗಾರು ಹಿಂಗಾರು ಗಾಳಿಗಳೆರಡೂ ಬೀಸುವುದರಿಂದ ಇಲ್ಲಿ ಮಳೆ ಹೆಚ್ಚಾಗಿ ಬೀಳುವುದು. ನದಿಗಳು ಅನೇಕವಾಗಿವೆ; ಅವುಗಳಲ್ಲಿ ನೀರು ಹೆಚ್ಚಾಗಿರುವುದು. ಆದರೆ ದ್ವೀಪವು ಅಗಲದಲ್ಲಿ ಕಡಿಮೆಯಾಗಿರುವುದರಿಂದ ನದಿಗಳೆಲ್ಲ ಬಹಳ ಚಿಕ್ಕವು. ಇಲ್ಲಿನ ಬೆಳೆಗಳೂ, ಸಸ್ಯಗಳೂ ಇಂಡಿಯಾದೇಶದ ಸಸ್ಯಗಳೇ ಆಗಿವೆ. ಪರ್ವತ ಪ್ರದೇಶಗಳಲ್ಲಿ ಕಾಡುಗಳು ಹೆಚ್ಚಾಗಿವೆ. ಈಚೆಗೆ ಇಲ್ಲಿ ಯೂರೋಪಿಯನ್ ಪ್ಲಾಂಟರುಗಳು ಟೀ ಮತ್ತು ರಬ್ಬರ್ ಗಿಡದ ತೋಟಗಳನ್ನು ಮಾಡಿಕೊಂಡಿದಾರೆ. ಮೈದಾನದ ಪ್ರದೇಶಗಳಲ್ಲಿ ವಿಶೇಷವಾಗಿ ತೆಂಗು, ಬತ್ತ, ಸಂಬಾರದ ಜಿನಸುಗಳು ಬೆಳೆಯುತ್ತವೆ. ಈಚೆಗೆ ಕೋಕೋ ಮತ್ತು ಸಿಂಕೋನದ ಗಿಡಗಳನ್ನೂ ಈ ದ್ವೀಪದಲ್ಲಿ ಬೆಳೆಯುತ್ತಿದಾರೆ.

**ಜನಗಳು.**—ನಮ್ಮ ದೇಶದ ಹಾಗೆ ಇಲ್ಲಿಯೂ ಕೃಷಿಯೇ ಜನರ ಮುಖ್ಯವಾದ ಉದ್ಯೋಗ. ಈ ದ್ವೀಪದ ಜನರು ಬೌದ್ಧಮತಸ್ಥರು. ಸಿಂಗಾಲಿ ಭಾಷೆಯನ್ನು ಆಡುತ್ತಾರೆ. ಪರ್ವತ ಪ್ರದೇಶಗಳಲ್ಲಿ ವಡ್ಡರೆಂಬ ಅನಾಗರಿಕರಾದ ಜನರಿದಾರೆ. ಪೂರ್ವಕಾಲದಿಂದಲೂ ದಕ್ಷಿಣ ಇಂಡಿಯಾದ ಜನರು ಇಲ್ಲಿಗೆ ಬಂದು ನೆಲಸುತ್ತಿರುವರು. ಈಚೆಗೆ ಟೀ ತೋಟಗಳಲ್ಲಿ ಕೆಲಸಮಾಡುವುದಕ್ಕಾಗಿ ಅನೇಕ ತಮಿಳರು ಬರುತ್ತಿದಾರೆ.

ಈ ದ್ವೀಪವು ಇಂಡಿಯಾ ಚಕ್ರಾಧಿಪತ್ಯಕ್ಕೆ ಸೇರಿಲ್ಲ. ಇಂಗ್ಲೆಂಡಿನ ರಾಜರಿಂದ ನಿಯಮಿಸಲ್ಪಟ್ಟ ಒಬ್ಬ ಗೌರ್ನರು ಇದನ್ನು ಆಳುತ್ತಿರುವನು.

**ಪಟ್ಟಣಗಳು.**—ಈ ದ್ವೀಪದಲ್ಲಿ ಕೃಷಿಯೇ ಜನರ ಮುಖ್ಯವಾದ ಉದ್ಯೋಗವಾಗಿರುವುದರಿಂದಲೂ, ಬೆಟ್ಟಗಳು ಹೆಚ್ಚಾಗಿರುವುದರಿಂದಲೂ ಪಟ್ಟಣಗಳ ಸಂಖ್ಯೆ ಕಡಿಮೆ.

**ಕೊಲಂಬೊ.**—ಇದು ಪಶ್ಚಿಮ ತೀರದಲ್ಲಿರುವ ರೇವುಪಟ್ಟಣ ಮತ್ತು ರಾಜಧಾನಿ. ಇಲ್ಲಿಂದ ದೇಶದ ಒಳಭಾಗಕ್ಕೆ ರೈಲುಮಾರ್ಗಗಳನ್ನು ಮಾಡಿರುವರು. ಮದರಾಸಿನಂತೆ ಇಲ್ಲಿಯೂ ಸಮುದ್ರ ತೀರದಲ್ಲಿ ಬಲವಾದ ಗೋಡೆಗಳನ್ನು ಎಬ್ಬಿಸಿ ಬಂದರನ್ನು ಕಟ್ಟಿದಾರೆ. ಈ ದ್ವೀಪದಲ್ಲಾಗುವ ಪರದೇಶದ ವ್ಯಾಪಾರವೆಲ್ಲ ಸಾಮಾನ್ಯವಾಗಿ ಈ ಪಟ್ಟಣದ ಮೂಲಕವಾಗಿಯೇ ನಡೆಯುವುದು.

ಯೂರೋಪಿನಿಂದ ಚೀಣ, ಜಪಾನ್, ಆಸ್ಟ್ರೇಲಿಯಗಳಿಗೆ ಹೋಗುವ ಹಡಗುಗಳು ಈ ಬಂದರಿಗೆ ಬಂದು ನಿಲ್ಲುವುವು. ಇಲ್ಲಿ ಅವುಗಳಿಗೆ ಕಲ್ಲಿದ್ದಲನ್ನು ಒದಗಿಸುವುದಕ್ಕೂ ಬೇಕಾದ ರಿಪೇರಿಗಳನ್ನು ಮಾಡುವುದಕ್ಕೂ ತಕ್ಕ ಏರ್ಪಾಡುಗಳನ್ನು ಮಾಡಿದಾರೆ.

**ನೆವರೆಲಿಯ.**—ಇದು ಈ ದ್ವೀಪದ ಮಧ್ಯಭಾಗದ ಪರ್ವತದ ಮೇಲಿರುವುದರಿಂದ ಇಲ್ಲಿನ ವಾಯುಗುಣ ಹಿತಕರವಾಗಿದೆ. ಯೂರೋಪಿಯನರು ಬೇಸಗೆಯಲ್ಲಿ ಇಲ್ಲಿ ವಾಸಮಾಡುತ್ತಾರೆ.

**ಟ್ರಿಂಕಾಮಲಿ.**—ಪೂರ್ವ ತೀರದಲ್ಲಿರುವ ಈ ರೇವುಪಟ್ಟಣದಲ್ಲಿ ದಕ್ಷಿಣ ಇಂಡಿಯಾದೊಡನೆ ಸ್ವಲ್ಪ ವ್ಯಾಪಾರ ನಡೆಯುತ್ತದೆ.

---

## ಚೀಣಾ ಚಕ್ರಾಧಿಪತ್ಯ

ಚೀಣಾ ಚಕ್ರಾಧಿಪತ್ಯವು ಪೆಸಿಫಿಕ್ ಸಾಗರದಿಂದ ತುರ್ಕಿಸ್ಥಾನದವರೆಗೂ, ಹಿಮಾಲಯ ಪರ್ವತ ಮತ್ತು ಅದರ ಪೂರ್ವ ಶಾಖೆಗಳಿಂದ ಸೈಬೀರಿಯ ಮೈದಾನದವರೆಗೂ ವಿಸ್ತರಿಸಿದೆ. ವಿಸ್ತೀರ್ಣದಲ್ಲಿ ಈ ಚಕ್ರಾಧಿಪತ್ಯವು ಯೂರೋಪು ಖಂಡಕ್ಕಿಂತ ದೊಡ್ಡದು. ಪ್ರಪಂಚದಲ್ಲಿರುವ ಚಕ್ರಾಧಿಪತ್ಯಗಳಲ್ಲೆಲ್ಲ ಇದು ವಿಸ್ತೀರ್ಣದಲ್ಲಿ ಮೂರನೆಯದಾಗಿದೆ. ಬ್ರಿಟಿಷ್ ಚಕ್ರಾಧಿಪತ್ಯವೂ, ರಷ್ಯಾ ಚಕ್ರಾಧಿಪತ್ಯವೂ ಇದಕ್ಕಿಂತ ದೊಡ್ಡದಾಗಿವೆ. ಪ್ರಪಂಚದ ಒಟ್ಟು ಜನಸಂಖ್ಯೆಯಲ್ಲಿ ಈ ಚಕ್ರಾಧಿಪತ್ಯವೇ ಮೊದಲನೆಯದಾಗಿದೆ. ಬ್ರಿಟಿಷ್ ಚಕ್ರಾಧಿಪತ್ಯವು ಜನಸಂಖ್ಯೆಯಲ್ಲಿ ಇದಕ್ಕೆ ಎರಡನೆಯದು. ರಷ್ಯಾ ಚಕ್ರಾಧಿಪತ್ಯವು ಮೂರನೆಯದಾಗಿದೆ.

ಈ ಚಕ್ರಾಧಿಪತ್ಯದಲ್ಲಿ ಚೀಣಾದೇಶ, ಮಂಚೂರಿಯ, ಮಂಗೋಲಿಯ, ಪೂರ್ವದಿಕ್ಕಿನ ತುರ್ಕಿಸ್ಥಾನ, ಟಿಬೆಟ್‌ಗಳೆಂಬ ಐದು ವಿಭಾಗಗಳಿವೆ. ಇವುಗಳಲ್ಲೆಲ್ಲಾ ಜನಸಂಖ್ಯೆ, ಐಶ್ವರ್ಯ, ನಾಗರಿಕತೆಗಳಲ್ಲಿ ಚೀಣಾದೇಶವೇ ಮುಖ್ಯವಾದುದು. ಈ ಚಕ್ರಾಧಿಪತ್ಯವು ವಿಸ್ತಾರದಲ್ಲಿ ಯೂರೋಪಿಗಿಂತ ದೊಡ್ಡದಾದರೂ, ಚೀಣಾದೇಶವು ಯೂರೋಪಿನ ⅓ರಷ್ಟು ಮಾತ್ರ ಇದೆ. ಆದರೆ ಚೀಣಾದೇಶದ ಒಂದರಲ್ಲಿಯೇ ಯೂರೋಪು ಖಂಡದಲ್ಲಿರುವಷ್ಟು ಜನರಿರುತ್ತಾರೆ. ಉಳಿದ ಭಾಗಗಳಲ್ಲೆಲ್ಲಾ ಒಟ್ಟು ಇಂಗ್ಲೆಂಡು, ವೇಲ್ಸುಗಳಲ್ಲಿರುವಷ್ಟು ಜನರಿರುವರು. ಉಳಿದುವು ಸಾಮಾನ್ಯವಾಗಿ ಪರ್ವತಸೀಮೆ, ಪ್ರಸ್ಥಭೂಮಿ ಅಥವಾ ಮರುಭೂಮಿಗಳಾಗಿವೆ.

### ಚೀಣಾದೇಶ

**ಮೇರೆಗಳು ಮತ್ತು ವಿಸ್ತೀರ್ಣ.**—ಈ ದೇಶದ ಉತ್ತರ ದಿಕ್ಕಿನಲ್ಲಿರುವ ಒಂದು ಅಗಾಧವಾದ ಗೋಡೆಯು ಮಂಗೋಲಿಯದಿಂದ ಈ ದೇಶವನ್ನು ಪ್ರತ್ಯೇಕಿ

ಸುತ್ತದೆ. ಮಂಗೋಲಿಯದ ಕಡೆಯಿಂದ ನುಗ್ಗಿ ಬರುತ್ತಿದ್ದ ಶತ್ರುಗಳನ್ನು ತಡೆಯುವುದಕ್ಕೋಸ್ಕರ ಸುಮಾರು ಕ್ರಿ. ಪೂ. 200ರಲ್ಲಿ ಈ ಗೋಡೆಯನ್ನು ಕಟ್ಟಿದರಂತೆ. ಇದು 20 ಅಡಿ ಅಗಲವಾಗಿಯೂ 20 ಅಡಿ ಎತ್ತರವಾಗಿಯೂ 1,100 ಮೈಲಿ ಉದ್ದವಾಗಿಯೂ ಇದೆ. ಇದರ ಮೇಲೆ ಅಲ್ಲಲ್ಲಿ ಕೋಟೆ ಕೊತ್ತಲಗಳಿವೆ. ಚೀಣಾದೇಶದ ಪಶ್ಚಿಮಕ್ಕೆ ಟಿಬೆಟ್ ಪ್ರಸ್ಥಭೂಮಿ ಇದೆ. ದಕ್ಷಿಣದಲ್ಲಿ ಈ ದೇಶಕ್ಕೂ ಇಂಡಿಯ, ಹಿಂದೂಚೀಣಗಳಿಗೂ ಮಧ್ಯೆ ಎತ್ತರವಾದ ಪರ್ವತಪಙ್ಕ್ತಿಗಳೂ ಕಣಿವೆದಾರಿಗಳೂ ಇವೆ. ಪೂರ್ವಕ್ಕೆ ಪೆಸಿಫಿಕ್ ಸಾಗರವಿದೆ. ಹೀಗೆ ನಾಲ್ಕು ಕಡೆಗಳಲ್ಲಿಯೂ ಸ್ವಾಭಾವಿಕವಾದ ಎಲ್ಲೆಗಳಿರುವುದರಿಂದ, ಚೀಣಾದೇಶದ ಜನರು ಒಂದೇ ಕುಲದವರಾಗಿ, ಒಂದೇ ಮತವನ್ನು ಅವಲಂಬಿಸಿ, ಒಂದೇ ಭಾಷೆಯನ್ನಾಡುತ್ತ ಒಂದೇ ಜನಾಂಗದವರಾಗಿರುವರು.

**ತೀರಲಕ್ಷಣ.**—ಈ ದೇಶದ ಪೂರ್ವ ದಕ್ಷಿಣಗಳಲ್ಲಿ ಸಮುದ್ರಗಳಿವೆ. ಪೂರ್ವದಲ್ಲಿ ಪಿಚಿಲಿ ಸಮುದ್ರಶಾಖೆಯೂ, ದಕ್ಷಿಣದಲ್ಲಿ ಫಾರ್ಮೊಸಾ, ಹಾಂಕಾಂಗ್, ಹೈನಾನ್ ದ್ವೀಪಗಳೂ ಇವೆ. ಇದಕ್ಕೆ ಸ್ವಲ್ಪ ದೂರದಲ್ಲಿಯೇ ಜಪಾನ್ ಮೊದಲಾದ ದ್ವೀಪಗಳಿರುವುದರಿಂದಲೂ, ಸಮುದ್ರತೀರದ ಬಳಿ ಆಳವಾಗಿಲ್ಲದುದರಿಂದಲೂ, ದೇಶದ ಒಳಭಾಗದಲ್ಲಿ ಅನೇಕ ನದಿಗಳಿರುವುದರಿಂದಲೂ, ಚೀಣಾದೇಶದ ಜನರು ಬಹು ಪೂರ್ವಕಾಲದಿಂದಲೂ ಮೀನು ಹಿಡಿಯುವುದರಲ್ಲಿಯೂ, ಸಮುದ್ರದ ಮೇಲೆ ದೋಣಿಗಳಲ್ಲಿ ಸಂಚಾರಮಾಡುವುದರಲ್ಲಿಯೂ ಕುಶಲತೆಯನ್ನು ಪಡೆದಿದಾರೆ. ಹಾಂಕಾಂಗ್, ಹೈನಾನ್ ದ್ವೀಪಗಳು ಬ್ರಿಟಿಷರಿಗೂ, ಫಾರ್ಮೊಸಾ ದ್ವೀಪವು ಜಪಾನರಿಗೂ, ಹಾಂಕಿಂಗ್ ಸಮೀಪದಲ್ಲಿರುವ ಮೆಕಾವೂ ಎಂಬ ಸಣ್ಣ ದ್ವೀಪವು ಪೋರ್ಚುಗೀಸರಿಗೂ ಸೇರಿವೆ.

**ಮೇಲ್ಮೈಯ ಲಕ್ಷಣ.**—ಈ ದೇಶವು ಪಿಚಲಿ ಸಮುದ್ರಶಾಖೆಯಿಂದ ಯಾಂಗ್ಟಿಸಿಕಿಯಾಂಗ್ ನದಿಯವರೆಗೂ ದೊಡ್ಡ ಮೈದಾನವಾಗಿದೆ. ಈ ದೇಶದ ಇತರ ಭಾಗಗಳಲ್ಲಿ ಪರ್ವತಗಳೂ, ಪ್ರಸ್ಥಭೂಮಿಗಳೂ ವಿಶೇಷವಾಗಿವೆ. ನೈರುತ್ಯದಲ್ಲಿರುವ ಪ್ರಸ್ಥಭೂಮಿಗೆ ಯುನಾನ್ ಎಂದು ಹೆಸರು.

**ವಾಯುಗುಣ ಮತ್ತು ಮಳೆ.**—ಈ ದೇಶವು ಸಮಶೀತೋಷ್ಣವಲಯದಲ್ಲಿದೆ. ಆದರೂ ಉತ್ತರ ದಕ್ಷಿಣ ಭಾಗಗಳ ವಾಯುಗುಣದಲ್ಲಿ ವಿಶೇಷ ವ್ಯತ್ಯಾಸ ಕಾಣಬರುವುದು. ದಕ್ಷಿಣ ಭಾಗವು ಕರ್ಕಾಟಕ ಸಂಕ್ರಾಂತಿ ವೃತ್ತಕ್ಕೆ ಸಮೀಪದಲ್ಲಿರುವುದರಿಂದ ಬೇಸಗೆಯಲ್ಲಿ ಸೆಕೆ ಹೆಚ್ಚು. ಉತ್ತರ ಭಾಗವು ಈ ವೃತ್ತಕ್ಕೆ ದೂರದಲ್ಲಿರುವುದರಿಂದಲೂ, ಚಳಿಗಾಲದಲ್ಲಿ ಸೈಬೀರಿಯ, ಮಂಗೋಲಿಯಗಳ ಕಡೆಯಿಂದ ಶೀತ ಮಾರುತಗಳು ಬೀಸುವುದರಿಂದಲೂ, ಅಲ್ಲಿ ಚಳಿಗಾಲದಲ್ಲಿ ಚಳಿಯು ಬಹು ಹೆಚ್ಚಾಗಿರುತ್ತದೆ. ಸಮುದ್ರತೀರದಲ್ಲಿನ ಹವಾ ಸಮ

ಧಾತುವಾಗಿರುವುದು. ಒಳಭಾಗದ ಪರ್ವತ ಪ್ರಸ್ಥಭೂಮಿಗಳಲ್ಲಿ ವಿನಾ ಬೇಸಗೆಯಲ್ಲಿ ಸೆಕೆ ಹೆಚ್ಚು. ಚಳಿಗಾಲದಲ್ಲಿ ಚಳಿ ಹೆಚ್ಚು.

ಈ ದೇಶವು ಇಂಡಿಯಾದೇಶದಂತೆ ಮುಂಗಾರು ಹಿಂಗಾರು ಮಳೆಗಳಿಗೆ ಒಳಪಟ್ಟಿದೆ. ಬೇಸಗೆಯು ಕೊನೆಯಲ್ಲಿ ಮುಂಗಾರು ಗಾಳಿ ಯಥೇಚ್ಛವಾಗಿ ಮಳೆಯನ್ನು ಸುರಿಸುತ್ತದೆ. ಸೆಪ್ಟಂಬರ್ ತಿಂಗಳಿಂದ ಹಿಂಗಾರು ಗಾಳಿ ಬೀಸಿ ಸ್ವಲ್ಪ ಮಟ್ಟಿಗೆ ಮಳೆಯನ್ನು ಸುರಿಸುತ್ತದೆ. ಈ ದೇಶದ ಅನೇಕ ಭಾಗಗಳಲ್ಲಿ ವರ್ಷಕ್ಕೆ 80 ಅಂಗುಲಕ್ಕಿಂತ ಹೆಚ್ಚು ಮಳೆಯಾಗುವುದು.

**ನದಿಗಳು.**—ವಿಸ್ತಾರವಾದ ಈ ದೇಶದ ನದಿಗಳು ಸಮುದ್ರಕ್ಕೆ ಬಹು ದೂರದಲ್ಲಿರುವ ಪರ್ವತಗಳಲ್ಲಿ ಹುಟ್ಟುವುದರಿಂದ ಬಹಳ ಉದ್ದವಾಗಿವೆ. ಹೊಯಾಂಗ್ಹೊ, ಯಾಂಗ್ಟಿಸಿಕಿಯಾಂಗ್ ಎಂಬಿವು ಈ ನದಿಗಳಲ್ಲಿ ಮುಖ್ಯವಾದುವು. ಇವುಗಳ ವಿವರಣೆಯನ್ನು ಈ ಖಂಡದ ಸಾಮಾನ್ಯ ವಿವರಣೆಯಲ್ಲಿಯೇ ಕೊಟ್ಟಿದೆ. ಅದನ್ನು ಜ್ಞಾಪಿಸಿಕೊಳ್ಳಿ.

**ಸಸ್ಯಗಳು ಮತ್ತು ಪ್ರಾಣಿಗಳು.**—ಈ ದೇಶದ ಮೈದಾನದ ಪ್ರದೇಶದಲ್ಲಿ 'ಲೋಯಸ್' ಎಂಬ ಬಹು ಫಲವತ್ತಾದ ಜೇಡಿಯಮಣ್ಣಿರುವುದು. ನದಿಗಳಿಂದಲೂ, ಮಳೆಯಿಂದಲೂ ನೀರು ಯಥೇಚ್ಛವಾಗಿ ಒದಗುವುದು. ಸಾಕಾದಷ್ಟು ಶಾಖವೂ ಇದೆ. ಆದುದರಿಂದ ಈ ಮೈದಾನವು ಗಂಗಾ ನದಿಯ ಮೈದಾನದಂತೆ ಬಹು ಫಲವತ್ತಾಗಿದೆ. ಮಳೆ ಹೆಚ್ಚಾಗಿ ಬೀಳುವುದರಿಂದ ಪರ್ವತ ಪ್ರದೇಶಗಳಲ್ಲಿ ಅನೇಕ ಕಾಡುಗಳಿವೆ. ಅಲ್ಲಿ ಬೆಳೆಯುವ ಮರಗಳಲ್ಲಿ ಅರಗಿನ ಮರವೂ, ಕರ್ಪೂರದ ಮರವೂ ಮುಖ್ಯವಾದುವು. ಯೂನಾನ್ ಪ್ರಾಂತ್ಯದಲ್ಲಿರುವ ಕಾಡುಗಳಲ್ಲಿ ಆನೆ, ಹುಲಿ, ಕರಡಿ, ತೋಳ ಮೊದಲಾದ ಉಷ್ಣವಲಯದ ದುಷ್ಟಮೃಗಗಳಿವೆ. ಆದರೆ ಈ ದೇಶದಲ್ಲಿ ಜನಸಂಖ್ಯೆ ಹೆಚ್ಚಾಗಿರುವುದರಿಂದ ಪರ್ವತಗಳ ತಪ್ಪಲುಗಳಲ್ಲಿಯೂ ಜನರು ಮರಗಳನ್ನು ಕಡಿದು ವ್ಯವಸಾಯ ಮಾಡುತ್ತಿದ್ದಾರೆ. ಆದುದರಿಂದ ಈ ದುಷ್ಟಮೃಗಗಳ ಸಂಖ್ಯೆ ಬಹಳ ಕಡಿಮೆಯಾಗಿದೆ.

ಮಳೆಯನೀರು ಸಾಕಾಗದ ಕ್ಷೇತ್ರಗಳಿಗೆ ಈ ಜನರು ಕಾಲುವೆಗಳಿಂದಾಗಲಿ, ಬಾವಿಗಳಲ್ಲಿ ಚಕ್ರಗಳ ಸಹಾಯದಿಂದ ನೀರನ್ನು ಎತ್ತುವುದರಿಂದಾಗಲಿ ನೀರನ್ನು ಒದಗಿಸಿಕೊಳ್ಳುವರು. ಅಲ್ಲದೆ ಈ ಜನರು ನೆಲವನ್ನು ಚೆನ್ನಾಗಿ ಅಗೆದು ನಮ್ಮ ದೇಶದಲ್ಲಿ ತೋಟದ ವ್ಯವಸಾಯವನ್ನು ಮಾಡುವಂತೆ ಶ್ರದ್ಧೆಯಿಂದ ಪೈರುಗಳನ್ನು ಬೆಳೆಯುವರು. ಅಕ್ಕಿ, ಹತ್ತಿ, ಹಿಪ್ಪಲಿನೇರಳೆ, ತೇಯಲೆ, ಹೊಗೆಯ ಸೊಪ್ಪು, ಅಫೀಮು ಇವು ದಕ್ಷಿಣ ಭಾಗದಲ್ಲಿ ವಿಶೇಷವಾಗಿ ಬೆಳೆಯುತ್ತವೆ. ಉತ್ತರ ಭಾಗದಲ್ಲಿ ಗೋಧಿ ಹೆಚ್ಚಾಗಿ ಬೆಳೆಯಾಗುತ್ತದೆ.

ಅನೇಕರು ನದಿಗಳಲ್ಲಿಯೂ, ಸಮುದ್ರಗಳಲ್ಲಿಯೂ ಮಿಾನುಗಳನ್ನು ಹಿಡಿದು ಜೀವಿಸುವರು. ಕೊಳಗಳಲ್ಲಿ ಮಿಾನುಗಳನ್ನು ಸಾಕುವುದೂ ಉಂಟು. ಹಿಪ್ಪಲಿ ನೇರಳೆ ಗಿಡಗಳನ್ನು ಬೆಳೆದು ರೇಷ್ಮೆಯ ಹುಳುಗಳನ್ನು ಸಾಕುತ್ತಾರೆ. ಕಾಡುಗಳಲ್ಲಿ ರೇಷ್ಮೆಯ ಹುಳುಗಳು ಗೂಡುಗಳನ್ನು ಕಟ್ಟುವುವು. ಅವು ಬಿಟ್ಟುಹೋದ ಮೇಲೆ ಗೂಡುಗಳನ್ನು ಶೇಖರಿಸಿ, ಅವುಗಳಿಂದ ಒರಟಾದ ರೇಷ್ಮೆಯ ದಾರವನ್ನು ತೆಗೆಯುತ್ತಾರೆ.

**ಖನಿಜಗಳು.**—ಚೀಣಾದೇಶದ ಭೂಮಿಯಲ್ಲಿ ಕಬ್ಬಿಣವೂ, ಕಲ್ಲಿದ್ದಲೂ ವಿಶೇಷವಾಗಿವೆ. ಆದರೆ ಜನರಿಗೆ ಶಾಸ್ತ್ರಜ್ಞಾನವೂ, ಸಾಹಸವೂ, ಬಂಡವಾಳವೂ ಕಡಿಮೆಯಾಗಿರುವುದರಿಂದ ಇವನ್ನು ಗಣಿಗಳಿಂದ ಹೆಚ್ಚಾಗಿ ತೆಗೆಯುತ್ತಿಲ್ಲ. ಯೂನಾನ್ ಪ್ರಾಂತದಲ್ಲಿ ತಾಮ್ರ, ಬೆಳ್ಳಿ, ಸೀಸ, ತವರ, ಚಿನ್ನ ಇವು ಸಿಕ್ಕುತ್ತವೆ. ಅನೇಕ ಕಡೆಗಳಲ್ಲಿ ಪಿಂಗಾಣಿ ಸಾಮಾನುಗಳನ್ನು ಮಾಡುವುದಕ್ಕೆ ಉಪಯೋಗಿಸುವ ಜೇಡಿಮಣ್ಣು ಸಿಕ್ಕುವುದು ಹೆಚ್ಚು.

**ಕೈಗಾರಿಕೆ ಮತ್ತು ವ್ಯಾಪಾರ.**—ಕೃಷಿ ಜನಗಳ ಮುಖ್ಯವಾದ ಉದ್ಯೋಗ. ಅನೇಕರು ಮಿಾನು ಹಿಡಿಯುವುದರಿಂದಲೂ, ಕೈಗಾರಿಕೆ ಮತ್ತು ವ್ಯಾಪಾರಗಳಿಂದಲೂ ಜೀವಿಸುತ್ತಾರೆ. ಈ ದೇಶದ ಜನರಲ್ಲಿ $\frac{1}{10}$ ಪಾಲು ಜನರು ಮಿಾನು ಹಿಡಿಯುವುದರಿಂದ ಜೀವಿಸುವರು. ಪ್ರಪಂಚದ ಇತರ ಎಲ್ಲಾ ದೇಶಗಳಲ್ಲಿರುವಷ್ಟು ದೋಣಿಗಳು ಈ ದೇಶ ಒಂದರಲ್ಲಿಯೇ ಇರುವುವೆಂದು ಹೇಳಬಹುದು. ರೇಷ್ಮೆಯ ಬಟ್ಟೆಗಳೂ, ಪಿಂಗಾಣಿ ಸಾಮಾನೂ, ದಂತದ ಸಾಮಾನೂ ಇಲ್ಲಿ ವಿಶೇಷವಾಗಿ ತಯಾರಾಗುತ್ತವೆ. ಈ ದೇಶದವರು ಹತ್ತಿಯ ಬಟ್ಟೆಗಳನ್ನೂ, ಉಣ್ಣೆಯ ಬಟ್ಟೆಗಳನ್ನೂ ತರಿಸಿಕೊಂಡು, ತೇಯಲೆ, ರೇಷ್ಮೆ ಮತ್ತು ಸಕ್ಕರೆಗಳನ್ನು ರಫ್ತು ಮಾಡುತ್ತಾರೆ. ರೇಷ್ಮೆಯ ಬಟ್ಟೆಗಳು ಇಲ್ಲಿ ಬಹು ಪುರಾತನ ಕಾಲದಿಂದಲೂ ತಯಾರಾಗುತ್ತಿವೆ. ಈಗಲೂ ಈ ದೇಶದಲ್ಲಿ ಸಾಮಾನ್ಯವಾಗಿ ಜನರೆಲ್ಲರೂ ರೇಷ್ಮೆಯ ಬಟ್ಟೆಗಳನ್ನು ತೊಡುತ್ತಾರೆ. ಪೂರ್ವ ತೀರದಲ್ಲಿ ಅಲ್ಲಲ್ಲಿ ರೈಲು ಮಾರ್ಗಗಳು ಈಚೆಗೆ ಏರ್ಪಟ್ಟಿವೆ. ಆದರೆ ನದಿಗಳೂ, ನದಿಯ ಕಾಲುವೆಗಳೂ ಬಹು ಕಾಲದಿಂದಲೂ ಜಲಮಾರ್ಗಗಳಾಗಿ ಉಪಯೋಗಿಸಲ್ಪಡುತ್ತಲಿವೆ. ಈಚೆಗೆ ಟಿಯೆಂಟ್ಸಿನ್, ಷಾಂಗ್ಲೆ, ಕ್ಯಾಂಟನ್ ಮೊದಲಾದ ರೇವುಪಟ್ಟಣಗಳಿಗೆ ಇತರ ದೇಶದ ವರ್ತಕರು ಬರಬಹುದೆಂದು ಏರ್ಪಾಡು ಮಾಡಿರುವುದರಿಂದ ಪರದೇಶದ ವ್ಯಾಪಾರವೂ ಹೆಚ್ಚುತ್ತಲಿದೆ. ಮಂಗೋಲಿಯ, ಟಿಬೆಟ್‌ಗಳ ಸಂಗಡ ಕಾರವಾನ್ ವ್ಯಾಪಾರವು ಸ್ವಲ್ಪಮಟ್ಟಿಗೆ ನಡೆಯುತ್ತಿದೆ.

**ಜನಗಳು.**—ಚೀಣಾದೇಶದ ಜನರು ಮಂಗೋಲಿಯನ್ ಬುಡಕಟ್ಟಿಗೆ ಸೇರಿದವರು. ಇವರು ಸಾಮಾನ್ಯವಾಗಿ ಬೌದ್ಧಮತದವರಾಗಿದ್ದಾರೆ. ಚೀಣಾ

ದೇಶದ ಭಾಷೆಯು ಜಪಾನರ ಭಾಷೆಯಂತೆ ವಿಚಿತ್ರವಾದುದು. ಅಕ್ಷರಗಳನ್ನು ಎಡದಿಂದ ಬಲಕ್ಕೆ ಬರೆಯದೆ ಮೇಲಿನಿಂದ ಕೆಳಕ್ಕೆ ಬರೆಯುವರು. ಪ್ರತಿಯೊಂದು ಅಕ್ಷರವೂ ಚಿತ್ರದಂತೆ ಕಾಣುವುದು.

ಈ ದೇಶದಲ್ಲಿ ಈಗ ಪ್ರಜಾಪ್ರತಿನಿಧಿ ಪ್ರಭುತ್ವ ನೆಲೆಗೊಂಡಿದೆ. ಪ್ರೆಸಿಡೆಂಟ್ ಎಂಬ ಅಧಿಕಾರಿಯು ಪ್ರಜೆಗಳ ಪ್ರತಿನಿಧಿಗಳ ಅನುಮತಿಯ ಪ್ರಕಾರ ರಾಜ್ಯಭಾರ ಮಾಡುತ್ತಾನೆ.

ಚೀಣಾದೇಶೀಯರು ಬಹು ಪುರಾತನ ಕಾಲದಿಂದಲೂ ನಾಗರಿಕರಾಗಿದ್ದಾರೆ. ಕಾಗದವನ್ನು ಮಾಡುವುದನ್ನು ಮೊದಲು ಕಂಡುಹಿಡಿದವರು ಈ ಜನರೇ. ಈಗಲೂ ಈ ಜನರು ಕಷ್ಟಪಟ್ಟು ಕೆಲಸಮಾಡುವುದರಲ್ಲಿ ಪ್ರಸಿದ್ಧರಾಗಿದಾರೆ. ಆದರೆ ಕುಶಲತೆಯಲ್ಲಿ ಪಾಶ್ಚಾತ್ಯ ಜನರಿಗಿಂತ ಬಹಳ ಹಿಂದಾಗಿದಾರೆ.

**ಮುಖ್ಯ ಪಟ್ಟಣಗಳು; ಪೀಕಿಂಗ್.**—ಚೀಣಾದೇಶದ ಈಶಾನ್ಯದಲ್ಲಿ ಪೇಹೋ ನದಿಯ ದಡದಲ್ಲಿರುವ ಈ ಪಟ್ಟಣ ರಾಜಧಾನಿಯಾಗಿದೆ. ಈ ಪಟ್ಟಣದಿಂದ ಕೆಲವು ರೈಲುಮಾರ್ಗಗಳು ಹೊರಡುತ್ತಿವೆ. ಈ ಪಟ್ಟಣದಲ್ಲಿ ಸುಮಾರು 8 ಲಕ್ಷ ಜನರು ವಾಸವಾಗಿದಾರೆ. ಆದರೆ ಇದು ಬಹು ಕಶ್ಮಲವಾದ ಪಟ್ಟಣ.

**ಟಿಯಂಟ್ಸಿನ್.**—ಇದು ಪೀಕಿಂಗಿನ ರೇವುಪಟ್ಟಣವಾಗಿದೆ. ಒಳದೇಶದ ವ್ಯಾಪಾರಕ್ಕೆ ಅನುಕೂಲವಾಗಿ, ಇಲ್ಲಿಂದ ದಕ್ಷಿಣಕ್ಕೆ ಒಂದು ದೊಡ್ಡ ಕಾಲುವೆಯನ್ನು ಮಾಡಿದ್ದಾರೆ. ವ್ಯಾಪಾರಕ್ಕಾಗಿ ಇತರ ದೇಶದ ಹಡಗುಗಳು ಇಲ್ಲಿಗೆ ವಿಶೇಷವಾಗಿ ಬರುತ್ತವೆ.

**ಷಾಂಗ್ಹೈ.**—ಇದು ಯಾಂಗ್ಟಿಸಿಕಿಯಾಂಗ್ ನದಿಯ ಮುಖದ ಸಮೀಪದಲ್ಲಿರುವ ರೇವುಪಟ್ಟಣ. ಯಾಂಗ್ಟಿಸಿಕಿಯಾಂಗ್ ನದಿಯ ಮೈದಾನದಲ್ಲಿ ಬೆಳೆಯುವ ಸಾಮಾನುಗಳು ಇಲ್ಲಿಂದಲೇ ಪರದೇಶಗಳಿಗೆ ರಫ್ತಾಗುವುವು. ಇಲ್ಲಿ ಚೀಣಾದೇಶದ ಮದ್ದು ಗುಂಡಿನ ಕಾರ್ಖಾನೆ ಇದೆ. ಹಡಗುಗಳನ್ನೂ ಕಟ್ಟುವರು. ಇಲ್ಲಿಂದ ಅಮೆರಿಕ, ಜಪಾನ್‌ಗಳೊಡನೆ ವಿಶೇಷವಾಗಿ ವ್ಯಾಪಾರವೂ ನಡೆಯುತ್ತದೆ.

**ಹಾಂಕೊ.**—ಇದು ಯಾಂಗ್ಟಿಸಿಕಿಯಾಂಗ್ ನದಿಯ ದಡದಲ್ಲಿ ಸಮುದ್ರಕ್ಕೆ 700 ಮೈಲಿಯಷ್ಟು ದೂರದಲ್ಲಿದೆ. ಇಲ್ಲಿ ಟೀಯಲೆಯ ವ್ಯಾಪಾರ ವಿಶೇಷವಾಗಿ ನಡೆಯುತ್ತದೆ. ಟೀಯಲೆಯನ್ನು ಇಟ್ಟಿಗೆಯ ಹಾಗೆ ಗಟ್ಟಿಯಾಗಿ ಅಡಕಮಾಡಿ ಇಲ್ಲಿಂದ ಮಂಗೋಲಿಯ, ಟಿಬೆಟ್, ರಷ್ಯಗಳಿಗೆ ಕಳುಹಿಸುವರು.

**ಯೂನಾನ್.**—ಇದು ಯೂನಾನ್ ಪ್ರಾಂತದಲ್ಲಿದೆ. ಇದರ ಮೂಲಕ ಭೂಮಾರ್ಗವಾಗಿ ಹಿಂದೂಚೀಣಪರ್ಯಾಯದ್ವೀಪದೊಡನೆ ವ್ಯಾಪಾರ ನಡೆಯುತ್ತದೆ.

**ವಿಕ್ಟೋರಿಯ.**—ಹಾಂಕಾಂಗ್ ದ್ವೀಪದಲ್ಲಿರುವ ಈ ಪಟ್ಟಣವು ಆ ದ್ವೀಪಕ್ಕೆ ರಾಜಧಾನಿಯಾಗಿಯೂ, ಮುಖ್ಯ ಪಟ್ಟಣವಾಗಿಯೂ ಇದೆ.

**ಕ್ಯಾಂಟನ್.**—ಇದು ಕ್ಯಾಂಟನ್ ಅಥವಾ ಸಿಕಿಯಾಂಗ್ ನದಿಯಮುಖದಲ್ಲಿ ಹಾಂಕಾಂಗ್ ದ್ವೀಪಕ್ಕೆ ಎದುರಾಗಿರುವ ರೇವುಪಟ್ಟಣ. ಇಲ್ಲಿ ರೇಷ್ಮೆಯ ಬಟ್ಟೆಗಳೂ, ಪಿಂಗಾಣಿ ಸಾಮಾನೂ ತಯಾರಾಗುತ್ತವೆ. ಈ ಪಟ್ಟಣದಿಂದ 900 ಮೈಲಿ ದೂರದವರೆಗೂ ಕ್ಯಾಂಟನ್ ನದಿಯಲ್ಲಿ ಹಡಗುಗಳು ಸಂಚಾರ ಮಾಡುವುದಕ್ಕೆ ಅನುಕೂಲವಾಗಿದೆ. ಈ ಪಟ್ಟಣದಿಂದ ರೇಷ್ಮೆಯ ಬಟ್ಟೆಗಳು ವಿಶೇಷವಾಗಿ ರಫ್ತಾಗುತ್ತವೆ. ಈ ಪಟ್ಟಣದಲ್ಲಿ ಕಾಲುವೆಗಳೇ ರಸ್ತೆಗಳು. ದೋಣಿಗಳೇ ಗಾಡಿಗಳು. ಸುಮಾರು 3 ಲಕ್ಷ ಜನರು ದೋಣಿಗಳಲ್ಲಿಯೇ ವಾಸವಾಗಿದ್ದಾರೆ.

---

## ಇತರ ಭಾಗಗಳು

**ಮಂಚೂರಿಯ.**—ಚೀಣಾದೇಶಕ್ಕೆ ಈಶಾನ್ಯದಲ್ಲಿರುವ ಈ ಭಾಗವು ಸಾಮಾನ್ಯವಾಗಿ ಮರುಭೂಮಿಯಾಗಿದೆ. ಇಲ್ಲಿ ಚಳಿ ಹೆಚ್ಚು, ಜನ ಸಂಖ್ಯೆ ಬಹಳ ಕಡಿಮೆ. ಮುಕ್ಡೆನ್ ಎಂಬುದು ಈ ಪ್ರಾಂತದಲ್ಲಿ ದೊಡ್ಡಪಟ್ಟಣ. ಇದರಲ್ಲಿರುವ **ಪೋರ್ಟ್ ಆರ್ಥರ್** ಎಂಬ ರೇವುಪಟ್ಟಣವು ಜಪಾನರಿಗೆ ಸೇರಿದೆ. ರಷ್ಯಾದಿಂದ ಸೈಬೀರಿಯ ಮಾರ್ಗವಾಗಿ ಬರುವ ರೈಲು ಮಾರ್ಗವು ಈ ಪಟ್ಟಣಗಳನ್ನು ಸೇರುವುದು. ಆದುದರಿಂದ ಇವು ವ್ಯಾಪಾರಸ್ಥಳಗಳಾಗಿವೆ.

**ಮಂಗೋಲಿಯ.**—ಇದು ಸೈಬೀರಿಯಕ್ಕೂ ಚೀಣಾದೇಶಕ್ಕೂ ನಡುವೆ ಇದೆ. ಮತ್ತು ಗೋಬಿ ಮರುಭೂಮಿಯನ್ನು ಒಳಗೊಂಡಿದೆ. ಈ ಮರುಭೂಮಿಯು ಎಲ್ಲಾ ಕಡೆಗಳಲ್ಲಿಯೂ ಪರ್ವತಗಳಿಂದ ಸುತ್ತಲ್ಪಟ್ಟಿರುವುದರಿಂದ ಸಮುದ್ರದ ಗಾಳಿ ಬಾರದಂತೆ ತಡೆಯುವುದು. ಆದುದರಿಂದ ಇಲ್ಲಿ ಮಳೆ ಬೀಳುವುದು ಬಹಳ ಕಡಿಮೆ. ಮುಂಗಾರಿನಲ್ಲಿ ಮಾತ್ರ ಸ್ವಲ್ಪ ಮಳೆಯಾಗಿ ಹುಲ್ಲು ಬೆಳೆಯುವುದು. ಆದುದರಿಂದ ಪಶುಪಾಲನೆಯೇ ಇಲ್ಲಿನ ಜನರ ಉದ್ಯೋಗ. ಅವರು ಕುದುರೆ, ಕುರಿ, ಒಂಟೆಗಳನ್ನು ಮೇಯಿಸಿಕೊಂಡು ಜೀವನಮಾಡುವರು. ಅಲ್ಲಲ್ಲಿ ಕಾರವಾನ್ ಮಾರ್ಗಗಳಿವೆ. ಪೂರ್ವದಲ್ಲಿ ಚೆಂಗೀಸ್‌ಖಾನ್ ಮೊದಲಾದ ದೊರೆಗಳ ಕಾಲದಲ್ಲಿ ಮಂಗೋಲಿಯದವರು ಇತರದೇಶಗಳನ್ನು ಕೊಳ್ಳೆಹೊಡೆಯುತ್ತಿದ್ದರು. ಈಗ ಅವರು ಸಾಧುಜನರಾಗಿ ಬೌದ್ಧಮತಕ್ಕೆ ಸೇರಿಕೊಂಡಿದ್ದಾರೆ. ಈಗ ಇಲ್ಲಿ ಬೌದ್ಧರ ಗುಡಿಗಳು ಅನೇಕ ಇವೆ. ಅನೇಕ ಬೌದ್ಧ ಸಂನ್ಯಾಸಿಗಳೂ ಇರುವರು. ಉರ್ಗ ಎಂಬುದು ಈ ಭಾಗದಲ್ಲಿ ಮುಖ್ಯ ಪಟ್ಟಣ.

**ಪೂರ್ವ ತುರ್ಕಿಸ್ಥಾನ.**—ಇದು ಟಿಬೆಟ್ ದೇಶಕ್ಕೆ ಉತ್ತರದಲ್ಲಿ ಪಾಮಿರ್ ಪ್ರಸ್ಥಭೂಮಿಯ ಪೂರ್ವಕ್ಕೆ ಇದೆ. ತಿಯನ್‌ಷಾನ್ ಪರ್ವತವು ಈ ದೇಶವನ್ನು

ಎರಡು ಭಾಗಗಳಾಗಿ ವಿಭಾಗಿಸುವುದು. ಉತ್ತರ ಭಾಗವು ಸಾಮಾನ್ಯವಾಗಿ ಮರುಭೂಮಿಯಾಗಿದೆ. ದಕ್ಷಿಣ ಭಾಗವು ಮುಖ್ಯವಾಗಿ ತರಿಂ ನದಿಯ ಜಲಾನಯನಭೂಮಿಯಾಗಿದೆ. ತರಿಂ ನದಿಯು ಲಾಬ್ನಾರ್ ಸರೋವರಕ್ಕೆ ಬೀಳುತ್ತದೆ. ತರಿಂ ನದಿಯ ದಡಗಳಲ್ಲಿಯೂ ಅಲ್ಲಲ್ಲಿರುವ ಓಯಸಿಸ್‌ಗಳಲ್ಲಿಯೂ ಗೋಧಿ ಬೆಳೆಯುತ್ತದೆ. ಅನೇಕ ಜನರಿಗೆ ಪಶುಪಾಲನೆಯು ಉದ್ಯೋಗವಾಗಿದೆ. ಕಾರವಾನ್ ವ್ಯಾಪಾರವು ಹೆಚ್ಚಾಗಿ ನಡೆಯುವುದು.

ಕ್ಯಾಷ್ಗರ್ ನದಿಯ ದಡದಲ್ಲಿರುವ **ಕ್ಯಾಷ್ಗರ್** ಎಂಬುದು ಮುಖ್ಯ ಪಟ್ಟಣ. ಇಲ್ಲಿಂದ ರಷ್ಯದ ತುರ್ಕಿಸ್ಥಾನದೊಡನೆ ವ್ಯಾಪಾರವು ನಡೆಯುತ್ತದೆ. ಯಾರ್ಕಂಡ್ ನದಿಯ ದಡದಲ್ಲಿರುವ **ಯಾರ್ಕಂಡ್** ಪಟ್ಟಣದಿಂದ ಕಾಶ್ಮೀರ ದೇಶದ ಸಂಗಡ ವ್ಯಾಪಾರ ನಡೆಯುವುದು.

ತುರ್ಕಿಸ್ಥಾನದ ಜನರು ಮುಸಲ್ಮಾನರು. ಇವರು ಮೇಲೆ ಬೀಳದಂತೆ ಚೀಣರು ಅಲ್ಲಲ್ಲಿ ತಮ್ಮ ಸೈನ್ಯಗಳನ್ನಿಟ್ಟಿದಾರೆ.

**ಟಿಬೆಟ್.**—ಈ ದೇಶವು ಪೃಥ್ವಿಯಲ್ಲೆಲ್ಲಾ ಅತ್ಯುನ್ನತ ಪ್ರಸ್ಥಭೂಮಿಯಾಗಿದೆ. ಇಲ್ಲಿ ಚಳಿ ಬಹಳ ಹೆಚ್ಚು. ಚಳಿಗಾಲದಲ್ಲಿ ಹಿಮದ ವೃಷ್ಟಿಯೂ ಬೀಳುವುದು. ಅಲ್ಲಲ್ಲಿ ದೊಡ್ಡದೊಡ್ಡ ಸರೋವರಗಳಿವೆ. ತೆಂಗ್ರಿನಾರ್ ಮತ್ತು ಮಾನಸ ಸರೋವರಗಳು ಇವುಗಳಲ್ಲಿ ಮುಖ್ಯವಾದುವು. ಏಷ್ಯಾ ಖಂಡದ ಮಧ್ಯ ಭಾಗದ ಮುಖ್ಯ ನದಿಗಳೆಲ್ಲ ಈ ಪ್ರಸ್ಥಭೂಮಿಯಲ್ಲಿ ಹುಟ್ಟುತ್ತವೆ. ಅವುಗಳಲ್ಲಿ ಸಿಂಧೂ, ಬ್ರಹ್ಮಪುತ್ರ, ಇರವಾಡಿ, ಯಾಂಗ್ಟಿಸಿಕಿಯಾಂಗ್, ಹೊಯಾಂಗ್ಹೊ ಇವು ಮುಖ್ಯವಾದುವು. ಇಲ್ಲಿನ ಜನರು ಮುಖ್ಯವಾಗಿ ಪಶುಪಾಲನೆಯಿಂದ ಜೀವನಮಾಡುತ್ತಾರೆ. ತಗ್ಗಾದ ಕಣಿವೆಗಳಲ್ಲಿ ಮಾತ್ರ ಚಳಿ ಕಡಮೆಯಾಗಿಯೂ ನೆಲವು ಫಲವತ್ತಾಗಿಯೂ ಇರುವುದರಿಂದ ಗೋಧಿ ಮೊದಲಾದ ಬೆಳೆಗಳನ್ನು ಬೆಳೆಯುತ್ತಾರೆ. ಚಮರೀಮೃಗವೂ, ದಪ್ಪವಾದ ಬಾಲವುಳ್ಳ ಒಂದು ಜಾತಿಯ ಕುರಿಯೂ ಇಲ್ಲಿನ ಮುಖ್ಯವಾದ ಸಾಧುಪ್ರಾಣಿಗಳು. ಕಸ್ತೂರಿಮೃಗವನ್ನು ಬೇಟೆಯಾಡಿ ಕಸ್ತೂರಿಯನ್ನು ರಫ್ತುಮಾಡುವರು. ಈ ದೇಶದ ಜನರು ಬೌದ್ಧಮತದವರು. ಎಲ್ಲೆಲ್ಲಿಯೂ ಬೌದ್ಧ ಮಠಗಳೂ, ಸನ್ಯಾಸಿಗಳೂ ಕಾಣಬರುವರು. ಬೌದ್ಧರ ಪರಮಗುರುವಾದ ಗ್ರಾಂಡ್‌ಲಾಮ ಎಂಬವರು ಈ ದೇಶದ ಮುಖ್ಯ ಪಟ್ಟಣವಾದ **ಲಾಸಾ**ದಲ್ಲಿ ವಾಸಮಾಡುತ್ತಾರೆ. ಈಚೆಗೆ ಈ ಪಟ್ಟಣದಿಂದ ಇಂಡಿಯಾದೇಶದೊಡನೆ ಸ್ವಲ್ಪ ವ್ಯಾಪಾರ ನಡೆಯುತ್ತಿದೆ.

## ಜಪಾನ್ ಚಕ್ರಾಧಿಪತ್ಯ

**ಮೇರೆಗಳು ಮತ್ತು ಸನ್ನಿವೇಶ.**—ಈ ಚಕ್ರಾಧಿಪತ್ಯವು ಕಾಂಚಾಟ ಪರ್‍ಯಾಯದ್ವೀಪದಿಂದ ಫಿಲಿಪ್ಪೈನ್ ದ್ವೀಪಗಳವರೆಗೆ ಸುಮಾರು 2,000 ಮೈಲಿಗಳ ದೂರ ಹಬ್ಬಿರುವ 4,000 ದ್ವೀಪಗಳನ್ನೊಳಗೊಂಡಿದೆ. ಇವುಗಳಲ್ಲಿ ಮೂರು

ದ್ವೀಪಶ್ರೇಣಿಗಳು ಮುಖ್ಯವಾದುವು:—(1) **ಜಪಾನ್ ದ್ವೀಪಗಳು.**—ಇವು ಜಪಾನ್ ಸಮುದ್ರಕ್ಕೂ ಪೆಸಿಫಿಕ್ ಸಾಗರಕ್ಕೂ ನಡುವೆ ಇವೆ. ಇವುಗಳಲ್ಲಿ ಯೆಜೊ, ಹಾನ್‌ಷು, ಕೀಷು ಎಂಬಿವು ಮುಖ್ಯವಾದುವು. (2) **ಕೂರೈಲ್ ದ್ವೀಪಗಳು.**—ಇವು ಒಖಾಟಸ್ಕ ಸಮುದ್ರದ ಹತ್ತಿರದಲ್ಲಿವೆ. (3) **ಲೂಚೂ ದ್ವೀಪಸ್ತೋಮ ಮತ್ತು ಫಾರ್ಮೊಸಾ ದ್ವೀಪ.**—ಇವು ಪೂರ್ವಚೀನಾ ಸಮುದ್ರಕ್ಕೂ ಪೆಸಿಫಿಕ್ ಸಾಗರಕ್ಕೂ ನಡುವೆ ಇವೆ. ಈ ಚಕ್ರಾಧಿಪತ್ಯವು ಕೊರಿಯ ಪರ್ಯಾಯದ್ವೀಪವನ್ನೂ ಪೋರ್ಟ್ ಆರ್ಥರ್ ಪಟ್ಟಣವನ್ನೂ ಒಳಗೊಂಡಿದೆ. ಈ ಚಕ್ರಾಧಿಪತ್ಯವು ವಿಸ್ತೀರ್ಣದಲ್ಲಿಯೂ, ಜನಸಂಖ್ಯೆಯಲ್ಲಿಯೂ ಬ್ರಿಟಿಷ್ ದ್ವೀಪಗಳ ಜೊತೆಗೆ ಇಂಗ್ಲೆಂಡ್ ವೇಲ್ಸುಗಳನ್ನು ಸೇರಿಸಿದರೆ ಒಟ್ಟು ಎಷ್ಟಾಗುವುದೋ ಅಷ್ಟಿದೆ.

ಜಪಾನ್ ದ್ವೀಪಗಳನ್ನು ಪೆಸಿಫಿಕ್ ಸಾಗರದ ಬ್ರಿಟಿಷ್ ದ್ವೀಪಗಳೆಂದು ಕರೆಯಬಹುದು. ಸನ್ನಿವೇಶ, ತೀರಲಕ್ಷಣ ಮೊದಲಾದುವುಗಳಲ್ಲಿ ಇವು ಒಂದನ್ನೊಂದು ಬಹುಮಟ್ಟಿಗೆ ಹೋಲುವುವು. ಜಪಾನರು ತಮ್ಮ ದೇಶವನ್ನು 'ಉದಯಿಸುವ ಸೂರ್ಯ ರಾಜ್ಯ' ಎಂದು ಕರೆಯುತ್ತಾರೆ. ಮಧ್ಯಾಹ್ನ ರೇಖೆಗನುಗುಣವಾಗಿ ಈ ದ್ವೀಪಗಳಿಗೂ, ಏಷ್ಯಾ ಖಂಡದ ಇತರ ಭಾಗಗಳಿಗೂ ಯಾವ ಕ್ರಮದಲ್ಲಿ ಸೂರ್ಯೋದಯವಾಗುವುದೆಂಬುದನ್ನು ಯೋಚಿಸಿದರೆ, ಇದು ಹೇಗೆಂಬುದು ಸ್ಪಷ್ಟವಾಗುತ್ತದೆ.

**ತೀರ ಲಕ್ಷಣ.**—ಅನೇಕ ದ್ವೀಪಗಳಿರುವುದರಿಂದಲೂ, ದೊಡ್ಡ ದ್ವೀಪಗಳಲ್ಲಿ ಸಮುದ್ರವು ಅನೇಕ ಕಡೆಗಳಲ್ಲಿ ನುಗ್ಗಿರುವುದರಿಂದಲೂ ಜಪಾನ್ ದೇಶದ ತೀರದ ಅಳತೆಯು ಬ್ರಿಟಿಷ್ ದ್ವೀಪದಲ್ಲಿರುವಂತೆ ಬಹು ಹೆಚ್ಚಾಗಿದೆ. ಉತ್ತಮವಾದ ಬಂದರುಗಳು ಅನೇಕವಾಗಿವೆ. ಯೋಕೋಹಾಮ, ಓಸಾಕ, ನಾಗಸಾಕಿ ಎಂಬಿವು ಬಹು ಮುಖ್ಯವಾದ ರೇವುಪಟ್ಟಣಗಳು.

**ನೆಲ್ಮೈಯ್ಯ ಲಕ್ಷಣ.**—ಈ ದ್ವೀಪಗಳಲ್ಲೆಲ್ಲಾ ಪರ್ವತ ಪ್ರದೇಶಗಳು ಹೆಚ್ಚಾಗಿವೆ. ಈ ಪರ್ವತಗಳಲ್ಲಿ ಸುಮಾರು 50 ಜ್ವಾಲಾಮುಖಿಗಳಿವೆ. ಫ್ಯೂಸಿಯಾಮಾ ಎಂಬುದೇ ಮುಖ್ಯವಾದ ಅಗ್ನಿಪರ್ವತ, ಇದು 200 ವರ್ಷಗಳಿಂದೀಚೆಗೆ ಕಲ್ಲು, ಮಣ್ಣು, ಆವಿಗಳನ್ನು ಹೊರಡಿಸುತ್ತಿಲ್ಲ. ಇದು 12,000 ಅಡಿಯಷ್ಟು ಎತ್ತರವಾಗಿದೆ. ಇದೇ ಜಪಾನಿನಲ್ಲಿರುವ ಅತ್ಯಂತ ಎತ್ತರವಾದ ಪರ್ವತ. ಈ ದ್ವೀಪಗಳಲ್ಲಿ ಅಗ್ನಿಪರ್ವತಗಳು ಹೆಚ್ಚಾಗಿರುವುದರಿಂದ ಆಗಾಗ್ಗೆ ಭೂಕಂಪಗಳು ಆಗುತ್ತಲೇ ಇವೆ. ಆದುದರಿಂದ ಮನೆಗಳ ಉಪ್ಪರಿಗೆಗಳು ಬಿದ್ದುಹೋಗುವುವೆಂಬ ಭಯದಿಂದ ಜಪಾನರು ಉಪ್ಪರಿಗೆಯ ಮನೆಗಳನ್ನು ಕಟ್ಟುವುದಿಲ್ಲ. ಬಿದರಿನ ಚಾಪೆಗಳಿಂದ ಅಥವಾ ಕಾಗದದ ರಟ್ಟುಗಳಿಂದ ಗೋಡೆಗಳನ್ನು ಮಾಡಿ ಮನೆಗಳನ್ನು ಕಟ್ಟುವುದು ವಾಡಿಕೆಯಾಗಿದೆ.

**ವಾಯುಗುಣ ಮತ್ತು ಮಳೆ.**—ಫಾರ್ಮೊಸಾ ದ್ವೀಪ ಒಂದು ವಿನಾ ಈ ಚಕ್ರಾಧಿಪತ್ಯದ ಉಳಿದ ಭಾಗಗಳೆಲ್ಲ ಸಮಶೀತೋಷ್ಣವಲಯದಲ್ಲಿವೆ. ಎಲ್ಲಾ ಭಾಗಗಳೂ ಸಮುದ್ರದಿಂದ ಸುತ್ತಲ್ಪಟ್ಟಿವೆ. ಆದುದರಿಂದ ಈ ದ್ವೀಪಗಳ ವಾಯುಗುಣ ಸಮಧಾತುವಾಗಿದೆ. ಗಲ್ಫ್‌ಸ್ಟ್ರೀಮಿನಿಂದ ಬ್ರಿಟಿಷ್ ದ್ವೀಪಗಳಲ್ಲಿ ಚಳಿಗಾಲದ ಚಳಿ ಹೇಗೆ ಕಡಿಮೆಯಾಗುವುದೋ ಹಾಗೆಯೇ ಈ ದ್ವೀಪಗಳಿಗೆ ಪೂರ್ವದಲ್ಲಿ ಹರಿಯುವ ಕುರೋಸೀವೊ ಎಂಬ ಉಷ್ಣೋದಕ ಪ್ರವಾಹದಿಂದ ಇಲ್ಲಿಯೂ ಚಳಿಗಾಲದ ಶೈತ್ಯವು ಕಡಿಮೆಯಾಗುತ್ತದೆ.

ಸಮುದ್ರದ ಗಾಳಿ ವಿಶೇಷವಾಗಿ ಬೀಸಿ ಪರ್ವತಗಳಿಂದ ತಡೆಯಲ್ಪಟ್ಟು ಹೆಚ್ಚಾಗಿ ಮಳೆ ಬೀಳುವುದು. ಇಲ್ಲಿ ಇಂಡಿಯಾದೇಶದಂತೆಯೇ ಮುಂಗಾರು ಹಿಂಗಾರು ಗಾಳಿಗಳು ಬೀಸುವುವು. ಮುಂಗಾರಿನಲ್ಲಿ ಮಳೆಯಾಗುವುದು ಹೆಚ್ಚು. ಸೆಪ್ಟೆಂಬರ್ ತಿಂಗಳಲ್ಲಿ ಸುಂಟರಗಾಳಿ ಬೀಸಿ ಬಹಳ ನಷ್ಟವನ್ನುಂಟುಮಾಡುವುದೂ ಉಂಟು.

**ನದಿಗಳು ಮತ್ತು ಸರೋವರಗಳು.**—ಈ ದ್ವೀಪಗಳು ವಿಸ್ತಾರದಲ್ಲಿ ಕಡಿಮೆಯಾಗಿರುವುದರಿಂದಲೂ, ಅಲ್ಲಲ್ಲಿ ಪರ್ವತಗಳು ಹೆಚ್ಚಾಗಿರುವುದರಿಂದಲೂ ದೊಡ್ಡ ನದಿಗಳಿಲ್ಲ. ಹೆಚ್ಚಾಗಿ ಮಳೆ ಬಿದ್ದರೂ ನದಿಗಳು ಹಡಗುಗಳ ಸಂಚಾರಕ್ಕೆ ಅನುಕೂಲವಾಗಿಲ್ಲ. ಪರ್ವತಗಳ ಮಧ್ಯೆ ಅಲ್ಲಲ್ಲಿ ಚಿಕ್ಕಚಿಕ್ಕ ಸರೋವರಗಳಿವೆ.

**ಸಸ್ಯಗಳು.**—ಈ ದೇಶವು ಬೆಟ್ಟಸೀಮೆಯಾಗಿರುವುದರಿಂದಲೂ, ಮಳೆಯು ಹೆಚ್ಚಾಗಿ ಬೀಳುವುದರಿಂದಲೂ ಬೆಟ್ಟಗಳ ತಪ್ಪಲುಗಳಲ್ಲೆಲ್ಲಾ ಮರಗಳು ಬೆಳೆಯುತ್ತವೆ. ಇವುಗಳಲ್ಲಿ ಕರ್ಪೂರದ ಮರ, ವಾರ್ನಿಷ್ ಮರ, ಬಿದಿರು, ಹಿಪ್ಪಲಿನೇರಳೆ ಮುಖ್ಯವಾದುವು. ಅಲ್ಲಲ್ಲಿರುವ ಚಿಕ್ಕ ಮೈದಾನಗಳಲ್ಲಿ ಜಪಾನರು ಬಹಳ ಮೆಹನತ್ತಿನಿಂದ ಕೃಷಿಮಾಡಿ ಉತ್ತಮವಾದ ಬೆಳೆಗಳನ್ನು ತೆಗೆಯುತ್ತಾರೆ. ಈ ದೇಶದ ಒಟ್ಟು ವಿಸ್ತೀರ್ಣದಲ್ಲಿ 16 ಭಾಗ ಮಾತ್ರ ಮೈದಾನ ಪ್ರದೇಶ ವಾಗಿದ್ದರೂ, ಒಟ್ಟು ಜನರಲ್ಲಿ ಅರ್ಧಕ್ಕಿಂತ ಹೆಚ್ಚು ಜನರು ಕೃಷಿಯಿಂದಲೇ ಜೀವಿಸುತ್ತಿದ್ದಾರೆ. ಆದುದರಿಂದ ಇಲ್ಲಿ ಜನಸಾಂದ್ರತೆ ಹೆಚ್ಚಾಗಿದ್ದರೂ ಧಾನ್ಯಗಳನ್ನು ಆಮದು ಮಾಡಿಕೊಳ್ಳುವುದು ಬಹಳ ಕಡಿಮೆ. ಅಕ್ಕಿ, ಗೋಧಿ, ಜವೆಗೋಧಿ, ಟೀಯೆಲೆ, ಹತ್ತಿ ಮತ್ತು ಹೊಗೆಯಸೊಪ್ಪು ವಿಶೇಷವಾಗಿ ಬೆಳೆಯುವುವು.

**ಪ್ರಾಣಿಗಳು.**—ವ್ಯವಸಾಯವು ಹೆಚ್ಚಾಗಿ ಅಭಿವೃದ್ಧಿಯಾಗುತ್ತಿರುವುದರಿಂದ ಇಲ್ಲಿ ಕಾಡುಮೃಗಗಳು ಬಹಳ ಕಡಿಮೆ. ದನ, ಕುದುರೆ, ಹಂದಿಗಳು ಇವೇ ಇಲ್ಲಿರುವ ಸಾಧು ಮೃಗಗಳು. ಇಲ್ಲಿ ಹುಲ್ಲುಗಾವಲುಗಳು ಕಡಿಮೆಯಾಗಿರುವುದರಿಂದ ದನ ಕುರಿಗಳ ಸಂಖ್ಯೆಯು ಕಡಿಮೆಯಾಗಿದೆ. ಸಾಧು ಮೃಗ

ಗಳು ಕಡಿಮೆಯಾಗಿರುವುದರಿಂದ ಮನುಷ್ಯರೇ ಗಾಡಿಗಳನ್ನು ಎಳೆಯುವುದು ಈ ದೇಶದಲ್ಲಿ ಬಹು ರೂಢಿಯಾಗಿದೆ.

ನದಿಗಳಲ್ಲಿಯೂ, ಸಮುದ್ರಗಳಲ್ಲಿಯೂ ಮೀನುಗಳು ವಿಶೇಷವಾಗಿ ಸಿಕ್ಕುತ್ತವೆ. ಈ ದೇಶದ ಪೂರ್ವದಿಕ್ಕಿನ ಸಮುದ್ರವೇ ಪ್ರಪಂಚದಲ್ಲಿ ಅತ್ಯಧಿಕವಾಗಿ ಮೀನುಗಳು ದೊರೆಯುವ ಪ್ರದೇಶವಾಗಿದೆ.

**ಖನಿಜಗಳು.**—ಈ ದೇಶದಲ್ಲಿ ಕಲ್ಲಿದ್ದಲೂ ಉತ್ಕೃಷ್ಟವಾದ ಕಬ್ಬಿಣವೂ ವಿಶೇಷವಾಗಿ ಸಿಕ್ಕುವುವು. ಬೆಳ್ಳಿ, ಚಿನ್ನ, ತಾಮ್ರ, ಸುರ್ಮ, ಗಂಧಕಗಳೂ, ಪಿಂಗಾಣಿ ಸಾಮಾನುಗಳನ್ನು ಮಾಡುವುದಕ್ಕೆ ಉಪಯೋಗವಾಗುವ ಕೆಯೊಲಿನ್ ಎಂಬ ಜೇಡಿಯಮಣ್ಣೂ ಸಿಕ್ಕುವುವು. ಈ ಖನಿಜ ಸಂಪತ್ತಿಯೇ ಈ ದೇಶದ ಕೈಗಾರಿಕೆಗಳ ಅಭಿವೃದ್ಧಿಗೆ ಮುಖ್ಯ ಕಾರಣವಾಗಿದೆ.

**ಕೈಗಾರಿಕೆ ಮತ್ತು ವ್ಯಾಪಾರ.**—ಜಪಾನ್ ದೇಶೀಯರು ಅರ್ಧ ಶತಮಾನದಿಂದ ಈಚೆಗೆ ಕೈಗಾರಿಕೆಗಳಲ್ಲಿ ಬಹಳ ಕುಶಲತೆಯನ್ನು ಪಡೆದಿದ್ದಾರೆ. ಈಚೆಗೆ ನಡೆದ ಯೂರೋಪಿನ ಮಹಾಯುದ್ಧ ಕಾಲದಲ್ಲಿ ಕೈಗಾರಿಕೆಯ ಸಾಮಾನುಗಳು ಯೂರೋಪಿನಿಂದ ಇಂಡಿಯ, ಚೀಣಗಳಿಗೆ ಬರುವುದು ಬಹಳ ಕಡಿಮೆಯಾಗಿದ್ದುದರಿಂದ ಈ ದೇಶದವರಿಗೆ ಒಳ್ಳೆಯ ಗಿರಾಕಿ ದೊರೆತು, ಇವರ ಕೈಗಾರಿಕೆಗಳು ಮತ್ತಷ್ಟು ಪ್ರಾಬಲ್ಯವನ್ನು ಹೊಂದಿವೆ. ಕಾಗದ, ಪಿಂಗಾಣಿ ಸಾಮಾನು, ಗಾಜಿನ ಸಾಮಾನು, ಸೀಸದಕಡ್ಡಿ, ದೀಪದಕಡ್ಡಿ ಇವುಗಳನ್ನು ಮಾಡುವುದು ಮುಖ್ಯ ಕೈಗಾರಿಕೆಗಳಾಗಿವೆ.

ಉತ್ತರದಲ್ಲಿ ಮೀನು ಹಿಡಿಯುವುದರಿಂದಲೂ, ಇತರ ಭಾಗಗಳಲ್ಲಿ ಕೃಷಿ, ಕೈಗಾರಿಕೆ, ವ್ಯಾಪಾರಗಳಿಂದಲೂ ಜನಗಳು ಜೀವನಮಾಡುತ್ತಾರೆ. ರೇಷ್ಮೆ, ರೇಷ್ಮೆಯ ಬಟ್ಟೆಗಳು, ತೇಯೆಲೆ, ಅಕ್ಕಿ, ಕಲ್ಲಿದ್ದಲು, ಕರ್ಪೂರ, ದೀಪದಕಡ್ಡಿ, ಪಿಂಗಾಣಿ ಸಾಮಾನು ಇಲ್ಲಿಂದ ವಿಶೇಷವಾಗಿ ರಫ್ತಾಗುತ್ತವೆ. ಹತ್ತಿಯ ಬಟ್ಟೆ, ಉಣ್ಣೆಯ ಬಟ್ಟೆ, ಸಕ್ಕರೆ, ಯಂತ್ರಗಳು ಇಲ್ಲಿಗೆ ಆಮದಾಗುತ್ತವೆ.

ಈ ದೇಶದ ಒಳಭಾಗದಲ್ಲಿ ಅನೇಕ ರೈಲುಮಾರ್ಗಗಳಿವೆ. ಗಾಡಿಯ ರಸ್ತೆಗಳು ಕಡಿಮೆ. ಇಲ್ಲಿಯ ಜನರು ಹಡಗುಗಳನ್ನು ಕಟ್ಟುವರು. ಇತರ ದೇಶಗಳೊಡನೆ ತಕ್ಕಮಟ್ಟಿಗೆ ತಮ್ಮ ಹಡಗುಗಳಲ್ಲಿಯೇ ವ್ಯಾಪಾರಮಾಡುವರು.

**ಜನಗಳು.**—ಜಪಾನ್ ದೇಶದ ಜನರು ಮಂಗೋಲಿಯ ಬುಡಕಟ್ಟಿಗೆ ಸೇರಿದವರು. ಅವರು ಆಕಾರದಲ್ಲಿ ಗಿಡ್ಡಾಗಿಯೂ, ತೆಳುವಾಗಿಯೂ ಇದ್ದರೂ, ಬಲಿಷ್ಠರಾಗಿಯೂ, ಸಾಹಸಪರರಾಗಿಯೂ ಇರುವರು. ಇವರಲ್ಲಿ ನೈರ್ಮಲ್ಯ ಹೆಚ್ಚಾಗಿದೆ. ಇವರಿಗೆ ಪ್ರಕೃತಿ ಸೌಂದರ್ಯವನ್ನು ಕಂಡರೆ ಬಹು ಸಂತೋಷ. ಎಲ್ಲಾ ಮನೆಗಳ ಬಳಿಯಲ್ಲಿಯೂ ತೋಟಗಳಲ್ಲಿ ಸೇವಂತಿಗೆ ಮೊದಲಾದ ಹೂಗಳನ್ನು ಬೆಳೆಯಿಸಿ ಅವುಗಳನ್ನು ನೋಡಿ ಸಂತೋಷಪಡುವರು. ಈ ದೇಶ

ದಲ್ಲಿ ಅನೇಕರು ಬೌದ್ಧಮತದವರು. ಇದಲ್ಲದೆ ಚಕ್ರವರ್ತಿಯನ್ನು ದೇವರೆಂದು ತಿಳಿದು ಆತನನ್ನು ಪೂಜಿಸುವ ಷಿಂಟೋ ಎಂಬ ಮತವೂ ಎಲ್ಲೆಲ್ಲಿಯೂ ಹರಡಿಕೊಂಡಿದೆ. ಈಚೆಗೆ ಕೆಲವರು ಕ್ರೈಸ್ತಮತವನ್ನೂ ಅವಲಂಬಿಸಿದಾರೆ.

ಈ ದೇಶದಲ್ಲಿ ಸಾಂಕುಶಪ್ರಭುತ್ವ ನೆಲೆಗೊಂಡಿದೆ. ಬ್ರಿಟಿಷ್ ದ್ವೀಪಗಳಂತೆಯೇ ಚಕ್ರವರ್ತಿಗಳು ಪ್ರಜಾಪ್ರತಿನಿಧಿಗಳ ಸಲಹೆಗೆ ಅನುಸಾರವಾಗಿ ರಾಜ್ಯಭಾರವನ್ನು ನಡೆಯಿಸುತ್ತಾರೆ.

**ಮುಖ್ಯ ಪಟ್ಟಣಗಳು ; ಟೋಕಿಯೊ.**—ಇದು ಈ ದೇಶದ ರಾಜಧಾನಿ. ಸಣ್ಣ ಸಣ್ಣ ಹಡಗುಗಳು ಮಾತ್ರ ಟೋಕಿಯೊ ಕೊಲ್ಲಿಯಲ್ಲಿ ಇಲ್ಲಿಗೆ ಬರುತ್ತವೆ. ದಂತದ ಕೆಲಸ, ಲಾಕರ್ (ಬಣ್ಣದ) ಕೆಲಸ, ಹಡಗು ಕಟ್ಟುವುದು—ಇವೇ ಇಲ್ಲಿನ ಮುಖ್ಯವಾದ ಕೈಗಾರಿಕೆಗಳು. ಇದೇ ಈ ಚಕ್ರಾಧಿಪತ್ಯದಲ್ಲಿ ಅತ್ಯಂತ ದೊಡ್ಡ ಪಟ್ಟಣ. ಇಲ್ಲಿ ಸುಮಾರು 12 ಲಕ್ಷ ಜನರು ವಾಸವಾಗಿದಾರೆ. ಈ ಪಟ್ಟಣದ ಜನಸಂಖ್ಯೆ ಪ್ಯಾರಿಸ್ ಪಟ್ಟಣದ ಅರ್ಧದಷ್ಟು ಮಾತ್ರ ಇದ್ದರೂ ಇದು ಪ್ಯಾರಿಸ್ಸಿಗಿಂತ ಹೆಚ್ಚು ವಿಸ್ತಾರವಾಗಿದೆ. ಇಲ್ಲಿ ಪ್ರತಿಯೊಂದು ಸಂಸಾರದವರೂ ಬೇರೆ ಬೇರೆ ಮನೆಗಳನ್ನು ಕಟ್ಟಿಕೊಂಡಿದಾರೆ. ಭೂಕಂಪಗಳ ಭಯದಿಂದ ಸೌಧಗಳನ್ನು ಕಟ್ಟುವುದು ಕಡಿಮೆ. ಒಂದೊಂದು ಮನೆಯ ಸುತ್ತಲೂ ಕೈತೋಟವಿರುವುದರಿಂದ ಈ ಪಟ್ಟಣದ ವಿಸ್ತಾರ ಅಷ್ಟು ಹೆಚ್ಚಾಗಿದೆ.

**ಯೋಕೋಹಾಮ.**—ಟೋಕಿಯೊ ಕೊಲ್ಲಿಯ ತೀರದಲ್ಲಿರುವ ಈ ರೇವು ಪಟ್ಟಣವು ಅತ್ಯುತ್ತಮವಾದ ಬಂದರನ್ನು ಹೊಂದಿದೆ. ಟೋಕಿಯೊಗೆ ಇದು ರೇವುಪಟ್ಟಣವಾಗಿದೆ. ಇಲ್ಲಿಂದ ಅಮೆರಿಕ ಖಂಡದ ಸಂಗಡ ವಿಶೇಷವಾಗಿ ವ್ಯಾಪಾರ ನಡೆಯುತ್ತದೆ. ಹಾಂಕಾಂಗ್, ಷಾಂಗ್ಹೇಗಳನ್ನು ಬಿಟ್ಟರೆ ಈ ಖಂಡದ ಪೂರ್ವತೀರದಲ್ಲಿರುವ ರೇವುಪಟ್ಟಣಗಳಲ್ಲಿ ಅದೇ ಅತಿಮುಖ್ಯವಾದ ವ್ಯಾಪಾರ ಸ್ಥಳವಾಗಿದೆ.

**ಒಸಾಕಾ.**—ಇದು ಟೋಕಿಯೊ ಪಟ್ಟಣದ ದಕ್ಷಿಣಕ್ಕೆ ಬೀವಾ ಎಂಬ ಸರೋವರದ ಸಮೀಪದಲ್ಲಿದೆ. ಈ ಪಟ್ಟಣವು 64 ಚ. ಮೈ. ಗಳಷ್ಟು ವಿಸ್ತಾರವಾಗಿದೆ. ಇಲ್ಲಿ ಹತ್ತಿಯ ಬಟ್ಟೆಗಳು ವಿಶೇಷವಾಗಿ ತಯಾರಾಗುತ್ತವೆ. ಇದನ್ನು ಜಪಾನಿನ ಮಾಂಚೆಸ್ಟರ್ ಎಂದು ಕರೆಯಬಹುದು.

**ನಾಗಸಾಕಿ.**—ಇದು ಕೊರಿಯ ಜಲಸಂಧಿಯ ತೀರದಲ್ಲಿದೆ. ಇದರ ಸಮೀಪದಲ್ಲಿ ಕಲ್ಲಿದ್ದಲು ವಿಶೇಷವಾಗಿ ಸಿಕ್ಕುವುದು. ಬಂದರು ಉತ್ತಮವಾದುದು. ಇಲ್ಲಿ ವಿಶೇಷವಾಗಿ ಹಡಗುಗಳನ್ನು ಕಟ್ಟುತ್ತಾರೆ.

## ಇತರ ದೇಶಗಳು

**ಏಷ್ಯದ ರಷ್ಯ.**—ಏಷ್ಯದ ರಷ್ಯ ಅಥವಾ ರಷ್ಯನ್ ಜನರಿಗೆ ಸೇರಿರುವ ಏಷ್ಯದ ಭಾಗವು ಸೈಬೀರಿಯ, ರಷ್ಯದ ತುರ್ಕಿಸ್ಥಾನ, ಕಕೇಷಿಯ ಪ್ರಾಂತಗಳನ್ನು

ಒಳಗೊಂಡಿದೆ. ಈ ದೇಶವು ಬಹು ವಿಸ್ತಾರವಾಗಿದೆ. ಉದ್ದವಾದ ಅನೇಕ ನದಿಗಳಿವೆ. ಆದರೆ ಚಳಿ ಬಹಳ ಹೆಚ್ಚಾಗಿರುವುದರಿಂದ ನದಿಗಳಿಂದ ಉಪಯೋಗ ಬಹಳ ಕಡಿಮೆ. ಜನಸಾಂದ್ರತೆಯೂ ಬಹಳ ಕಡಿಮೆ. ಈ ದೇಶವು ವಿಸ್ತಾರದಲ್ಲಿ ಇಂಡಿಯಾದೇಶದ ಮೂರರಷ್ಟಕ್ಕಿಂತ ಹೆಚ್ಚಾಗಿಯೇ ಇರುವುದು. ಆದರೆ ಜನಸಂಖ್ಯೆಯಲ್ಲಿ $\frac{1}{72}$ ಭಾಗಕ್ಕಿಂತ ಕಡಿಮೆಯಾಗಿದೆ. ಸರಾಸರಿ 1 ಚ. ಮೈ. ಗೆ ಜನಸಂಖ್ಯೆ 4 ಮಾತ್ರವಿದೆ. ಈಚೆಗೆ ರಷ್ಯದವರು ಈ ದೇಶದಲ್ಲಿ ಖನಿಜಗಳನ್ನು ಹೆಚ್ಚಾಗಿ ತೆಗೆಯುತ್ತಿರುವುದರಿಂದಲೂ, ಸೈಬೀರಿಯ ರೈಲುಮಾರ್ಗದಲ್ಲಿ ವ್ಯಾಪಾರವು ಹೆಚ್ಚುತ್ತಿರುವುದರಿಂದಲೂ ಕ್ರಮೇಣ ಪ್ರಜಾಸಂಖ್ಯೆ ಹೆಚ್ಚುತ್ತಲಿದೆ.

ಸೈಬೀರಿಯದಲ್ಲಿ **ಟೊಬಾಲ್ಸ್ಕ** ಎಂಬುದೂ, ರಷ್ಯದ ತುರ್ಕಿಸ್ಥಾನದಲ್ಲಿ **ಟಾಷ್ಕೆಂಡ್** ಎಂಬುದೂ, ಕಕೇಷಿಯ ಪ್ರಾಂತದಲ್ಲಿ **ಟಿಫ್ಲಿಸ್** ಎಂಬುದೂ ಮುಖ್ಯ ಪಟ್ಟಣಗಳಾಗಿವೆ.

**ಏಷ್ಯದ ತುರ್ಕಿ.**—ಏಷ್ಯದ ತುರ್ಕಿ ಅಥವಾ ತುರ್ಕಿ ದೇಶದವರಿಗೆ ಸೇರಿರುವ ಏಷ್ಯದ ಭಾಗವು ಮೆಡಿಟರೇನಿಯನ್ ಸಮುದ್ರದಿಂದ ಪರ್ಷಿಯಾದೇಶದವರೆಗೂ, ಅರೇಬಿಯ ಮರುಭೂಮಿಯಿಂದ ಕಪ್ಪುಸಮುದ್ರದವರೆಗೂ ಪ್ರಸರಿಸಿದೆ. ಈ ದೇಶವನ್ನು ನಾಲ್ಕು ವಿಭಾಗಗಳಾಗಿ ಭಾಗಿಸಬಹುದು:—ಏಷ್ಯಾ ಮೈನರ್, ಮೆಸೊಪೊಟೋಮಿಯ, ಸಿರಿಯ ಮತ್ತು ಅರೇಬಿಯದ ಕೆಲವು ಭಾಗಗಳು. ಈ ದೇಶದ ಒಟ್ಟು ವಿಸ್ತೀರ್ಣ ಇಂಡಿಯಾದೇಶದ $\frac{1}{4}$ ಭಾಗಕ್ಕಿಂತ ಸ್ವಲ್ಪ ಹೆಚ್ಚಾಗಿದೆ. ಆದರೆ ಜನಸಂಖ್ಯೆ ಇಂಡಿಯದ $\frac{1}{18}$ ಭಾಗದಷ್ಟು ಇದೆ.

ಏಷ್ಯಾ ಮೈನರಿನಲ್ಲಿ ಕಾಡುಗಳಿಂದ ತುಂಬಿರುವ ಬೆಟ್ಟಗಳೂ ಫಲವತ್ತಾದ ನದಿಯ ಬೈಲುಗಳೂ ಇವೆ. ಪಶ್ಚಿಮ ತೀರದಲ್ಲಿರುವ ಒಳ್ಳೆಯ ಬಂದರುಗಳ ಮೂಲಕ ಯೂರೊಪಿನೊಡನೆ ವ್ಯಾಪಾರ ನಡೆಯುತ್ತದೆ. ಸ್ಮರ್ನ ಎಂಬುದೇ ಮುಖ್ಯ ಪಟ್ಟಣ ಮತ್ತು ರಾಜಧಾನಿ.

ಸಿರಿಯ ಮರುಭೂಮಿಯಲ್ಲಿ ಪಶುಪಾಲನೆಯೇ ಜನರ ಮುಖ್ಯೋದ್ಯೋಗ. ಈ ಭಾಗದಲ್ಲಿ ಅನೇಕ ಕ್ರೈಸ್ತರೂ, ಯೆಹೂದ್ಯರೂ ವಾಸವಾಗಿದಾರೆ. **ಡಮಾಸ್ಕಸ್** ಪಟ್ಟಣವು ಕಾರವಾನ್ ವ್ಯಾಪಾರಕ್ಕೆ ಪ್ರಸಿದ್ಧವಾಗಿದೆ. **ಟ್ರಿಪೊಲಿ, ಜಾಫಾ** ಮೊದಲಾದುವು ಇಲ್ಲಿರುವ ಮುಖ್ಯವಾದ ರೇವುಪಟ್ಟಣಗಳು. **ಜೆರೂಸಲೆಂ** ಎಂಬ ಸ್ಥಳವು ಕ್ರೈಸ್ತರ ಮುಖ್ಯ ಯಾತ್ರಾಸ್ಥಳವಾಗಿದೆ.

ಸಿರಿಯ ದೇಶದ ಪಾಲಿಸ್ಟೈನ್ ಎಂಬ ಭಾಗದಲ್ಲಿ ಕ್ರೈಸ್ತಮತಸ್ಥಾಪಕನಾದ ಕ್ರಿಸ್ತನೆಂಬ ಮಹಾಪುರುಷನು ಹುಟ್ಟಿ, ಬೆಳೆದು, ಮರಣವನ್ನು ಹೊಂದಿದುದರಿಂದ ಅದು ಕ್ರೈಸ್ತರಿಂದ 'ಪರಿಶುದ್ಧ ಭೂಮಿ' ಎಂದು ಎಣಿಸಲ್ಪಟ್ಟಿದೆ.

ಮೆಸೊಪೊಟೋಮಿಯ ಸಾಮಾನ್ಯವಾಗಿ ಮರುಭೂಮಿಯಾಗಿದ್ದರೂ ಇಲ್ಲಿ ಯೂಫ್ರೆಟಿಸ್, ಟೈಗ್ರಿಸ್ ನದಿಗಳು ಹರಿಯುವುದರಿಂದ ವ್ಯವಸಾಯ, ವ್ಯಾಪಾರ

ಗಳು ವೃದ್ಧಿಹೊಂದಲು ಬಹಳವುಟ್ಟಿಗೆ ಅವಕಾಶವಿದೆ. ಈಚೆಗೆ ನಡೆದ ಯುದ್ಧದಲ್ಲಿ ಇಂಗ್ಲಿಷರು ಈ ಪ್ರದೇಶವನ್ನು ಸ್ವಾಧೀನಪಡಿಸಿಕೊಂಡಿದಾರೆ. **ಬಸರ, ಬಾಗ್ದಾಡ್** ಎಂಬಿವು ಮುಖ್ಯವಾದ ವ್ಯಾಪಾರಸ್ಥಳಗಳಾಗಿವೆ.

**ಅರೇಬಿಯ.**—ಈ ದೇಶವು ಮರುಭೂಮಿಯಾಗಿ ಸ್ವಲ್ಪ ಎತ್ತರವುಳ್ಳ ಒಂದು ಪ್ರಸ್ಥಭೂಮಿಯೆಂದು ವರ್ಣಿಸಬಹುದು. ತೀರವು ಚೆನ್ನಾಗಿಲ್ಲ. ಬ್ರಿಟಿಷರಿಗೆ ಸೇರಿದ **ಏಡೆ** ಪಟ್ಟಣವೇ ಮುಖ್ಯವಾದ ರೇವುಪಟ್ಟಣವಾಗಿದೆ. ಸೂಯಸ್ ಕಾಲುವೆಯ ಮಾರ್ಗವಾಗಿ ಇಂಗ್ಲೆಂಡ್, ಇಂಡಿಯಗಳಿಗೆ ಸಂಚರಿಸುವ ಹಡಗುಗಳು ಇಲ್ಲಿ ಕಲ್ಲಿದ್ದಲನ್ನೂ ಆಹಾರ ಸಾಮಗ್ರಿಗಳನ್ನೂ ತುಂಬಿಕೊಳ್ಳುತ್ತವೆ. ಬ್ರಿಟಿಷರಿಗೆ ಸೇರಿದ ಪೆರಿಂದ್ವೀಪ ಈ ಪಟ್ಟಣಕ್ಕೆ ಸಮೀಪದಲ್ಲಿಯೇ ಇದೆ.

ಪಶುಪಾಲನೆಯೇ ಈ ದೇಶದ ಜನರ ಮುಖ್ಯವಾದ ಉದ್ಯೋಗವಾಗಿದೆ. ಅರಬ್ಬೀದೇಶದ ಕುದುರೆಗಳು ಲೋಕಪ್ರಸಿದ್ಧವಾದುವು. **ಮೋಚ** ಎಂಬ ರೇವು ಪಟ್ಟಣದ ಬಳಿ ಇರುವ ಪ್ರದೇಶದಲ್ಲಿ ಕಾಫಿ ವಿಶೇಷವಾಗಿ ಬೆಳೆಯುತ್ತದೆ.

ಈ ದೇಶದ ಜನರು ಬಹು ಸಾಹಸಿಗಳು ಮತ್ತು ಸ್ವಾತಂತ್ರ್ಯದಲ್ಲಿ ಅಭಿರುಚಿಯುಳ್ಳವರು. ಮಹಮ್ಮದೀಯ ಮತಸ್ಥಾಪಕನಾದ ಮಹಮ್ಮದ್ ಎಂಬ ಮಹಾಪುರುಷನು ಹುಟ್ಟಿದುದು ಈ ದೇಶದಲ್ಲಿಯೇ. ಆ ಮತವು ಮೊದಲು ಪ್ರಚುರವಾದುದೂ ಇಲ್ಲಿಯೇ. ಆದುದರಿಂದ **ಮಕ್ಕಾ, ಮೆಡಿನಾ** ಪಟ್ಟಣಗಳಿಗೆ ಯಾತ್ರಾರ್ಥಿಗಳಾಗಿ ಪ್ರತಿವರ್ಷವೂ ಸಾವಿರಾರು ಮಹಮ್ಮದೀಯರು ಅನೇಕ ದೇಶಗಳಿಂದ ಬರುತ್ತಿರುವರು.

ಅರೇಬಿಯದ ಪಶ್ಚಿಮತೀರ ಪ್ರದೇಶವು ಈಚೆಗೆ ನಡೆದ ಯುದ್ಧಕ್ಕಿಂತ ಮೊದಲು ತುರ್ಕಿ ದೇಶದ ಸುಲ್ತಾನರಿಗೆ ಸೇರಿತ್ತು. ಈಗ ಈ ಪ್ರದೇಶವೂ ಉಳಿದ ಭಾಗಗಳಂತೆ ಸ್ವತಂತ್ರರಾದ ರಾಜರುಗಳಿಂದ ಆಳಲ್ಪಡುತ್ತಲಿದೆ.

**ಪರ್ಷಿಯ.**—ಇದು ಏಷ್ಯಾಮೈನರಿನಂತೆ ಈ ಖಂಡದ ಮಧ್ಯ ಭಾಗದ ಪ್ರಸ್ಥಭೂಮಿಗಳ ಪ್ರದೇಶದ ಒಂದು ಭಾಗವಾಗಿದೆ. ಪಶ್ಚಿಮ ಮತ್ತು ಉತ್ತರ ಭಾಗಗಳಲ್ಲಿ ಎತ್ತರವಾದ ಪರ್ವತಗಳಿವೆ. ಉಳಿದ ಭಾಗಗಳಲ್ಲಿ ಮರುಭೂಮಿಗಳೂ, ಮೈದಾನಗಳೂ ಇವೆ. ನದಿಗಳು ಹರಿಯುವ ಪ್ರದೇಶಗಳು ಮಾತ್ರ ಫಲವತ್ತಾಗಿವೆ. ಉಳಿದ ಕಡೆಗಳಲ್ಲಿ ಪಶುಪಾಲನೆಯೇ ಮುಖ್ಯವಾದ ಉದ್ಯೋಗವಾಗಿದೆ. ಈ ದೇಶದಲ್ಲಿ ಉಣ್ಣೆಯಿಂದ ಉತ್ತಮವಾದ ಶಾಲುಗಳನ್ನೂ, ಜಂಖಾನೆಗಳನ್ನೂ ತಯಾರುಮಾಡುತ್ತಾರೆ. ಹೂಗಳನ್ನು ಬೆಳೆದು ಪ್ರಸಿದ್ಧವಾದ ಅತ್ತರುಗಳನ್ನೂ ಮಾಡುವುದುಂಟು.

ಈ ದೇಶವನ್ನು 'ಷಹ' ಎಂದು ಕರೆಯಲ್ಪಡುವ ಸ್ವತಂತ್ರನಾದ ಮಹಮ್ಮದೀಯ ರಾಜನು ಆಳುತ್ತಿರುವನು. ಇವನು ನಿರಂಕುಶ ಪ್ರಭು.

**ಟೆಹಿರಾನ್** ಎಂಬ ಪಟ್ಟಣ ಈ ದೇಶದ ರಾಜಧಾನಿ. ಈಚೆಗೆ ಕೈಗಾರಿಕೆ, ವ್ಯಾಪಾರಗಳು ವೃದ್ಧಿಹೊಂದಿ ಈ ಪಟ್ಟಣ ಬೆಳೆಯುತ್ತಲಿದೆ. **ಟೆಬ್ರಿಸ್** ಮತ್ತು **ಷಿರಾಸ್** ಎಂಬ ಪಟ್ಟಣಗಳು ಭೂಮಾರ್ಗವಾಗಿ ನಡೆಯುವ ವ್ಯಾಪಾರಕ್ಕೆ ಪ್ರಸಿದ್ಧವಾಗಿವೆ. ಪಾರ್ಸಿಕೊಲ್ಲಿಯ ತೀರದಲ್ಲಿರುವ **ಬುಷೈರ್** ಎಂಬುದೇ ಈ ದೇಶದ ಮುಖ್ಯವಾದ ರೇವುಪಟ್ಟಣವಾಗಿದೆ.

**ಆಫ್ಘಾನಿಸ್ಥಾನ.**—ಈ ದೇಶವೂ ಪ್ರಸ್ಥಭೂಮಿಯಾಗಿದೆ. ಪರ್ಷಿಯ ಆಫ್ಘಾನಿಸ್ಥಾನಗಳನ್ನೊಳಗೊಂಡಿರುವ ಪ್ರಸ್ಥಭೂಮಿಯನ್ನು ಇರಾನ್ ಪ್ರಸ್ಥಭೂಮಿಯೆಂದು ಕರೆಯುತ್ತಾರೆ. ಆಫ್ಘಾನಿಸ್ಥಾನದ ಸರಹದ್ದು ಉತ್ತರದಲ್ಲಿ ರಷ್ಯಾ ಚಕ್ರಾಧಿಪತ್ಯವನ್ನೂ ಪೂರ್ವದಲ್ಲಿ ಬ್ರಿಟಿಷ್ ಚಕ್ರಾಧಿಪತ್ಯವನ್ನೂ ಪಶ್ಚಿಮದಲ್ಲಿ ಪರ್ಷಿಯಾದೇಶವನ್ನೂ ಸಂಧಿಸುತ್ತದೆ. ಆದುದರಿಂದ ಇಂಡಿಯಾದೇಶದ ರಕ್ಷಣೆಗಾಗಿ ಬ್ರಿಟಿಷರು ಈ ದೇಶದ ಅಮೀರರೊಡನೆ ಸ್ನೇಹವನ್ನು ಬೆಳೆಯಿಸಿಕೊಂಡಿದ್ದಾರೆ.

ಈ ದೇಶವು ಬಹುಮಟ್ಟಿಗೆ ಪರ್ಷಿಯದೇಶವನ್ನು ಹೋಲುವುದು. ಈ ದೇಶದಲ್ಲಿ ಪರ್ವತಪ್ರದೇಶಗಳೂ, ಮರುಭೂಮಿಗಳೂ ಹೆಚ್ಚು. ಪಶುಪಾಲನೆಯೇ ಮುಖ್ಯವಾದ ಉದ್ಯೋಗವಾಗಿದೆ.

ಇಲ್ಲಿರುವ ಸಣ್ಣ ಸಣ್ಣ ಸರೋವರಗಳನ್ನು ಸೇರುವ ಅಥವಾ ಮರುಭೂಮಿಯಲ್ಲಿಯೇ ಇಂಗಿಹೋಗುವ ನದಿಗಳು ಅನೇಕವಾಗಿ ಇಲ್ಲಿರುವುವು. ಇವುಗಳ ಬೈಲುಗಳಲ್ಲಿಯೂ, ಕೆಲವು ಕಣಿವೆಗಳಲ್ಲಿಯೂ ಗೋಧಿ, ಅಕ್ಕಿ, ಹಣ್ಣು ಇವು ಬೆಳೆಯುತ್ತವೆ. ಇಂಗಿನ ಮರವೂ, ಹರಳು ಗಿಡವೂ ಈ ದೇಶದಲ್ಲಿ ಎಲ್ಲೆಲ್ಲಿಯೂ ಬೆಳೆಯುವುದು. ಇಲ್ಲಿ ರೈಲುಮಾರ್ಗಗಳಿಲ್ಲ. ಕಾರವಾನ್ ಮಾರ್ಗಗಳ ಮೂಲಕ ಈ ದೇಶದವರು ಇಂಡಿಯ, ತುರ್ಕಿಸ್ಥಾನ, ಪರ್ಷಿಯಗಳೊಡನೆ ವ್ಯಾಪಾರ ಮಾಡುತ್ತಾರೆ. ಈ ದೇಶದಿಂದ ಇಂಡಿಯಾದೇಶಕ್ಕೆ ಹೋಗಲು ಅನುಕೂಲವಾಗಿರುವ ಖೈಬರ್ ಮೊದಲಾದ ಕಣಿವೆದಾರಿಗಳು ಇಂಡಿಯಾದೇಶಕ್ಕೆ ಸೇರಿವೆ.

ಸಿಂಧುನದಿಗೆ ಉಪನದಿಯಾದ ಕಾಬೂಲ್ ನದಿಯ ತೀರದಲ್ಲಿರುವ **ಕಾಬೂಲ್** ಎಂಬುದು ಈ ದೇಶದ ರಾಜಧಾನಿ ಮತ್ತು ಕಾರವಾನ್ ಮಾರ್ಗಗಳು ಸಂಧಿಸುವ ಮುಖ್ಯವಾದ ವ್ಯಾಪಾರಸ್ಥಳ. **ಹೀರತ್** ಎಂಬ ಪಟ್ಟಣವು ವಾಯುವ್ಯ ಭಾಗದಲ್ಲಿ ಪರ್ಷಿಯ ಮತ್ತು ಏಷ್ಯದ ರಷ್ಯಗಳ ಸರಹದ್ದಿನ ಬಳಿ ಇರುವುದರಿಂದ, ಇಂಡಿಯಾದೇಶದ ಕ್ಷೇಮಕ್ಕೆ ಇದರ ರಕ್ಷಣೆಯು ಆವಶ್ಯಕವಾಗಿದೆ. ಆದುದರಿಂದ ಇದನ್ನು 'ಇಂಡಿಯಾದೇಶದ ಬಾಗಿಲು' ಎಂದು ಕರೆಯುವರು. **ಕಾಂದಹಾರ್** ಪಟ್ಟಣವು ಬೆಲೂಚಿಸ್ಥಾನದ ಸರಹದ್ದಿನ ಬಳಿ ಇರುವ ವ್ಯಾಪಾರಸ್ಥಳ.

**ಹಿಂದೂಚೀಣ ಪರ್ಯಾಯದ್ವೀಪ.**—ಈ ಪರ್ಯಾಯದ್ವೀಪವು ಉತ್ತರಭಾಗದಲ್ಲಿ ಅಗಲವಾಗಿಯೂ, ದಕ್ಷಿಣಕ್ಕೆ ಹೋದಹಾಗೆಲ್ಲ ಇಕ್ಕಟ್ಟಾಗಿಯೂ

ಇರುವುದು. ಕೊಲ್ಲಿಗಳೂ ಸಣ್ಣ ಸಣ್ಣ ದ್ವೀಪಗಳೂ ಅನೇಕವಾಗಿರುವುದರಿಂದ ತೀರದಳತೆ ಹೆಚ್ಚಾಗಿರುವುದು. ಉತ್ತರ ಭಾಗವು ಬೆಟ್ಟಗಳಿಂದ ತುಂಬಿದೆ. ಉದ್ದವಾದ ನದಿಗಳು ಉತ್ತರ ದಕ್ಷಿಣವಾಗಿ ಹರಿಯುತ್ತವೆ. ತೀರಪ್ರದೇಶಗಳಲ್ಲಿಯೂ, ನದಿಯ ಬೈಲುಗಳಲ್ಲಿಯೂ ತಗ್ಗಾದ ಮೈದಾನಗಳಿವೆ. ಈ ದೇಶವು ಉಷ್ಣವಲಯದಲ್ಲಿರುವುದರಿಂದ ಬೆಟ್ಟಗಳಮೇಲೆ ವಿನಾ ಉಳಿದ ಕಡೆಗಳಲ್ಲಿ ಸೆಕೆ ಹೆಚ್ಚು. ಆದರೆ ಸಮುದ್ರದ ಗಾಳಿಯಿಂದ ಸೆಕೆ ಸ್ವಲ್ಪ ಕಡಿಮೆಯಾಗಿದೆ. ಮುಂಗಾರು ಹಿಂಗಾರು ಗಾಳಿಗಳಿಂದ ಮಳೆ ಹೆಚ್ಚಾಗಿ ಬೀಳುವುದು. ಇದರಿಂದ ಬೆಟ್ಟಗಳ ಮೇಲೆ ತೇಗ ಮೊದಲಾದ ಮರಗಳಿಂದ ಕೂಡಿದ ಕಾಡುಗಳಿವೆ. ಮೈದಾನಗಳಲ್ಲಿ ಬತ್ತವೂ, ಸಂಬಾರದ ದಿನಸುಗಳೂ ಬೆಳೆಯುತ್ತವೆ. ಈ ದೇಶದಲ್ಲಿ ಬೆಟ್ಟ ಕಾಡುಗಳು ಹೆಚ್ಚಾಗಿರುವುದರಿಂದ ಜನಸಂಖ್ಯೆ ಕಡಿಮೆಯಾಗಿದೆ; ಜನಸಂಖ್ಯೆ ಸರಾಸರಿ 1 ಚ. ಮೈ. ಗೆ 40 ಮಾತ್ರವಿರುವುದು.

ಜನರು ಸಾಮಾನ್ಯವಾಗಿ ಮಂಗೋಲಿಯ ಕುಲಕ್ಕೆ ಸೇರಿದವರು. ಬೌದ್ಧ ಮತಸ್ಥರು. ಆದರೆ ಮಲಯ ಸಂಸ್ಥಾನಗಳಲ್ಲಿಯೂ, ಸ್ಟ್ರೇಟ್ ಸೆಟಲ್ಮೆಂಟುಗಳಲ್ಲಿಯೂ ಇರುವ ಜನರು ಮಲಯ ಕುಲದವರು, ಮಹಮ್ಮದೀಯ ಮತಕ್ಕೆ ಸೇರಿದವರು.

ಈ ಪರ್ಯಾಯದ್ವೀಪವು ಅನೇಕ ರಾಜಕೀಯ ವಿಭಾಗಗಳನ್ನು ಒಳಗೊಂಡಿದೆ. ಅವು ಯಾವುವೆಂದರೆ:—ಬ್ರಿಟಿಷರಿಗೆ ಸೇರಿದ ಬರ್ಮ, ಮಲಯ ಸಂಸ್ಥಾನಗಳು ಮತ್ತು ಸ್ಟ್ರೇಟ್ ಸೆಟಲ್ಮೆಂಟುಗಳು, ಫ್ರೆಂಚರಿಗೆ ಸೇರಿದ ಟಾಂಕಿನ್, ಆನಾಂ, ಕಾಂಬೋಡಿಯ ಮತ್ತು ಕೊಚಿನ್, ಚೀಣಗಳು, ಸ್ವತಂತ್ರ ಸಂಸ್ಥಾನವಾಗಿರುವ ಸಯಾಂ.

**ಬರ್ಮ.**—ಈ ದೇಶವು ಸ್ವಾಭಾವಿಕವಾಗಿ ಇಂಡಿಯ ಪರ್ಯಾಯದ್ವೀಪಕ್ಕೆ ಸೇರದಿದ್ದರೂ, ರಾಜ್ಯಭಾರದಲ್ಲಿ ಇಂಡಿಯಾ ಚಕ್ರಾಧಿಪತ್ಯಕ್ಕೆ ಸೇರಿರುವುದರಿಂದ ಇಂಡಿಯಾದೇಶದ ವಿವರಣೆಯಲ್ಲಿ ಇದರ ವಿವರಣೆಯು ಕೊಡಲ್ಪಟ್ಟಿದೆ.

**ಮಲಯ ಸಂಸ್ಥಾನಗಳು ಮತ್ತು ಸ್ಟ್ರೇಟ್ ಸೆಟಲ್ಮೆಂಟುಗಳು.**—ಇವು ಮಲಯ ಪರ್ಯಾಯದ್ವೀಪದ ದಕ್ಷಿಣಭಾಗವನ್ನು ಆಕ್ರಮಿಸಿಕೊಂಡಿವೆ. ಪೆರಾಕ್, ಪೆಹಾಂಗ್, ಜೊಹರಿಸ್ ಮೊದಲಾದುವು ಮುಖ್ಯವಾದ ಆಶ್ರಿತ ಸಂಸ್ಥಾನಗಳು; ಇವುಗಳ ರಾಜರು ಬ್ರಿಟಿಷರಿಗೆ ಅಧೀನರಾಗಿದ್ದಾರೆ. ಇವುಗಳನ್ನು ಮಲಯ ಆಶ್ರಿತ ಸಂಸ್ಥಾನಗಳೆಂದೂ ಕರೆಯಬಹುದು. ಸಿಂಗಪೂರ್, ಮಲಕ್ಕಾ, ಪೀನಾಂಗ್ ಈ ಪ್ರದೇಶಗಳು ಬ್ರಿಟಿಷರ ಸ್ವಂತ ಆಳಿಕೆಗೆ ಒಳಪಟ್ಟಿವೆ. ಇವುಗಳನ್ನು ಸ್ಟ್ರೇಟ್ ಸೆಟಲ್ಮೆಂಟುಗಳು ಅಥವಾ ಜಲಸಂಧಿಯ ಸಮೀಪ ಸ್ವಾಸ್ಥ್ಯಗಳು ಎಂದು ಕರೆಯುತ್ತಾರೆ. ಈ ಎರಡು ಪ್ರದೇಶಗಳಿಂದಲೂ ಸಂಬಾರದ ದಿನಸುಗಳೂ ರಬ್ಬರೂ ರಫ್ತಾಗುತ್ತವೆ.

ಸ್ಟ್ರೇಟ್ ಸೆಟಲ್ಮೆಂಟುಗಳ ಮುಖ್ಯ ಪಟ್ಟಣ **ಸಿಂಗಪೂರ್.** ಇದು ಮಲಯ ಪರ್ಯಾಯದ್ವೀಪದ ದಕ್ಷಿಣದ ಕೊನೆಯಲ್ಲಿ ಸುಮಾತ್ರಾ ದ್ವೀಪಕ್ಕೆ ಪೂರ್ವದಲ್ಲಿ ಇದೆ. ಇದರ ಬಂದರು ಬಹಳ ಉತ್ತಮವಾಗಿದೆ. ಯೂರೊಪು, ಆಫ್ರಿಕ, ಇಂಡಿಯಗಳಿಂದ ಏಷ್ಯಾ ಖಂಡದ ಪೂರ್ವ ಭಾಗಕ್ಕೂ, ಉತ್ತರ ಅಮೆರಿಕ ಖಂಡದ ಪಶ್ಚಿಮ ಭಾಗಕ್ಕೂ, ಆಸ್ಟ್ರೇಲಿಯಕ್ಕೂ ಹೋಗುವ ಹಡಗುಗಳು ಇಲ್ಲಿಗೆ ಬಂದು ನಿಲ್ಲುತ್ತವೆ. ಇದಲ್ಲದೆ ತವರ, ರಬ್ಬರು, ಸಂಬಾರದ ದಿನಸುಗಳು ಮೊದಲಾದುವು ರಫ್ತಾಗುತ್ತವೆ. ಆದುದರಿಂದ ಈ ಪಟ್ಟಣವೂ ವ್ಯಾಪಾರಕ್ಕೆ ಬಹು ಪ್ರಸಿದ್ಧ ವಾಗಿದೆ.

**ಟಾಂಕಿನ್.**—ಉತ್ತರದಲ್ಲಿರುವ ಈ ಭಾಗದಲ್ಲಿ ತೇಗ, ಅಕ್ಕಿ ಇವು ಉತ್ಪತ್ತಿ ಯಾಗುವುದಲ್ಲದೆ, ಕಲ್ಲಿದ್ದಲು, ಕಬ್ಬಿಣ, ಚಿನ್ನ, ತಾಮ್ರ, ಸೀಸಗಳೂ ಸಿಕ್ಕುತ್ತವೆ. ಇಲ್ಲಿ **ಗ್ರೆಹಾನೊಯಿ** ಎಂಬುದು ಮುಖ್ಯ ಪಟ್ಟಣ ಮತ್ತು ವ್ಯಾಪಾರಸ್ಥಳ. ಈ ಪಟ್ಟಣದಲ್ಲಿ ರಸ್ತೆಗಳಿಗೆಲ್ಲ ಕಲ್ಲುಚಪ್ಪಡಿಗಳನ್ನು ಹಾಸಿದಾರೆ.

**ಆನಾಂ.**—ಇದು ಫ್ರೆಂಚರಿಗೆ ಸೇರಿರುವ ಭಾಗಗಳಲ್ಲಿ ಅತಿವಿಸ್ತಾರ ವಾದುದು. ಪೂರ್ವತೀರದಲ್ಲಿರುವ **ಹ್ಯೂ** ಎಂಬುದೇ ಮುಖ್ಯ ಪಟ್ಟಣ.

**ಕಾಂಬೋಡಿಯ.**—ಆನಾಂ ಕಾಂಬೋಡಿಯಗಳ ರಾಜರು ಫ್ರೆಂಚರಿಗೆ ಅಧೀನರಾಗಿದಾರೆ. ಕಾಂಬೋಡಿಯದ ಜನರು ಪುರಾತನ ಕಾಲದಲ್ಲಿ ಬಹು ನಾಗರಿಕರಾಗಿದ್ದರು. **ನೌಂಪೆನ್** ಎಂಬುದು ಇದರ ರಾಜಧಾನಿ.

**ಕೊಚಿನ್ ಚೀಣ.**—ಇದೂ ಟಾಂಕಿನ್ನೂ ಫ್ರೆಂಚರ ಸ್ವಂತ ಆಳಿಕೆಯಲ್ಲಿವೆ. ಮಿಕಾಂಗ್ ನದಿಯಮುಖದಲ್ಲಿರುವ **ಸೈಗಾನ್** ಎಂಬುದು ಇದರ ಮುಖ್ಯ ಪಟ್ಟಣ. ಇಲ್ಲಿ ವಿಶೇಷವಾಗಿ ವ್ಯಾಪಾರ ನಡೆಯುತ್ತಿದೆ. ಇಲ್ಲಿಂದ ಅಕ್ಕಿಯೂ, ತೊಲೆಗಳೂ ರಫ್ತಾಗುತ್ತಿವೆ.

**ಸಯಾಂ.**—ಇಲ್ಲಿ ಸ್ವತಂತ್ರನಾದ ಒಬ್ಬ ರಾಜನು ಆಳುತ್ತಿದಾನೆ. ರಾಜನು ಮಂತ್ರಿಗಳ ಮತ್ತು ಪ್ರಜಾಪ್ರತಿನಿಧಿಗಳ ಅನುಮತಿಯ ಪ್ರಕಾರ ಆಳುತ್ತಿದಾನೆ. ಎಂದರೆ ಇಲ್ಲಿ ಸಾಂಕುಶಪ್ರಭುತ್ವ ನೆಲೆಗೊಂಡಿದೆ. ಇಲ್ಲಿನ ರಾಜರು ಕೆಲವು ಯೂರೊಪಿಯನ್ ಅಧಿಕಾರಿಗಳನ್ನು ಸೇವಿಸಿ ರಾಜ್ಯಭಾರವನ್ನು ಉತ್ತಮ ಸ್ಥಿತಿಗೆ ತಂದಿದಾರೆ. ಮಿನಾಂ ನದಿಯ ದಡದಲ್ಲಿರುವ **ಬಾಂಕಾಂಕ್** ಪಟ್ಟಣ ರಾಜಧಾನಿಯಾಗಿದೆ. **ಕಾಂಟನ್** ಪಟ್ಟಣದಂತೆ ಇಲ್ಲಿಯೂ ಜನರು ವಿಶೇಷವಾಗಿ ದೋಣಿಗಳಲ್ಲಿಯೇ ವಾಸಮಾಡುತ್ತಾರೆ.

**ಈಸ್ಟಿಂಡಿಯಾ ದ್ವೀಪಸ್ತೋಮ.**—ಏಷ್ಯಾ ಖಂಡದ ಆಗ್ನೇಯದಲ್ಲಿರುವ ಈಸ್ಟಿಂಡಿಯಾ ದ್ವೀಪಸ್ತೋಮವು (ಅಥವಾ ಮಲಯದ್ವೀಪಸ್ತೋಮವು) ಮಲಯ ಪರ್ಯಾಯದ್ವೀಪದಿಂದ ನ್ಯೂಗಿನಿಯವರೆಗೂ ಪ್ರಸರಿಸಿದೆ. ಈ ದ್ವೀಪಸ್ತೋಮಕ್ಕೂ, ನ್ಯೂಗಿನಿ, ಆಸ್ಟ್ರೇಲಿಯ ಮೊದಲಾದ ದ್ವೀಪಗಳಿಗೂ ಮಧ್ಯೆ ಆಳವಾದ

ಜಲಭಾಗಗಳಿವೆ. ಆದುದರಿಂದ ಇವೆರಡಕ್ಕೂ ಸಸ್ಯ ಮತ್ತು ಪ್ರಾಣಿವರ್ಗಗಳಲ್ಲಿ ವಿಶೇಷ ವ್ಯತ್ಯಾಸಗಳಿವೆ.

ಈ ದ್ವೀಪಸ್ತೋಮವು ಸಾವಿರಾರು ದ್ವೀಪಗಳನ್ನು ಒಳಗೊಂಡಿದೆ. ಅವುಗಳಲ್ಲಿ ಕೆಲವು ದೊಡ್ಡವು, ಅನೇಕ ಬಹಳ ಚಿಕ್ಕವು. ಫಿಲಿಪ್ಪೈನ್ ದ್ವೀಪಗಳೂ, ಸುಮಾತ್ರ, ಜಾವಾ, ಬೋರ್‍ನಿಯೋ ಮತ್ತು ಸಿಲಿಬಿಸ್ ದ್ವೀಪಗಳೂ ಈ ಸ್ತೋಮಗಳಲ್ಲಿ ಮುಖ್ಯವಾದ ದ್ವೀಪಗಳಾಗಿವೆ.

ಎಲ್ಲಾ ದ್ವೀಪಗಳಲ್ಲಿಯೂ ಸಾಮಾನ್ಯವಾಗಿ ಮಧ್ಯಭಾಗದಲ್ಲಿ ಪರ್ವತಗಳಿವೆ. ಪರ್ವತಗಳಲ್ಲನೇಕಗಳು ಅಗ್ನಿಪರ್ವತಗಳಾಗಿವೆ. ಈ ದ್ವೀಪಗಳು ಸಮಭಾಜಕವೃತ್ತಕ್ಕೆ ಸಮೀಪದಲ್ಲಿರುವುದರಿಂದ ಇಲ್ಲಿ ಸೆಕೆ ಹೆಚ್ಚಾಗಿದೆ. ವರ್ಷವೆಲ್ಲ ಯಥೇಚ್ಛವಾಗಿ ಮಳೆ ಬೀಳುವುದು. ಹೀಗೆ ಸೆಕೆಯೂ, ಮಳೆಯೂ ಹೆಚ್ಚಾಗಿರುವುದಲ್ಲದೆ, ಅಗ್ನಿಪರ್ವತಗಳ ಪ್ರದೇಶವಾಗಿರುವುದರಿಂದ ನೆಲವೂ ಬಹು ಫಲವತ್ತಾಗಿರುವುದು. ಆದುದರಿಂದ ಸಸ್ಯಗಳು ಬಹಳ ಸೊಂಪಾಗಿ ಬೆಳೆಯುತ್ತವೆ. ಪರ್ವತ ಪ್ರದೇಶಗಳಲ್ಲಿ ದೊಡ್ಡ ಕಾಡುಗಳಿವೆ. ಈ ಕಾಡುಗಳಲ್ಲಿ ಹುಲಿ, ಆನೆ, ಖಡ್ಗಮೃಗ ಮೊದಲಾದ ದುಷ್ಟಮೃಗಗಳೂ ವಿಧವಿಧವಾದ ಕೋತಿಗಳೂ, ಹಕ್ಕಿಗಳೂ ವಾಸಮಾಡುತ್ತವೆ.

ಮೈದಾನ ಪ್ರದೇಶಗಳಲ್ಲಿ ಮಲಯಕುಲದ ಜನರು ವಾಸವಾಗಿದಾರೆ. ಇವರು ಗಿಡ್ಡಾಗಿಯೂ, ಕಪಿಲವರ್ಣದವರಾಗಿಯೂ ಇರುವರು. ಸ್ವಾಭಾವಿಕವಾಗಿ ಇವರು ಕ್ರೂರಿಗಳಾಗಿ ಕಾಣುತ್ತಾರೆ. ದೋಣಿಗಳನ್ನು ನಡೆಸುವುದರಲ್ಲಿ ಬಹಳ ಕುಶಲರು. ಇವರು ಮಹಮ್ಮದೀಯ ಮತಕ್ಕೆ ಸೇರಿದವರು. ಇವರಲ್ಲದೆ ಸಾವಿರಾರು ಚೀಣರೂ, ಅನೇಕ ಯೂರೊಪಿಯನ್ ಜನರೂ ಈ ದ್ವೀಪಗಳಲ್ಲಿ ನೆಲೆಗೊಂಡಿದಾರೆ.

ಈ ದ್ವೀಪಗಳ ಜನರ ಮುಖ್ಯೋದ್ಯೋಗ ಕೃಷಿ. ಬತ್ತ, ಕಬ್ಬು, ಕಾಫಿ, ಹೊಗೆಯಸೊಪ್ಪು ಮತ್ತು ಸಂಬಾರದ ಪದಾರ್ಥಗಳು ಇಲ್ಲಿ ವಿಶೇಷವಾಗಿ ಬೆಳೆಯುತ್ತವೆ. ಟೀ, ಸಿಂಕೋನ, ಬಾಳೆ, ತೆಂಗುಗಳೂ ಚೆನ್ನಾಗಿ ಬೆಳೆಯುವುವು. ಸೇಗೋ ಗಿಡವನ್ನು ಬೆಳೆದು ಅದರ ಬೆಂಡಿನಿಂದ ಹಿಟ್ಟನ್ನು ಮಾಡಿ ಅದನ್ನು ಸಾವಿರಾರು ಜನರು ತಿಂದು ಜೀವಿಸುತ್ತಾರೆ. ಬಾಂಕಾ ಮತ್ತು ಬಿಲ್ಲಿಟನ್ ದ್ವೀಪಗಳಲ್ಲಿ ತವರವೂ, ಸುಮಾತ್ರ, ಬೊರ್ನಿಯೊ ದ್ವೀಪಗಳಲ್ಲಿ ಕಲ್ಲಿದ್ದಲೂ, ಬೊರ್ನಿಯೊ ದ್ವೀಪದಲ್ಲಿ ಚಿನ್ನವೂ ವಿಶೇಷವಾಗಿ ಸಿಕ್ಕುವುವು. ವ್ಯಾಪಾರಕ್ಕೆ ಅನುಕೂಲವಾಗಿ ಉತ್ತಮವಾದ ಬಂದರುಗಳೂ, ಆಳವಾದ ಸಮುದ್ರಗಳೂ ಇವೆ.

ಈ ದ್ವೀಪಸ್ತೋಮದ ರಾಜಕೀಯ ವಿಭಾಗಗಳು ಯಾವುವೆಂದರೆ:—

**ಫಿಲಿಪ್ಪೈನ್ ದ್ವೀಪಗಳು.**—ಇವು ಅಮೆರಿಕದ ಸಂಯುಕ್ತ ಸಂಸ್ಥಾನಗಳಿಗೆ ಅಧೀನವಾಗಿವೆ. ಸಂಯುಕ್ತ ಸಂಸ್ಥಾನಗಳ ಸರ್ಕಾರದವರು ಇಲ್ಲಿನ

ಜನರಿಗೆ ತಮ್ಮ ರಾಜ್ಯದ ಆಡಳಿತಗಳಲ್ಲಿ ಬಹಳಮಟ್ಟಿಗೆ ಸ್ವಾತಂತ್ರ್ಯವನ್ನು ಕೊಟ್ಟಿದಾರೆ. **ಮೆನಿಲ್ಲ** ಎಂಬುದು ಮುಖ್ಯಪಟ್ಟಣ. ಇದರ ಬಂದರು ಉತ್ತಮವಾಗಿದೆ. ಇಲ್ಲಿಂದ ಉತ್ತಮವಾದ ಚುಟ್ಟಗಳು ರಫ್ತಾಗುತ್ತವೆ.

**ಬೊರ್ನಿಯೊ ದ್ವೀಪ.**—ಇದರ ವಾಯುವ್ಯ ಭಾಗ ಬ್ರಿಟಿಷರಿಗೆ ಸೇರಿದೆ. ಸರವಾಕ್ ಎಂಬ ಇದರ ಒಂದು ಭಾಗಕ್ಕೆ ಒಬ್ಬ ಇಂಗ್ಲಿಷರವನು ರಾಜನಾಗಿದಾನೆ. ಬ್ರಿಟಿಷ್ ಬೊರ್ನಿಯೊದಲ್ಲಿ ಚಿನ್ನ, ವಜ್ರ, ಕಲ್ಲಿದ್ದಲು ಇವು ಸಿಕ್ಕುತ್ತವೆ.

**ಡಚ್ಚರಿಗೆ ಸೇರಿದ ಈಸ್ಟಿಂಡಿಯಾ ದ್ವೀಪಗಳು.**—ಈಸ್ಟಿಂಡಿಯಾ ದ್ವೀಪಸ್ತೋಮದಲ್ಲಿ ಫಿಲಿಪ್ಪೈನ್ ದ್ವೀಪಗಳೂ, ಬ್ರಿಟಿಷ್ ಬೊರ್ನಿಯೊ ಇವು ವಿನಾ ಉಳಿದ ದ್ವೀಪಗಳೆಲ್ಲ ಹಾಲೆಂಡ್ ದೇಶದ ಡಚ್ ಜನರಿಗೆ ಸೇರಿವೆ. ಇವುಗಳನ್ನು ಡಚ್ ಈಸ್ಟಿಂಡೀಸ್ ಅಥವಾ ಡಚ್ಚರಿಗೆ ಸೇರಿದ ಈಸ್ಟಿಂಡಿಯಾ ದ್ವೀಪಗಳೆಂದು ಕರೆಯಬಹುದು. ಈ ಪ್ರಾಂತವನ್ನು ಆಳುವುದಕ್ಕೆ ಡಚ್ಚರು ಒಬ್ಬ ಗೌರ್ನರ್-ಜನರಲ್‌ರವರನ್ನು ನೇಮಿಸಿದಾರೆ. ಆತನ ಕೈಕಳಗೆ ಅನೇಕ ಗೌರ್ನರುಗಳಿದಾರೆ. ಕೆಲವು ದ್ವೀಪಗಳಲ್ಲಿ ಡಚ್ಚರಿಗೆ ಅಧೀನರಾದ ದೇಶೀಯ ರಾಜರೂ ಆಳುತ್ತಿರುವರು.

ಜಾವಾದ್ವೀಪದಲ್ಲಿರುವ **ಬಟೇವಿಯ** ಎಂಬುದೇ ರಾಜಧಾನಿ ಮತ್ತು ಮುಖ್ಯವಾದ ವ್ಯಾಪಾರಸ್ಥಳ. ಇದರ ಬಂದರು ಉತ್ತಮವಾಗಿದೆ. ಇಲ್ಲಿಂದ ಸಕ್ಕರೆ, ಹೊಗೆಯಸೊಪ್ಪು, ಅಕ್ಕಿ, ಟೀ, ಸಿಂಕೋನಗಳನ್ನು ವಿಶೇಷವಾಗಿ ರಫ್ತು ಮಾಡುವರು. ಸುಮಾತ್ರ ದ್ವೀಪದಲ್ಲಿರುವ **ಪದಂಗ್** ಎಂಬ ರೇವುಪಟ್ಟಣದಿಂದ ಚಿನ್ನ, ಕಲ್ಲಿದ್ದಲು, ಕರ್ಪೂರ, ಮೆಣಸು ಇವು ರಫ್ತಾಗುತ್ತವೆ.

---

## ಯೂರೋಪ್ ಖಂಡ

### ಸಾಮಾನ್ಯ ವಿವರಣೆ

**ವಿಸ್ತೀರ್ಣ, ಮೇರೆಗಳು ಮತ್ತು ಸನ್ನಿವೇಶ.**—ಈ ಖಂಡವು ವಿಸ್ತೀರ್ಣದಲ್ಲಿ ಇಂಡಿಯಾದೇಶದ 2½ ಯಷ್ಟು, ಏಷ್ಯಾ ಖಂಡದ ⅙ ರಷ್ಟು ಅಥವಾ ಆಸ್ಟ್ರೇಲಿಯಕ್ಕಿಂತ ಸ್ವಲ್ಪ ದೊಡ್ಡದಾಗಿಯೂ ಇರುವುದು. ಇದರ ವಿಸ್ತೀರ್ಣವು ಸುಮಾರು 38 ಲಕ್ಷ ಚದರ ಮೈಲಿಗಳು.

ಈ ಖಂಡವು ಎಷ್ಟು ಅಕ್ಷಾಂಶ ರೇಖಾಂಶಗಳಲ್ಲಿ ಪ್ರಸರಿಸಿದೆಯೆಂಬುದನ್ನು ಭೂಪಟದಲ್ಲಿ ನೋಡಿ. ಇದರ ಅತ್ಯಂತ ಉತ್ತರದಲ್ಲಿ ಸ್ವಲ್ಪ ಭಾಗ ಮಾತ್ರ ಉತ್ತರ ಶೀತವಲಯದಲ್ಲಿದೆ. ಉಳಿದ ಭಾಗವೆಲ್ಲವೂ ಉತ್ತರ ಸಮಶೀತೋಷ್ಣವಲಯದಲ್ಲಿರುವುದು.

ಇದರ ಮೇರೆಗಳನ್ನು ಭೂಪಟದಲ್ಲಿ ನೋಡಿ ಹೇಳಿ. ಇದಕ್ಕೆ ಪೂರ್ವದಲ್ಲಿ ಮಾತ್ರ ನೆಲವು ಮೇರೆಯಾಗಿರುವುದು. ಉಳಿದ ಕಡೆಯಲ್ಲಿ ಸಮುದ್ರಗಳೇ

ಇರುವುವು. ಪೂರ್ವದಲ್ಲಿ ಯೂರಲ್ ಪರ್ವತಗಳು, ಯೂರಲ್ ನದಿ ಮತ್ತು ಕ್ಯಾಸ್ಪಿಯನ್ ಸಮುದ್ರ ಇರುವುವು. ಯೂರಲ್ ಪರ್ವತಗಳು ತುಂಬಾ ಎತ್ತರವಾಗಿಲ್ಲ; ಆದುದರಿಂದ ರಷ್ಯಾದವರು ಸೈಬೀರಿಯವನ್ನು ಜಯಿಸಿ, ಅದನ್ನು ತಮ್ಮ ದೇಶದೊಡನೆ ರೈಲುಮಾರ್ಗಗಳಿಂದ ಸಂಬಂಧಿಸಿ, ಅದನ್ನು ಆಳುತ್ತಲೂ, ಅದರೊಡನೆ ವಿಶೇಷ ವ್ಯಾಪಾರವನ್ನು ನಡೆಯಿಸುತ್ತಲೂ ಇರುವರು.

ಏಷ್ಯಾ, ಯೂರೋಪುಗಳ ವಿಸ್ತೀರ್ಣ ಮತ್ತು ಸನ್ನಿವೇಶಗಳನ್ನು ನೋಡಿದರೆ, ಯೂರೋಪನ್ನು ಏಷ್ಯಾ ಖಂಡದ ಒಂದು ಪರ್ಯಾಯದ್ವೀಪವೆಂದು ಹೇಳಬಹುದು. ಆದರೆ ಯೂರೋಪಿನ ಸ್ವಾಭಾವಿಕ ಲಕ್ಷಣಗಳೇ ಬೇರೆ. ಆ ಜನರ ಚರಿತ್ರೆಯೇ ಬೇರೆ. ಆದುದರಿಂದ ಯೂರೋಪನ್ನು ಬೇರೆಯೊಂದು ಖಂಡವೆಂದೇ ಭೂಗೋಳ ಶಾಸ್ತ್ರಜ್ಞರು ಯಾವಾಗಲೂ ಗಣಿಸುವರು.

ಈ ಖಂಡವನ್ನು ಇತರ ಖಂಡಗಳೊಡನೆ ಹೋಲಿಸಿ ನೋಡಿ. ಇದು ಆಸ್ಟ್ರೇಲಿಯವನ್ನು ಬಿಟ್ಟು ಉಳಿದ ಖಂಡಗಳಲ್ಲೆಲ್ಲಾ ಅತ್ಯಂತ ಚಿಕ್ಕದಾದರೂ ಪ್ರಜಾಸಂಖ್ಯೆಯಲ್ಲಿ ಏಷ್ಯಾ ಖಂಡಕ್ಕೆ ಎರಡನೆಯದಾಗಿರುವುದು. ಖಂಡಗಳಲ್ಲೆಲ್ಲಾ ಈ ಖಂಡವೇ ನಾಗರಿಕತೆಯಲ್ಲಿಯೂ, ಐಶ್ವರ್ಯದಲ್ಲಿಯೂ, ರಾಜಕೀಯ ಪ್ರಾಬಲ್ಯದಲ್ಲಿಯೂ ಮುಂದಾಗಿರುವುದು.

**ತೀರಲಕ್ಷಣ; ತೀರದ ಸಾಮಾನ್ಯ ಲಕ್ಷಣ.**—ಈ ಖಂಡದ ಮೂರು ದಿಕ್ಕುಗಳಲ್ಲಿ, ಮುಖ್ಯವಾಗಿ ಪಶ್ಚಿಮದಲ್ಲಿ, ಅನೇಕ ಪರ್ಯಾಯದ್ವೀಪಗಳೂ, ದ್ವೀಪಗಳೂ, ಸಮುದ್ರಶಾಖೆಗಳೂ ಇರುವುವು. ಪರ್ಯಾಯದ್ವೀಪಗಳೇ ಈ ಖಂಡದ ಮೇಲ್ಮೈಯಲ್ಲಿ $\frac{1}{3}$ ಭಾಗವಾಗಿರುವುವು. ಎಂದರೆ ತೀರವು ಬಹು ಡೊಂಕು ಡೊಂಕಾಗಿರುವುದು. ಇನ್ನಾವ ಖಂಡದ ತೀರವೂ ಇಷ್ಟು ಡೊಂಕು ಡೊಂಕಾಗಿ ಇಲ್ಲ. [ಪ್ರತಿ ಖಂಡದಲ್ಲಿಯೂ ತೀರದ ಉದ್ದಕ್ಕೂ, ಖಂಡದ ವಿಸ್ತೀರ್ಣಕ್ಕೂ, ಇರುವ ಪರಿಮಾಣವನ್ನು ತಿಳಿದರೆ ಇದು ಸ್ಪಷ್ಟವಾಗುವುದು. ಈ ಪ್ರಮಾಣವು ಸುಮಾರು ಯೂರೋಪಿನಲ್ಲಿ 1:200, ಉತ್ತರ ಅಮೆರಿಕದಲ್ಲಿ 1:350, ದಕ್ಷಿಣ ಅಮೆರಿಕದಲ್ಲಿ 1:440, ಏಷ್ಯದಲ್ಲಿ 1:500, ಆಫ್ರಿಕದಲ್ಲಿ 1:750.]

**ಸಮುದ್ರಗಳು.**—ಈ ಖಂಡದಲ್ಲಿ ಭೂಮಧ್ಯ ಸಮುದ್ರಗಳು, ಎಂದರೆ ಸ್ವಲ್ಪ ಹೆಚ್ಚು ಕಡಿಮೆ ಭೂಮಿಯಿಂದ ಸುತ್ತಲ್ಪಟ್ಟಿರುವ ಸಮುದ್ರಗಳು ಇತರ ಖಂಡಗಳಿಗಿಂತ ಹೆಚ್ಚಾಗಿವೆ. ಅವು ಯಾವುವೆಂದರೆ:—

(1) **ಮೆಡಿಟರೇನಿಯನ್ ಅಥವಾ ಭೂಮಧ್ಯ ಸಮುದ್ರ.**—ಇದು ಏಡ್ರಿಯಾಟಿಕ್ ಮತ್ತು ಈಜಿಯನ್ ಸಮುದ್ರಗಳನ್ನು ಒಳಗೊಂಡಿದೆ. ಇದು ವಿಶೇಷವಾಗಿ ಆಳವಾಗಿರುವುದು. ಅನೇಕ ದ್ವೀಪಗಳನ್ನು ಒಳಗೊಂಡಿರುವುದು. ಜಿಬ್ರಾಲ್ಟರ್ ಜಲಸಂಧಿಯ ಮೂಲಕ ಅಟ್ಲಾಂಟಿಕ್ ಸಾಗರದೊಡನೆಯೂ, ಈಜಿಗೆ

ಸೂಯಸ್ ಕಾಲುವೆಯ ಮೂಲಕ ಕೆಂಪುಸಮುದ್ರದೊಡನೆಯೂ ಇದು ಸೇರಿ ಕೊಂಡಿರುವುದು. ಜಿಬ್ರಾಲ್ಟರ್ ಜಲಸಂಧಿ, ಸೂಯಸ್ ಕಾಲುವೆಗಳ ಬಳಿ ವಿನಾ ಉಳಿದ ಕಡೆಗಳಲ್ಲೆಲ್ಲಾ ಇದರ ತೀರಪ್ರದೇಶಗಳು ಫಲವತ್ತಾಗಿವೆ. ಈ ಕಾರಣ ಗಳಿಂದ ಭೂಮಧ್ಯ ಸಮುದ್ರದ ಮೇಲೆ ಬಹು ಪುರಾತನ ಕಾಲದಿಂದಲೂ ವಿಶೇಷ ವಾಗಿ ವ್ಯಾಪಾರವು ನಡೆಯುತ್ತಲಿರುವುದು. ಈಗಲೂ ಈ ಸಮುದ್ರದ ಮಾರ್ಗ ವಾಗಿ ನಡೆಯುವಷ್ಟು ವ್ಯಾಪಾರವು ಇನ್ಯಾವ ಸಮುದ್ರದ ಮಾರ್ಗವಾಗಿಯೂ ನಡೆಯುವುದಿಲ್ಲ.

(2) ಈಜಿಯನ್ ಸಮುದ್ರದಿಂದ ಡಾರ್ಡನೆಲ್ಸ್ ಜಲಸಂಧಿಯ ಮಾರ್ಗ ವಾಗಿ ಮಾರ್ಮೋರ ಸಮುದ್ರಕ್ಕೂ, ಅಲ್ಲಿಂದ ಬಾಸ್ಫೊರಸ್ ಜಲಸಂಧಿಯ ಮಾರ್ಗವಾಗಿ ಕಪ್ಪುಸಮುದ್ರಕ್ಕೂ, ಅಲ್ಲಿಂದ ಕ್ರಿಮಿಯ ಪರ್ಯಾಯದ್ವೀಪದ ಪಕ್ಕದಲ್ಲಿರುವ ಎನಿಕೇಲ್ ಜಲಸಂಧಿಯ ಮಾರ್ಗವಾಗಿ ಆಜಾವ್ ಸಮುದ್ರಕ್ಕೂ ಹೋಗಬಹುದು. ಕಪ್ಪುಸಮುದ್ರವು ವಿಸ್ತಾರವಾಗಿಯೂ ಬಹುವಾಗಿ ಆಳ ವಾಗಿಯೂ ಇದ್ದರೂ, ಇದರ ತೀರದಲ್ಲಿ ಒಳ್ಳೆಯ ಬಂದರುಗಳಿಲ್ಲ. ಉತ್ತರದ ಅತಿಶೀತಮಾರುತಗಳಿಗೂ, ದಕ್ಷಿಣದ ಅತ್ಯುಷ್ಣಮಾರುತಗಳಿಗೂ ಒಳಪಟ್ಟಿರು ವುದು. ಆದುದರಿಂದ ವ್ಯಾಪಾರಕ್ಕೆ ಈ ಸಮುದ್ರವು ಅಷ್ಟು ಅನುಕೂಲವಾಗಿಲ್ಲ. ಆದರೂ ರಷ್ಯಾದವರ ವ್ಯಾಪಾರಕ್ಕೂ, ಯುದ್ಧದ ಹಡಗುಗಳಿಗೂ ಇದು ಸ್ವಲ್ಪ ಮಟ್ಟಿಗೆ ಸಹಕಾರಿಯಾಗಿದೆ.

(3) **ಕ್ಯಾಸ್ಪಿಯನ್ ಸಮುದ್ರವು.**—ಇದು ಸಂಪೂರ್ಣವಾಗಿ ಭೂಮಧ್ಯದಲ್ಲಿದೆ. ಸೆಕೆಯಿಂದ ನೀರು ಹೆಚ್ಚಾಗಿ ಆವಿಯಾಗಿ ಹೋಗುವುದ ರಿಂದಲೂ, ಇದರಿಂದ ಹೊರಕ್ಕೆ ಯಾವ ನದಿಗಳೂ ಹರಿಯುವುದಿಲ್ಲವಾದುದ ರಿಂದಲೂ ಈ ಸಮುದ್ರದ ನೀರು ಬಹು ಉಪ್ಪಾಗಿರುವುದು. ವೊಲ್ಗಾ ನದಿಯಿಂದ ತರಲ್ಪಟ್ಟ ಮಣ್ಣಿನಿಂದ ಇದು ಮುಚ್ಚಲ್ಪಡುತ್ತಲಿರುವುದು. 100 ವರ್ಷಗಳಲ್ಲಿ ಈ ಸಮುದ್ರವು 7,000 ಚದರ ಮೈಲಿಗಳಷ್ಟು ಚಿಕ್ಕದಾಗಿದೆ. ಮೀನುಗಳು ಇಲ್ಲಿ ವಿಶೇಷವಾಗಿವೆ. ರಷ್ಯಾದ ಜನರು ಇದರ ಮೂಲಕ ಸ್ವಲ್ಪ ವ್ಯಾಪಾರ ವನ್ನೂ ನಡೆಯಿಸುವರು.

(4) ಮೆಡಿಟರೇನಿಯನ್ ಸಮುದ್ರದಿಂದ ಹೊರಟು ಜಿಬ್ರಾಲ್ಟರ್ ಜಲ ಸಂಧಿಯ ಮೂಲಕ ಅಟ್ಲಾಂಟಿಕ್ ಸಾಗರವನ್ನು ಸೇರಿ, ಉತ್ತರದ ಕಡೆಗೆ ಹೋದರೆ ಬಿಸ್ಕೇಕೊಲ್ಲಿಯೂ, ಇಂಗ್ಲಿಷ್ ಕಡಲ್ಗಾಲುವೆಯೂ, ಡೋವರ್ ಜಲಸಂಧಿಯೂ, ನಾರ್ತ್‌ಸಿ ಅಥವಾ ಉತ್ತರ ಸಮುದ್ರವೂ ಸಿಕ್ಕುವುವು. ಈ ಉತ್ತರ ಸಮುದ್ರ ದಲ್ಲಿ ಮರಳು ದಿಣ್ಣೆಗಳು ಹೇರಳವಾಗಿರುವುದರಿಂದ ಮೀನುಗಳು ವಿಶೇಷವಾಗಿ ಸಿಕ್ಕುವುವು. ಯೂರೊಪಿನ ಮಧ್ಯಭಾಗದ ಮತ್ತು ಉತ್ತರಭಾಗದ ರಾಜ್ಯ ಗಳೊಡನೆ ಇಂಗ್ಲೆಂಡಿನ ವ್ಯಾಪಾರವು ಈ ಸಮುದ್ರದ ಮೂಲಕ ನಡೆಯುವುದು.

(5) ಈ ಸಮುದ್ರದಿಂದ **ಕೆಟಿಗಾಟ್, ಸ್ಕಾಗೆರಾಟ್** ಜಲಸಂಧಿಗಳ ಮೂಲಕ ಬಾಲ್ಟಿಕ್ ಸಮುದ್ರವನ್ನು ಸೇರಬಹುದು. ಈ ಸಮುದ್ರವು ಉತ್ತರ ಅಕ್ಷಾಂಶಗಳಲ್ಲಿರುವುದರಿಂದ ಇಲ್ಲಿ ನೀರು ಆವಿಯಾಗುವುದು ಕಡಿಮೆ. ಆದರೆ ಅನೇಕ ನದಿಗಳು ಬಂದು ಸೇರುತ್ತವೆ. ಆದುದರಿಂದ ಈ ಸಮುದ್ರದ ನೀರು ಸಾಗರದ ನೀರಿನ ಅರ್ಧ ಭಾಗದಷ್ಟು ಮಾತ್ರ ಉಪ್ಪಾಗಿದೆ. ವಿಶೇಷವಾಗಿ ಆಳವಿಲ್ಲದಿರುವುದರಿಂದಲೂ, ವರ್ಷಕ್ಕೆ 4 ತಿಂಗಳು ನೀರು ಗಡ್ಡೆ ಕಟ್ಟಿಕೊಂಡು ಇರುವುದರಿಂದಲೂ ವ್ಯಾಪಾರಕ್ಕೆ ಈ ಸಮುದ್ರವು ಅಷ್ಟು ಪ್ರಯೋಜನ ಕಾರಿಯಾಗಿಲ್ಲ.

(6) **ಬಿಳಿಯ ಸಮುದ್ರ.**—ಇದರಲ್ಲಿ ವರ್ಷಕ್ಕೆ 9 ತಿಂಗಳು ನೀರು ಗಡ್ಡೆಯಾಗಿರುವುದು. 3 ತಿಂಗಳು ಮಾತ್ರ ಸ್ವಲ್ಪ ವ್ಯಾಪಾರವು ನಡೆಯುವುದು.

ಈ ಖಂಡದ ತೀರದಲ್ಲಿ ಅನೇಕ ಅಳಿವೆಗಳೂ ಇವೆ. ಷಾನನ್, ಸೆವೆರ್ನ್, ಟೆಮ್ಸ್, ರ್ಹೋನ್ ಮೊದಲಾದ ನದಿಗಳ ಅಳಿವೆಗಳನ್ನು ಭೂಪಟದಲ್ಲಿ ನೋಡಿ.

**ದ್ವೀಪಗಳು ಮತ್ತು ಪರ್ಯಾಯದ್ವೀಪಗಳು.**—ಈ ಖಂಡದಲ್ಲಿರುವಷ್ಟು ಖಂಡಾವರಣದಲ್ಲಿನ ದ್ವೀಪಗಳು ಇನ್ಯಾವ ಖಂಡದಲ್ಲಿಯೂ ಇಲ್ಲ. ಅವುಗಳಲ್ಲಿ ಅನೇಕವು ಪರ್ಯಾಯದ್ವೀಪಗಳಿಗೆ ಸೇರಿಕೊಂಡಂತೆ ಇವೆ. ಈ ಖಂಡದ ದಕ್ಷಿಣ ಭಾಗದಲ್ಲಿ ಐಬೀರಿಯನ್ ಪರ್ಯಾಯದ್ವೀಪವೂ, ಬಲಿಯರಿಕ್ ದ್ವೀಪಗಳೂ, ಇಟಲಿ ಪರ್ಯಾಯದ್ವೀಪವೂ, ಕಾರ್ಸಿಕ, ಸಾರ್ಡಿನಿಯ, ಸಿಸಿಲಿ, ಮಾಲ್ಟ ದ್ವೀಪಗಳೂ, ಬಾಲ್ಕನ್ ಪರ್ಯಾಯದ್ವೀಪವೂ, ಈಜಿಯನ್ ದ್ವೀಪಸ್ತೋಮ ಮತ್ತು ಕ್ರೀಟ್ ದ್ವೀಪಗಳೂ ಇರುವುವು. ಪಶ್ಚಿಮ ಭಾಗದಲ್ಲಿ ಬ್ರಿಟನಿ ಪರ್ಯಾಯ ದ್ವೀಪವೂ ಚಾನಲ್ ದ್ವೀಪಗಳೂ ಇರುವುವು. ಉತ್ತರ ಭಾಗದಲ್ಲಿ ಜಟ್‌ಲೆಂಡ್ ಮತ್ತು ಸ್ಕಾಂಡಿನೇವಿಯ ಪರ್ಯಾಯದ್ವೀಪಗಳೂ, ಲಾಫೋಡೆನ್, ಜೀಲಂಡ್ ಮೊದಲಾದ ಅನೇಕ ಸಣ್ಣ ದ್ವೀಪಗಳೂ ಇರುವುವು. ಪರ್ಯಾಯದ್ವೀಪಗಳಿಗೆ ಸೇರದಂತೆ ಕೆಲವು ದ್ವೀಪಗಳಿರುವುವು. ಇವುಗಳಲ್ಲಿ ಬ್ರಿಟಿಷ್ ದ್ವೀಪಗಳೂ, ಐಸ್ಲಾಂಡೂ ಮುಖ್ಯವಾದುವು.

ಯೂರೋಪಿನ ಉತ್ತರ, ಪಶ್ಚಿಮ, ದಕ್ಷಿಣ ಕೊನೆಗಳಾದ ನಾರ್ಡ್‌ಕಿನ್, ರೋಕ, ತರೀಫ ಭೂಶಿರಗಳನ್ನೂ, ಕಾರಿಂತ್ ಮತ್ತು ಪೆರಿಕಾಪ್ ಭೂಸಂಧಿಗಳನ್ನೂ ಭೂಪಟದಲ್ಲಿ ನೋಡಿ.

**ಈ ತೀರದ ಪ್ರಯೋಜನಗಳು.**—ಸಮುದ್ರತೀರವು ಇಷ್ಟು ಡೊಂಕಾಗಿರುವುದರಿಂದ ಒಳ್ಳೆಯ ಬಂದರುಗಳು ಅನೇಕವಿವೆ. ರಷ್ಯದ ಮಧ್ಯ ಭಾಗವೂ ಕೂಡ ತೀರದಿಂದ 700 ಮೈಲಿಗಳಿಗಿಂತ ಹೆಚ್ಚು ದೂರದಲ್ಲಿಲ್ಲ. (ಏಷ್ಯಾದಲ್ಲಿ 1,500 ಮೈಲಿಗಳಿಗಿಂತಲೂ ಹೆಚ್ಚು ದೂರವಿರುವ ಪ್ರದೇಶಗಳಿರುವುವು.)

ಆದುದರಿಂದ ಈ ತೀರವು ವ್ಯಾಪಾರಕ್ಕೆ ಬಹು ಅನುಕೂಲವಾಗಿದೆ. ಈ ಖಂಡದ ಜನರಿಗೆ ಸಮುದ್ರದಲ್ಲಿ ಮೀನು ಹಿಡಿಯುವುದು ಒಂದು ಮುಖ್ಯವಾದ ಕಸಬಾಗಿದೆ; ಆದುದರಿಂದ ಇದರಲ್ಲಿ ಸಮುದ್ರದ ಮೇಲೆ ದೂರದೇಶಗಳಿಗೆ ಹೋಗಿ ವ್ಯಾಪಾರಮಾಡಬೇಕೆಂಬ ಅಭಿಲಾಷೆಯು ಹೆಚ್ಚಾಗಿ ವೃದ್ಧಿಹೊಂದಿದೆ. ಸಮುದ್ರವು ದೇಶಗಳನ್ನು ಪಶ್ಚಿಮ, ದಕ್ಷಿಣ ಭಾಗಗಳಲ್ಲಿ ಸ್ವಾಭಾವಿಕವಾಗಿ ಬೇರೆ ಬೇರೆಯಾಗಿ ವಿಂಗಡಿಸಿರುವುದರಿಂದ, ಅವುಗಳಿಗೆ ಕಲಹಗಳುಂಟಾಗಲು ಅವಕಾಶವು ಕಡಿಮೆಯಾಗಿದೆ. ವಾಯುಗುಣವು ಸಮುದ್ರದ ದೆಸೆಯಿಂದ ಹಿತಕರವಾಗಿರುವುದು. ಇದರಿಂದ ಜನರು ಕಷ್ಟಪಟ್ಟು ಕೆಲಸಮಾಡಲು ಅನುಕೂಲವಾಗಿದೆ. ಈ ಖಂಡದ ಸಮುದ್ರತೀರವು ಈ ಮೇರೆಗೆ ಇಲ್ಲಿನ ಜನರ ವ್ಯಾಪಾರಾಭಿವೃದ್ಧಿಗೆ ಬಹು ಮುಖ್ಯ ಕಾರಣಗಳಲ್ಲೊಂದಾಗಿರುವುದು.

ಈ ವ್ಯಾಪಾರದಿಂದ ಯೂರೊಪಿನ ಜನರು ಸಾಮಾನ್ಯವಾಗಿ ಬಹಳ ಐಶ್ವರ್ಯವಂತರಾಗಿಯೂ, ಸ್ವಾತಂತ್ರ್ಯಾಭಿಮಾನಿಗಳಾಗಿಯೂ ಇರುವರು. ಈ ಜನರು ತಮ್ಮ ವ್ಯಾಪಾರವು ಹರಡಿದಹಾಗೆ ಇತರ ಖಂಡಗಳಲ್ಲಿ ಅನೇಕ ರಾಜ್ಯಗಳನ್ನು ಸಂಪಾದಿಸಿರುವರು. ಸ್ವಾತಂತ್ರ್ಯಾಭಿಮಾನವು ಹೆಚ್ಚಿದ ಹಾಗೆ ಪ್ರಜಾಪ್ರತಿನಿಧಿ ಪ್ರಭುತ್ವಗಳನ್ನು ಹೊಂದಿರುವರು. ಈ ಖಂಡದ ಪೂರ್ವ ಭಾಗಕ್ಕಿಂತಲೂ ಪಶ್ಚಿಮ ಭಾಗದಲ್ಲಿ ತೀರವು ಹೆಚ್ಚು ಡೊಂಕು ಡೊಂಕಾಗಿರುವುದರಿಂದ ಈ ಲಕ್ಷಣಗಳು ಅಲ್ಲಿ ಪೂರ್ವ ಭಾಗದ ಪ್ರದೇಶಗಳಿಗಿಂತ ಹೆಚ್ಚಾಗಿ ಕಂಡುಬರುವುವು.

**ಮೇಲ್ಮೈಯ್ಯ ಲಕ್ಷಣ, ಸ್ವಾಭಾವಿಕ ವಿಭಾಗಗಳು.**—ಈ ಖಂಡವನ್ನು ಸ್ವಭಾವಸಿದ್ಧವಾದ ಮೂರು ವಿಭಾಗಗಳಾಗಿ ಗಣಿಸಬಹುದು. ಅವು ಯಾವುವೆಂದರೆ:—(1) ಯೂರೊಪಿನ ಮಹತ್ತಾದ ಮೈದಾನ, (2) ದಕ್ಷಿಣ ಭಾಗದ ಪರ್ವತಪ್ರದೇಶಗಳು, (3) ಸ್ಕಾಂಡಿನೇವಿಯ ಪ್ರಸ್ಥಭೂಮಿ.

(1) **ಯೂರೊಪಿನ ಮಹತ್ತಾದ ಮೈದಾನ.**—ಇದು ಬಿಸ್ಕೆಕೊಲ್ಲಿಯಿಂದ ಯೂರಲ್ ಪರ್ವತಗಳವರೆಗೂ ವಿಸ್ತರಿಸಿಕೊಂಡು, ಈ ಖಂಡದ ⅔ ಭಾಗವನ್ನು ಒಳಗೊಂಡಿದೆ. ಈ ಮೈದಾನದ ಅಗಲವು ಪಶ್ಚಿಮದಲ್ಲಿ ಕಡಿಮೆ, ಪೂರ್ವಕ್ಕೆ ಹೋದಹಾಗೆ ಹೆಚ್ಚು. ಈ ಮೈದಾನವು ಸ್ವಲ್ಪ ಹೆಚ್ಚು ಕಡಿಮೆ ತ್ರಿಕೋಣಾಕಾರವಾಗಿದೆ. ಇದರ ಪೂರ್ವ ಭಾಗವು ಒಂದೇ ಮಟ್ಟವಾಗಿರುವುದರಿಂದ ವ್ಯಾಪಾರವು ನದಿಗಳ ಮತ್ತು ಅವುಗಳ ಕಾಲುವೆಗಳ ಮೂಲಕ ವಿಶೇಷವಾಗಿ ನಡೆಯುವುದು. ಪಶ್ಚಿಮ ಭಾಗದಲ್ಲಿ ಹಳ್ಳತಿಟ್ಟುಗಳು ಹೆಚ್ಚಾಗಿರುವುದರಿಂದಲೂ, ಅಲ್ಲಲ್ಲಿ ಪರ್ವತಗಳಿರುವುದರಿಂದಲೂ ವ್ಯಾಪಾರವು ರೈಲು ಮಾರ್ಗಗಳ ಮೂಲಕ ನಡೆಯುವುದು ಹೆಚ್ಚು.

(2) **ದಕ್ಷಿಣ ಭಾಗದ ಪರ್ವತ ಪ್ರದೇಶಗಳು.**—ಇವು ಪೋರ್ಚುಗಲ್ ರಾಜ್ಯದಿಂದ ಕಪ್ಪುಸಮುದ್ರದವರೆಗೂ ಈ ಖಂಡದ ಮಧ್ಯ ಭಾಗದಲ್ಲಿ ವಿಸ್ತರಿಸಿಕೊಂಡಿರುವುದಲ್ಲದೆ, ದಕ್ಷಿಣಕ್ಕೆ ಐಬೀರಿಯಾ, ಇಟಲಿ, ಬಾಲ್ಕನ್ ಪರ್ಯಾಯದ್ವೀಪಗಳಾಗಿ ಚಾಚಿಕೊಂಡಿರುವುವು. ಪಶ್ಚಿಮದಿಂದ ಹೊರಟರೆ ಮೊದಲು ಪಿರನೀಸ್ ಪರ್ವತವು ಸಿಕ್ಕುವುದು. ಇದು ಬಹು ಕಡಿದಾಗಿರುವುದರಿಂದ ಇದನ್ನು ಹಾದುಹೋಗುವುದು ದುಸ್ಸಹವು. ಫ್ರಾನ್ಸ್‌ನಿಂದ ಸ್ಪೇನಿಗೆ ಹೋಗುವ ರೈಲುಮಾರ್ಗಗಳು ಇದರ ಪೂರ್ವ ಪಶ್ಚಿಮ ಕೊನೆಗಳಲ್ಲಿ ಇದನ್ನು ಸುತ್ತಿಕೊಂಡು ಹೋಗುವುವು. ಈ ಪರ್ವತಕ್ಕೆ ದಕ್ಷಿಣದಲ್ಲಿ ನಾಲ್ಕು ಪರ್ವತಗಳು ಪೂರ್ವ ಪಶ್ಚಿಮವಾಗಿ ಹಬ್ಬಿರುವುವು. ಐಬೀರಿಯಾ ಪರ್ಯಾಯದ್ವೀಪದ ಮಧ್ಯ ಭಾಗವೆಲ್ಲವೂ ಒಂದು ಪ್ರಸ್ಥಭೂಮಿಯಾಗಿದೆ.

ಪಿರನೀಸ್ ಪರ್ವತಗಳ ಪೂರ್ವಕ್ಕೆ ಆಲ್ಪಸ್ ಪರ್ವತಗಳು ಹಬ್ಬಿರುವುವು. ಇವುಗಳ ಭಾಗಗಳು ಫ್ರಾನ್ಸ್, ಸ್ವಿಟ್ಜರ್ಲೆಂಡ್, ಇಟಲಿ, ಜರ್ಮನಿ, ಆಸ್ಟ್ರಿಯ ಈ ಐದು ದೇಶಗಳಲ್ಲಿಯೂ ಇರುವುವು. ಇವುಗಳಲ್ಲಿ ಅತ್ಯಂತ ಎತ್ತರವಾದ ಶಿಖರವು ಫ್ರಾನ್ಸ್‌ನಲ್ಲಿರುವ ಮೌಂಟ್‌ಬ್ಲಾಂಕ್ ಎಂಬುದು. ಇದು ಸುಮಾರು 16,000 ಅಡಿ ಎತ್ತರವಿರುವುದು. ಈ ಪರ್ವತಗಳೇ ಯುರೋಪಿನಲ್ಲೆಲ್ಲಾ ಅತ್ಯಂತ ವಿಸ್ತಾರವಾದ ಮತ್ತು ಎತ್ತರವಾದ ಪರ್ವತಗಳಾಗಿವೆ. ಇವು ಹಿಮಾಲಯ ಪರ್ವತಗಳಿಗಿಂತ ಎತ್ತರದಲ್ಲಿ ಕಡಿಮೆಯಾಗಿದ್ದರೂ, ಇವುಗಳ ಮೇಲ್ಭಾಗದಲ್ಲಿ ಯಾವಾಗಲೂ ಹಿಮವು ಕವಿದುಕೊಂಡಿರುವುದು. ಹಿಮಾಲಯ ಪರ್ವತಗಳಲ್ಲಿ 16,000 ಅಡಿಗಳ ಎತ್ತರದ ಮೇಲೆಯೂ, ಈ ಪರ್ವತಗಳ ಮೇಲೆ 8,000 ಅಡಿಗಳ ಎತ್ತರದ ಮೇಲೆಯೂ ಎಲ್ಲಾ ಋತುಗಳಲ್ಲಿಯೂ ಹಿಮವು ಕರಗದೆ ತುಂಬಿರುವುದು. ಈ ವ್ಯತ್ಯಾಸಕ್ಕೆ ಈ ಎರಡು ಪರ್ವತಗಳ ಅಕ್ಷಾಂಶದಲ್ಲಿನ ಭೇದವೇ ಮುಖ್ಯ ಕಾರಣವು. ಈ ಪರ್ವತಗಳಲ್ಲಿಯೂ ಅನೇಕ ಹಿಮಪ್ರವಾಹಗಳು ಅಥವಾ ನೀರ್ಗಲ್ಲಿನ ಪ್ರವಾಹಗಳು ಇರುವುವು. ಕೆಲವು ವೇಳೆ ಗುಡ್ಡಗಳಂತಹ ದೊಡ್ಡ ಹಿಮದ ಗಡ್ಡೆಗಳು ತಪ್ಪಲುಗಳಲ್ಲಿ ಉರುಳಿಕೊಂಡು ಕೆಳಕ್ಕೆ ಬಿದ್ದು ಪ್ರಾಣನಷ್ಟವನ್ನು ಉಂಟುಮಾಡುವುವು. ಈ ಪರ್ವತಗಳ ಮೇಲಿನ ಹಿಮರಾಶಿಗಳಿಂದ ಅನೇಕ ನದಿಗಳು ಹುಟ್ಟಿ ಎಲ್ಲಾ ಕಡೆಗಳಿಗೂ ಹರಿಯುವುವು. ಇವುಗಳಲ್ಲಿ ರೈನ್, ರೋನ್, ಡ್ಯಾನ್ಯೂಬಿನ ಉಪನದಿಯಾದ ಇನ್, ಪೋವಿನ ಉಪನದಿಯಾದ ಟಿಕಿನೊ ಇವು ಮುಖ್ಯವಾದುವು. ಈ ಪರ್ವತಗಳಲ್ಲಿ ಅನೇಕ ದೊಡ್ಡ ರಂಧ್ರಗಳನ್ನು ಕೊರೆದು ರೈಲುಗಾಡಿಗಳು ಹೋಗಿಬರಲು ಸುರಂಗಮಾರ್ಗಗಳನ್ನು ಮಾಡಿರುವರು. ಪೂನಾ ಪಟ್ಟಣದಿಂದ ಬೊಂಬಾಯಿಗೆ ನೀವು ಪ್ರಯಾಣಮಾಡಿದ್ದರೆ ಇಂತಹ ಚಿಕ್ಕ ಮಾರ್ಗಗಳನ್ನು ನೀವು ನೋಡಿರುವಿರಿ. ಲಂಡನ್‌ನಿಂದ ಇಂಡಿಯಾಕ್ಕೆ ಜಾಗ್ರತೆಯಾಗಿ ಬರಲು ಉಪಯೋಗಿ

ಸುವ ಮಾರ್ಗದಲ್ಲಿ ಒಂದು ಭಾಗವಾದ ಕೆಲೆಯಿಂದ ಬ್ರಿಂಡಿಸಿಗೆ ಹೋಗುವ ರೈಲುಮಾರ್ಗವು ಮಾಂಟ್ ಸೆನಿಸ್ ಎಂಬ $7\frac{1}{2}$ ಮೈಲಿ ಉದ್ದವಾದ ಸುರಂಗ ಮಾರ್ಗವನ್ನು ಹಾದುಹೋಗುವುದು. ಮಾಂಟ್ ಸಿಂಪ್ಲನ್ ಸುರಂಗಮಾರ್ಗವು $12\frac{1}{2}$ ಮೈಲಿಗಳಿರುವುದು. ಇದೇ ಪ್ರಪಂಚದಲ್ಲೆಲ್ಲಾ ಅತ್ಯಂತ ಉದ್ದವಾದ ಸುರಂಗಮಾರ್ಗವು.

ಇಟಲಿಯ ಮಧ್ಯ ಭಾಗದಲ್ಲಿ ಹಬ್ಬಿರುವ ಅಪಿನೈನ್ ಪರ್ವತಗಳು ಈ ಪರ್ವತಗಳ ಶಾಖೆಗಳಾಗಿವೆ.

ಈ ಆಲ್ಪ್ಸ್ ಪರ್ವತಗಳ ಪೂರ್ವಕ್ಕೆ ಕಾರ್ಪೇಥಿಯನ್ ಪರ್ವತಗಳಿರುವುವು. ಇವು ಅರ್ಧಚಂದ್ರಾಕಾರವಾಗಿ ಹಂಗೇರಿ ದೇಶಕ್ಕೆ ಮೇರೆಯಾಗಿರುವುವು. ಉತ್ತರದಿಂದ ಶತ್ರುಗಳು ಇಲ್ಲಿಗೆ ಬರದಂತೆ ಇವು ಅಡ್ಡಿಯಾಗಿರುವುವಲ್ಲದೆ, ಉತ್ತರ ದಿಕ್ಕಿನಿಂದ ಮಹತ್ತಾದ ಮೈದಾನದ ಮೇಲೆ ಬೀಸಿಕೊಂಡು ಬರುವ ಶೀತಮಾರುತಗಳನ್ನೂ ತಡೆದು ಹಂಗೇರಿ ದೇಶದಲ್ಲಿ ಹೆಚ್ಚು ಚಳಿಯಾಗದಂತೆ ಕಾಪಾಡುತ್ತವೆ. ಈ ಪರ್ವತಗಳ ಎರಡು ಕೊನೆಗಳೂ ಡಾನ್ಯೂಬ್ ನದಿಯನ್ನು ಸಮೀಪಿಸುವುವು. ಈ ನದಿಯ ದಕ್ಷಿಣಕ್ಕೆ ಬಾಲ್ಕನ್ ಪರ್ವತಗಳಿರುವುವು. ಇವು ಶಾಖೋಪಶಾಖೆಗಳಾಗಿ ಒಡೆದು ಬಾಲ್ಕನ್ ಪರ್ಯಾಯದ್ವೀಪವೆಲ್ಲವನ್ನೂ ಆವರಿಸಿಕೊಂಡಿರುವುವು. ಆದುದರಿಂದ ಈ ಪರ್ಯಾಯದ್ವೀಪದ ಹೆಚ್ಚು ಭಾಗವು ಪ್ರಸ್ಥಭೂಮಿಯಾಗಿದೆ.

(3) **ಸ್ಕಾಂಡಿನೇವಿಯ ಪ್ರಸ್ಥಭೂಮಿ.**—ಈ ಪ್ರಸ್ಥಭೂಮಿಯು ಪರ್ವತಗಳಿಂದ ತುಂಬಿದೆ. ಇದರ ಉತ್ತರ ಭಾಗದ ಪರ್ವತಗಳಿಗಿಂತ ದಕ್ಷಿಣ ಭಾಗದ ಪರ್ವತಗಳು ಎತ್ತರವಾಗಿಯೂ, ವಿಸ್ತಾರವಾಗಿಯೂ ಇರುವುವು. ಈ ಪರ್ಯಾಯದ್ವೀಪದ ಪಶ್ಚಿಮತೀರದವರೆಗೂ ಪರ್ವತಗಳು ಹರಡಿರುವುದರಿಂದ, ಆ ತೀರದಲ್ಲಿ ಬಹು ಎತ್ತರವಾದ ದಡಗಳುಳ್ಳವುಗಳಾಗಿ, ವಿಶೇಷ ಅಗಲವಿಲ್ಲದೆ ಭೂಮಿಯೊಳಕ್ಕೆ ಚಾಚಿಕೊಂಡು ಹೋಗಿರುವ ಅನೇಕ ಖಾರಿಗಳಿರುವುವು. ಇವುಗಳ ಮುಖಗಳಲ್ಲಿ ದ್ವೀಪಗಳಿರುವುದರಿಂದ ಇವುಗಳಲ್ಲಿ ದೊಡ್ಡ ಅಲೆಗಳಿಲ್ಲದೆ ನೀರು ಶಾಂತವಾಗಿರುವುದು. ಇಂತಹ ಖಾರಿಗಳನ್ನು ಫೀಯರ್ಡ್‌ಗಳೆಂದು ಕರೆಯುವರು. ಇಂತಹ ಫೀಯರ್ಡುಗಳು ಸ್ಕಾಟ್ಲೆಂಡಿನ ಪಶ್ಚಿಮ ತೀರದಲ್ಲಿಯೂ ಇರುವುವು. ಇವು ಮೀನು ಹಿಡಿಯುವುದಕ್ಕೂ, ಹಡಗುಗಳು ತಂಗುವುದಕ್ಕೂ ಅನುಕೂಲವಾಗಿರುವುವು. ಈ ಪರ್ವತಗಳು ತಮ್ಮ ಪಶ್ಚಿಮ ಮುಖದಲ್ಲಿ ಕಡಿದಾಗಿರುವುದರಿಂದ, ಮೋಡಗಳಿಂದ ಕೂಡಿ ಅಟ್ಲಾಂಟಿಕ್ ಸಾಗರದಿಂದ ಬೀಸುವ ಗಾಳಿಗಳನ್ನು ತಡೆದು ವಿಶೇಷವಾಗಿ ಮಳೆಯನ್ನು ಸುರಿಸುತ್ತವೆ. ಈ ಪರ್ವತಗಳು ತಮ್ಮ ಪೂರ್ವ ಮುಖದಲ್ಲಿ ಕ್ರಮವಾಗಿ ತಗ್ಗುವುದರಿಂದ ಅಲ್ಲಿ ಅನೇಕ ಕಾಡುಗಳಿರುವುವು.

**ಏಷ್ಯಾ ಖಂಡದ ಲಕ್ಷಣಗಳೊಡನೆ ಹೋಲಿಕೆ.**—(1) ಎರಡು ಖಂಡಗಳಲ್ಲಿಯೂ ದೊಡ್ಡ ಮೈದಾನಗಳೂ, ಪರ್ವತಪ್ರದೇಶಗಳೂ, ಉತ್ತರ ದಕ್ಷಿಣ ಅಮೆರಿಕಾ ಖಂಡಗಳಲ್ಲಿರುವಂತೆ ದಕ್ಷಿಣೋತ್ತರವಾಗಿ ಹಬ್ಬಿರದೆ, ಪೂರ್ವ ಪಶ್ಚಿಮವಾಗಿ ಹಬ್ಬಿರುವುವು. ಈ ಎರಡು ಖಂಡಗಳ ದೊಡ್ಡ ಮೈದಾನಗಳೂ ಒಟ್ಟುಗೂಡಿ ಬಿಸ್ಕೇಕೊಲ್ಲಿಯಿಂದ ಬೆಹರಿಂಗ್ ಸಮುದ್ರದವರೆಗೂ ಹಬ್ಬಿರುವುವು. ಯುರೋಪಿನ ಮಧ್ಯ ಭಾಗದ ಪರ್ವತಗಳಿಂದ ಹೊರಟು ಕಾಕಸಸ್, ಟೌರಸ್, ಹಿಂದೂಕುಷ್, ಹಿಮಾಲಯ, ಕ್ವೆನ್‌ಲುನ್ ಪರ್ವತಗಳು ಒಂದಕ್ಕೊಂದು ಸೇರಿದಂತೆ ಪೂರ್ವಕ್ಕೆ ಹಬ್ಬಿರುವುವು.

(2) ಏಷ್ಯಾ ಖಂಡದ ಪರ್ವತಗಳು ಯುರೋಪ್ ಖಂಡದ ಪರ್ವತಗಳಿಗಿಂತ ಬಹಳ ಎತ್ತರವಾಗಿರುವುವು. ಎವರೆಸ್ಟ್ ಶಿಖರವು ಎತ್ತರದಲ್ಲಿ ಮೌಂಟ್ ಬ್ಲಾಂಕ್ ಶಿಖರಕ್ಕೆ ಸುಮಾರು ಎರಡರಷ್ಟಿರುವುದು.

(3) ಎರಡು ಖಂಡಗಳಲ್ಲಿಯೂ ಮುಖ್ಯವಾದ ಪರ್ಯಾಯದ್ವೀಪಗಳು ದಕ್ಷಿಣಾಭಿಮುಖವಾಗಿ ವಿಸ್ತರಿಸಿರುವುವು. ಅರೇಬಿಯ ಮತ್ತು ಸ್ಪೈಬೀರಿಯ, ಇಂಡಿಯ ಮತ್ತು ಇಟಲಿ, ಹಿಂದೂ ಚೀಣ, ಬಾಲ್ಕನ್ ಪರ್ಯಾಯದ್ವೀಪ, ಸ್ಕಾಂಡಿನೇವಿಯ ಮತ್ತು ಕಾಂಚಾಟ್ಕ ಇವುಗಳ ಸನ್ನಿವೇಶವನ್ನು ಹೋಲಿಸಿ ನೋಡಿ.

(4) ಆಲ್ಪ್ಸ್ ಪರ್ವತಗಳಲ್ಲಿ ಒಂದೇ ಪ್ರದೇಶದಲ್ಲಿ ರೈನ್, ರೋನ್, ಡಾನ್ಯೂಬ್ ನದಿಗಳು ಹುಟ್ಟುವಂತೆ ಹಿಮಾಲಯ ಪರ್ವತಗಳಲ್ಲಿ ಒಂದೇ ಪ್ರದೇಶದಲ್ಲಿ ಗಂಗಾ, ಸಿಂಧು, ಬ್ರಹ್ಮಪುತ್ರ ನದಿಗಳು ಹುಟ್ಟುವುವು.

**ಅಗ್ನಿಪರ್ವತಗಳು.**—ಇವು ಐಸ್ಲೆಂಡಿನಲ್ಲಿಯೂ, ಮೆಡಿಟರೇನಿಯನ್ ಸಮುದ್ರದ ದ್ವೀಪಗಳಲ್ಲಿಯೂ ಇರುವುವು. ಇವುಗಳಲ್ಲಿ ಅನೇಕವು ಉಸಿರು ಉಡುಗಿದುವಾಗಿವೆ; ಈಗಲೂ ಸಜೀವವಾಗಿರುವ ಅಗ್ನಿಪರ್ವತಗಳು ಐಸ್ಲೆಂಡಿನಲ್ಲಿಯೂ, ಇಟಲಿಯಲ್ಲಿಯೂ, ಇಟಲಿಯ ಸಮೀಪದ ದ್ವೀಪಗಳಲ್ಲಿಯೂ ಇರುವುವು.

(1) ಐಸ್ಲೆಂಡಿನಲ್ಲಿ 20 ಅಗ್ನಿಪರ್ವತಗಳು ಇರುವುವು. ಇವುಗಳಲ್ಲಿ ಹೆಕ್ಲ ಎಂಬುದು ಅತ್ಯಂತ ಎತ್ತರವಾದುದು. ಇದು ಸುಮಾರು 800 ಮೈಲಿಗಳ ದೂರದವರೆಗೂ ಬೂದಿಯನ್ನು ಎರಚುವುದು. ಈ ಪರ್ವತಗಳ ಬಳಿ ಅನೇಕ ಕಡೆಗಳಲ್ಲಿ ಉಷ್ಣೋದಕದ ಬುಗ್ಗೆಗಳಿರುವುವು. ಇವುಗಳಿಂದ ಆವಿಯೂ ಕುದಿಯುವ ನೀರೂ ಉಕ್ಕಿ ಬಹಳ ಮೇಲಕ್ಕೆ ಹಾರುವುವು. ಇವುಗಳನ್ನು ಐಸ್ಲೆಂಡಿನಲ್ಲಿ ಗೇಸರ್ಸ್ ಎಂದು ಕರೆಯುವರು. (ಇಂತಹ ಬುಗ್ಗೆಗಳು ನ್ಯೂಜಿಲೆಂಡಿನಲ್ಲಿಯೂ ಅಮೆರಿಕದ ಸಂಯುಕ್ತ ಸಂಸ್ಥಾನಗಳ ಪಶ್ಚಿಮ ಭಾಗದಲ್ಲಿಯೂ ಕೂಡ ಹೇರಳವಾಗಿರುವುವು.)

(2) ಸಿಸಿಲಿಯಲ್ಲಿರುವ ಎಟ್ನ ಎಂಬ ಅಗ್ನಿಪರ್ವತವು ಯೂರೋಪಿನಲ್ಲಿ ಅತ್ಯಂತ ಎತ್ತರವಾದುದು (10,870 ಅಡಿ). ಇದರ ತುದಿಯು ಸಮುದ್ರದ ಕಡೆಯಿಂದ 150 ಮೈಲಿಗಳ ದೂರದವರೆಗೂ ಕಾಣುವುದು.

(3) ಇಟಲಿಯಲ್ಲಿ ನೇಪಲ್ಸ್ ಬಾರಿಯ ಬಳಿಯಿರುವ ವಿಸುವಿಯಸ್ ಎಂಬ ಅಗ್ನಿಪರ್ವತವು ಮಾತ್ರ ಯೂರೋಪಿನ ಖಂಡಭಾಗದಲ್ಲಿರುವುದು. ಉಳಿದ ಅಗ್ನಿಪರ್ವತಗಳೆಲ್ಲವೂ ದ್ವೀಪಗಳಲ್ಲಿರುವುವು. ಈ ಅಗ್ನಿಪರ್ವತವು ಕೆಲವು ಸೆಕೆಂಡುಗಳಿಗೊಂದಾವೃತ್ತಿ ಆವಿಯನ್ನೂ ಬೂದಿಯನ್ನೂ ಉಗುಳುವುದು. ಇದರಿಂದ ಆಗಾಗ ಹೊರಡುವ ಶಿಲಾರಸವು ಕೆಲವು ವೇಳೆ ರಂಧ್ರದ ಬಾಯಿಯಲ್ಲಿಯೇ ಬೀಳುವುದು. ಕೆಲವು ವೇಳೆ ಹೊರಕ್ಕೆ ಹರಿಯುವುದು. ರಾತ್ರಿಕಾಲದಲ್ಲಿ ಈ ಶಿಲಾರಸದ ಪ್ರಭೆಯಿಂದ ಮೋಡಗಳೆಲ್ಲವೂ ಕೆಂಪೇರಿರುವುವು. ಇದು ಒಂದೊಂದು ವೇಳೆ ಕಲ್ಲುಗಳನ್ನೂ ದೂರಕ್ಕೆ ಎಸೆಯುವುದುಂಟು.

(4) ಎಟ್ನ ಮತ್ತು ವಿಸುವಿಯಸ್‌ಗಳಿಗೆ ಮಧ್ಯ ದೂರದಲ್ಲಿ ಲಿಪಾರಿ ದ್ವೀಪಗಳಲ್ಲಿ ಸ್ಟ್ರಾಂಬೊಲಿ ಎಂಬ ಅಗ್ನಿಪರ್ವತವಿರುವುದು. ಇದು ಸಾಮಾನ್ಯವಾಗಿ 5 ನಿಮಿಷಗಳಿಗೊಂದಾವೃತ್ತಿ ಆವಿಯನ್ನು ಮಾತ್ರ ಕಕ್ಕುವುದು. ಅಪೂರ್ವವಾಗಿ ಕಲ್ಲುಗಳನ್ನು ಹೊರಕ್ಕೆ ಎಸೆಯುವುದೂ ಉಂಟು. ಬಾಯಿಯಲ್ಲಿ ಕಾದ ಶಿಲಾರಸವಿರುವುದರಿಂದ ವಿಸುವಿಯಸ್‌ನಂತೆಯೇ ಮೋಡಗಳಿಗೆ ಕಾಂತಿಯನ್ನುಂಟುಮಾಡುವುದು.

(5) ಫ್ರಾನ್ಸ್, ಜರ್ಮನಿಗಳಲ್ಲಿ ಕೆಲವು ಕಡೆ ಬಲು ಹಿಂದಿನ ಕಾಲದಲ್ಲಿ ಜೀವಿತವಾಗಿದ್ದ ಅಗ್ನಿಪರ್ವತಗಳಿರುವುವು. ಈಗ ಅವುಗಳ ಬಂಡೆಗಳು ಪುಡಿಪುಡಿಯಾಗಿ ಜೇಡಿಯಮಣ್ಣಾಗಿರುವುದರಿಂದ ಆ ಪ್ರದೇಶಗಳ ಕ್ಷೇತ್ರಗಳು ಬಹು ಫಲವತ್ತಾಗಿರುವುವು.

**ನದಿಗಳು, ಜಲವಿಭಾಗಸ್ಥಾನಗಳು ಮತ್ತು ಜಲಾನಯನಭೂಮಿಗಳು.**—ಯೂರಲ್ ಪರ್ವತಗಳು, ವಾಲ್ಡೈ ಬೆಟ್ಟಗಳು, ಆಲ್ಪ್ಸ್ ಪರ್ವತಗಳು ಪಿರನೀಸ್ ಪರ್ವತಗಳು ಇವುಗಳನ್ನು ಸೇರಿಸುವಂತೆ ಒಂದು ಗೆರೆಯನ್ನು ಎಳೆದರೆ ಆ ಗೆರೆಯ ಬಳಿಯ ಪ್ರದೇಶವು ಈ ಖಂಡದ ಮುಖ್ಯವಾದ ಜಲವಿಭಾಗಸ್ಥಾನವಾಗಿರುವುದು. ಈ ಪ್ರದೇಶವು ಸುಮಾರಾಗಿ ಈಶಾನ್ಯದಿಂದ ನೈರುತ್ಯಕ್ಕೆ ಲಂಬಿಸಿರುವುದು. ಈ ಜಲವಿಭಾಗಸ್ಥಾನದ ವಾಯುವ್ಯದ ಕಡೆಯ ಇಳಿಜಾರು ಭೂಮಿಯು ಆಗ್ನೇಯದ ಕಡೆಯ ಇಳಿಜಾರು ಭೂಮಿಗಿಂತ ವಿಸ್ತಾರದಲ್ಲಿ ಕಡಿಮೆಯಾಗಿರುವುದು. ಆದುದರಿಂದ ಉತ್ತರದ ಕಡೆಯ ಸಮುದ್ರಗಳಿಗೆ ಹರಿಯುವ ನದಿಗಳಿಗಿಂತ ದಕ್ಷಿಣದ ಕಡೆಯ ಸಮುದ್ರಗಳಿಗೆ ಹರಿಯುವ ನದಿಗಳು ಉದ್ದವಾಗಿವೆ.

ಈ ಜಲವಿಭಾಗಸ್ಥಾನದಲ್ಲಿ ವಾಲ್ಡೈ ಬೆಟ್ಟಗಳೂ ಆಲ್ಪ್ಸ್ ಪರ್ವತಗಳ ಸೆಂಟ್‌ಗಾಟರ್ಡ್ ಪ್ರದೇಶವೂ ಮುಖ್ಯವಾಗಿವೆ. ಈ ಎರಡು ಪ್ರದೇಶಗಳಲ್ಲಿ ಅನೇಕ ನದಿಗಳು ಹುಟ್ಟುವುವು. ಆಲ್ಪ್ಸ್ ಬೆಟ್ಟಗಳು ಬಹಳ ಎತ್ತರವಾಗಿರುವುದರಿಂದಲೂ, ಅಲ್ಲಿ ಮಳೆಯು ವಿಶೇಷವಾಗಿರುವುದರಿಂದಲೂ, ಸಮುದ್ರಗಳು ಎತ್ತರದಲ್ಲಿ ವಿನಾ ಉಳಿದ ಕಡೆಗಳಲ್ಲಿ ಸಮೀಪವಾಗಿರುವುದರಿಂದಲೂ ಅಲ್ಲಿಂದ ಹರಿಯುವ ನದಿಗಳು (ಡಾನ್ಯೂಬ್ ಒಂದು ವಿನಾ) ಚಿಕ್ಕವಾಗಿರುವುವು. ಆದರೆ ವಿಶೇಷವಾಗಿ ನೀರನ್ನೊಳಗೊಂಡು ಜೋರಾಗಿ ಹರಿಯುವುವು. ವಾಲ್ಡೈ ಬೆಟ್ಟಗಳು ತಗ್ಗಾಗಿವೆ. ಸಮುದ್ರಗಳು ಉತ್ತರ ಭಾಗದಲ್ಲಿ ವಿನಾ ಇತರ ಕಡೆಗಳಲ್ಲಿ ದೂರವಾಗಿವೆ. ಆ ಪ್ರದೇಶದಲ್ಲಿ ಮಳೆಯಾಗುವುದು ಕಡಿಮೆ. ಆದುದರಿಂದ ಅಲ್ಲಿಂದ ಹರಿಯುವ ನದಿಗಳಲ್ಲಿ ನೀರಿನ ಪರಿಮಾಣವು ಕಡಮೆಯಾದರೂ ಅವು ಬಹು ಉದ್ದವಾಗಿಯೂ ನಿಧಾನವಾಗಿಯೂ ಹರಿಯುವುವು.

**ಮುಖ್ಯವಾದ ನದಿಗಳು.**—ಈ ಖಂಡದ ನದಿಗಳಲ್ಲಿ ಬಲು ಉದ್ದವಾದುದು ವೋಲ್ಗ (2,400 ಮೈಲಿ). ಇದು ನಿಧಾನವಾಗಿಯೂ ವಿಸ್ತಾರವಾಗಿಯೂ ಹರಿಯುವುದು. ಇದು ತನ್ನ ನದೀಮುಖಜಭೂಮಿಯಲ್ಲಿ 65 ಉಪಮುಖಗಳಾಗಿ ಒಡೆಯುವುದಕ್ಕೆ ಮೊದಲು ಒಂದು ಮೈಲಿ ಅಗಲವಿರುವುದು. ಆದರೂ ಇದು ವ್ಯಾಪಾರಕ್ಕೆ ಹೆಚ್ಚು ಸಹಕಾರಿಯಾಗಿಲ್ಲ. ಚಳಿಗಾಲದಲ್ಲಿ ಇಲ್ಲಿನ ಚಳಿಯಿಂದಲೂ, ಉತ್ತರದ ಶೀತಮಾರುತಗಳಿಂದಲೂ ನೀರು ಗಡ್ಡೆಯಾಗಿರುವುದು. ಇದಲ್ಲದೆ ಇದರ ಪಾತ್ರದಲ್ಲಿ ಅನೇಕವಾಗಿ ಮರುಳುದಿಣ್ಣೆಗಳಿರುವುವು. ಆದುದರಿಂದ ವ್ಯಾಪಾರಕ್ಕೆ ಅತ್ಯಂತ ಪ್ರಾಮುಖ್ಯತೆಯುಳ್ಳ ನದಿಗಳು ವೋಲ್ಗಾ ನದಿಗಿಂತ ಚಿಕ್ಕದಾಗಿರುವ ಸೇನ್, ರೈನ್, ಎಲ್ಬ್, ಡಾನ್ಯೂಬ್ ಈ ನಾಲ್ಕಾಗಿವೆ.

**ಸೇನ್.**—ಈ ನದಿಯು 430 ಮೈಲಿಗಳು ಮಾತ್ರ ಉದ್ದವಾಗಿದ್ದರೂ, ತಗ್ಗಾದ ಲಾಂಗ್ರೆ ಪ್ರಸ್ಥಭೂಮಿಯಲ್ಲಿ ಹುಟ್ಟಿ ಮೈದಾನದಮೇಲೆ ನಿಧಾನವಾಗಿ ಡೊಂಕು ಡೊಂಕಾಗಿ ಹರಿಯುವುದರಿಂದಲೂ, ಪ್ರವಾಹವು ಎಲ್ಲಾ ಕಾಲಗಳಲ್ಲಿಯೂ ಹೆಚ್ಚಾಗಿರುವುದರಿಂದಲೂ, ಮುಖದಲ್ಲಿ ಆಳವಾದ ಅಳಿವೆ ಇರುವುದರಿಂದಲೂ ವ್ಯಾಪಾರಕ್ಕೆ ಬಹು ಪ್ರಯೋಜನಕಾರಿಯಾಗಿದೆ. ಹನ್ನೆರಡು ಕಾಲುವೆಗಳನ್ನು ಇದರಿಂದ ತೆಗೆದು ಇತರ ನದಿಗಳೊಡನೆ ಇದನ್ನು ಸೇರಿಸಿರುವರು. ಆದುದರಿಂದ ಈ ನದಿಯ ಮುಖದಲ್ಲಿರುವ **ರೂಯೆನ್** ಪಟ್ಟಣವು ವ್ಯಾಪಾರಕ್ಕೆ ಬಹಳ ಉತ್ತಮವಾದ ಸನ್ನಿವೇಶದಲ್ಲಿದೆ.

**ರೈನ್.**—ಈ ನದಿಯು ಸ್ವಿಟ್ಜರ್ಲೆಂಡ್ ದೇಶದಲ್ಲಿ ಹುಟ್ಟಿ, ಜರ್ಮನಿ, ಹಾಲೆಂಡುಗಳ ಮಾರ್ಗವಾಗಿ ಹರಿದು ನಾರ್ತ್‌ಸೀಯನ್ನು ಸೇರುವುದು. ಇದು ನಿಧಾನವಾಗಿಯೂ, ಎಲ್ಲಾ ಕಾಲಗಳಲ್ಲಿಯೂ ಆಳವಾಗಿಯೂ

ಹರಿಯುವುದು. ಆದುದರಿಂದ ವ್ಯಾಪಾರಕ್ಕೆ ವಿಶೇಷ ಸಹಾಯಕವಾಗಿದೆ. ವ್ಯಾಪಾರಕ್ಕೆ ಪ್ರಸಿದ್ಧವಾದ ಪಟ್ಟಣಗಳು ಈ ನದಿಯ ದಡದಲ್ಲಿರುವಷ್ಟು ಪ್ರಪಂಚದ ಇನ್ಯಾವ ನದಿಯ ದಡದಲ್ಲಿಯೂ ಇಲ್ಲವೆಂದು ಹೇಳಬಹುದು. ಇವುಗಳಲ್ಲಿ ವಾಟರ್‌ಡಾಂ, ಈಸೆನ್, ಕಲೋನ್, ಕೋಬ್ಲೆನ್‌ಟ್ಸ್, ಬಾಸಲ್ ಎಂಬುವು ಮುಖ್ಯವಾದುವು.

**ಎಲ್ಬ್.**—ಈ ನದಿಯು ಜರ್ಮನಿಯ ವ್ಯಾಪಾರಕ್ಕೆ ಬಹು ಸಹಾಯಕವಾಗಿದೆ. ಇದರ ಮುಖದಲ್ಲಿ ಹಾಂಬರ್‌ಗ್ ಎಂಬ ದೊಡ್ಡ ರೇವುಪಟ್ಟಣವಿರುವುದು.

**ಡಾನ್ಯೂಬ್.**—ಈ ನದಿಯು ಜರ್ಮನಿಯಲ್ಲಿ ಹುಟ್ಟಿ ಆಸ್ಟ್ರಿಯ ಹಂಗೇರಿಯಲ್ಲಿ ಹರಿದು ಕಪ್ಪುಸಮುದ್ರವನ್ನು ಸೇರುವುದು. ಇದು ವೋಲ್ಗ ನದಿಗೆ ಉದ್ದದಲ್ಲಿ ಎರಡನೆಯದಾಗಿದೆ (2,000 ಮೈಲಿ). ಈ ಖಂಡದ ವಾಯುವ್ಯ ಭಾಗದ ನದಿಗಳಲ್ಲಿ ರೈನ್ ನದಿಯು ಹೇಗೆ ಮುಖ್ಯವಾದುದಾಗಿದೆಯೋ ಹಾಗೆಯೇ ಆಗ್ನೇಯ ಭಾಗದಲ್ಲಿ ಇದು ಮುಖ್ಯವಾಗಿರುವುದು. ಇವೆರಡೂ ಫಲವತ್ತಾದ ಪ್ರದೇಶಗಳಲ್ಲಿ ಹರಿಯುವುವು. ಮುಖದಲ್ಲಿ ನದೀಮುಖಜಭೂಮಿಗಳಿದ್ದರೂ ಹಡಗುಗಳು ಹೋಗಿಬರಲು ಅನುಕೂಲವಾದ ಶಾಖೆಗಳಿರುವುವು. ಆದರೆ ಸಮುದ್ರದ ಉಬ್ಬರವಿಳಿತಗಳಿಂದ ರೈನ್ ನದಿಯಿಂದ ತರಲ್ಪಟ್ಟ ಮಣ್ಣು ದೂರಕ್ಕೆ ಒಯ್ಯಲ್ಪಟ್ಟು ಅದರ ಮುಖದ ಶಾಖೆಗಳು ಆಳವಾಗಿರುವುವು. ಕಪ್ಪುಸಮುದ್ರದಲ್ಲಿಯಾದರೋ ಉಬ್ಬರವಿಳಿತಗಳು ಬಹು ಕಡಿಮೆಯಾದುದರಿಂದ ಡಾನ್ಯೂಬ್ ನದಿಯ ಮುಖದ ಶಾಖೆಗಳಲ್ಲಿ ವಿಶೇಷ ಖರ್ಚಿನಿಂದ ಈ ಮಣ್ಣನ್ನು ಜನರೇ ಸಾಗಿಸಬೇಕಾಗಿದೆ.

**ಈ ಖಂಡದ ನದಿಗಳ ಸಾಮಾನ್ಯವಾದ ಅನುಕೂಲ್ಯ ಪ್ರಾತಿಕೂಲ್ಯಗಳು.**—ಈ ಖಂಡದಲ್ಲಿ ಅಸಂಖ್ಯಾತವಾದ ನದಿಗಳು ನಾನಾ ದಿಕ್ಕಿಗೂ ಹರಿಯುವುವು. ಮುಖ್ಯವಾದ ನದಿಗಳಿಗೆ ಅನೇಕ ಉಪನದಿಗಳಿರುವುವು. (ಉದಾ:—ಡಾನ್ಯೂಬಿಗೆ 60 ಉಪನದಿಗಳಿರುವುವು). ಈ ಉಪನದಿಗಳು ನದಿಗಳು ಹರಿಯುವ ದಿಕ್ಕಿಗೇ ಹರಿಯದೆ ಅವುಗಳಿಗೆ ಸಮಕೋಣದಲ್ಲಿ ಹರಿದು ಬಂದುಸೇರುವುವು. ಈ ನದಿಗಳಲ್ಲಿ ನೀರು ಹೆಚ್ಚಾಗಿರುವುದು. ಅವು ಬಹಳಮಟ್ಟಿಗೆ ನಿಧಾನವಾಗಿ ಹರಿಯುವುವು. ಅವುಗಳ ಮುಖಗಳಲ್ಲಿ ಒಳ್ಳೆಯ ಬಂದರುಗಳಿರುವುವು. ಈ ಕಾರಣಗಳಿಂದ ಈ ಖಂಡದ ನದಿಗಳು ವ್ಯಾಪಾರಕ್ಕೆ ಬಹು ಸಹಾಯಕರವಾಗಿವೆ. ಈ ಖಂಡದಲ್ಲಿ ಉಷ್ಣವು ಕಡಿಮೆಯಾಗಿರುವುದರಿಂದಲೂ, ಮಳೆಯು ಸಾಕಾದಷ್ಟು ಬೀಳುವುದರಿಂದಲೂ ಈ ನದಿಗಳ ನೀರನ್ನು ಇಂಡಿಯ ಮೊದಲಾದ ಉಷ್ಣದೇಶಗಳಲ್ಲಿನಷ್ಟು ವ್ಯವಸಾಯಕ್ಕೆ ಉಪಯೋಗಿಸುವುದಿಲ್ಲ.

**ಸರೋವರಗಳು.**—ಈ ಖಂಡದಲ್ಲಿರುವ ಸರೋವರಗಳು ಮುಖ್ಯವಾಗಿ ಬಾಲ್ಟಿಕ್ ಸಮುದ್ರದ ಸುತ್ತುಮುತ್ತಿನ ಪ್ರದೇಶದಲ್ಲಿಯೂ, ಆಲ್ಪ್ಸ್ ಪರ್ವತ

ಪ್ರದೇಶದಲ್ಲಿಯೂ ಇರುವುವು. ಬಾಲ್ಟಿಕ್ ಸಮುದ್ರದ ಸಮೀಪದಲ್ಲಿರುವ ಸರೋವರಗಳಲ್ಲಿ ಲಡೋಗ, ಒನೀಗ, ವೆನರ್, ವೆಟರ್ ಎಂಬುವು ಮುಖ್ಯವಾದುವು. ಈ ಸರೋವರಗಳಿಂದ ನದಿಗಳು ಹರಿದು ಬಾಲ್ಟಿಕ್ ಸಮುದ್ರವನ್ನು ಸೇರುವುವು. ಲಡೋಗ (6,800 ಚದರ ಮೈಲಿ). ಈ ಖಂಡದಲ್ಲಿ ಇದು ಅತ್ಯಂತ ದೊಡ್ಡ ಸರೋವರವು.

ಆಲ್ಪ್ಸ್ ಪರ್ವತಗಳ ಪ್ರದೇಶದ ಪಶ್ಚಿಮ ಭಾಗದಲ್ಲಿರುವ ಸರೋವರಗಳಲ್ಲಿ ಮುಖ್ಯವಾದುವು ಜಿನೀವ, ಕಾನ್‌ಸ್ಟನ್ಸ್, ಲೂಸರ್ನ್, ಗಾರ್ಡ, ಮಾಗ್ಗಿಯೋರ್ ಎಂಬುವು.

ಈ ಎರಡು ಪ್ರದೇಶಗಳ ಸರೋವರಗಳ ಲಕ್ಷಣಗಳನ್ನು ಹೋಲಿಸಿ ನೋಡಿದರೆ, ಅವುಗಳಲ್ಲಿ ಸಂಪೂರ್ಣವಾದ ವ್ಯತ್ಯಾಸಗಳು ತೋರಿಬರುವುವು. ಇವು ಎರಡೂ ಬೇರೆ ಬೇರೆ ಎರಡು ಬಗೆಯ ಸರೋವರಗಳೆಂದು ಹೇಳಬಹುದು. ಈ ವ್ಯತ್ಯಾಸಗಳನ್ನು ಪಟ್ಟಿಯ ರೂಪದಲ್ಲಿ ಕೆಳಗೆ ಸೂಚಿಸಿದೆ :—

| ಬಾಲ್ಟಿಕ್ ಸರೋವರಗಳು | ಆಲ್ಪ್ಸ್ ಸರೋವರಗಳು |
|---|---|
| 1. ಎತ್ತರದಲ್ಲಿ ಬಹಳ ಕಡಿಮೆಯಾದ ಮೈದಾನದಲ್ಲಿವೆ. | 1. ಬಹು ಎತ್ತರವಾದ ಪರ್ವತಪ್ರದೇಶದಲ್ಲಿವೆ. |
| 2. ವಿಸ್ತಾರವು ಹೆಚ್ಚು. | 2. ವಿಸ್ತಾರವು ಕಡಿಮೆ. |
| 3. ಆಳವು ಕಡಿಮೆ. | 3. ಆಳವು ಹೆಚ್ಚು. |
| 4. ದಡಗಳು ತಗ್ಗಾಗಿಯೂ ಮರಳು ದಿಣ್ಣೆಗಳಿಂದ ಕೂಡಿದುವಾಗಿಯೂ ಇರುವುವು. | 4. ದಡಗಳು ಕಲ್ಲು ನೆಲವಾಗಿಯೂ, ಬಹು ಎತ್ತರವಾಗಿಯೂ, ಕಡಿದಾಗಿಯೂ ಇರುವುವು. |
| 5. ಸುತ್ತುಮುತ್ತಿನ ಪ್ರದೇಶಗಳು ಒಂದೇ ತೆರದ ಬೈಲುಗಳಾಗಿವೆ. | 5. ಸುತ್ತುಮುತ್ತಿನ ಪ್ರದೇಶಗಳು ಬಗೆಬಗೆಯ ಮರಗಿಡಗಳಿಂದ ಕೂಡಿ ನೋಡುವುದಕ್ಕೆ ಬಹು ರಮಣೀಯವಾಗಿರುವುವು. |

ಈ ಸರೋವರಗಳಿಂದ ಅನೇಕ ಪ್ರಯೋಜನಗಳುಂಟು. ಅನೇಕ ಸರೋವರಗಳಿಂದ ನದಿಗಳು ಹೊರಡುವುವು. ನೀವ ಲಡೋಗದಿಂದಲೂ, ರೈನ್ ಕಾನ್‌ಸ್ಟನ್ಸಿನಿಂದಲೂ, ರೋನ್ ಜಿನೀವದಿಂದಲೂ ಹೊರಡುವುವು. ಪ್ರವಾಹ ಕಾಲದಲ್ಲಿ ಹೆಚ್ಚು ನೀರು ಈ ಸರೋವರಗಳಲ್ಲಿ ತಡೆಯಲ್ಪಟ್ಟಿದ್ದು ನದಿಗಳಲ್ಲಿ ಪ್ರವಾಹವು ಕಡಿಮೆಯಾದಾಗ ಈ ನೀರು ಅವುಗಳಲ್ಲಿ ಹರಿದುಹೋಗುವುದು. ಇದರಿಂದ ನದಿಗಳಲ್ಲಿ ಪ್ರವಾಹವು ವಿಪರೀತ ವ್ಯತ್ಯಾಸವಾಗದೆ ಎಲ್ಲಾ ಕಾಲಗಳಲ್ಲಿಯೂ ಸಾಮಾನ್ಯವಾಗಿ ಒಂದೇ ಸಮನಾಗಿ ಇದ್ದು ವ್ಯಾಪಾರದ ಹಡಗುಗಳ ಸಂಚಾರಕ್ಕೆ ಅನುಕೂಲವಾಗಿರುವುದು.

ಆಲ್ಪ್ಸ್ ಸರೋವರಗಳು ನೀರನ್ನು ತಡೆದು ನದಿಗಳಿಗೆ ಬಿಡುವಾಗ್ಯೆ ಕಲ್ಲು ಮಣ್ಣುಗಳನ್ನು ತಡೆದು ತಿಳಿನೀರನ್ನು ಬಿಡುವುವು.

ಬಾಲ್ಟಿಕ್ ಸರೋವರಗಳ ಮೂಲಕ ಬಾಲ್ಟಿಕ್ ಸಮುದ್ರಕ್ಕೂ, ಕಪ್ಪು ಸಮುದ್ರಕ್ಕೂ ನದಿಗಳು ಹರಿಯುವುದರಿಂದ ಈ ಎರಡು ಸಮುದ್ರಗಳಿಗೂ ಜಲಮಾರ್ಗಗಳು ಏರ್ಪಟ್ಟಿರುವುವು.

**ವಾಯುಗುಣ ಮತ್ತು ಮಳೆ.**—ಈ ಖಂಡದ ವಾಯುಗುಣವನ್ನು ತಿಳಿಯಲು ಈ ಕೆಳಗಿನ ಆಧಾರಗಳನ್ನು ಯೋಚಿಸಿನೋಡಿ:—

(1) ಈ ಖಂಡದ ಮುಕ್ಕಾಲು ಭಾಗವು ಉತ್ತರ ಸಮಶೀತೋಷ್ಣ ವಲಯದ ಉತ್ತರ ಭಾಗದಲ್ಲಿರುವುದು. ಈ ಖಂಡದ ಅತ್ಯಂತ ದಕ್ಷಿಣದ ಭೂಶಿರಗಳೂ ಕೂಡ ಕರ್ಕಾಟಕ ಸಂಕ್ರಾಂತಿವೃತ್ತಕ್ಕೆ 12 ಡಿಗ್ರಿಗಳು ಉತ್ತರ ದಲ್ಲಿರುವುವು. ಈ ಖಂಡದ ಸ್ವಲ್ಪ ಭಾಗವು ಮಾತ್ರ ಶೀತವಲಯದಲ್ಲಿರುವುದು.

(2) ಆದರೆ ಈ ಖಂಡದಲ್ಲಿ ಅಕ್ಷಾಂಶಕ್ಕಿಂತ ಸಮುದ್ರ ಸಾಮೀಪ್ಯವು ವಾಯುಗುಣವನ್ನು ಹೆಚ್ಚಾಗಿ ಬದಲಾಯಿಸುವುದು. ಪಶ್ಚಿಮ ದಕ್ಷಿಣ ಭಾಗ ಗಳಲ್ಲಿ ಸಮುದ್ರಗಳು ನೆಲದೊಳಕ್ಕೆ ವಿಶೇಷವಾಗಿ ನುಗ್ಗಿರುವುವು. ಪೂರ್ವ ಭಾಗದಲ್ಲಿ ನೆಲವು ಬಹು ವಿಸ್ತಾರವಾಗಿಯೂ, ಅದಕ್ಕೆ ಪೂರ್ವದಲ್ಲಿ ಮತ್ತಷ್ಟು ವಿಸ್ತಾರವಾದ ಏಷ್ಯಾ ಖಂಡದ ನೆಲವುಳ್ಳುದಾಗಿಯೂ ಇರುವುದು. ಆದುದರಿಂದ ಪಶ್ಚಿಮ ದಕ್ಷಿಣ ಭಾಗಗಳ ವಾಯುಗುಣವು ಸಮುದ್ರದ ಗಾಳಿಯಿಂದ ಸಮ ಧಾತುವಾಗಿರುವುದು. ಪೂರ್ವ ಭಾಗದಲ್ಲಿಯಾದರೋ ಶೀತೋಷ್ಣಗಳ ವ್ಯತ್ಯಾಸವು ಹೆಚ್ಚಾಗಿರುವುದು.

(3) ಈ ಖಂಡದ ಪಶ್ಚಿಮದ ಅರ್ಧ ಭಾಗದಲ್ಲಿ ವರ್ಷಕ್ಕೆ 8 ತಿಂಗಳು ಗಾಳಿಯು ನೈಋುತ್ಯ ದಿಕ್ಕಿನಿಂದ ಬೀಸುವುದು. ಈ ಗಾಳಿಯು ಉಷ್ಣವಾದ ಅಕ್ಷಾಂಶಗಳಿಂದಲೂ, ಅಟ್ಲಾಂಟಿಕ್ ಸಾಗರದ ಮೇಲೆಯೂ ಬೀಸಿಕೊಂಡು ಬರುವುದರಿಂದ, ಅದರಲ್ಲಿ ಉಷ್ಣವೂ, ಜಲಾಂಶವೂ ಹೆಚ್ಚಾಗಿರುವುದು. ಆದುದ ರಿಂದ ಈ ಗಾಳಿಯು ಆ ಪ್ರದೇಶಗಳಲ್ಲಿ ಶೈತ್ಯವನ್ನು ಕಡಿಮೆಮಾಡಿ ಮಳೆಯನ್ನು ಸುರಿಸುವುದು. ಉತ್ತರ ಅಮೆರಿಕ ಖಂಡದಲ್ಲಿರುವಂತೆ ದಕ್ಷಿಣೋತ್ತರವಾಗಿ ಹಬ್ಬಿರುವ ಪರ್ವತಗಳು ಇಲ್ಲಿ ಇಲ್ಲದಿರುವುದರಿಂದ, ಮಳೆಯು ಸಮುದ್ರ ತೀರದಲ್ಲಲ್ಲದೆ ಒಳಗಿನ ಪ್ರದೇಶಗಳಲ್ಲೆಲ್ಲಾ ಯಥೇಚ್ಛವಾಗಿ ಬೀಳುವುದು. ಉಳಿದ ನಾಲ್ಕು ತಿಂಗಳು ಈಶಾನ್ಯ ದಿಕ್ಕಿನಿಂದ ಗಾಳಿಯು ಬೀಸುವುದು. ಶೀತವಾದ ಅಕ್ಷಾಂಶಗಳಿಂದಲೂ, ನೆಲದಮೇಲೆ ಬೀಸಿಕೊಂಡು ಬರುವುದ ರಿಂದಲೂ ಇದು ಈ ಖಂಡದ ಪೂರ್ವಾರ್ಧ ಭಾಗದಲ್ಲಿ ಚಳಿಯನ್ನು ಹೆಚ್ಚಿಸುತ್ತದೆ. ಮಳೆಯ ಮೋಡಗಳನ್ನು ತರುವುದಿಲ್ಲ.

(4) ಗಲ್ಫ್‌ಸ್ಟ್ರೀಂ ಎಂಬ ಉಷ್ಣೋದಕ ಪ್ರವಾಹವು ಈ ಖಂಡದ ಪಶ್ಚಿಮ ಭಾಗದಲ್ಲಿ ಈಶಾನ್ಯಾಭಿಮುಖವಾಗಿ ಹರಿಯುವುದರಿಂದ, ಅದರಮೇಲೆ ಗಾಳಿಯು ಬೀಸಿಕೊಂಡು ಬಂದು ಯೂರೋಪಿನ ಪಶ್ಚಿಮ ಭಾಗದಲ್ಲಿ ಚಳಿಗಾಲ ದಲ್ಲಿ ಚಳಿಯನ್ನು ಕಡಿಮೆಮಾಡುವುದು.

ಈ ವಿಷಯಗಳನ್ನು ಪರ್ಯಾಲೋಚಿಸಿ ನೋಡಿದರೆ, ಈ ಖಂಡದಲ್ಲಿ ಅಕ್ಷಾಂಶ ಕ್ಕಿಂತಲೂ ಸಮುದ್ರದ ಸಾಮೀಪ್ಯವೇ ವಾಯುಗುಣ ವ್ಯತ್ಯಾಸಗಳಿಗೆ ಮುಖ್ಯ ಕಾರಣವಾಗಿದೆಯೆಂಬುದು ತೋರಿಬರುವುದು. ಆದುದರಿಂದ ಇತರ ಖಂಡ ಗಳೊಡನೆ ಹೋಲಿಸಿ ನೋಡಿದರೆ ಈ ಖಂಡದಲ್ಲಿ ಶೀತೋಷ್ಣಗಳ ಪರಮಾವಧಿಯು ಕಡಿಮೆಯಾಗಿರುವುದು. ಈ ಖಂಡಕ್ಕೆ ಸಮವಾದ ಅಕ್ಷಾಂಶಗಳಲ್ಲಿರುವ ಇನ್ನಾವ ಪ್ರದೇಶದಲ್ಲಿಯೂ ಶೀತವು ಇಲ್ಲಿನಷ್ಟು ಕಡಿಮೆಯಾಗಿಲ್ಲ. ಅಕ್ಷಾಂಶ ಕ್ಕನುಗುಣವಾಗಿ ದಕ್ಷಿಣದಿಂದ ಉತ್ತರಕ್ಕೆ ಚಳಿಗಾಲದಲ್ಲಿ ಚಳಿಯು ಹೆಚ್ಚಾಗಿ ತೋರಿಬಂದರೂ ಪಶ್ಚಿಮದಿಂದ ಪೂರ್ವಕ್ಕೆ ಹೋದರೆ ಎಂದರೆ ಸಮುದ್ರದಿಂದ ದೂರಕ್ಕೆ ಹೋದ ಹಾಗೆ ಈ ವ್ಯತ್ಯಾಸವು ಮತ್ತಷ್ಟು ಹೆಚ್ಚಾಗಿ ತೋರುವುದು. ಪಶ್ಚಿಮತೀರದಲ್ಲಿ ನೀರು ಗಡ್ಡೆಕಟ್ಟುವುದೇ ಇಲ್ಲ. ಆದರೆ ಜರ್ಮನಿಯಲ್ಲಿ 2 ತಿಂಗಳೂ, ರಷ್ಯಾದೇಶದಲ್ಲಿ 4 ತಿಂಗಳೂ ನೀರು ಗಡ್ಡೆಯಾಗಿರುವುದು.

ಸಮುದ್ರಗಳ ಸಾಮೀಪ್ಯದಿಂದ ಹೇರಳವಾಗಿ ಮಳೆಯು ಬೀಳುವುದರಿಂದ ಈ ಖಂಡದಲ್ಲಿ ಮರುಭೂಮಿಗಳೇ ಇಲ್ಲ. ಈ ಮೇಲೆ ವಿವರಿಸಿದ ವಿಷಯಗಳು ಮನದಟ್ಟಾಗಲು ಕೆಲವು ಉದಾಹರಣೆಗಳು ಇಲ್ಲಿ ಕೊಡಲ್ಪಟ್ಟಿವೆ:—

(1) ಚಳಿಗಾಲದಲ್ಲಿ ಬ್ರಿಟಿಷ್ ದ್ವೀಪಗಳಲ್ಲಿಯೂ, ನಾರ್ವೆ ದೇಶದಲ್ಲಿಯೂ ನೀರು ಗಡ್ಡೆ ಕಟ್ಟುವುದಿಲ್ಲ. ಆದರೆ 20ರಿಂದ 40 ಡಿಗ್ರಿಗಳವರೆಗೂ ಇವುಗಳಿಗಿಂತ ದಕ್ಷಿಣದಲ್ಲಿರುವ ಕಪ್ಪುಸಮುದ್ರದಲ್ಲಿ ಗಡ್ಡೆ ಕಟ್ಟುವುದು.

(2) ಏಡಿನ್‌ಬರ್ಗ್ ಮತ್ತು ಮಾಸ್ಕೋ ಪಟ್ಟಣಗಳು ಒಂದೇ ಅಕ್ಷಾಂಶ ದಲ್ಲಿದ್ದರೂ ಅವುಗಳ ವಾಯುಗುಣವು ಕೆಳಗೆ ತೋರಿಸಿರುವಂತೆ ವ್ಯತ್ಯಾಸ ವಾಗಿರುವುದು :—

| ಉತ್ತರ ಅಕ್ಷಾಂಶ 56° | | ಏಡಿನ್‌ಬರ್ಗ್ | ಮಾಸ್ಕೋ |
|---|---|---|---|
| | ಜನವರಿ | 38° | 20° |
| | ಜುಲೈ | 59° | 70° |
| ∴ ಪರಮಾವಧಿ ವ್ಯತ್ಯಾಸ | | 21° | 50° |

| ಉತ್ತರ ಅಕ್ಷಾಂಶ 52° ಅಥವಾ 53° | ಲಂಡನ್ | ಬರ್ಲಿನ್ | ಕೀವ್ |
|---|---|---|---|
| ಜನವರಿ | 38° | 28° | 25° |
| ಜುಲೈ | 62° | 65° | 65° |
| ∴ ಪರಮಾವಧಿ ವ್ಯತ್ಯಾಸ | 24° | 37° | 40° |

ಈ ಖಂಡದ ಪಶ್ಚಿಮ, ದಕ್ಷಿಣ ಭಾಗಗಳಲ್ಲಿ ಅನೇಕ ಕಡೆಗಳಲ್ಲಿ 40–80 ಅಂಗುಲ ಮಳೆಯಾಗುವುದು. ಗ್ರೇಟ್ ಬ್ರಿಟನ್, ನಾರ್ವೆ ಮೊದಲಾದ ದೇಶದ ಪಶ್ಚಿಮಭಾಗದ ಬೆಟ್ಟಗಳಲ್ಲಿ 80 ಅಂಗುಲಕ್ಕೆ ಹೆಚ್ಚಾಗಿ ಮಳೆಯಾಗುವುದು. ಪೂರ್ವಕ್ಕೆ ಹೋದಹಾಗೆ ಮಳೆಯು ಕಡಿಮೆಯಾಗುವುದು. ರಷ್ಯದ ಆಗ್ನೇಯ ಭಾಗದಲ್ಲಿಯೂ ಉತ್ತರ ಭಾಗದಲ್ಲಿಯೂ 10 ಅಂಗುಲಕ್ಕೆ ಕಡಿಮೆಯಾಗಿ ಮಳೆಯಾಗುವುದು.

**ಸಸ್ಯಗಳು.**—ಈ ಖಂಡದಲ್ಲಿ ಬೆಳೆಯುವ ಸಸ್ಯಗಳಿಗನುಗುಣವಾಗಿ ಇದನ್ನು ಐದು ಪ್ರದೇಶಗಳಾಗಿ ವಿಂಗಡಿಸಬಹುದು :—

(1) **ಟಂಡ್ರಾ ಪ್ರದೇಶ.**—ಅತ್ಯಂತ ಉತ್ತರ ಭಾಗದಲ್ಲಿ ಟಂಡ್ರಾ ಎಂದು ಕರೆಯಲ್ಪಡುವ ಪ್ರದೇಶವಿರುವುದು. ಇಲ್ಲಿ ಸುಮಾರು 10 ತಿಂಗಳು ನೀರೆಲ್ಲವೂ ಘನೀಭೂತವಾಗಿರುವುದು. ಒಂದೆರಡು ತಿಂಗಳು ಮಾತ್ರ ನೆಲದಲ್ಲಿ 1–2 ಅಡಿಗಳವರೆಗೂ ಹಿಮದ ಗಡ್ಡೆಗಳು ಕರಗುವುವು. ಆಗ ನೀರು ನಿಂತು ನೆಲವು ಕೆಸರಾಗುವುದು. ಸದಾ ಚಳಿಯು ವಿಪರೀತವಾಗಿರುವುದು. ಆದುದರಿಂದ ಈ ಪ್ರದೇಶದಲ್ಲಿ ಗಿಡಮರಗಳು ಬೆಳೆಯುವುದಿಲ್ಲ. ಪಾಚಿ, ಶಿಲಾವಲ್ಕಗಳು ಮಾತ್ರ ಬೆಳೆಯುವುವು. ಈ ಪ್ರದೇಶದ ಅತ್ಯಂತ ದಕ್ಷಿಣ ಭಾಗದಲ್ಲಿ ಮಾತ್ರ ಕುರುಚುಗಿಡಗಳೂ, ಗುಜ್ಜುಮರಗಳೂ ಬೆಳೆಯುವುವು.

(2) **ಸಮಶೀತೋಷ್ಣ ಪ್ರದೇಶದ ಉತ್ತರ ಭಾಗ.**—ಸ್ವೀಡನ್ನಿನ ದಕ್ಷಿಣ ಭಾಗವನ್ನೂ, ರಷ್ಯದ ಉತ್ತರ ಭಾಗವನ್ನೂ ಒಳಗೊಂಡಿರುವ ಈ ಪ್ರದೇಶದಲ್ಲಿ ಚಳಿಯು ಸ್ವಲ್ಪ ಕಡಿಮೆಯಾಗಿಯೂ, ಮಳೆಯು ಸ್ವಲ್ಪ ಹೆಚ್ಚಾಗಿಯೂ ಇರುವುದರಿಂದ ಕೊಂಬೆಗಳಿಲ್ಲದೆ ಉದ್ದವಾಗಿ ಬೆಳೆಯುವ ದೇವದಾರು ಮೊದಲಾದ ಮರಗಳು ಬೆಳೆಯುವುವು. ಹಡಗುಗಳನ್ನು ಕಟ್ಟುವುದಕ್ಕೆ ಇವುಗಳ ತೊಲೆಗಳನ್ನು ಇತರ ದೇಶಗಳಿಗೆ ರಫ್ತುಮಾಡುವರು. ಇಲ್ಲಿ ಓಟ್ಸ್, ಬಾರ್ಲಿ, ರೈ ಎಂಬ ಧಾನ್ಯಗಳು ಬೆಳೆಯುವುವು.

(3) **ಸಮಶೀತೋಷ್ಣ ಪ್ರದೇಶದ ಮಧ್ಯಭಾಗ.** — ಫ್ರಾನ್ಸ್, ಜರ್ಮನಿ ಮತ್ತು ರಷ್ಯದ ಮಧ್ಯಭಾಗಗಳನ್ನೊಳಗೊಂಡಿರುವ ಈ ಪ್ರದೇಶದಲ್ಲಿ ಮಳೆಯೂ, ಉಷ್ಣವೂ ಇನ್ನೂ ಅಧಿಕವಾಗಿರುವುದರಿಂದ ಓಕ್, ಬೀಚ್ ಮೊದಲಾದ ದೊಡ್ಡ ಮರಗಳು ಬೆಳೆಯುವುವು. ಇಲ್ಲಿ ಗೋಧಿಯನ್ನೂ, ಸಕ್ಕರೆಗಾಗಿ ಬೀಟ್ ಮರವನ್ನೂ ಬೆಳೆಯುವರು. ಈ ಪ್ರದೇಶದ ಪಶ್ಚಿಮ ಭಾಗದಲ್ಲಿ ಸಣಬಿನ ನಾರನ್ನೂ ಬೆಳೆಯುವರು. ಪೂರ್ವಭಾಗದಲ್ಲಿ ಮಳೆಯು ಕಡಿಮೆ. ಬೇಸಗೆಯಲ್ಲಿ ಸೆಕೆ ಹೆಚ್ಚು. ಚಳಿಗಾಲದಲ್ಲಿ ಚಳಿ ಹೆಚ್ಚು. ಆದುದರಿಂದ ಈ ಪ್ರದೇಶವೆಲ್ಲವೂ ಹುಲ್ಲುಗಾವಲುಗಳಾಗಿವೆ.

(4) **ಸಮಶೀತೋಷ್ಣ ಪ್ರದೇಶದ ದಕ್ಷಿಣ ಭಾಗ.**—ಸಮಶೀತೋಷ್ಣಪ್ರದೇಶದ ಉತ್ತರ ಮಧ್ಯಭಾಗಗಳ ಮರಗಳ ಎಲೆಗಳು ಚಳಿಗಾಲದಲ್ಲಿ ಸಂಪೂರ್ಣವಾಗಿ ಉದುರಿಹೋಗುವುವು. ಆದರೆ ಈ ದಕ್ಷಿಣಭಾಗದಲ್ಲಿ ಅಂದರೆ ಸ್ಪೇನ್, ಇಟಲಿ, ಬಾಲ್ಕನ್ ಪ್ರದೇಶಗಳಲ್ಲಿಯೂ, ಫ್ರಾನ್ಸ್, ಜರ್ಮನಿಗಳ ದಕ್ಷಿಣ ಭಾಗದಲ್ಲಿಯೂ ಮರಗಳಲ್ಲಿ ಎಲೆಗಳು ಯಾವಾಗಲೂ ಇರುವುವು. ಇಲ್ಲಿ ಪೈನ್, ಕಾರ್ಕ್, ಓಕ್ ಮೊದಲಾದ ಬಹಳ ದೊಡ್ಡ ಮರಗಳು ಬೆಳೆಯುತ್ತವೆ. ಜೋಳ, ಬತ್ತ, ಹೊಂಗೆ, ಕಿತ್ತಳೆ ಮತ್ತು ದ್ರಾಕ್ಷಿಬಳ್ಳಿಗಳು ವಿಶೇಷವಾಗಿ ಬೆಳೆಯುವುವು.

(5) **ಪರ್ವತ ಪ್ರದೇಶಗಳು.**—ಈ ದೇಶದಲ್ಲಿ ಅವುಗಳ ಅಕ್ಷಾಂಶ ಮತ್ತು ಎತ್ತರಕ್ಕನುಗುಣವಾಗಿ ಮೇಲಿನ ನಾಲ್ಕು ಪ್ರದೇಶಗಳ ಸಸ್ಯಗಳು ಬೆಳೆಯುವುವು.

ಆಲೂಗೆಡ್ಡೆಗಳೂ, ಕೆಲವು ದ್ವೀಪಗಳ ಧಾನ್ಯಗಳೂ ಈ ಖಂಡದಲ್ಲಿ ಉತ್ತರ ಭಾಗದಲ್ಲಿ ವಿನಾ ಎಲ್ಲಾ ಪ್ರದೇಶಗಳಲ್ಲಿಯೂ ಬೆಳೆಯುವುವು.

**ಸಸ್ಯಗಳಿಗೆ ಸಂಬಂಧಪಟ್ಟ ಕೈಗಾರಿಕೆಗಳು; ದ್ರಾಕ್ಷಿಯ ರಸಗಳು ಅಥವಾ ವೈನುಗಳು.**—ದ್ರಾಕ್ಷಿಯ ಬಳ್ಳಿಗಳನ್ನು ಪಙ್ಕ್ತಿಗಳಾಗಿ ನೆಟ್ಟು ತಂತಿಗಳ ಮೇಲಾಗಲಿ, ಮರಗಳ ಮೇಲಾಗಲಿ ಹಬ್ಬಿಸುವರು. ದ್ರಾಕ್ಷಿಗಳು ಒಣಗುವುದಕ್ಕೆ ಮೊದಲು ಅವುಗಳನ್ನು ಕಿತ್ತು ಯಂತ್ರಗಳಿಗೆ ಕೊಟ್ಟು ರಸವನ್ನು ತೆಗೆಯುವರು. ಸ್ಪೇನ್, ಪೋರ್ಚುಗಲ್, ಫ್ರಾನ್ಸ್ ದೇಶಗಳಲ್ಲಿ ದ್ರಾಕ್ಷಾರಸಗಳನ್ನು ವಿಶೇಷವಾಗಿ ತಯಾರುಮಾಡುವರು. ಮುಖ್ಯವಾಗಿ ಸೆವಿಲ್, ಒಪೋರ್ಟೋ, ಬೋರ್ಡೋ ಪಟ್ಟಣಗಳ ಮೂಲಕವಾಗಿ ವೈನುಗಳು ರಫ್ತಾಗುವುವು. ಇಟಲಿ, ಹಂಗೇರಿಗಳಲ್ಲಿಯೂ ಸ್ವಲ್ಪ ಮೇಲುತರದ ವೈನು ತಯಾರಾಗುವುದು. ಬಾಲ್ಕನ್ ಪರ್ಯಾಯದ್ವೀಪದಿಂದ ಒಣಗಿದ ದ್ರಾಕ್ಷಿಯನ್ನು ರಫ್ತುಮಾಡುವರು.

ಬೀರ್ ಎಂಬ ಮದ್ಯವನ್ನು ಸಾಮಾನ್ಯವಾಗಿ ಎಲ್ಲಾ ಪ್ರದೇಶಗಳಲ್ಲಿಯೂ ಧಾನ್ಯಗಳಿಂದ ತಯಾರುಮಾಡುವರು. ಆಸ್ಟ್ರಿಯಾ ಹಂಗೇರಿಯಲ್ಲಿಯೂ ಐರ್ಲೆಂಡಿನಲ್ಲಿಯೂ ಇದು ವಿಶೇಷವಾಗಿ ತಯಾರಾಗುವುದು.

**ನಾರಿನ ಬಟ್ಟೆಗಳು.**—ಮುಖ್ಯವಾಗಿ ಬ್ರಿಟಿಷ್ ದ್ವೀಪಗಳು, ಫ್ರಾನ್ಸ್, ಹಾಲೆಂಡ್ ಮತ್ತು ಬೆಲ್ಜಿಯಂ ಈ ದೇಶಗಳಲ್ಲಿ ತಯಾರಾಗುವುವು. ಮುಖ್ಯವಾಗಿ ರಷ್ಯಾದೇಶದಿಂದ ಈ ದೇಶಗಳಿಗೆ ರಫ್ತಾಗುವುದು.

ಬೀಟ್ ಸಕ್ಕರೆಯು ಮುಖ್ಯವಾಗಿ ಜರ್ಮನಿ, ಆಸ್ಟ್ರಿಯಾ ಹಂಗೇರಿಗಳಲ್ಲಿ ತಯಾರಾಗಿ, ಹಾಂಬರ್ಗ್, ಟ್ರಿಯಸ್ಟ್ ರೇವುಪಟ್ಟಣಗಳ ಮೂಲಕ ರಫ್ತಾಗು

ವುದು. ಯೂರೋಪಿನಿಂದ ಹೊರಕ್ಕೆ ರಫ್ತಾಗುವ ಸಕ್ಕರೆಯಲ್ಲಿ ಮುಕ್ಕಾಲು ಭಾಗವು ಟ್ರಿಯಸ್ಟಿನಿಂದ ಕಳುಹಿಸಲ್ಪಡುವುದು. ಈ ಸಕ್ಕರೆಯು ಸುಲಭ ಖರೀದಿಗೆ ದೊರೆಯುವುದೇ ನಮ್ಮ ದೇಶದಲ್ಲಿ ಮತ್ತು ವೆಸ್ಟ್ ಇಂಡಿಯಾ ದ್ವೀಪಗಳಲ್ಲಿ ಕಬ್ಬಿನಿಂದ ಸಕ್ಕರೆಯನ್ನು ಮಾಡುವುದು ಮೂಲೆಗೆ ಬೀಳುವುದಕ್ಕೆ ಮುಖ್ಯ ಕಾರಣವಾಗಿದೆ.

**ಪ್ರಾಣಿಗಳು; ಕಾಡುಮೃಗಗಳು.**—ಈ ಖಂಡದಲ್ಲಿ ವ್ಯವಸಾಯವು ಹೆಚ್ಚಿದ ಹಾಗೆ ಕಾಡುಮೃಗಗಳು ಕಡಿಮೆಯಾಗಿವೆ. ಈಗ ಅಲ್ಲಲ್ಲಿ ಕಾಡುಗಳಲ್ಲಿಯೂ, ಪರ್ವತಗಳ ಎತ್ತರವಾದ ತಪ್ಪಲುಗಳಲ್ಲಿಯೂ ಮಾತ್ರ ಕೆಲವು ಕಾಡುಮೃಗಗಳಿರುವುವು. ಮಧ್ಯಭಾಗದ ಎತ್ತರವಾದ ಪರ್ವತಗಳಲ್ಲಿ ಷಾಮಾಯಿ ಯೆಂಬ ಮೃದುವಾದ ಚರ್ಮವುಳ್ಳ ಪ್ರಾಣಿಯೂ, ರಷ್ಯದಲ್ಲಿ ತೋಳವೂ ಕರಡಿಯೂ, ಮಧ್ಯಭಾಗಗಳಲ್ಲಿ ಕಾಡುಹಂದಿಯೂ, ಗ್ರೇಟ್ ಬ್ರಿಟನ್ನಿನಲ್ಲಿ ಜಿಂಕೆಗಳೂ ಇರುವುವು. ಟಂಡ್ರಾ ಪ್ರದೇಶದಲ್ಲಿ ಹಿಮಸಾರಂಗವು ವಾಸಮಾಡುವುದು. ಇದನ್ನು ಅಲ್ಲಿ ಚಕ್ರವಿಲ್ಲದ ಬಂಡಿಗಳಿಗೆ ಕಟ್ಟಿ ವಾಹನವಾಗಿ ಉಪಯೋಗಿಸುವರು. ಈ ಖಂಡದಲ್ಲಿ ಹುಲಿ, ಚಿರತೆ ಮೊದಲಾದ ಪ್ರಾಣಿಗಳು ಇಲ್ಲ.

**ಪಳಗಿದ ಮೃಗಗಳು.**—ಕುದುರೆಗಳನ್ನು ಈ ಖಂಡದ ಎಲ್ಲಾ ಭಾಗಗಳಲ್ಲಿಯೂ ಪೋಷಿಸುವರು. ರಷ್ಯದ ಹುಲ್ಲುಗಾವಲುಗಳಲ್ಲಿ ಇವು ಬಹು ಹೆಚ್ಚಾಗಿರುವುವು. ಬೆಲ್ಜಿಯಂ ಮತ್ತು ಸ್ಪೇನಿನ ದಕ್ಷಿಣ ಭಾಗವಾದ ಆಂಡಲೂಷಿಯಗಳಲ್ಲಿ ಉತ್ತಮ ಜಾತಿಯ ಕುದುರೆಗಳನ್ನು ಸಾಕುವರು. ಕುದುರೆಗಳನ್ನು ಈ ಖಂಡದಲ್ಲಿ ವ್ಯವಸಾಯದ ಕೆಲಸಕ್ಕೆ ವಿಶೇಷವಾಗಿ ಉಪಯೋಗಿಸುವರು.

ಮಳೆಗಳು ಹೆಚ್ಚಾಗಿ ಬಿದ್ದು ಸೊಂಪಾಗಿ ಬೆಳೆದಿರುವ ಹುಲ್ಲಿನ ಕಾವಲುಗಳಿರುವ ಪ್ರದೇಶಗಳಲ್ಲಿ ದನಗಳು ಹೆಚ್ಚಾಗಿರುವುವು. ಆದುದರಿಂದ ಜರ್ಮನಿ, ಹಾಲೆಂಡ್ ಮತ್ತು ಡೆನ್ಮಾರ್ಕುಗಳಲ್ಲಿ ದನಗಳು ವಿಶೇಷವಾಗಿರುವುವು.

ಕುರಿಗಳು ಮಳೆ ಕಡಿಮೆಯಾಗಿ ಬೀಳುವ, ಸಾಮಾನ್ಯವಾದ ಹುಲ್ಲುಗಾವಲುಗಳು ವಿಶೇಷವಾಗಿರುವ ಪ್ರದೇಶಗಳಲ್ಲಿಯೂ, ಸಣ್ಣಕಲ್ಲಿನ ಗುಡ್ಡಗಳ ಪ್ರದೇಶಗಳಲ್ಲಿಯೂ, ಕಡಿದಾದ ಪರ್ವತಗಳ ತಪ್ಪಲುಗಳಲ್ಲಿಯೂ ಹೇರಳವಾಗಿರುವುವು. ರಷ್ಯ, ಫ್ರಾನ್ಸ್‌ಗಳಲ್ಲಿ ಕುರಿಗಳು ಬಹಳ ವಿಶೇಷವಾಗಿರುವುವು. ಸ್ಪೇನ್, ಜರ್ಮನಿಗಳಲ್ಲಿ ಉತ್ತಮ ಜಾತಿಯ ಕುರಿಗಳನ್ನು ಸಾಕುತ್ತಾರೆ. ಹಂದಿ, ಕೋಳಿ, ಬಾತು ಮೊದಲಾದ ಪ್ರಾಣಿಗಳು ಸಾಮಾನ್ಯವಾಗಿ ಎಲ್ಲಾ ಕಡೆಗಳಲ್ಲಿಯೂ ಇರುವುವು.

**ಪ್ರಾಣಿಗಳಿಗೆ ಸಂಬಂಧಪಟ್ಟ ಕೈಗಾರಿಕೆಗಳು.**—ಕುರಿಗಳ ತುಪ್ಪಟದಿಂದ ಬಟ್ಟೆಗಳನ್ನು ಮುಖ್ಯವಾಗಿ ಬ್ರಿಟಿಷ್ ದ್ವೀಪಗಳು, ಫ್ರಾನ್ಸ್, ಜರ್ಮನಿ

ಗಳಲ್ಲಿ ತಯಾರುಮಾಡುವರು. ಬ್ರಿಟಿಷ್ ದ್ವೀಪಗಳಿಗೆ ಉಣ್ಣೆಯು ಆಸ್ಟ್ರೇಲಿಯ, ನ್ಯೂಜೀಲೆಂಡ್, ದಕ್ಷಿಣ ಆಫ್ರಿಕ ಮತ್ತು ಇಂಡಿಯಗಳಿಂದ ಆಮದಾಗುವುದು. ಜರ್ಮನಿ, ಫ್ರಾನ್ಸ್‌ಗಳಿಗೆ ದಕ್ಷಿಣ ಅಮೆರಿಕದಿಂದ ಬರುವುದು. ಉಣ್ಣೆಯ ಬಟ್ಟೆಗಳು ಆಂಟ್ವರ್ಪ್, ಹಾಂಬರ್ಗ್, ಮಾರ್‌ಸೇಲ್ಸ್‌ಗಳಿಂದ ಇತರ ಖಂಡಗಳಿಗೆ ರಫ್ತಾಗುವುವು. ಈ ಖಂಡದ ವಾಯುಗುಣವನ್ನು ನೆನೆಸಿಕೊಂಡರೆ ಈ ಬಟ್ಟೆಗಳು ಇಲ್ಲಿಯೇ ಎಷ್ಟು ಖರ್ಚಾಗುವುದೆಂಬುದು ಸ್ಪಷ್ಟವಾಗುವುದು. ಗ್ರೇಟ್ ಬ್ರಿಟನ್ ಒಂದರಲ್ಲಿಯೇ 1,800 ಕಾರ್ಖಾನೆಗಳಲ್ಲಿ ಈ ಬಟ್ಟೆಗಳು ತಯಾರಾಗುವುವು.

**ಮೀನು ಹಿಡಿಯುವುದು.**—ಈ ಖಂಡದ ಜನಗಳ ಮುಖ್ಯವಾದ ಕಸಬುಗಳಲ್ಲಿ ಇದು ಒಂದಾಗಿದೆ. ನಾರ್ತ್‌ಸಿ, ಮೆಡಿಟರೇನಿಯನ್ ಸಮುದ್ರ, ರಷ್ಯದ ನದಿಗಳು ಇವುಗಳಲ್ಲಿ ಸಾವಿರಾರು ದೋಣಿಗಳು ಯಾವಾಗಲೂ ಮೀನು ಹಿಡಿಯುತ್ತಿರುವುವು. ನಾರ್ವೆಯ ಜನರು ಫಿಯರ್ಡ್‌ಗಳಲ್ಲಿ ಮೀನುಗಳನ್ನು ವಿಶೇಷವಾಗಿ ಹಿಡಿದು ಒಣಗಿಸಿ ಹದಮಾಡಿ ರಫ್ತುಮಾಡುವರು. ಮೆಡಿಟರೇನಿಯನ್ ಸಮುದ್ರದಲ್ಲಿ ಸ್ಪಂಜನ್ನೂ, ಹವಳಗಳನ್ನೂ ಜೊತೆಮಾಡಿಸಿ ರಫ್ತುಮಾಡುವರು.

**ರೇಷ್ಮೆಯ ಹುಳುಗಳು.**—ಇವುಗಳನ್ನು ಸಾಕಲು ಅವಶ್ಯಕವಾಗಿರುವ ಹಿಪ್ಪಲಿನೇರಿಳೆ ಮರಗಳು ಉಷ್ಣವು ತಕ್ಕಮಟ್ಟಿಗೆ ಹೆಚ್ಚಾಗಿರುವ ಪ್ರದೇಶಗಳಲ್ಲಿ ಬೆಳೆಯುವುವು. ಆದುದರಿಂದ ಮೆಡಿಟರೇನಿಯನ್ ಸಮುದ್ರದ ಸಮೀಪದಲ್ಲಿರುವ ದೇಶಗಳಲ್ಲಿ ಮಾತ್ರ ಈ ಹುಳುಗಳನ್ನು ಸಾಕಿ ರೇಷ್ಮೆಯ ದಾರವನ್ನು ತೆಗೆಯುವರು. ಇಟಲಿ, ಬಾಲ್ಕನ್ ಪರ್ಯಾಯದ್ವೀಪ, ಫ್ರಾನ್ಸ್‌ಗಳಲ್ಲಿ ಈ ಹುಳುಗಳನ್ನು ವಿಶೇಷವಾಗಿ ಸಾಕುವರು.

ರೇಷ್ಮೆಯ ದಾರದಿಂದ ಬಟ್ಟೆಗಳನ್ನು ಮಾಡಬೇಕಾದರೆ ತಿಳಿನೀರೂ, ಕಲ್ಲಿದ್ದಲೂ ಅಥವಾ ನೀರಿನ ಶಕ್ತಿಯೂ ಹೆಚ್ಚಾಗಿರಬೇಕು. ಆದುದರಿಂದ ಈ ಬಟ್ಟೆಗಳು ಕಲ್ಲಿದ್ದಲು ಹೆಚ್ಚಾಗಿ ದೊರೆಯುವ ಇಂಗ್ಲೆಂಡ್ ದೇಶದಲ್ಲಿಯೂ, ರೈನ್, ರೋನ್ ನದಿಗಳ ಬೈಲುಗಳಲ್ಲಿಯೂ, ಜಲಪಾತಗಳಿಂದ ನೀರಿನ ಶಕ್ತಿಯು ವಿಶೇಷವಾಗಿ ದೊರೆಯುವ ಸ್ವಿಟ್ಜರ್ಲೆಂಡ್ ದೇಶದಲ್ಲಿಯೂ ತಯಾರಾಗುವುವು.

**ಖನಿಜಗಳು ಮತ್ತು ಅವುಗಳಿಗೆ ಸಂಬಂಧಪಟ್ಟ ಕೈಗಾರಿಕೆಗಳು.**—ಈ ಖಂಡದಲ್ಲಿ ಚಿನ್ನ, ಬೆಳ್ಳಿ ವಿನಾ ಇತರ ಖನಿಜಗಳು ಬಹು ಹೇರಳವಾಗಿ ದೊರೆಯುವುವು. ಪರ್ವತ ಪ್ರದೇಶಗಳಲ್ಲಿ ಇವು ದೊರೆಯುವುದು ಹೆಚ್ಚು; ಮೈದಾನಗಳಲ್ಲಿ ಕಡಿಮೆ. ಬ್ರಿಟಿಷ್ ದ್ವೀಪಗಳು, ಜರ್ಮನಿ, ಆಸ್ಟ್ರಿಯ, ಸ್ವೀಡನ್, ಸ್ಪೇನುಗಳಲ್ಲಿ ಬಹು ಹೆಚ್ಚಾಗಿಯೂ, ಹಾಲೆಂಡ್, ಡೆನ್ಮಾರ್ಕ್, ಹಂಗೇರಿ, ರಷ್ಯಗಳಲ್ಲಿ ಬಹು ಕಡಿಮೆಯಾಗಿಯೂ ದೊರೆಯುವುವು.

**ಕಬ್ಬಿಣ ಮತ್ತು ಕಲ್ಲಿದ್ದಲು.**—ಖನಿಜಗಳಲ್ಲೆಲ್ಲಾ ಇವು ಅತ್ಯಂತ ಉಪಯೋಗವಾದುವು. ಇವು ಗ್ರೇಟ್ ಬ್ರಿಟನ್, ಫ್ರಾನ್ಸ್, ಜರ್ಮನಿಗಳಲ್ಲಿ ವಿಶೇಷವಾಗಿ ದೊರೆಯುವುವು. ಇವು ಒಂದಕ್ಕೊಂದು ಸಮೀಪದಲ್ಲಿಯೇ ಸಿಕ್ಕುವುವು. ಆದುದರಿಂದ ಕಬ್ಬಿಣದ ಗಣಿಗಳ ಬಳಿಯಲ್ಲಿಯೇ ಅದುರಿನಿಂದ ಕಬ್ಬಿಣವನ್ನು ತೆಗೆದು ಅದರಿಂದ ಸಾಮಾನನ್ನು ಮಾಡಲು ಅನುಕೂಲವಾಗಿದೆ. ಈ ದೇಶಗಳಲ್ಲಿ ಉತ್ತಮವಾದ ಜಲಮಾರ್ಗಗಳು ಅನೇಕವಿರುವುದರಿಂದ ಈ ಸಾಮಾನುಗಳನ್ನು ರೇವು ಪಟ್ಟಣಗಳಿಗೆ ಹೆಚ್ಚು ಖರ್ಚಿಲ್ಲದೆ ಕಳುಹಿಸಬಹುದು.

ಈ ಅನುಕೂಲಗಳು ಈ ಖಂಡದ ಕೈಗಾರಿಕೆ, ವ್ಯಾಪಾರಗಳ ಪ್ರಾಮುಖ್ಯತೆಗೆ ಬಹು ಸಹಾಯಮಾಡಿವೆ. ಬ್ರಿಟಿಷ್ ದ್ವೀಪಗಳಲ್ಲಿನಷ್ಟು ಕಲ್ಲಿದ್ದಲನ್ನು ಇನ್ನೆಲ್ಲಿಯೂ ಗಣಿಗಳಿಂದ ತೆಗೆಯುತ್ತಿಲ್ಲ. ಇಲ್ಲಿನ ಅರ್ಧದಷ್ಟನ್ನು ಮಾತ್ರ ಜರ್ಮನಿಯಲ್ಲಿ ತೆಗೆಯುವರು. ಫ್ರಾನ್ಸ್, ಬೆಲ್ಜಿಯಂ, ಆಸ್ಟ್ರಿಯಗಳಲ್ಲಿ ಒಟ್ಟು ಜರ್ಮನಿಯಲ್ಲಿನ ಅರ್ಧದಷ್ಟು ಮಾತ್ರ ಉತ್ಪತ್ತಿಯಾಗುವುದು. ಈ ಐದು ದೇಶಗಳೇ ಕಲ್ಲಿದ್ದಲಿಗೆ ಪ್ರಸಿದ್ಧವಾದುವು. ಕಬ್ಬಿಣವು ಈ ದೇಶಗಳಲ್ಲೆಲ್ಲಾ ದೊರೆಯುವುದು; ಆದರೆ ಸ್ವೀಡನ್, ಸ್ಪೇನುಗಳ ಕಬ್ಬಿಣವು ಉತ್ತಮವಾದುದು.

**ಕಬ್ಬಿಣದ ಸಾಮಾನುಗಳು.**—ಮುಖ್ಯವಾಗಿ ಇಂಗ್ಲೆಂಡ್, ಜರ್ಮನಿ, ಬೆಲ್ಜಿಯಂಗಳಲ್ಲಿಯೂ, ಸಾಮಾನ್ಯವಾಗಿ ಕಲ್ಲಿದ್ದಲು ಕಬ್ಬಿಣ ಸಿಕ್ಕತಕ್ಕ ಎಲ್ಲಾ ಪ್ರದೇಶಗಳಲ್ಲಿಯೂ ತಯಾರಾಗುವುವು.

**ಹತ್ತಿಯ ಬಟ್ಟೆಗಳು.**—ಇವುಗಳನ್ನು ತಯಾರುಮಾಡಲು ಯಂತ್ರಗಳನ್ನು ನಡೆಯಿಸುವುದಕ್ಕೆ ಕಲ್ಲಿದ್ದಲು ಆವಶ್ಯಕವು. ಆದರೆ ವಾಯುವಿನಲ್ಲಿ ಜಲಾಂಶವು ಕಡಿಮೆಯಾದರೆ ದಾರಗಳು ಕಿತ್ತುಹೋಗುವುದರಿಂದ ಕಲ್ಲಿದ್ದಲಿಗಿಂತ ಜಲಾಂಶವು ಹೆಚ್ಚಾಗಿರುವ ವಾಯುವೇ ಈ ಕೈಗಾರಿಕೆಗೆ ಹೆಚ್ಚು ಆವಶ್ಯಕವಾಗಿದೆ. ಆದುದರಿಂದ ಮಳೆ ವಿಶೇಷವಾಗಿ ಬೀಳುವ ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ, ಬೆಲ್ಜಿಯಂ ದೇಶಗಳಲ್ಲಿ ಹತ್ತಿಯ ಬಟ್ಟೆಗಳನ್ನು ಹೆಚ್ಚಾಗಿ ತಯಾರು ಮಾಡುವರು.

**ಇತರ ಖನಿಜಗಳು.**—ಉಪ್ಪು ಆಹಾರಕ್ಕೂ, ಗೊಬ್ಬರಕ್ಕೂ, ರಸಾಯನಗಳಿಗೂ ಆವಶ್ಯಕವಾಗಿವೆ. ಫ್ರಾನ್ಸ್, ಸ್ಪೇನ್ ದೇಶಗಳ ತೀರದಲ್ಲಿ ಸಮುದ್ರದ ನೀರಿನಿಂದ ಉಪ್ಪನ್ನು ಮಾಡುವರು. ರಷ್ಯದ ಹುಲ್ಲುಗಾವಲು ಪ್ರದೇಶದಲ್ಲಿ ನೆಲದ ಮೇಲ್ಭಾಗದಲ್ಲಿಯೇ ಅಗೆದು ತೆಗೆಯುವರು. ಕಾರ್ಪೇತಿಯನ್ ಪರ್ವತದಲ್ಲಿ ಕ್ರಾಕೊ ಪಟ್ಟಣದ ಬಳಿಯೂ, ಇಂಗ್ಲೆಂಡಿನಲ್ಲಿ ಚೆಷೈರಿನಲ್ಲಿಯೂ ಗಣಿಗಳಿಂದ ತೆಗೆಯುವರು.

ಉತ್ತಮವಾದ ತಾಮ್ರವು ಸ್ಪೇನ್, ಸ್ವೀಡನ್‌ಗಳಲ್ಲಿ ದೊರೆಯುವುದು. ವೇಲ್ಸಿನ ದಕ್ಷಿಣ ಭಾಗದಲ್ಲಿ ತಾಮ್ರದ ಅದುರನ್ನು ಕರಗಿಸಿ ತಾಮ್ರವನ್ನು ಮಾಡುವರು.

ಜಿಂಕ್ ಅಥವಾ ಸತುವು ಜರ್ಮನಿಯಲ್ಲಿ ದೊರೆಯುವುದು. ಪ್ರಪಂಚದಲ್ಲಿ ಉತ್ಪತ್ತಿಯಾಗುವ ಸತುವಿನಲ್ಲಿ ಅರ್ಧಭಾಗ ಈ ದೇಶದಲ್ಲಿ ಸಿಕ್ಕುವುದು.

ಗಾಜನ್ನು ತಯಾರುಮಾಡುವುದಕ್ಕೆ ಅವಶ್ಯಕವಾದ ಮರಳು ಎಲ್ಲಾ ಕಡೆಗಳಲ್ಲಿ ಸಿಕ್ಕಿದರೂ ಆಸ್ಟ್ರಿಯ, ಜರ್ಮನಿಗಳಲ್ಲಿ ಹೆಚ್ಚಾಗಿ ದೊರೆಯುವುದು. ಆದುದರಿಂದ ಗಾಜಿನ ಸಾಮಾನುಗಳು ಮುಖ್ಯವಾಗಿ ಆ ದೇಶಗಳಿಂದಲೇ ಈಗಿನ ಯುದ್ಧಕ್ಕಿಂತ ಮೊದಲು ನಮ್ಮ ದೇಶಕ್ಕೆ ಬರುತ್ತಿದ್ದುವು.

ಕಾಕಸನ್ ಪ್ರದೇಶದಲ್ಲಿಯೂ, ಕ್ಯಾಸ್ಪಿಯನ್ ಸಮುದ್ರತೀರದಲ್ಲಿರುವ ಬಾಪಿಯೆಂಬ ರೇವುಪಟ್ಟಣದ ಸಮೀಪದಲ್ಲಿಯೂ ಕೆರೋಸಿನ್ ಎಣ್ಣೆಯು ಬಹು ವಿಶೇಷವಾಗಿ ಸಿಕ್ಕುವುದು. ಕ್ಯಾಸ್ಪಿಯನ್ ಸಮುದ್ರದಮೇಲೆ ಜಹಜುಗಳನ್ನು ನಡೆಯಿಸುವುದಕ್ಕೆ ಕಲ್ಲಿದ್ದಲಿಗೆ ಬದಲಾಗಿ ಈ ಎಣ್ಣೆಯನ್ನು ಉಪಯೋಗಿಸುವರು.

ಸೀಸವು ಸ್ಪೇನಿನಲ್ಲಿಯೂ, ಚಿನ್ನವು ರಷ್ಯದಲ್ಲಿಯೂ, ಬೆಳ್ಳಿಯು ಜರ್ಮನಿಯಲ್ಲಿಯೂ, ಪಾದರಸವು ಸ್ಪೇನ್, ಆಸ್ಟ್ರಿಯಗಳಲ್ಲಿಯೂ ದೊರೆಯುವುವು.

**ವ್ಯಾಪಾರ ಮತ್ತು ಭೂಜಲಮಾರ್ಗಗಳು; ಈ ಖಂಡದ ವ್ಯಾಪಾರದ ಪ್ರಾಮುಖ್ಯತೆ.**—ಈ ಖಂಡವು ಇತರ ಖಂಡಗಳಿಗಿಂತ ಕೈಗಾರಿಕೆಗಳಲ್ಲಿಯೂ, ವ್ಯಾಪಾರದಲ್ಲಿಯೂ, ಐಶ್ವರ್ಯದಲ್ಲಿಯೂ ಮುಂದಾಗಿರುವುದು. ಈ ವ್ಯಾಪಾರಾಭಿವೃದ್ಧಿಗೆ ಇಲ್ಲಿನ ಜನರ ಬುದ್ಧಿಸಾಹಸಗಳೂ, ಶಾಸ್ತ್ರವಿದ್ಯಾಭ್ಯಾಸವೂ ಮುಖ್ಯಕಾರಣಗಳಾಗಿವೆ. ಆದರೆ ಮನುಷ್ಯನ ಬುದ್ಧಿಯೊಂದೇ ಸಾಲದು. ನಾಗರಿಕರಾದ ಜನರನ್ನು ಸಹರಾ ಮರುಭೂಮಿಯಲ್ಲಿ ಇಟ್ಟರೆ ಅವರು ಹೇಗೆ ಹೆಚ್ಚು ಐಶ್ವರ್ಯವಂತರಾಗಬಲ್ಲರು? ಇಂತಹ ಮರುಭೂಮಿಯಲ್ಲಿ ಅಲ್ಲಲ್ಲಿ ಇದ್ದುಕೊಂಡು ಹೊಟ್ಟೆಹೊರೆಯುತ್ತಿರುವ ಜನರು ಹೆಚ್ಚು ನಾಗರಿಕರಾಗಬಲ್ಲರೆ? ಆದುದರಿಂದ ಜನಗಳ ಶಕ್ತಿಸಾಹಸಗಳಿಗೂ ಕೂಡ ಅನುಕೂಲವಾದ ಭೂಲಕ್ಷಣಗಳು ಇರಬೇಕು. ಇಂತಹ ಭೂಸಂಬಂಧವಾದ ಸೌಕರ್ಯಗಳು ಅತ್ಯಂತ ವಿಶೇಷವಾಗಿರುವುದೇ ಈ ವ್ಯಾಪಾರದ ಪ್ರಾಮುಖ್ಯತೆಗೂ ಜನಗಳ ನಾಗರಿಕತೆಗೂ ಮತ್ತೊಂದು ಮುಖ್ಯ ಕಾರಣವಾಗಿದೆ.

ಈ ಸೌಕರ್ಯಗಳು ಯಾವುವೆಂದರೆ:—

(1) ಉತ್ತರದಲ್ಲಿ ಸ್ವಲ್ಪ ಭಾಗ ವಿನಾ ಈ ಖಂಡವೆಲ್ಲವೂ ಸಮಶೀತೋಷ್ಣವಲಯದಲ್ಲಿರುವುದು.

(2) ಈ ಖಂಡವು ಸ್ಥಲಾರ್ಧಗೋಳದ ಮಧ್ಯಭಾಗದಲ್ಲಿರುವುದು. ಇತರ ದೇಶಗಳೊಡನೆ ವ್ಯಾಪಾರವನ್ನು ಬೆಳೆಯಿಸಲು ಇದರಿಂದ ವಿಶೇಷ ಅನುಕೂಲವಿರುವುದು.

(3) ಸಮುದ್ರುದ ತೀರವು ಡೊಂಕು ಡೊಂಕಾಗಿ ಉದ್ದವಾಗಿರುವುದು; ಅನೇಕ ದ್ವೀಪಗಳೂ, ಪರ್ಯಾಯದ್ವೀಪಗಳೂ, ಕೊಲ್ಲಿಗಳೂ, ಬಂದರುಗಳೂ ಇರುವುವು.

(4) ಸಮುದ್ರದ ಸಾಮೀಪ್ಯದಿಂದ ವಾಯುಗುಣವು ಹಿತಕರವಾಗಿರುವುದು. ಮಳೆಯೂ ಸಮೃದ್ಧಿಯಾಗಿ ಬೀಳುವುದು. ಆದುದರಿಂದ ವ್ಯವಸಾಯವು ಚೆನ್ನಾಗಿ ನಡೆಯುವುದು. ಜನರು ಕಷ್ಟಪಟ್ಟು ಕೆಲಸಮಾಡಬಲ್ಲರು.

(5) ಖನಿಜಗಳು ಹೇರಳವಾಗಿವೆ. ಮುಖ್ಯವಾಗಿ ಕಲ್ಲಿದ್ದಲು, ಕಬ್ಬಿಣಗಳು ಹೇರಳವಾಗಿರುವುದರಿಂದ ಅನೇಕ ಕೈಗಾರಿಕೆಗಳು ನಡೆಯುವುವು.

(6) ಮೈದಾನಗಳಲ್ಲಿ ರಸ್ತೆಗಳು, ಕಾಲುವೆಗಳು ಮತ್ತು ನದಿಗಳು ಹೇರಳವಾಗಿರುವುವು. ಈ ಖಂಡದಲ್ಲಿ ದುರ್ಗಮವಾದ ಪರ್ವತಗಳೂ ಇಲ್ಲ; ದೊಡ್ಡ ಮರುಭೂಮಿಗಳೂ ಇಲ್ಲ. ಅನೇಕ ಸಮುದ್ರುಶಾಖೆಗಳಿರುವುದರಿಂದ ಉತ್ತಮವಾದ ರೇವುಪಟ್ಟಣಗಳು ಹೆಚ್ಚಾಗಿರುವುವು. ಆದುದರಿಂದ ಸಾಮಾನುಗಳನ್ನು ಒಳದೇಶದಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೂ, ಪರದೇಶಗಳಿಗೆ ರಫ್ತುಮಾಡುವ ರೇವುಪಟ್ಟಣಗಳಿಗೂ ಸುಲಭವಾಗಿ ಸಾಗಿಸಬಹುದು.

ಬ್ರಿಟಿಷ್ ದ್ವೀಪಗಳು, ಫ್ರಾನ್ಸ್, ಜರ್ಮನಿ, ಸ್ವಿಟ್ಜರ್ಲೆಂಡ್ ಮತ್ತು ಬೆಲ್ಜಿಯಂಗಳಿಂದ ಮುಖ್ಯವಾಗಿ ಕೈಗಾರಿಕೆಯ ಸರಕುಗಳು ರಫ್ತಾಗುವುವು. ಇತರ ದೇಶಗಳಿಂದ ಧಾನ್ಯ, ತೊಲೆ, ಮೀನು, ಲೋಹ ಮೊದಲಾದ ಆಹಾರ ಸಾಮಗ್ರಿಗಳೂ, ಕೈಗಾರಿಕೆಗೆ ಬೇಕಾಗುವ ಸಾಮಾನುಗಳೂ ರಫ್ತಾಗುವುದು ಹೆಚ್ಚು. ಬ್ರಿಟಿಷ್ ದ್ವೀಪಗಳಲ್ಲಿ ಸುಮಾರು 100 ಕೋಟಿ ಪೌನುಗಳಷ್ಟು ಬೆಲೆ ಬಾಳುವ ಪರದೇಶದ ವ್ಯಾಪಾರವು ನಡೆಯುವುದು. ಫ್ರಾನ್ಸ್ ದೇಶವು ಈ ಖಂಡದಲ್ಲಿ ವ್ಯಾಪಾರದಲ್ಲಿ ಮೂರನೆಯದಾಗಿರುವುದು.

**ಭೂಮಾರ್ಗಗಳು.**—ಈ ಖಂಡದ ಎಲ್ಲಾ ಮುಖ್ಯ ಪಟ್ಟಣಗಳನ್ನೂ ರೈಲು ಮಾರ್ಗಗಳು ಕೂಡಿಸುವುವು. ಲಂಡನ್‌ನಿಂದ ಡೋವರ್, ಬ್ರಸಲ್ಸ್, ಬರ್ಲಿನ್‌ಗಳ ಮೂಲಕ ಸೆಂಟ್‌ಪೀಟರ್ಸ್‌ಬರ್ಗಿಗೆ 3 ದಿನಗಳಲ್ಲಿ ಪ್ರಯಾಣಮಾಡಬಹುದು. ಡೋವರ್, ಕಲೆ, ಪ್ಯಾರಿಸ್, ಮಾಂಟ್‌ಸೆನಿಸ್ ಸುರಂಗಮಾರ್ಗ ಇವುಗಳ ಮೂಲಕ ಬ್ರಿಂಡಿಸಿಗೆ 2 ದಿನಗಳಲ್ಲಿ ಹೋಗಬಹುದು. ಪ್ಯಾರಿಸ್, ಮಾಂಟ್‌ಸೆನಿಸ್ ಸುರಂಗ ಮಾರ್ಗ, ವಿಯನ್ನಗಳ ಮೂಲಕ ವಾರ್ನಕ್ಕೂ, ಅಲ್ಲಿಂದ ಜಹಜಿನಲ್ಲಿ ಸೀಪಾಸ್ಟರಿಸ ಮೇಲೆಯೋ ಆಗಲಿ ಅಥವಾ ಬೆಲ್ಗ್ರೇಡ್, ಸೊಫಿಯಾಗಳ ಮೂಲಕ ರೈಲು

ಮಾರ್ಗದಲ್ಲಿಯಾಗಲಿ ಕಾನ್‌ಸ್ಟಾನ್‌ಟಿನೋಪಲಿಗೆ 7 ದಿವಸಗಳೊಳಗಾಗಿ ಹೋಗಬಹುದು. ಹೀಗೆಯೇ ಅನೇಕ ರೈಲು ಮಾರ್ಗಗಳಿರುವುವು. ಗಾಡಿಯ ರಸ್ತೆಗಳು ಅಸಂಖ್ಯಾಕವಾಗಿರುವುವು. ಈ ಖಂಡದಲ್ಲಿ ಪೂರ್ವ ಪಶ್ಚಿಮವಾಗಿ ಪ್ರಯಾಣ ಮಾಡಲು ದೊಡ್ಡ ಪರ್ವತಗಳು ಅಡ್ಡಲಾಗಿ ಇಲ್ಲದೆ ಇರುವುದರಿಂದಲೂ, ಮೈದಾನವೇ ಈ ಖಂಡದ ⅔ ಭಾಗಕ್ಕಿಂತ ಹೆಚ್ಚಾಗಿರುವುದರಿಂದಲೂ, ಪರ್ವತಗಳಲ್ಲಿಯೂ ಸುರಂಗಮಾರ್ಗಗಳನ್ನು ಕೊರೆದಿರುವುದರಿಂದಲೂ, ರೈಲು ಮಾರ್ಗಗಳೂ, ಗಾಡಿಯ ರಸ್ತೆಗಳೂ ಇಷ್ಟು ಹೇರಳವಾಗಿರುವುವು.

ಮಾಸ್ಕೋವಿನಿಂದ ವ್ಲಾಡಿವೊಸ್ಟಾಕ್ ಮತ್ತು ಪೋರ್ಟ್‌ಆರ್ಥರ್‌ಗಳಿಗೆ ಹೋಗುವ ಎಂದರೆ ಏಷ್ಯಾ, ಯೂರೋಪುಗಳ ಉತ್ತರ ಭಾಗದಲ್ಲಿ ಒಂದಾಗಿ ಕೂಡಿಸುವ ರೈಲುಮಾರ್ಗದ ವಿಷಯವನ್ನು ಈಗ ಸ್ವಲ್ಪ ವಿವರಿಸಬಹುದು. ಈ ಮಾರ್ಗವು ಮಾಸ್ಕೋವಿನಿಂದ ಹೊರಟು ಸಮಾರ ಬಳಿ ವೋಲ್ಗ ನದಿಯನ್ನು ಹಾದು ಪೂರ್ವಾಭಿಮುಖವಾಗಿ ಚೆಲ್ಯಾಬಿನ್‌ಸ್ಕ್, ಓಮ್ಸ್‌ರ್ಸ್ಕ್, ಟಾಂಪ್ಸ್ಕ್, ಇರ್ಕುಟಸ್‌ಗಳ ಮೂಲಕ ಮುರೆನ್‌ಗೆ ಹೋಗಿ, ಅಲ್ಲಿಂದ ಒಂದು ಕವಲು ವ್ಲಾಡಿವೊಸ್ಟಾಕಿಗೂ ಮತ್ತೊಂದು ಕವಲು ಪೋರ್ಟ್‌ಆರ್ಥರಿಗೂ ಹೋಗುವುವು. ಈ ಮಾರ್ಗವು 600 ಮೈಲಿಗಳು ಉದ್ದವಾಗಿರುವುದು; ಇದು ಪ್ರಪಂಚದಲ್ಲೆಲ್ಲಾ ಉದ್ದವಾದ ರೈಲು ಮಾರ್ಗವು. ಇಂಗ್ಲೆಂಡಿನಲ್ಲಿರುವಂತೆ ಘಂಟೆಗೆ 40 ಮೈಲಿಗಳು ಹೋಗುವ ಗಾಡಿಗಳಾದರೆ ಒಂದು ವಾರದಲ್ಲಿ ಒಂದು ಕೊನೆಯಿಂದ ಮತ್ತೊಂದು ಕೊನೆಗೆ ಹೋಗುವುವು. ಆದರೆ ಇಲ್ಲಿನ ಗಾಡಿಗಳಿಗೆ 12 ದಿನಗಳು ಹಿಡಿಯುವುವು. ಇದರ ಪ್ರಾಮುಖ್ಯತೆಯು ದಿನೇ ದಿನೇ ಹೆಚ್ಚುತ್ತಲಿದೆ. ಈ ಗಾಡಿಗಳಲ್ಲಿ ಪ್ರಯಾಣಿಕರಿಗೆ ವಿಶೇಷ ಅನುಕೂಲಗಳನ್ನು ಒದಗಿಸಿರುವರು. ಗಾಡಿಗಳಲ್ಲಿಯೇ ಅಡಿಗೆಯ ಮನೆಯೂ, ಕ್ಷೌರಕರ ಅಂಗಡಿಯೂ, ಪ್ರತಿಯೊಬ್ಬರಿಗೂ ಮಲಗುವುದಕ್ಕೆ ಸ್ಥಳವೂ, ಪ್ರತಿ ಗಾಡಿಯಲ್ಲಿಯೂ ಎಲೆಕ್ಟ್ರಿಕ್ ದೀಪಗಳೂ, ಆಳುಗಳನ್ನು ಕರೆಯುವುದಕ್ಕೆ ಘಂಟೆಗಳೂ, ಶಾಖವನ್ನು ಹೆಚ್ಚು ಕಡಿಮೆ ಮಾಡುವುದಕ್ಕೆ ಏರ್ಪಾಡುಗಳೂ ಇರುವುವು. ಇಷ್ಟಕ್ಕಿಂತಲೂ ಅತ್ಯಾಶ್ಚರ್ಯಕರವಾದ ವಿಷಯವೇನೆಂದರೆ ಫಸ್ಟ್ ಕ್ಲಾಸಿನ ಛಾರ್ಜು ಮೈಲಿಗೆ 9 ಪೈಗಳು, ಅಂದರೆ ನಮ್ಮ ಸೆಕೆಂಡ್ ಕ್ಲಾಸಿನ ಛಾರ್ಜಿನಷ್ಟೇ ಇರುವುದು.

**ಜಲಮಾರ್ಗಗಳು.**—ಈ ಖಂಡದ ಭೂಮಧ್ಯ ಸಮುದ್ರಗಳೂ, ನದಿಗಳೂ ಪ್ರಯಾಣಕ್ಕೂ, ವ್ಯಾಪಾರದ ಸರಕುಗಳನ್ನು ಸಾಗಿಸುವುದಕ್ಕೂ ಹೇಗೆ ಉಪಯೋಗಕರವಾಗಿವೆ ಎಂಬುದನ್ನು ಹಿಂದೆಯೇ ಸೂಚಿಸಿದೆ. ಅನೇಕ ಕಡೆಗಳಲ್ಲಿ ಕೈಗಾರಿಕೆಗಳು ಹೆಚ್ಚಾಗಿ ನಡೆಯುವ ಪಟ್ಟಣಗಳ ಅನುಕೂಲಕ್ಕಾಗಿ ಹಡಗಿನ ಕಾಲುವೆಗಳನ್ನು ಮಾಡಿರುವರು. ಹೀಗೆ ಮರ್ಸೀ ನದಿಯ ಮುಖದಿಂದ ಮಾಂಚಸ್ಟರ ಪಟ್ಟಣದ ಮಧ್ಯಭಾಗಕ್ಕೆ ಒಂದು ಕಾಲುವೆಯು ತರಲ್ಪಟ್ಟಿರುವುದು.

**ಜನಗಳು ; ಜನಸಾಂದ್ರತೆ.**—ಪಶ್ಚಿಮ ಭಾಗದಲ್ಲಿ ತೀರಲಕ್ಷಣ, ಮೇಲ್ಮೈ ರೀತ್ಯಲಕ್ಷಣ, ವಾಯುಗುಣ, ಮಾರ್ಗಗಳು ಮೊದಲಾದುವುಗಳ ಅನುಕೂಲಗಳು ಮೇಲೆ ವಿವರಿಸಿರುವಂತೆ ಬಹು ವಿಶೇಷವಾಗಿರುವುದರಿಂದ ಜನಸಾಂದ್ರತೆಯು ಬಹಳ ಹೆಚ್ಚಾಗಿದೆ. ಪೂರ್ವಭಾಗದಲ್ಲಿಯೂ, ಉತ್ತರಭಾಗದಲ್ಲಿಯೂ ಈ ಅನುಕೂಲಗಳು ಬಹು ಕಡಿಮೆಯಾಗುವುದರಿಂದ ಜನಸಾಂದ್ರತೆಯು ಕಡಿಮೆಯಾಗಿರುವುದು. ಸ್ಕಾಟ್ಲೆಂಡಿನ ಉತ್ತರಭಾಗದಿಂದ ಕಾಕಸಸ್ ಪರ್ವತಗಳವರೆಗೆ ನೇರವಾಗಿ ಒಂದು ಗೆರೆಯನ್ನು ಎಳೆದರೆ ಆ ಗೆರೆಯ ಪಶ್ಚಿಮ ಭಾಗದ ಪ್ರದೇಶಗಳಲ್ಲಿ ಪರ್ವತ ಸೀಮೆಯಲ್ಲಿ ವಿನಾ ಜನಸಾಂದ್ರತೆಯು ಹೆಚ್ಚಾಗಿರುವುದೆಂದೂ, ಆ ಗೆರೆಗೆ ಪೂರ್ವದಲ್ಲಿ ಜನಸಾಂದ್ರತೆಯು ಕಡಿಮೆಯಾಗಿರುವುದೆಂದೂ ಸಾಮಾನ್ಯವಾಗಿ ಹೇಳಬಹುದು.

* ಜನರು.—ಈ ಖಂಡದ ಜನಸಂಖ್ಯೆಯು ಸುಮಾರು 40 ಕೋಟಿ. ಈ ಜನರು ಮುಖ್ಯವಾಗಿ ಆರ್ಯಕುಲಕ್ಕೆ ಅಥವಾ ಕಕೇಷಿಯನ್ ಕುಲಕ್ಕೆ ಸೇರಿದವರು ; ಅಥವಾ ಬಿಳಿಯ ಜನರು. ಹಂಗೇರಿ ದೇಶದ ಮಾಗ್ಯಾರ್ ಎಂಬ ಜನರೂ, ತುರ್ಕೀ ಜನರೂ ಮೊದಲಾದವರು ಮಾತ್ರ ಮಂಗೋಲಿಯನ್ ಕುಲಕ್ಕೆ ಸೇರಿದವರು ಅಥವಾ ಹಳದಿಯ ವರ್ಣದ ಜನರು. ಈ ಖಂಡದಲ್ಲಿ ಪ್ರಚುರವಾಗಿರುವ ಭಾಷೆಗಳೆಲ್ಲವೂ ಸಾಮಾನ್ಯವಾಗಿ ಆರ್ಯಭಾಷಾ ಕುಲಕ್ಕೆ ಸೇರಿದುವಾಗಿವೆ. ತುರ್ಕಿಯವರು ಮಹಮ್ಮದೀಯ ಮತದವರು. ಕೆಲವು ಯೆಹೂದ್ಯರು ಎಲ್ಲಾ ದೇಶಗಳಲ್ಲಿಯೂ ಚದರಿರುವರು. ಆದರೆ ಈ ಖಂಡದ ಜನರೆಲ್ಲರೂ ಸಾಮಾನ್ಯವಾಗಿ ಕ್ರೈಸ್ತ ಮತದವರಾಗಿರುವರು. ಇವರಲ್ಲಿ ಅರ್ಧಭಾಗ ರೋಮನ್ ಕ್ಯಾಥೊಲಿಕ್ ಪಂಗಡಕ್ಕೂ, $\frac{1}{4}$ ಭಾಗ ಪ್ರಾಟೆಸ್ಟೆಂಟು ಪಂಗಡಕ್ಕೂ, $\frac{1}{4}$ ಪಾಲು ಗ್ರೀಕ್ ಚರ್ಚಿನ ಪಂಗಡಕ್ಕೂ ಸೇರಿದವರಾಗಿರುವರು.

**ರಾಜ್ಯಗಳು.**—ಈ ಖಂಡವು 25 ರಾಜ್ಯಗಳಾಗಿ ವಿಭಾಗವಾಗಿದೆ. ಅನೇಕ ರಾಜ್ಯಗಳಿಗೆ ಸ್ವಾಭಾವಿಕವಾದ ಎಲ್ಲೆಗಳಿರುವುವು. ಈ ರಾಜ್ಯಗಳಲ್ಲಿ ಕೆಲವು ಅತ್ಯಂತ ಚಿಕ್ಕವು. ಉದಾಹರಣೆ:—ಪಿರನೀಸ್ ತಪ್ಪಲುಗಳಲ್ಲಿ ಇರುವ ಅಂಡೋರ.

ಬ್ರಿಟಿಷ್ ದ್ವೀಪಗಳು, ಫ್ರಾನ್ಸ್, ಜರ್ಮನಿ, ಆಸ್ಟ್ರಿಯಾ ಹಂಗೇರಿ, ರಷ್ಯಾ, ಇಟಲಿ ಇವು ಆರು ಯೂರೋಪಿನ ಮಹಾಪ್ರಭುತ್ವಗಳೆಂದು ಹೆಸರು ಪಡೆದಿವೆ. ಇವು ಆರೂ, ಅಮೆರಿಕದ ಸಂಯುಕ್ತ ಸಂಸ್ಥಾನಗಳು ಮತ್ತು ಜಪಾನ್ ಸೇರಿ ಎಂಟು ರಾಜ್ಯಗಳು ಪ್ರಪಂಚದ ಬಹು ಮುಖ್ಯ ರಾಜ್ಯಗಳೆಂದು ಎಣಿಸಲ್ಪಟ್ಟಿವೆ.

---

* 1 ಚ. ಮೈ. ಗೆ ಸರಾಸರಿ ಜನಸಂಖ್ಯೆಯು—ಬೆಲ್ಜಿಯಂ ದೇಶದಲ್ಲಿ 535, ಬ್ರಿಟಿಷ್ ದ್ವೀಪಗಳಲ್ಲಿ 333, ಹಾಲೆಂಡಿನಲ್ಲಿ 350, ಇಟಲಿಯಲ್ಲಿ 260, ಜರ್ಮನಿಯಲ್ಲಿ 236, ಫ್ರಾನ್ಸಿನಲ್ಲಿ 18[illegible] ರಷ್ಯದಲ್ಲಿ 42, ಸ್ಕಾಂಡಿನೇವಿಯದಲ್ಲಿ 24.

ಫ್ರಾನ್ಸ್, ಸ್ವಿಟ್ಜರ್ಲೆಂಡ್, ಈಚೆಗೆ ರಷ್ಯ, ಜರ್ಮನಿ, ಆಸ್ಟ್ರಿಯ ಹಂಗೇರಿ ಇವುಗಳು ವಿನಾ ಈ ಖಂಡದಲ್ಲಿ ಉಳಿದ ರಾಜ್ಯಗಳೆಲ್ಲವೂ ರಾಜರಿಂದ ಆಳಲ್ಪಡುತ್ತಿವೆ. ಆದರೆ ಎಲ್ಲಾ ರಾಜ್ಯಗಳಲ್ಲಿಯೂ ಸಾಮಾನ್ಯವಾಗಿ ಸಾಂಕುಶಪ್ರಭುತ್ವವು ನೆಲೆಗೊಂಡಿರುವುದು. ಬ್ರಿಟಿಷ್ ದ್ವೀಪಗಳ ರಾಜರಾದ ನಮ್ಮ ಚಕ್ರವರ್ತಿ ಸಾರ್ವಭೌಮರಾದ ಐದನೆಯ ಜಾರ್ಜರವರು ಎಷ್ಟು ಮಟ್ಟಿಗೆ ಪ್ರಜಾಪ್ರತಿನಿಧಿ ಸಭೆಗಳ ಮತಕ್ಕನುಸಾರವಾಗಿಯೇ ರಾಜ್ಯಭಾರಮಾಡುವರೆಂಬುದು ಮುಂದೆ ವಿವರಿಸಲ್ಪಡುವುದು.

ಈ ಖಂಡದ ಮುಖ್ಯವಾದ ರಾಜ್ಯಗಳ ವಿವರಣೆಯು ಮುಂದೆ ಸಂಗ್ರಹವಾಗಿ ಕೊಡಲ್ಪಡುವುದು. ಬ್ರಿಟಿಷ್ ದ್ವೀಪಗಳು ಮಾತ್ರ ತಪ್ಸೀಲಾಗಿ ವಿವರಿಸಲ್ಪಡುವುವು. ಪ್ರತಿಯೊಂದು ದೇಶದ ವಿವರಣೆಯನ್ನು ಸೂಚಿಸಿರುವ ಅಂಶಗಳೇ ಮುಖ್ಯವಾಗಿ ಸೂಚಿಸಲ್ಪಡುವುದರಿಂದ ಅವುಗಳನ್ನು ಈಗ ಚೆನ್ನಾಗಿ ನೆನಪಿಡಬೇಕು.

---

## ಬ್ರಿಟಿಷ್ ದ್ವೀಪಗಳು

**ವಿಸ್ತೀರ್ಣ, ಮೇರೆಗಳು ಮತ್ತು ಸನ್ನಿವೇಶ.**—ಗ್ರೇಟ್ ಬ್ರಿಟನ್, ಐರ್ಲೆಂಡ್ ಎಂಬ ಎರಡು ದೊಡ್ಡ ದ್ವೀಪಗಳನ್ನೂ, ಇವುಗಳ ಸುತ್ತಮುತ್ತಲಿರುವ ನೂರಾರು ಸಣ್ಣ ದ್ವೀಪಗಳನ್ನೂ ಒಳಗೊಂಡಿರುವ ಈ ದ್ವೀಪಗಳು 1,21,800 ಚ. ಮೈ. ವಿಸ್ತೀರ್ಣವುಳ್ಳವುಗಳಾಗಿವೆ. ಎಂದರೆ ಇವುಗಳ ವಿಸ್ತೀರ್ಣವು ಮೈಸೂರು ಸಂಸ್ಥಾನದ ನಾಲ್ಕರಷ್ಟು ಅಥವಾ ಇಂಡಿಯಾ ದೇಶದುದರ $\frac{1}{18}$ ರಷ್ಟು ಇರುವುದು.

ಮೇರೆಗಳನ್ನೂ, ಅಕ್ಷಾಂಶ ರೇಖಾಂಶಗಳನ್ನೂ ಭೂಪಟದಲ್ಲಿ ನೋಡಿ ಹೇಳಿ.

ಈ ದ್ವೀಪಗಳು ಯೂರೋಪಿನ ಖಂಡಾವರಣದಲ್ಲಿರುವ ದ್ವೀಪಗಳಾಗಿವೆ. ಇಲ್ಲಿನ ನೆಲವೂ, ಸಸ್ಯ, ಪ್ರಾಣಿಗಳೂ ಖಂಡಭಾಗದಲ್ಲಿನಂತೆಯೇ ಇವೆ. ಖಂಡದಿಂದ ಈ ದ್ವೀಪಗಳನ್ನು ಪ್ರತ್ಯೇಕಿಸುವ ಉತ್ತರ ಸಮುದ್ರ, ಇಂಗ್ಲಿಷ್ ಕಡಲ್ಗಾಲುವೆ, ಐರಿಷ್ ಸಮುದ್ರ ಇವುಗಳೆಲ್ಲವೂ ಆಳದಲ್ಲಿ 100 ಮಟ್ಟಗಳಿಗಿಂತ ಹೆಚ್ಚಾಗಿಲ್ಲ.

ಈ ದ್ವೀಪಗಳ ಸನ್ನಿವೇಶವು ಬಹಳ ಉತ್ತಮವಾದುದು. ಇವು ಸ್ಥಲಾರ್ಧಗೋಳದ ಮಧ್ಯ ಭಾಗದಲ್ಲಿಯೂ, ವ್ಯಾಪಾರಕ್ಕೆ ಪ್ರಸಿದ್ಧಿ ಹೊಂದಿದ ಯೂರೋಪು ಖಂಡದ ಇತರ ದೇಶಗಳಿಗೆ ಸಮೀಪದಲ್ಲಿಯೂ ಇರುವುವು. ಸುತ್ತಲೂ ಸಮುದ್ರದಿಂದ ಸುತ್ತಲ್ಪಟ್ಟಿರುವುದರಿಂದ ಈ ದೇಶಕ್ಕೆ ಶತ್ರುಭಯವು ಕಡಿಮೆಯಾಗಿರುವುದು. ಸೈನ್ಯವು ಚಿಕ್ಕದಾಗಿರುವುದು. ಇದರಿಂದ ಸಾಮಾನ್ಯವಾಗಿ ಎಲ್ಲಾ ಜನರೂ ಕೈಗಾರಿಕೆ ವ್ಯಾಪಾರಗಳಲ್ಲಿ ಉದ್ಯುಕ್ತರಾಗಿರಲು ಹೆಚ್ಚು ಅನುಕೂಲವಿದೆ. ಇದರ ಸಮುದ್ರತೀರವೂ, ವಾಯುಗುಣವೂ, ಖನಿಜಗಳ ಉತ್ಪತ್ತಿಯೂ ಸಹ ಈ ಸನ್ನಿ

ವೇಶದಂತೆಯೇ ಅನುಕೂಲವಾಗಿವೆ. ಈ ಕಾರಣಗಳಿಂದ ಈ ದೇಶವು ವ್ಯಾಪಾರ ದಲ್ಲಿ ಪ್ರಪಂಚದಲ್ಲಿ ಮೊದಲನೆಯದಾಗಿರುವುದು. ಜನಗಳು ಸಮುದ್ರಯಾನ ದಲ್ಲಿಯೂ, ಸಾಹಸಕಾರ್ಯಗಳಲ್ಲಿಯೂ ಅಭಿರುಚಿಯುಳ್ಳವರಾಗಿ ಪ್ರಪಂಚದ ನಾನಾಭಾಗಗಳಲ್ಲಿಯೂ ಕಾಲೊನಿಗಳನ್ನು (ಅಥವಾ ಹೊಸ ವಾಸಸ್ಥಳಗಳನ್ನು) ಏರ್ಪಡಿಸಿಕೊಂಡು ಅನೇಕ ದೇಶಗಳನ್ನೂ ಜಯಿಸಿ, ಅಪಾರವಾದ ಬ್ರಿಟಿಷ್ ಚಕ್ರಾಧಿಪತ್ಯವನ್ನು ಸ್ಥಾಪಿಸಿರುವರು.

**ಸಮುದ್ರತೀರದ ಲಕ್ಷಣ; ಸಾಮಾನ್ಯ ಲಕ್ಷಣಗಳು.**—ಗ್ರೇಟ್‌ಬ್ರಿಟನ್ ದ್ವೀಪದಲ್ಲಿ ಪೂರ್ವಭಾಗದಲ್ಲಿ ತೀರವು ತಗ್ಗಾಗಿಯೂ, ಸಾಮಾನ್ಯವಾಗಿ ನೇರ ವಾಗಿಯೂ ಇರುವುದು. ಪಶ್ಚಿಮ ಭಾಗದ ದಡವು ಎತ್ತರವಾಗಿಯೂ ಬಹು ಡೊಂಕಾಗಿಯೂ ಇರುವುದು. ಹೀಗೆ ಸಮುದ್ರವು ದೇಶದ ಒಳಭಾಗಕ್ಕೆ ನುಗ್ಗಿರು ವುದರಿಂದ ಇಂಗ್ಲೆಂಡಿನಲ್ಲಿ ಯಾವ ಒಳಭಾಗದ ಪ್ರದೇಶವೂ ಸಮುದ್ರಕ್ಕೆ 70 ಮೈಲಿಗಳಿಗಿಂತ ಹೆಚ್ಚು ದೂರವಾಗಿಲ್ಲ. ಸ್ಕಾಟ್ಲೆಂಡಿನಲ್ಲಿ 40 ಮೈಲಿಗಳಿಗಿಂತ ಹೆಚ್ಚು ದೂರವಾಗಿಲ್ಲ. ಅನೇಕ ಉತ್ತಮವಾದ ಬಂದರುಗಳು ಒಂದಕ್ಕೊಂದು ಸಮೀಪವಾಗಿ ಅಥವಾ ಜೊತೆ ಜೊತೆಯಾಗಿ ಇರುವುವು. ಪೂರ್ವ ಪಶ್ಚಿಮ ತೀರಗಳಲ್ಲಿರುವ ರೇವುಪಟ್ಟಣಗಳಾದ ಲಂಡನ್ ಮತ್ತು ಬ್ರಿಸ್ಟಲ್, ಹಲ್ ಮತ್ತು ಲಿವರ್‌ಪೂಲ್, ನ್ಯೂಕ್ಯಾಸಲ್ ಮತ್ತು ಕಾರ್ಲೈಲ್, ಎಡಿನ್‌ಬರ್ಗ್ ಮತ್ತು ಗ್ಲಾಸ್ಗೊ ಇವು ಒಂದಕ್ಕೊಂದು ಬಹು ಸಮೀಪದಲ್ಲಿರುವುದನ್ನು ಭೂಪಟದಲ್ಲಿ ನೋಡಿ.

ಐರ್ಲೆಂಡ್ ದ್ವೀಪದ ತೀರಲಕ್ಷಣವು ಸಾಮಾನ್ಯವಾಗಿ ಹೀಗೆಯೇ ಇರು ವುದು. ಪಶ್ಚಿಮ ತೀರವು ಹೆಚ್ಚಾಗಿ ಒಡೆದು ಎತ್ತರವಾಗಿರುವುದು. ಪೂರ್ವಭಾಗ ದಲ್ಲಿ ತಗ್ಗಾದ ಮರಳಿನ ತೀರವಿರುವುದು. ಒಳ್ಳೆಯ ಬಂದರುಗಳು ಪೂರ್ವತೀರದಲ್ಲಿ ಬಹು ಕಡಿಮೆ. ನೈರುತ್ಯದಲ್ಲಿಯೂ ದಕ್ಷಿಣದಲ್ಲಿಯೂ ವಿಶೇಷವಾಗಿರುವುವು.

ನಾರ್ವೆಯಲ್ಲಿನಂತೆಯೇ ಐರ್ಲೆಂಡು, ಸ್ಕಾಟ್ಲೆಂಡುಗಳಲ್ಲಿ ಪಶ್ಚಿಮ ತೀರದಲ್ಲಿ ಅನೇಕ ಫಿಯರ್ಡುಗಳೂ ಇರುವುವು. ಇವು ಅಲ್ಲಿನಂತೆಯೇ ಮೀನು ಹಿಡಿಯು ವುದಕ್ಕೂ, ಹಡಗುಗಳ ಸಂಚಾರಕ್ಕೂ ಉಪಯೋಗವಾಗಿವೆ. ಈ ಫೀಯರ್ಡು ಗಳ ದಡಗಳು ಕಡಿದಾಗಿಯೂ ಎತ್ತರವಾಗಿಯೂ ಇರುವುವು. ಸಮುದ್ರ ನೀರು ಇಕ್ಕಟ್ಟಾಗಿ ಭೂಮಿಯೊಳಕ್ಕೆ ಬಹುದೂರ ಕೊರೆದುಕೊಂಡು ಹೋಗಿರು ವುದು. ಇವುಗಳ ಮುಖದಲ್ಲಿ ಸಾಮಾನ್ಯವಾಗಿ ಸಣ್ಣ ಸಣ್ಣ ದ್ವೀಪಗಳು ಇರು ವುದರಿಂದ, ಇವುಗಳಲ್ಲಿ ದೊಡ್ಡ ಅಲೆಗಳಿಲ್ಲದೆ ನೀರು ಶಾಂತವಾಗಿರುವುದು.

ಈ ದ್ವೀಪಗಳ ತೀರದ ಉದ್ದಕ್ಕೂ, ಮೇಲ್ಮೈಯ್ಯ ವಿಸ್ತೀರ್ಣಕ್ಕೂ ಇರು ಪರಿಮಾಣವು 1:20. ಆದರೆ ಯೂರೊಪಿನಲ್ಲಿ ಈ ಪರಿಮಾಣವು 1:200

ಇದರಿಂದ ಈ ದೇಶದ ತೀರವು ಎಷ್ಟು ಹೆಚ್ಚು ಡೊಂಕಾಗಿದೆ ಎಂಬುದು ಸ್ಪಷ್ಟ ವಾಗುವುದು.

**ತೀರದ ವಿವರ.**—ಈ ದ್ವೀಪಗಳಲ್ಲಿರುವ ಮುಖ್ಯವಾದ ಖಾರಿ ಮೊದಲಾದುವು ಯಾವುವೆಂಬುದನ್ನು ಈ ನಕ್ಷೆಯಲ್ಲಿ ನೋಡಿ, ನಿಮ್ಮ ನಕ್ಷೆಯಲ್ಲಿ ಗುರುತು ಮಾಡಿ.

ಇಂಗ್ಲೆಂಡಿನ ಪೂರ್ವ ತೀರದಲ್ಲಿ ಹಂಬರ್, ವಾಷ್ ಮತ್ತು ತೇಮ್ಸ್ ಅಳಿವೆಗಳಿರುವುವು. ದಕ್ಷಿಣದಲ್ಲಿ ಡೋವರ್ ಜಲಸಂಧಿ, ಇಂಗ್ಲಿಷ್ ಕಡಲ್ಗಾಲುವೆ, ವೈಟ್‌ದ್ವೀಪ ಮತ್ತು ಚಾನಲ್ ದ್ವೀಪಗಳು ಇರುವುವು. ಪಶ್ಚಿಮ ತೀರದಲ್ಲಿ ಬ್ರಿಸ್ಟಲ್ ಕಡಲ್ಗಾಲುವೆ, ಕಾರ್ಡಿಗನ್ ಕೊಲ್ಲಿ ಮತ್ತು ಐರಿಷ್ ಸಮುದ್ರಗಳು ಇರುವುವು. ಐರಿಷ್ ಸಮುದ್ರವು ಸೆಂಟ್ ಜಾರ್ಜ್ ಮತ್ತು ನಾರ್ತ್ ಕಡಲ್ಗಾಲುವೆಗಳಿಂದ ಅಟ್ಲಾಂಟಿಕ್ ಸಾಗರಕ್ಕೆ ಸೇರಿಸಲ್ಪಟ್ಟಿದೆ. ಈ ಸಮುದ್ರದಲ್ಲಿರುವ ದ್ವೀಪಗಳಲ್ಲಿ ಮಾನ್ ಎಂಬುವುದೂ, ಇಂಗ್ಲೆಂಡಿನಿಂದ ಮೆನ್ಶೈ ಜಲಸಂಧಿಯಿಂದ ಪ್ರತ್ಯೇಕಿಸಲ್ಪಟ್ಟಿರುವ ಆಂಗ್ಲೆಸಿ ಎಂಬುದೂ ಮುಖ್ಯವಾದುವು. ಲೋವೆಸ್ ಟಾಫ್ಟ್ ಎಂಬುವುದು ಇಂಗ್ಲೆಂಡಿನ ಅತ್ಯಂತ ಪೂರ್ವ ಭೂಶಿರವು. ಅಜರ್ಡ್‌ಪಾಯಿಂಟ್ ಅತ್ಯಂತ ದಕ್ಷಿಣ ಭೂಶಿರವು. ಲ್ಯಾಡ್ಸೆಂಡ್ ಅತ್ಯಂತ ಪಶ್ಚಿಮ ಭೂಶಿರವು.

ಸ್ಕಾಟ್ಲೆಂಡಿನಲ್ಲಿ ಪೂರ್ವ ತೀರದಲ್ಲಿ ಫೋರ್ತ್, ಟೇ, ಮೊರೇ ಎಂಬ ಸಮುದ್ರಶಾಖೆಗಳು ಇರುವುವು. ಫೋರ್ತಿನ ಮೇಲೆ ಒಂದು ಅದ್ಭುತವಾದ ಸೇತುವೆಯನ್ನು ಕಟ್ಟಿರುವರು. ಈ ಸೇತುವೆಯು ಎರಡು ಮೈಲಿ ಉದ್ದವಾಗಿಯೂ, ಅತ್ಯಂತ ಭಾರಿ ಹಡಗುಗಳು ಅದರಡಿಯಲ್ಲಿ ಹೋಗಬಹುದಾದಷ್ಟು ಎತ್ತರವಾಗಿಯೂ ಇರುವುದು. ಉತ್ತರದಲ್ಲಿ ಆರ್ಕನಿ ಮತ್ತು ಷೆಟ್ಲಂಡ್ ದ್ವೀಪಸಮುದಾಯಗಳಿರುವುವು. ಪಶ್ಚಿಮದಲ್ಲಿ ಸಾಲ್ವೆ ಮತ್ತು ಕ್ಲೈಡ್ ಸಮುದ್ರಶಾಖೆಗಳೂ, ಹೆಬ್ರೆಡೀಸ್ ದ್ವೀಪಸಮುದಾಯವೂ, ಅನೇಕ ಫಿಯರ್ಡ್‌ಗಳೂ ಇರುವುವು. ಈ ದೇಶದ ಅತ್ಯಂತ ಉಪಯೋಗದಲ್ಲಿರುವ ಭೂಶಿರವು ರಾತ್ ಎಂಬುದು.

ಐರ್ಲೆಂಡಿನ ಉತ್ತರದಲ್ಲಿ ಫಾಯಿಲ್ ಖಾರಿಯೂ, ಪಶ್ಚಿಮದಲ್ಲಿ ಗಾನಿಗಲ್, ಗಾಲ್ವೆ ಖಾರಿಗಳೂ, ಷಾನನ್ ಅಳಿವೆಯೂ, ದಕ್ಷಿಣದಲ್ಲಿ ಕಾರ್ಕ್ ಯೂಹಲ್ ಬಂದರುಗಳೂ, ಪೂರ್ವದಲ್ಲಿ ಬೆಲ್‌ಫಾಸ್ಟ್ ಡಬ್ಲಿನ್ ಖಾರಿಗಳೂ ವೆಕ್ಸ್‌ಫರ್ಡ್ ಬಂದರೂ ಇವೆ. ಇವೆಂಕ್ಲಿಯರ್ ಭೂಶಿರವು ಈ ದ್ವೀಪದ ಅತ್ಯಂತ ದಕ್ಷಿಣ ಕೊನೆಯಾಗಿದೆ.

**ಸಮುದ್ರದ ಉಬ್ಬರವಿಳಿತಗಳಿಂದ ಬಂದರುಗಳಿಗೆ ಉಂಟಾಗಿರುವ ಅನುಕೂಲಗಳು.**—ಇಂಡಿಯಾ ದೇಶದಲ್ಲಿ ಉಬ್ಬರವಿಳಿತಗಳಿಂದ ಬಂದರುಗಳಿಗೆ ಹೆಚ್ಚು ಅನುಕೂಲವಿಲ್ಲ; ವಿಸ್ತಾರವಾದ ಅರಬ್ಬೀ ಸಮುದ್ರ ಬಂಗಾಳಾಕೊಲ್ಲಿ

ಗಳಲ್ಲಿ ಉಬ್ಬರವೂ ಸ್ವಲ್ಪವಾಗಿಯೇ ಇರುವುದು ; ಸಮುದ್ರಶಾಖೆಗಳೂ ಬಂದರುಗಳೂ ಕಡಿಮೆ. ಈ ದ್ವೀಪಗಳಲ್ಲಾದರೋ ಉಬ್ಬರವಿಳಿತಗಳಿಂದ ಬಂದರುಗಳಿಗೆ ವಿಶೇಷ ಸಹಾಯವುಂಟು. ಅಟ್ಲಾಂಟಿಕ್ ಸಾಗರದ ಕಡೆಯಿಂದ ಈ ಅಲೆಗಳು ನುಗ್ಗುವುದರಿಂದ, ಪಶ್ಚಿಮ ತೀರದ ಬಂದರುಗಳಲ್ಲಿ ಇವು 50 ಅಡಿಗಳಷ್ಟು ಎತ್ತರವಾಗಿಯೂ ಏಳುವುದುಂಟು. ಪೂರ್ವತೀರದಲ್ಲಿ ಇವುಗಳ ಎತ್ತರವು ಕಡಿಮೆ. 20 ಅಡಿಗಳೇ ಹೆಚ್ಚು. ಈ ಅಲೆಗಳು ನದೀಮುಖಗಳಿಂದ ಕಲ್ಲುಮಣ್ಣುಗಳನ್ನು ದೂರಕ್ಕೆ ಸಾಗಿಸಿಕೊಂಡು ಹೋಗುವುವು. ಆದುದರಿಂದಲೇ ಈ ದ್ವೀಪಗಳಲ್ಲಿ ಅಷ್ಟೊಂದು ಆಳವಾದ ಅಳಿವೆಗಳಿರುವುವು. ಸಮುದ್ರವು ಉಬ್ಬಿದಾಗ ಹಡಗುಗಳು ನದಿಗಳ ಮೇಲೆ ಬಹುದೂರ ಹೋಗಬಹುದು ; ಇಳಿಯುವಾಗ ಸಮುದ್ರಕ್ಕೆ ವಾಪಸು ಬರಬಹುದು.

**ಮೇಲ್ಮೈಯ್ಯ ಲಕ್ಷಣ ; ಸಾಮಾನ್ಯ ಲಕ್ಷಣಗಳು.**—ಗ್ರೇಟ್ ಬ್ರಿಟನ್ ದ್ವೀಪದಲ್ಲಿ ಸಾಮಾನ್ಯವಾಗಿ ಉತ್ತರ ಪಶ್ಚಿಮ ಭಾಗಗಳು ಪರ್ವತಪ್ರದೇಶಗಳಾಗಿವೆ, ಪೂರ್ವ ದಕ್ಷಿಣಭಾಗಗಳು ಮೈದಾನಗಳಾಗಿವೆ. ಐರ್ಲೆಂಡಿನಲ್ಲಿ ತೀರ ಪ್ರದೇಶಗಳು ಸಾಮಾನ್ಯವಾಗಿ ಪರ್ವತ ಪ್ರದೇಶಗಳಾಗಿವೆ. ಮಧ್ಯಭಾಗವೆಲ್ಲವೂ ತಗ್ಗಾದ ಮೈದಾನವಾಗಿದೆ ; ಉತ್ತರ ದಕ್ಷಿಣ ಭಾಗಗಳ ಬೆಟ್ಟಗಳ ನಡುವೆಯೂ ಈ ಮೈದಾನವು ಅಲ್ಲಲ್ಲಿ ನುಗ್ಗಿಹೋಗಿರುವಂತೆ ಕಾಣುವುದು.

**ಬೆಟ್ಟ, ಮೈದಾನ ಮೊದಲಾದುವು.**—ಇಂಗ್ಲೆಂಡಿನ ಪಶ್ಚಿಮ ಭಾಗದಲ್ಲಿ ಬೆಟ್ಟಗಳು ವಿಶೇಷವಾಗಿದ್ದರೂ ಅವು ವೇಲ್ಸ್ ಸ್ಕಾಟ್ಲೆಂಡ್ ಬೆಟ್ಟಗಳಷ್ಟು ಎತ್ತರವಾಗಿಲ್ಲ.

ಪಿನ್ನೈನ್ ಪರ್ವತಪಙ್ಕ್ತಿಯು ಉತ್ತರ ಭಾಗದಲ್ಲಿ ದಕ್ಷಿಣೋತ್ತರವಾಗಿ ಹಬ್ಬಿದೆ ; ಈ ಪರ್ವತ ಪ್ರದೇಶದಲ್ಲಿ ಕಲ್ಲಿದ್ದಲಿನ ಗಣಿಗಳು ಹೇರಳವಾಗಿವೆ.

ಇದಕ್ಕೆ ಪಶ್ಚಿಮದಲ್ಲಿ ಕಂಬ್ರಿಯನ್ ಪರ್ವತಗಳಿವೆ. ಇವುಗಳ ಮಧ್ಯೆ ಅತ್ಯಂತ ಸುಂದರವಾದ ಅನೇಕ ಸರೋವರಗಳಿವೆ. ಈ ಪರ್ವತಗಳಲ್ಲಿ ಕಬ್ಬಿಣವೂ ಕಲ್ಲಿದ್ದಲೂ ಸಿಕ್ಕುವುವು. ಕುರಿಗಳಿಗೆ ಮೇವು ವಿಶೇಷವಾಗಿರುವುದು. ಈ ಬೆಟ್ಟಗಳಲ್ಲಿರುವ ಸ್ಕಾಫೆಲ್ ಶಿಖರವು (3200 ಅಡಿ) ಇಂಗ್ಲೆಂಡಿನಲ್ಲಿ ಅತ್ಯಂತ ಎತ್ತರವಾದ ಶಿಖರವು.

ವೇಲ್ಸಿನ ಮೇಲ್ಮೈಯ್ಯೆಲ್ಲವೂ ಪರ್ವತಪ್ರದೇಶವೇ ಆಗಿದೆ. ಈ ಪರ್ವತಗಳಲ್ಲಿರುವ ಸ್ನೋಡನ್ (3570 ಅಡಿ) ಶಿಖರವು ಇಂಗ್ಲೆಂಡು ವೇಲ್ಸುಗಳಲ್ಲಿ ಅತ್ಯುನ್ನತವಾದುದಾಗಿದೆ. ದಕ್ಷಿಣಭಾಗದಲ್ಲಿ ಕಬ್ಬಿಣ ಕಲ್ಲಿದ್ದಲುಗಳು ಸಿಕ್ಕುವುವು. ಉಳಿದ ಪ್ರದೇಶಗಳಲ್ಲಿ ಕುರಿಗಳನ್ನು ಸಾಕುವರು.

ಇಂಗ್ಲೆಂಡಿನ ಆಗ್ನೇಯದಿಕ್ಕಿನ ಪರ್ಯಾಯದ್ವೀಪದಲ್ಲಿ ಅನೇಕ ಸಣ್ಣ ಸಣ್ಣ ಗುಡ್ಡಗಳಿವೆ. ಅವುಗಳಲ್ಲಿ ಕಾಡುಗಳು ವಿಶೇಷವಾಗಿವೆ; ತವರವೂ, ಸೀಸವೂ, ಕಟ್ಟಡಗಳಿಗೆ ಉಪಯೋಗವಾಗುವ ಕಲ್ಲುಗಳೂ ಇಲ್ಲಿ ದೊರೆಯುವುವು.

ಈ ಪಶ್ಚಿಮಭಾಗದ ಬೆಟ್ಟಗಳ ಪೂರ್ವಭಾಗವೆಲ್ಲವೂ ಮೈದಾನವಾಗಿರುವುದು; ಈ ಮೈದಾನವು ಬರ್ವಿಕ್ಕಿನಿಂದ ದಕ್ಷಿಣತೀರದವರೆಗೂ ಬರುತ್ತ ಬರುತ್ತ ಅಗಲವಾಗಿ ವಿಸ್ತರಿಸುವುದು; ಇದರಲ್ಲಿ ಅಲ್ಲಲ್ಲಿ ಸುಣ್ಣಕಲ್ಲಿನ ಗುಡ್ಡಗಳಿರುವುವು.

ಸ್ಕಾಟ್ಲೆಂಡಿನ ಉತ್ತರಭಾಗವು ಎತ್ತರವಾದ ಪರ್ವತಪ್ರದೇಶವಾಗಿಯೂ, ಮಧ್ಯಭಾಗವು ಮೈದಾನವಾಗಿಯೂ, ದಕ್ಷಿಣ ಭಾಗವು ತಗ್ಗಾದ ಗುಡ್ಡಗಳ ಪ್ರದೇಶವಾಗಿಯೂ ಇರುವುವು. ಉತ್ತರಭಾಗದ ಪರ್ವತಗಳಲ್ಲಿ ಗ್ರಾಂಪಿಯನ್ ಪರ್ವತಗಳು ಮುಖ್ಯವಾದುವು. ಈ ಉತ್ತರ ಭಾಗದ ಪರ್ವತಗಳಲ್ಲಿ ಬೆನ್ನವಿಸ್ (4400 ಅಡಿ) ಎಂಬುದು ಬ್ರಿಟಿಷ್ ದ್ವೀಪಗಳಲ್ಲೆಲ್ಲಾ ಅತ್ಯುನ್ನತ ಶಿಖರವು. ಈ ಪರ್ವತಗಳಲ್ಲಿ ಅನೇಕ ಸುಂದರವಾದ ಸರೋವರಗಳಿರುವುವು. ಜಿಂಕೆಗಳು ವಾಸ ಮಾಡುವ ಕಾಡುಗಳೂ ಇರುವುವು. ಮಧ್ಯಭಾಗದ ಮೈದಾನವು ಪೂರ್ವದಿಕ್ಕಿಗೆ ಇಳಿಜಾರಾಗಿರುವುದು. ದಕ್ಷಿಣಭಾಗದ ಗುಡ್ಡಗಳಲ್ಲಿ ಬೆಣಚುಕಲ್ಲುಗಳು ಹೆಚ್ಚು; ಆದುದರಿಂದ ಇಲ್ಲಿ ಕುರಿಗಳಿಗೂ ಮೇವು ಸಿಕ್ಕುವುದಿಲ್ಲ; ಇವು ಇಂಗ್ಲೆಂಡ್, ಸ್ಕಾಟ್ಲೆಂಡುಗಳನ್ನು ಪ್ರತ್ಯೇಕಿಸುವ ಸ್ವಾಭಾವಿಕವಾದ ಮೇರೆಯಾಗಿವೆ.

ಐರ್ಲೆಂಡಿನಲ್ಲಿ ಪರ್ವತಗಳು ಸಾಮಾನ್ಯವಾಗಿ 4 ಭಾಗಗಳಾಗಿ ಕಾಣುವುವು. ಇವು ನಾಲ್ಕು ದಿಕ್ಕುಗಳಲ್ಲಿಯೂ ಇರುವುವು. ಪಶ್ಚಿಮಭಾಗದ ಪರ್ವತಗಳಲ್ಲಿ ವಾಗಡಿಕಲಿ ಎಂಬುದು ಮುಖ್ಯವಾದ ಪರ್ವತಶ್ರೇಣಿಯು. ಇದರಲ್ಲಿರುವ ಕ್ಯಾರೆಂಟ್ ಆಲ್ ಎಂಬುವುದು (3400 ಅಡಿ) ಇಂಗ್ಲೆಂಡಿನಲ್ಲಿ ಎತ್ತರವಾದ ಶಿಖರ. ಈ ದ್ವೀಪದ ಮಧ್ಯಭಾಗವೆಲ್ಲವೂ ಅಂದರೆ ಈ ದ್ವೀಪದ $\frac{4}{5}$ ಭಾಗವು ಮೈದಾನವಾಗಿದೆ. ಈ ಮೈದಾನದಲ್ಲಿ ಸ್ವಲ್ಪ ಭಾಗವು ಕೊಚ್ಚೆಯ ನೆಲವೂ ಉಸುಬಿನ ಭೂಮಿಯೂ ಆಗಿರುವುದು; ಇದರಲ್ಲಿ ಅನೇಕ ಕಡೆ ಪೀಪ್ ಎಂಬ ಕಲ್ಲಿದ್ದಲಿನಂತಹ ಸೌದೆಯು ಸಿಕ್ಕುವುದು. ಉಳಿದ ಭಾಗವೆಲ್ಲವೂ ವಿಶಾಲವಾದ ಹುಲ್ಲುಗಾವಲುಗಳಾಗಿರುವುದು. ಇಲ್ಲಿ ಹುಲ್ಲು ಬಹು ಸೊಂಪಾಗಿ ಬೆಳೆದು ಮೈದಾನವೆಲ್ಲವೂ ಅಚ್ಚಹಸುರಾಗಿ ಕಾಣುವುದರಿಂದ ಈ ದ್ವೀಪವನ್ನು 'ಮರಕತ ದ್ವೀಪ' ಎಂದು ಕರೆಯುವುದುಂಟು; ಈ ಹುಲ್ಲುಗಾವಲುಗಳಲ್ಲಿ ದನಗಳನ್ನು ವಿಶೇಷವಾಗಿ ಸಾಕುವರು.

**ನದಿಗಳು; ಇಂಗ್ಲೆಂಡು.**—ಈ ದೇಶದ ಮುಖ್ಯವಾದ ಜಲವಿಭಾಗಸ್ಥಾನವು ಪಶ್ಚಿಮಭಾಗದಲ್ಲಿ ಉತ್ತರದಿಂದ ದಕ್ಷಿಣಕ್ಕೆ ಪ್ರಸರಿಸಿರುವುದು. ಇದು ಪಶ್ಚಿಮ ಭಾಗದಲ್ಲಿರುವುದರಿಂದ ಪೂರ್ವದಿಕ್ಕಿಗೆ ಹರಿಯುವ ನದಿಗಳಿಗೂ ಪಶ್ಚಿಮದಿಕ್ಕಿನ

ನದಿಗಳಿಗೂ ವ್ಯತ್ಯಾಸವು ವಿಶೇಷವಾಗಿ ಕಂಡುಬರುವುದು. ದಖನ್ನಿನಲ್ಲಿರುವಂತೆ ಇಲ್ಲಿಯೂ ಪಶ್ಚಿಮಭಾಗದ ನದಿಗಳು ಚಿಕ್ಕವು, ವೇಗವಾಗಿ ಹರಿಯುವುವು; ಪೂರ್ವಭಾಗದ ನದಿಗಳು ಉದ್ದವಾಗಿ ನಿಧಾನವಾಗಿ ಹರಿಯುವುವು. ಪೂರ್ವ ಭಾಗದ ನದಿಗಳ ಮುಖಗಳು ಅಗಲವಾಗಿಯೂ ಆಳವಾಗಿಯೂ ಇರುವುವು. ಇವುಗಳಲ್ಲಿ ಉಬ್ಬರವಿಳಿತಗಳ ಸಹಾಯದಿಂದ ಹಡಗುಗಳು ಸುಲಭವಾಗಿ ಸಂಚರಿಸ ಬಹುದು. ಆದುದರಿಂದ ಪೂರ್ವಭಾಗದ ನದಿಗಳು ಹೆಚ್ಚು ಪ್ರಯೋಜನಕಾರಿ ಗಳಾಗಿವೆ. ದಕ್ಷಿಣಭಾಗದಲ್ಲಿ ಕೆಲವು ನದಿಗಳಿರುವುವು; ಅವು ವೇಗವಾಗಿ ಹರಿಯುದಿದ್ದರೂ ಬಹು ಚಿಕ್ಕವಾಗಿಯೂ ಆಳವಿಲ್ಲದುವುಗಳಾಗಿಯೂ ಇರುವುವು.

ಪೂರ್ವಭಾಗದ ನದಿಗಳಲ್ಲಿ ಮುಖ್ಯವಾದುವು ಯಾವುವೆಂದರೆ:—

**ಟೆಮ್ಸ್.**—ಇದು 215 ಮೈಲಿ ಉದ್ದವಿರುವುದು. ಇದಕ್ಕೆ 10 ಉಪ ನದಿಗಳು ಸೇರುವುವು. ಇದು ಫಲವತ್ತಾದ ಮೈದಾನದಲ್ಲಿ ನಿಧಾನವಾಗಿ ಹರಿಯುವುದು. ಮುಖದ ಕಡೆ ಆಳವಾಗಿಯೂ ಸಮುದ್ರದ ಉಬ್ಬರವಿಳಿತಗಳಿಗೆ ಒಳಪಟ್ಟುದಾಗಿಯೂ ಇರುವುದು.

**ಹಂಬರ್.**—ಉತ್ತರದಿಂದ ಯಾರ್ಕ್‌ಷೈರಿನ ಊಸ್ ನದಿಯೂ ದಕ್ಷಿಣದಿಂದ ಟ್ರೆಂಥ್ ನದಿಯೂ ಹರಿದು ಬಂದು ಒಟ್ಟುಗೂಡಿ ಹಂಬರ್ ನದಿಯಾಗಿದೆ. ಇದರ ಜಲಾಶಯನಭೂಮಿಯು ಈ ದೇಶದ ಇತರ ನದಿಗಳವುಗಳಿಗಿಂತ ಬಹು ದೊಡ್ಡದು. ಟ್ರೆಂಥ್ ನದಿಯು 15 ಉಪನದಿಗಳನ್ನು ಸ್ವೀಕರಿಸಿ ಕೈಗಾರಿಕೆಗಳು ವಿಶೇಷವಾ ಗಿರುವ ಪ್ರದೇಶದಲ್ಲಿ ಹರಿಯುವುದು. ಇದರ ಮುಕ್ಕಾಲುಭಾಗವು ಹಡಗುಗಳ ಸಂಚಾರಕ್ಕೆ ಯೋಗ್ಯವಾಗಿರುವುದು. ವೇರ್ ಮತ್ತು ಟೈನ್ ಎಂಬುವು ಪೂರ್ವ ದಿಕ್ಕಿಗೆ ಹರಿಯುವ ಇತರ ನದಿಗಳು.

ಪಶ್ಚಿಮಭಾಗದ ನದಿಗಳಲ್ಲಿ ಮುಖ್ಯವಾದುವು ಯಾವುವೆಂದರೆ:—

**ಮರ್ಸಿ.**—ಈ ನದಿಯು ಬಹು ಚಿಕ್ಕದಾದರೂ ಅದರ ಅಳತೆಯು ಬಹು ವಿಶಾಲವಾಗಿಯೂ ಆಳವಾಗಿಯೂ ಇರುವುದು; ಇದೇ ಲಿವರ್‌ಪೂಲಿನ ಬಂದರು. ಇದು ಪ್ರಪಂಚದ ಅತ್ಯುತ್ತಮವಾದ ಬಂದರುಗಳಲ್ಲಿ ಒಂದಾಗಿರುವುದು.

**ಸೆವರ್ನ್.**—ಈ ನದಿಯು 240 ಮೈಲಿ ಉದ್ದವಿರುವುದು. ಆದರೆ ಸಮುದ್ರದ ಉಬ್ಬರದಲ್ಲಿ ಅಲೆಯು 50 ಅಡಿಗಳ ಎತ್ತರವಾಗಿ ಈ ನದಿಯಲ್ಲಿ ನುಗ್ಗುವುದು; ಇದಕ್ಕೆ 'ಬೋರ್' ಎಂದು ಹೆಸರು. ಹುಗ್ಲಿ ನದಿಯು ಹೇಗೋ ಹಾಗೆಯೇ ಇದೂ ಹಡಗುಗಳಿಗೆ ಆದಾಯಕರವಾಗಿದೆ.

**ಸ್ಕಾಟ್ಲೆಂಡು.**—ಈ ದೇಶದಲ್ಲಿ ಮುಖ್ಯವಾದ ಜಲವಿಭಾಗಸ್ಥಾನವು ಇಂಗ್ಲೆಂಡಿ ನಲ್ಲಿನಂತೆಯೇ ಪಶ್ಚಿಮದ ಕೊನೆಯಲ್ಲಿರುವುದು; ಆದುದರಿಂದ ಪೂರ್ವಭಾಗದ

ನದಿಗಳು ಪಶ್ಚಿಮಭಾಗದ ನದಿಗಳಿಗಿಂತಲೂ ಉದ್ದವಾಗಿರುವುವು; ನಿಧಾನವಾಗಿಯೂ ಹರಿಯುವುವು. ಈ ದೇಶದ ಉತ್ತರಭಾಗದಲ್ಲಿ ವಿಶೇಷವಾಗಿ ಪರ್ವತಗಳಿರುವುದರಿಂದ ಅಟ್ಲಾಂಟಿಕ್ ಸಾಗರದಿಂದ ಬೀಸುವ ಗಾಳಿಯುನ್ನು ತಡೆದು ವಿಶೇಷವಾಗಿ ಮಳೆಯನ್ನು ಸುರಿಸುತ್ತವೆ; ಈ ಮಳೆಯ ನೀರು ಅನೇಕ ಸರೋವರಗಳಿಗೂ ನದಿಗಳಿಗೂ ಸೇರುವುದು. ಆದುದರಿಂದ ಈ ದೇಶದ ನದಿಗಳಲ್ಲಿ ಯಾವಾಗಲೂ ನೀರು ವಿಶೇಷವಾಗಿರುವುದು. ಪಶ್ಚಿಮಭಾಗದ ನದಿಗಳು ವೇಗವಾಗಿ ಹರಿದರೂ ವಿಸ್ತಾರವಾದ ಅಳಿವೆಗಳನ್ನು ಹೊಂದಿವೆ.

ಪೂರ್ವಭಾಗದ ನದಿಗಳಲ್ಲಿ ಟೀ, ಟ್ವೀಡ್, ಫೋರ್ತ್ ಎಂಬುವು ಮುಖ್ಯವಾದುವು. ಫೋರ್ತಿನ ಅಳಿವೆಯಲ್ಲಿ ಸ್ಟರ್ಲಿಂಗ್ ರೇವುಪಟ್ಟಣದವರೆಗೂ ದೊಡ್ಡ ಹಡಗುಗಳು ಹೋಗುವುವು. ಪಶ್ಚಿಮಭಾಗದ ನದಿಗಳಲ್ಲಿ ಕ್ಲೈಡ್ ಮುಖ್ಯವಾದುದು. ಇದು 100 ಮೈಲಿ ಮಾತ್ರ ಉದ್ದವಾಗಿ ವೇಗವಾಗಿ ಹರಿದು ಬಂದರೂ, ಇದರ ಅಳಿವೆಯು ವಿಶಾಲವಾಗಿಯೂ ಶಾಂತವಾಗಿಯೂ ಇರುವುದರಿಂದ ಅದರ ತೀರದಲ್ಲಿ ಗ್ಲಾಸ್ಗೋ, ಗ್ರೀನಾಕ್, ಡಂಬಾರ್ಡನ್ ಎಂಬ ರೇವುಪಟ್ಟಣಗಳಿರುವುವು.

**ಐರ್ಲೆಂಡು.**—ಈ ದೇಶದ ಜಲವಿಭಾಗಸ್ಥಾನವು ಪೂರ್ವಭಾಗದಲ್ಲಿರುವುದರಿಂದ, ಪಶ್ಚಿಮಭಾಗದ ನದಿಗಳೇ ಉದ್ದವಾಗಿವೆ. ಇವುಗಳಲ್ಲಿ ಷಾನನ್ ನದಿಯು 225 ಮೈಲಿ ಉದ್ದವಿರುವುದು; ಇದು ನಿಧಾನವಾಗಿ ಮೈದಾನದಲ್ಲಿ ಹರಿಯುವುದರಿಂದ 200 ಮೈಲಿಗಳವರೆಗೂ ಒಳ್ಳೆಯ ಜಲಮಾರ್ಗವಾಗಿದೆ. ಇದರ ಅಳಿವೆಯು 60 ಮೈಲಿ ಉದ್ದವಿರುವುದು. ಇದರ ತೀರದಲ್ಲಿ ಲಿಮರಿಕ್ ಎಂಬುದು ಮುಖ್ಯವಾದ ರೇವುಪಟ್ಟಣವು. ಹರಿಯುವ ದಿಕ್ಕು, ಉದ್ದ, ಉಬ್ಬರದ ಅಲೆ ಇವುಗಳಲ್ಲಿ ಇದು ಸೆವರ್ನ್ ನದಿಯನ್ನು ಹೋಲುವುದು.

**ಇಂಡಿಯಾ ದೇಶದ ನದಿಗಳೊಡನೆ ಹೋಲಿಕೆ.**—ಸಾಮಾನ್ಯವಾಗಿ ಇಂಡಿಯಾ ದೇಶದಲ್ಲಿಯೂ ಬ್ರಿಟಿಷ್ ದ್ವೀಪಗಳಲ್ಲಿಯೂ ಪಶ್ಚಿಮಭಾಗದ ನದಿಗಳು ಚಿಕ್ಕವಾಗಿಯೂ ವೇಗವುಳ್ಳುವುಗಳಾಗಿಯೂ, ಪೂರ್ವಭಾಗದ ನದಿಗಳು ಉದ್ದವಾಗಿಯೂ ನಿಧಾನವಾಗಿ ಹರಿಯುವುದಾಗಿಯೂ ಇರುವುವು. ಸನ್ನಿವೇಶದಲ್ಲಿ ಷಾನನ್, ಸೆವರ್ನ್ ನದಿಗಳು ಸಿಂಧು ನದಿಯನ್ನೂ ಟೆಮ್ಸ್ ನದಿಯು ಗಂಗಾನದಿಯನ್ನೂ ಹೋಲುವುವು; ಆದರೆ ನಮ್ಮ ದೇಶದಲ್ಲಿ ನದಿಗಳು ಬಹಳ ಉದ್ದವಾಗಿದ್ದರೂ ದೂರದೂರವಾಗಿರುವುದರಿಂದ ಕಾಲುವೆಗಳನ್ನು ತೋಡಿ ಅವುಗಳನ್ನು ಸೇರಿಸಿ ಜಲಮಾರ್ಗಗಳನ್ನು ಮಾಡುವುದಕ್ಕೆ ಅನುಕೂಲವಿಲ್ಲ.

ನಮ್ಮ ದೇಶದ ನದಿಗಳು (ಗಂಗಾನದಿ ವಿನಾ) ಮಳೆಗಾಲದಲ್ಲಿ ಮಾತ್ರ ತುಂಬಿ ಹರಿಯುವುವು; ಉಳಿದ ಕಾಲಗಳಲ್ಲಿ ಆಳವು ಬಹು ಕಡಿಮೆಯಾಗಿರು

ವುದು; ಇವುಗಳ ಮುಖದಲ್ಲಿ ಅಳಿವೆಗಳಿಲ್ಲ. ನದೀಮುಖಜಭೂಮಿಗಳೂ ಇರುವುವು. ಸಮುದ್ರ ಪ್ರವಾಹಗಳೂ ಉಬ್ಬರವಿಳಿತದ ಅಲೆಗಳೂ ಈ ನದೀ ಮುಖಗಳಿಗೆ ಮರಳನ್ನು ತಂದುಹಾಕುವುವು. ಆದುದರಿಂದ ಈ ದೊಡ್ಡ ನದಿಗಳು ಆ ದೇಶದ ಚಿಕ್ಕ ನದಿಗಳ ಒಂದು ಪಾಲಿನಷ್ಟು ಕೂಡ ದೊಡ್ಡ ಹಡಗುಗಳ ಸಂಚಾರಕ್ಕೆ ಅನುಕೂಲವಾಗಿಲ್ಲ.

**ಸರೋವರಗಳು.**—ಈ ದ್ವೀಪಗಳ ಪರ್ವತಪ್ರದೇಶಗಳಲ್ಲಿ ಹಳ್ಳಗಳು ವಿಶೇಷವಾಗಿರುವುದರಿಂದಲೂ, ಮಳೆಯು ವಿಶೇಷವಾಗಿ ಬೀಳುವುದರಿಂದಲೂ ನೂರಾರು ಚಿಕ್ಕಚಿಕ್ಕ ಸರೋವರಗಳಿರುವುವು. ಇವುಗಳಿಂದ ನದಿಗಳು ಹೊರಕ್ಕೆ ಹರಿದುಹೋಗುವುದರಿಂದ ಇವೆಲ್ಲವೂ ಸಿಹಿನೀರಿನ ಸರೋವರಗಳಾಗಿವೆ. ಇಂಗ್ಲೆಂಡಿನಲ್ಲಿರುವ ಸರೋವರಗಳೆಲ್ಲವೂ ಸಾಮಾನ್ಯವಾಗಿ ಪಿನ್ನೈನ್ ಪರ್ವತಗಳ ಪಶ್ಚಿಮದಲ್ಲಿರುವ (ಲೇಕ್ ಡಿಸ್ಟ್ರಿಕ್ಟ್‌ನಲ್ಲಿ ಅಥವಾ) ಸರೋವರ ಪ್ರದೇಶದಲ್ಲಿರುವುವು. ಅಲ್ಲಿ ಏಳು ಸರೋವರಗಳು ಚಕ್ರದ ಅಂಗಾಲುಗಳ ಆಕಾರದಲ್ಲಿ ಪ್ರಸರಿಸಿರುವುವು. ಇವುಗಳು ಚಿಕ್ಕವಾಗಿದ್ದರೂ ಅತ್ಯಂತ ಸುಂದರವಾಗಿರುವುದರಿಂದ, ಇವುಗಳನ್ನು ನೋಡುವುದಕ್ಕೆ ಅಮೆರಿಕದ ಸಂಯುಕ್ತ ಸಂಸ್ಥಾನಗಳಿಂದಲೂ, ಬ್ರಿಟಿಷ್ ಕಾಲೋನಿಗಳಿಂದಲೂ ಅನೇಕ ಜನರು ಬರುವರು. ಈ ಸರೋವರಗಳಲ್ಲಿ ವಿಂಡರ್‌ಮಿಯರ್, ಡರ್ವೆಂಪ್‌ವಾಟರ್ ಎಂಬುವು ಮುಖ್ಯವಾದುವು.

ಸ್ಕಾಟ್ಲೆಂಡಿನಲ್ಲಿ ಸರೋವರಗಳು ಹೇರಳವಾಗಿರುವುವು. ಇವು ಪರ್ವತಗಳ ತಪ್ಪಲುಗಳಲ್ಲಿರುವುದರಿಂದ ಇಕ್ಕಟ್ಟಾಗಿಯೂ ಉದ್ದವಾಗಿಯೂ ಬಂಡೆಗಳಿಂದಲೂ ಮರಗಳಿಂದಲೂ ನಿಬಿಡವಾಗಿ ಎತ್ತರವಾಗಿರುವ ದಡಗಳುಳ್ಳವುಗಳಾಗಿಯೂ ನೋಡುವುದಕ್ಕೆ ಬಹು ರಮಣೀಯವಾಗಿವೆ. ಇವುಗಳಲ್ಲಿ ಲಾಕ್‌ಲೋಮಂಡ್ ಎಂಬುದು 45 ಚ. ಮೈಲಿಗಳಷ್ಟು ವಿಸ್ತಾರವಿರುವುದು. ಇದು ಗ್ರೇಟ್ ಬ್ರಿಟನ್ ದ್ವೀಪದಲ್ಲಿರುವ ಸರೋವರಗಳಲ್ಲೆಲ್ಲಾ ದೊಡ್ಡದು.

ಐರ್ಲೆಂಡಿನಲ್ಲಿ ಪರ್ವತಪ್ರದೇಶದಲ್ಲಿಯೂ, ಮೈದಾನ ಪ್ರದೇಶದಲ್ಲಿಯೂ ಅನೇಕ ಸರೋವರಗಳಿರುವುವು. ಲಾಕ್‌ನೇ ಎಂಬುದು ಬ್ರಿಟಿಷ್ ದ್ವೀಪಗಳಲ್ಲೆಲ್ಲಾ ಅತ್ಯಂತ ದೊಡ್ಡ ಸರೋವರವು (153 ಚ. ಮೈ.). ಕಿಲಾರ್ನಿ ಸರೋವರಗಳು ಈ ದ್ವೀಪದಲ್ಲಿ ಅತ್ಯಂತ ಸುಂದರವಾದುವು.

**ವಾಯುಗುಣ ಮತ್ತು ಮಳೆ; ಸಾಮಾನ್ಯಲಕ್ಷಣ.**—ಅಕ್ಷಾಂಶವೊಂದನ್ನೇ ಯೋಚಿಸಿ ನೋಡಿದರೆ, ಈ ದ್ವೀಪಗಳು ಈ ಅಕ್ಷಾಂಶಗಳಲ್ಲಿಯೇ ಇರುವ ಲಾಬ್ರಡಾರ್ ಪರ್ಯಾಯದ್ವೀಪದಷ್ಟು ಅತ್ಯಧಿಕ ಶೀತೋಷ್ಣಗಳನ್ನು ಹೊಂದಿರಬಹುದೆಂದು ತೋರುವುದು; ಆದರೆ ಇಲ್ಲಿನ ವಾಯುಗುಣವು ಸಮ

ಶೀತೋಷ್ಣವುಳ್ಳದಾಗಿ ಇರುವುದು. ಇದಕ್ಕೆ ಸಮುದ್ರದ ಸಾಮೀಪ್ಯವೇ ಕಾರಣವು. ಈ ದ್ವೀಪಗಳಿಗೆ ಸುತ್ತಮುತ್ತಲೂ ಸಮುದ್ರಗಳಿರುವುವು. ವರ್ಷಕ್ಕೆ 8 ತಿಂಗಳು ಪಶ್ಚಿಮದಿಕ್ಕಿನಿಂದ ಅಟ್ಲಾಂಟಿಕ್ ಸಾಗರದ ಗಾಳಿಯು ಬೀಸುವುದು. ಆದುದರಿಂದ ಪೂರ್ವಭಾಗಕ್ಕಿಂತ ಪಶ್ಚಿಮಭಾಗದಲ್ಲಿ ಹವಾ ಸಮಧಾತುವಾಗಿರುವುದು. ಉಳಿದ ನಾಲ್ಕು ತಿಂಗಳು ಪೂರ್ವದಿಕ್ಕಿನಿಂದ ನೆಲದಮೇಲೆ ಬೀಸಿ ಬರುವ ಶೀತಮಾರುತವೂ ಕೂಡ ನಾರ್ತ್‌ಸಿಯನ್ನು ದಾಟಿ ಬರುವುದರಿಂದ, ಅದರಲ್ಲಿ ಶೈತ್ಯವು ಕೊಂಚಮಟ್ಟಿಗೆ ಕಡಿಮೆಯಾಗಿರುವುದು; ಪರ್ವತ ಪ್ರದೇಶಗಳಲ್ಲಿ ಚಳಿಯೇನೋ ಹೆಚ್ಚು; ಆದರೆ ಈ ದ್ವೀಪಗಳಲ್ಲಿ ಬಹಳ ಎತ್ತರವಾದ ಪರ್ವತಗಳು ಕಡಿಮೆ. ಗಲ್ಫ್‌ಸ್ಟ್ರೀಮ್ ಎಂಬ ಉಷ್ಣೋದಕ ಪ್ರವಾಹದಿಂದ ಈ ದ್ವೀಪಗಳಲ್ಲಿ ಚಳಿಯು ಚಳಿಗಾಲದಲ್ಲಿ ಮತ್ತಷ್ಟು ಕಡಿಮೆಯಾಗಿರುವುದು.

ಕೆಂಬಿಯನ್ ಸಮುದ್ರ ಮೆಕ್ಸಿಕೋ ಕೊಲ್ಲಿಗಳಿಗೆ ಆಗ್ನೇಯದಿಕ್ಕಿನಿಂದ ವಿಷುವದ್ರೇಖೆಯ ಸಮೀಪದ ಉಷ್ಣೋದಕ ಪ್ರವಾಹವು ಹರಿದುಬರುವುದು. ಈ ಪ್ರವಾಹದಿಂದಲೂ, ಅಲ್ಲಿನ ಉಷ್ಣದಿಂದಲೂ ಈ ಜಲವಿಭಾಗಗಳ ನೀರು ಉಕ್ಕಿ ಫ್ಲೋರಿಡ ಜಲಸಂಧಿಯಿಂದ ಹೊರಕ್ಕೆ ಹೊರಡುವ ಈ ಪ್ರವಾಹವು 'ಗಲ್ಫ್‌ಸ್ಟ್ರೀಮ್' (ಅಥವಾ ಕೊಲ್ಲಿಯಿಂದ ಹೊರಟ ಪ್ರವಾಹ) ಎಂಬ ಹೆಸರನ್ನು ಪಡೆದು, ಈಶಾನ್ಯಾಭಿಮುಖವಾಗಿ ಅಟ್ಲಾಂಟಿಕ್ ಸಾಗರದಲ್ಲಿ ಹರಿದು, ಯೂರೋಪಿನ ಪಶ್ಚಿಮಭಾಗವನ್ನು ಬಳಸಿ ಅಲ್ಲಿನ ದೇಶಗಳಿಗೆಲ್ಲಾ ಉಷ್ಣವನ್ನು ತರುವುದು. ಈ ಪ್ರವಾಹವು 50 ಮೈಲಿ ಅಗಲವಾಗಿಯೂ, 350 ಆಳುದ್ದ ಆಳವಾಗಿಯೂ, 81° (ಫಾರನ್‌ಹೀಟ್) ಶಾಖವುಳ್ಳದಾಗಿಯೂ ಇರುವುದು. ಗಂಟೆಗೆ 4–5 ಮೈಲಿಗಳ ಪ್ರಕಾರ ಹರಿಯುವುದು.

ಈ ಕಾರಣಗಳಿಂದ ಈ ದ್ವೀಪಗಳ ಪಶ್ಚಿಮಭಾಗದಲ್ಲಿ ವಾಯುಗುಣವು ಹೆಚ್ಚು ಸಮಧಾತುವಾಗಿಯೂ, ಪೂರ್ವಭಾಗದಲ್ಲಿ ಸ್ವಲ್ಪಮಟ್ಟಿಗೆ ಹೆಚ್ಚು ಶೀತೋಷ್ಣ ವ್ಯತ್ಯಾಸಗಳುಳ್ಳದಾಗಿಯೂ ಇರುವುದು.

ಉದಾ.—ಇಂಗ್ಲೆಂಡಿನಲ್ಲಿ ಲಂಡನ್ ಪಟ್ಟಣವಿರುವ 51½ ಡಿಗ್ರಿಗಳ ಉತ್ತರ ಅಕ್ಷಾಂಶದಲ್ಲಿ ತೋರಿಬರುವ ವ್ಯತ್ಯಾಸವೇನೆಂದರೆ:—

| | ಪಶ್ಚಿಮಭಾಗ. | ಪೂರ್ವಭಾಗ. |
|---|---|---|
| ಜನವರಿ | 42° | 38° |
| ಜುಲೈ | 60° | 64° |
| ವ್ಯತ್ಯಾಸ | 18° | 26° |

ಮಳೆಯೂ ಸಹ ಪೂರ್ವಭಾಗಕ್ಕಿಂತ ಪಶ್ಚಿಮಭಾಗದಲ್ಲಿ ಹೆಚ್ಚು ಜಲಾಂಶ ಪೂರಿತವಾಗಿ ಪಶ್ಚಿಮದಿಕ್ಕಿನಿಂದ ಬೀಸುವ ಮಾರುತಗಳನ್ನು ಇಂಗ್ಲೆಂಡಿನಲ್ಲಿ

ಉತ್ತರ ದಕ್ಷಿಣವಾಗಿ ಹಬ್ಬಿರುವ ಪರ್ವತಗಳು ತಡೆಯುವುವು. ಇವುಗಳ ಪಶ್ಚಿಮಕ್ಕೆ ಮಳೆಯು ಹೆಚ್ಚು. ಪಿನೈನ್ ಪರ್ವತಗಳ ಪಶ್ಚಿಮದಲ್ಲಿಯೂ ವೇಲ್ಸ್ ಬೆಟ್ಟಗಳಲ್ಲಿಯೂ 80 ಅಂಗುಲಗಳಿಗಿಂತ ಹೆಚ್ಚಾಗಿ ಮಳೆಯಾಗುವುದು. ಪಿನೈನ್ ಪರ್ವತಗಳ ಪಶ್ಚಿಮಭಾಗದಲ್ಲಿರುವ ಸೀತ್‌ವೈಪ್ ಎಂಬ ಪ್ರದೇಶದಲ್ಲಿ ಕೆಲವು ವೇಳೆ ವರ್ಷಕ್ಕೆ 180 ಅಂಗುಲಗಳ ಮಳೆಯು ಆಗುವುದುಂಟು. ಪರ್ವತಗಳು ವಿಶೇಷ ಎತ್ತರವಾಗಿಲ್ಲವಾದುದರಿಂದ ಪೂರ್ವಭಾಗದಲ್ಲಿಯೂ ತಕ್ಕಮಟ್ಟಿಗೆ ಮಳೆಯಾಗುವುದು; ಯಾರ್ಕ್‌ಷೈರಿನಲ್ಲಿ ಸುಮಾರು 30 ಅಂಗುಲ ಮಳೆ ಬೀಳುವುದು. ದಖನ್ನಿನಲ್ಲಿ ಬೀಳುವ ಮುಂಗಾರುಮಳೆಯೊಡನೆ ಇದನ್ನು ಹೋಲಿಸಿ ನೋಡಿ.

ವಾಯುಗುಣ ಮಳೆಗಳಲ್ಲಿ ಸ್ಕಾಟ್ಲೆಂಡು ಇಂಗ್ಲೆಂಡನ್ನೇ ಸಾಮಾನ್ಯವಾಗಿ ಹೋಲುವುದು; ಆದರೆ ಅಕ್ಷಾಂಶ ಭೇದದಿಂದ ವರ್ಷದ ಸರಾಸರಿ ಉಷ್ಣವು ಇಲ್ಲಿ ಕಡಿಮೆ. ದೇಶವು ಹೆಚ್ಚು ಎತ್ತರವಾಗಿರುವುದರಿಂದ ಚಳಿಗಾಲದಲ್ಲಿ ಪರ್ವತ ಪ್ರದೇಶಗಳಲ್ಲಿ ಚಳಿಯು ವಿಪರೀತವಾಗಿರುವುದು. ಪಶ್ಚಿಮಭಾಗದ ಪರ್ವತಗಳಲ್ಲಿ ಮಳೆಯು 80 ಅಂಗುಲಗಳಿಗಿಂತ ಹೆಚ್ಚು ಬೀಳುವುದು.

ಐರ್ಲೆಂಡು ಮತ್ತು ಗ್ರೇಟ್ ಬ್ರಿಟನ್ ದ್ವೀಪಕ್ಕಿಂತ ಹೆಚ್ಚಾಗಿ ಅಟ್ಲಾಂಟಿಕ್ ಸಾಗರದ ಮಾರುತಗಳಿಗೆ ಗಲ್ಫ್‌ಸ್ಟ್ರೀಮ್ ಒಳಗಾಗಿರುವುದರಿಂದಲೂ, ಪೂರ್ವ ದಿಕ್ಕಿನ ಶೀತಮಾರುತಗಳಿಗೆ ದೂರವಾಗಿರುವುದರಿಂದಲೂ, ಅಲ್ಲಿ ವಾಯುಗುಣವು ಹೆಚ್ಚು ಸಮಶೀತೋಷ್ಣವಾಗಿರುವುದು; ಮಳೆಯು ಹೆಚ್ಚಾಗಿ ಬೀಳುವುದು. ಈ ದ್ವೀಪದ ಪಶ್ಚಿಮಭಾಗದಲ್ಲಿ ಎತ್ತರವಾದ ಪರ್ವತಗಳು ಒತ್ತಾಗಿರುವುದರಿಂದ, ಈ ದ್ವೀಪದಲ್ಲೆಲ್ಲಾ ಸಾಮಾನ್ಯವಾಗಿ 50 ಅಂಗುಲ ಮಳೆಯಾಗುವುದು.

**ಸಸ್ಯಗಳು; ಸಸ್ಯಗಳ ಬೆಳೆವಳಿಕೆಗೆ ಅನುಕೂಲಗಳು.—**

(1) ಈ ದ್ವೀಪಗಳಲ್ಲಿ ಮೈದಾನಗಳೆಲ್ಲವೂ ಫಲವತ್ತಾದ ನೆಲವನ್ನು ಹೊಂದಿರುವುವು. ಇಂಗ್ಲೆಂಡಿನಲ್ಲಿ $\frac{4}{5}$ ಭಾಗ ನೆಲವು ಸಾಗುವಳಿಯಲ್ಲಿದೆ.

(2) ವಾಯುಗುಣವು ಸಮಶೀತೋಷ್ಣವಾಗಿರುವುದರಿಂದ ಎಲ್ಲಾ ಋತುಗಳಲ್ಲಿಯೂ ರೈತರು ಜಮೀನುಗಳಲ್ಲಿ ಕೆಲಸಮಾಡಬಹುದು. ಶೀತೋಷ್ಣಗಳ ವ್ಯತ್ಯಾಸವು ಕಡಿಮೆಯಾಗಿರುವುದರಿಂದಲೂ, ಮಳೆಯು ಸಾಕಾದಷ್ಟು ಬೀಳುವುದರಿಂದಲೂ ಪೈರುಗಳು ಚೆನ್ನಾಗಿ ಬೆಳೆಯುವುವು.

(3) ಈ ದ್ವೀಪಗಳ ದಕ್ಷಿಣಭಾಗದಲ್ಲಿ ಬೆಳೆಗಳಿಗೆ ಸಾಕಾದಷ್ಟು ಶಾಖವು ಇರುವುದು.

ಹೀಗೆ ನೆಲ, ಮಳೆ, ಶಾಖ ಇವುಗಳು ಅನುಕೂಲವಾಗಿರುವುದರಿಂದ ಈ ದ್ವೀಪಗಳಲ್ಲಿ ಮುಖ್ಯವಾಗಿ ಇಂಗ್ಲೆಂಡು ದೇಶದಲ್ಲಿ ವ್ಯವಸಾಯಕ್ಕೆ ಬೇಕಾದ

ಅನುಕೂಲಗಳಿವೆ. ಈ ದ್ವೀಪಗಳಲ್ಲಿರುವ ಮುಖ್ಯವಾದ ಕಾಡುಗಳು, ಹುಲ್ಲುಗಾವಲುಗಳು, ವ್ಯವಸಾಯ ಪ್ರದೇಶಗಳು ಯಾವುವೆಂದರೆ:—

(1) ಪರ್ವತಗಳ ತಪ್ಪಲುಗಳಲ್ಲಿಯೂ ಮೈದಾನದ ಕೆಲವು ಭಾಗಗಳಲ್ಲಿಯೂ ಸಾಮಾನ್ಯವಾಗಿ ಹುಲ್ಲುಗಾವಲುಗಳಿರುವುವು. ಗ್ರೇಟ್ ಬ್ರಿಟನ್ನಿನ ಪಶ್ಚಿಮತೀರದಲ್ಲಿಯೂ ಐರ್ಲೆಂಡಿನ ಮಧ್ಯಭಾಗದಲ್ಲಿಯೂ ಹುಲ್ಲುಗಾವಲುಗಳು ವಿಶೇಷವಾಗಿರುವುವು. ಅಲ್ಲಿ ದನಕರುಗಳನ್ನು ವಿಶೇಷವಾಗಿ ಸಾಕುವರು. ಇಂಗ್ಲೆಂಡಿನ ದೊಡ್ಡ ದೊಡ್ಡ ಪಟ್ಟಣಗಳಿಗೆ ಸಾಕಾಗುವಷ್ಟು ಹಾಲು ಮತ್ತು ಗಿಣ್ಣು ಇಲ್ಲಿಂದ ಒದಗುವುವು.

(2) ವೇಲ್ಸಿನ ಪರ್ವತಪ್ರದೇಶದಲ್ಲಿಯೂ, ಇಂಗ್ಲೆಂಡಿನ ಉತ್ತರ ಭಾಗದಲ್ಲಿಯೂ, ಸ್ಕಾಟ್ಲೆಂಡಿನ ಪರ್ವತಪ್ರದೇಶದಲ್ಲಿಯೂ, ಐರ್ಲೆಂಡಿನ ಪಶ್ಚಿಮ ಭಾಗದಲ್ಲಿಯೂ ಅನೇಕ ಕಾಡುಗಳಿವೆ. ಕೈಗಾರಿಕೆಗಳೂ ಜನಸಾಂದ್ರತೆಯೂ ಹೆಚ್ಚಿದ ಹಾಗೆ ಕಾಡುಗಳು ಕಡಿಮೆಯಾಗುತ್ತಲಿವೆ. ಈ ದ್ವೀಪಗಳಲ್ಲಿ ಈಗ ಶೇಕಡ 6ರಷ್ಟು ನೆಲವು ಮಾತ್ರ ಕಾಡುಗಳಿಂದ ಕೂಡಿರುವುದು. ಈ ಕಾಡುಗಳಲ್ಲಿ ಓಕ್, ಬೀಚ್ ಮೊದಲಾದ ದೊಡ್ಡ ಮರಗಳು ದಟ್ಟವಾಗಿ ಬೆಳೆಯುವುವು.

(3) ಇಂಗ್ಲೆಂಡಿನ ಮೈದಾನಗಳಲ್ಲಿಯೂ, ಐರ್ಲೆಂಡಿನ ಈಶಾನ್ಯ ಆಗ್ನೇಯ ಭಾಗಗಳಲ್ಲಿಯೂ ಸ್ಕಾಟ್ಲೆಂಡಿನ ಮಧ್ಯಭಾಗದಲ್ಲಿಯೂ ವ್ಯವಸಾಯವು ವಿಶೇಷವಾಗಿ ನಡೆಯುವುದು. ಹಿಂದಿನ ಕಾಲದಲ್ಲಿ ಈ ದೇಶಗಳಿಗೆ ಸಾಕಾದಷ್ಟು ಧಾನ್ಯವನ್ನು ಈ ಜನಗಳೇ ಬೆಳೆಯುತ್ತಿದ್ದರು. ಒಂದೂವರೆ ಶತಮಾನದಿಂದೀಚೆಗೆ ಕೈಗಾರಿಕೆ, ವ್ಯಾಪಾರಗಳು ವಿಶೇಷವಾಗಿ ವೃದ್ಧಿಯಾಗಿ, ದೊಡ್ಡ ಪಟ್ಟಣಗಳೂ, ಜನಸಂಖ್ಯೆಯೂ ಬಹು ಹೆಚ್ಚಿರುವುದರಿಂದ, ಇಲ್ಲಿಯೇ ಬೆಳೆಯುವ ಧಾನ್ಯವು ಈ ಜನರಿಗೆ 1–2 ತಿಂಗಳಿಗೆ ಮಾತ್ರ ಸಾಕಾಗುವುದು. ಉಳಿದ ಧಾನ್ಯವನ್ನು ಸಂಯುಕ್ತಸಂಸ್ಥಾನಗಳು, ರಷ್ಯ, ಅರ್ಜೆಂಟೈನ, ಇಂಡಿಯ ಮೊದಲಾದ ದೇಶಗಳಿಂದ ತರಿಸಿಕೊಳ್ಳುವರು.

**ಬೆಳೆಗಳು.**—ಪಶ್ಚಿಮತೀರದ ಹುಲ್ಲುಗಾವಲುಗಳಲ್ಲಿ ದನಕರುಗಳನ್ನು ಸಾಕುವುದು ಹೆಚ್ಚು, ವ್ಯವಸಾಯವು ಕಡಿಮೆ. ಇಂಗ್ಲೆಂಡಿನ ಪೂರ್ವಭಾಗದಲ್ಲಿ ಜೇಡಿಮಣ್ಣಿನ ನೆಲವೂ, ಸ್ವಲ್ಪ ಮಳೆಯೂ, ಸಾಕಾದಷ್ಟು ಶಾಖವೂ ಇರುವುದರಿಂದ ಗೋಧಿಯು ವಿಶೇಷವಾಗಿ ಬೆಳೆಯುವುದು. ಜೇಡಿಮಣ್ಣು ಮತ್ತು ಸುಣ್ಣದ ಮಣ್ಣು ಮಿಶ್ರವಾಗಿರುವ ಇಂಗ್ಲೆಂಡಿನ ಮಧ್ಯಭಾಗದಲ್ಲಿಯೂ, ಸ್ಕಾಟ್ಲೆಂಡಿನ ಪೂರ್ವಭಾಗದಲ್ಲಿಯೂ ಬಾರ್ಲಿಯು ಬೆಳೆಯುವುದು. ಮಳೆ ಹೆಚ್ಚಾಗಿ ಬೀಳುವ ಸ್ಕಾಟ್ಲೆಂಡ್, ಐರ್ಲೆಂಡುಗಳಲ್ಲಿ ಓಟ್ಸ್ ವಿಶೇಷವಾಗಿ ಬೆಳೆಯುವುದು. ಆಲೂಗಡ್ಡೆಗಳು ಐರ್ಲೆಂಡಿನ ಮುಖ್ಯವಾದ ಬೆಳೆಯಾಗಿದೆ. ತರಕಾರಿಗಳು ಎಲ್ಲಾ ದೊಡ್ಡ

ಪಟ್ಟಣಗಳ ಸುತ್ತುಮುತ್ತಲೂ, ಚಾಸಲ್, ಸಿಲ್ಲಿ ದ್ವೀಪಗಳಲ್ಲಿಯೂ ಬೆಳೆಯುತ್ತವೆ. ಹಣ್ಣುಗಳು ಸೆವರ್ನ್ ನದಿಯ ಪ್ರದೇಶದಲ್ಲಿಯೂ ಕೆಂಟಿನಲ್ಲಿಯೂ ಹೆಚ್ಚಾಗಿ ಬೆಳೆಯುವುವು.

**ಪ್ರಾಣಿಗಳು.**—ಈ ದ್ವೀಪಗಳ ಸಮುದ್ರಗಳಲ್ಲಿಯೂ ನದಿಗಳಲ್ಲಿಯೂ ಆಹಾರಕ್ಕೆ ಉಪಯೋಗವಾಗುವ ಕಾದ್, ಹೆರಿಂಗ್ ಮೊದಲಾದ ಅನೇಕ ಬಗೆಯ ಮೀನುಗಳು ಹೇರಳವಾಗಿರುವುವು. ಒಂದು ಲಕ್ಷ ಜನರು ಮೀನುಹಿಡಿಯುವುದರಿಂದಲೇ ಜೀವನಮಾಡುವರು. ಯಾರ್‌ಮತ್, ಹಲ್, ದಂಡಿ, ಕ್ಲೈಡ್, ಪೀಟರ್ ಹೆಚ್ ಇವು ಈ ಕಸಬಿಗೆ ಪ್ರಸಿದ್ಧವಾದ ಪಟ್ಟಣಗಳಾಗಿವೆ.

ಈ ದ್ವೀಪಗಳಲ್ಲಿ ವ್ಯವಸಾಯದ ಕೆಲಸಗಳಿಗೂ, ಗಾಡಿಗಳನ್ನೆಳೆಯುವುದಕ್ಕೂ ಕುದುರೆಗಳನ್ನು ವಿಶೇಷವಾಗಿ ಉಪಯೋಗಿಸುವರು. ಮಳೆ ಹೆಚ್ಚಾಗಿ ಬೀಳುವ ಗ್ರೇಟ್ ಬ್ರಿಟನ್ನಿನ ಪಶ್ಚಿಮಭಾಗದಲ್ಲಿಯೂ, ಐರ್ಲೆಂಡಿನ ಮೈದಾನ ಪ್ರದೇಶಗಳಲ್ಲಿಯೂ ದನಗಳು ವಿಶೇಷವಾಗಿವೆ. ಮಳೆ ಕಡಿಮೆಯಾಗಿ ಬೀಳುವ ಇಂಗ್ಲೆಂಡಿನ ಮತ್ತು ಸ್ಕಾಟ್ಲೆಂಡಿನ ದಕ್ಷಿಣ ಭಾಗಗಳ ಗುಡ್ಡಗಳ ಪ್ರದೇಶಗಳಲ್ಲೆಲ್ಲಾ ಕುರಿಗಳನ್ನು ಹೆಚ್ಚಾಗಿ ಸಾಕುವರು.

ಹಿಂದಿನ ಕಾಲದಲ್ಲಿ ಕರಡಿ, ತೋಳ, ಕಾಡುಹಂದಿ ಮೊದಲಾದ ಕಾಡು ಮೃಗಗಳು ಹೇರಳವಾಗಿದ್ದುವು. ಆದರೆ ಈಚೆಗೆ ಕಾಡುಗಳು ನಾಶವಾಗಿ ಕೃಷಿಯು ಹೆಚ್ಚಿದುದರಿಂದ ಕಾಡುಮೃಗಗಳೇ ಇಲ್ಲವು. ಪರ್ವತಪ್ರದೇಶಗಳಲ್ಲಿ ಶ್ರೀಮಂತರು ಬೇಟೆಯಾಡುವುದಕ್ಕೋಸ್ಕರ ಕೆಲವು ಜಿಂಕೆ, ಮೊಲ, ನರಿಗಳನ್ನು ಮಾತ್ರ ನಾಶಮಾಡದೆ ಉಳಿಸಿಕೊಂಡಿರುವರು.

**ಖನಿಜಗಳು ಮತ್ತು ಅವುಗಳಿಗೆ ಸಂಬಂಧಪಟ್ಟ ಕೈಗಾರಿಕೆಗಳು.**—ಈ ದ್ವೀಪಗಳಲ್ಲಿ ಸಿಕ್ಕುವ ಅತಿಮುಖ್ಯವಾದ ಖನಿಜಗಳು ಕಬ್ಬಿಣ ಮತ್ತು ಕಲ್ಲಿದ್ದಲು. ಇಲ್ಲಿನ ಖನಿಜಗಳ ಒಟ್ಟು ಉತ್ಪತ್ತಿಯಲ್ಲಿ ಇವೆರಡೇ ⅘ ಪಾಲಿಗಿಂತ ಹೆಚ್ಚಾಗಿವೆ. ಸ್ಕಾಟ್ಲೆಂಡಿನಲ್ಲಿ ಫೋರ್ತ್ ಮತ್ತು ಕ್ಲೈಡ್ ಸಮುದ್ರಶಾಖೆಗಳಿಗೆ ಮಧ್ಯದಲ್ಲಿರುವ ಪ್ರದೇಶದಲ್ಲಿಯೂ, ಇಂಗ್ಲೆಂಡಿನಲ್ಲಿ ಪಿನ್ನೈನ್ ಪರ್ವತಗಳ ಪೂರ್ವ ಪಶ್ಚಿಮ ತಪ್ಪಲುಗಳಲ್ಲಿಯೂ, ಮಧ್ಯಭಾಗದ ಪ್ರದೇಶದಲ್ಲಿಯೂ, ವೇಲ್ಸಿನಲ್ಲಿಯೂ, ಪೂರ್ವ ದಕ್ಷಿಣ ಭಾಗಗಳಲ್ಲಿಯೂ ಕಲ್ಲಿದ್ದಲಿನ ಗಣಿಗಳು ಇರುವುವು.

ಇಂಗ್ಲೆಂಡ್, ಸ್ಕಾಟ್ಲೆಂಡುಗಳಲ್ಲಿ ಕಬ್ಬಿಣ ಕಲ್ಲಿದ್ದಲುಗಳು ಒಂದಕ್ಕೊಂದು ಸಮೀಪದಲ್ಲಿಯೇ ಸಿಕ್ಕುವುವು. ಕಬ್ಬಿಣದ ಅದುರಿನಿಂದ ಲೋಹವನ್ನು ತೆಗೆಯಲು ಸುಣ್ಣಕಲ್ಲೂ ಸಮೀಪದಲ್ಲಿಯೇ ಸಿಕ್ಕುವುದು. ಈ ಭಾರವಾದ ಸರಕುಗಳನ್ನು ಕಾರ್ಖಾನೆಗಳಿಗೂ, ಅಲ್ಲಿ ತಯಾರುಮಾಡಿದ ಕಬ್ಬಿಣದ ಸಾಮಾನುಗಳನ್ನು

ರೇವುಪಟ್ಟಣಗಳಿಗೂ ಸುಲಭವಾಗಿ ಸಾಗಿಸಲು ಅನುಕೂಲವಾದ ಜಲಮಾರ್ಗ ಗಳು ಇರುವುವು. ಆದುದರಿಂದ ಈ ದೇಶಗಳಲ್ಲಿ ಕಬ್ಬಿಣದಿಂದ ಹಡಗುಗಳನ್ನು ಕಟ್ಟುವರು; ನಾನಾಬಗೆಯ ಯಂತ್ರಗಳು, ಮೊಳೆ, ಕತ್ತರಿ, ಚಾಕು ಮೊದಲಾದ ಸಾಮಾನುಗಳನ್ನು ವಿಶೇಷವಾಗಿ ತಯಾರುಮಾಡಿ ಇತರ ದೇಶ ಗಳಿಗೆ ರಫ್ತುಮಾಡುವರು.

ಕಾರ್ಡಿಫ್, ಸ್ವಾನ್ಸಿ ರೇವುಪಟ್ಟಣಗಳಲ್ಲಿ ವೇಲ್ಸಿನಲ್ಲಿ ಸಿಕ್ಕುವ ಮತ್ತು ಸ್ಪೇನಿನಿಂದ ತರಿಸುವ ಕಬ್ಬಿಣದ ಅದುರಿನಿಂದ ಕಬ್ಬಿಣವನ್ನು ತೆಗೆಯುವರು. ಬರ್ಮಿಂಗ್ಹಾಂ ಮತ್ತು ಅದರ ಸುತ್ತುಮುತ್ತಲಿರುವ ವುಲ್ವರ್, ಹ್ಯಾಂಪ್ಟನ್, ಡಡ್ಲಿ ಮೊದಲಾದ ಪಟ್ಟಣಗಳಲ್ಲಿ ತಯಾರಾಗುವಷ್ಟು ಕಬ್ಬಿಣದ ಸಾಮಾನುಗಳು ಪ್ರಪಂಚದ ಇನ್ಯಾವ ಪಟ್ಟಣದಲ್ಲಿಯೂ ತಯಾರಾಗುವುದಿಲ್ಲ. ಷೆಫೀಲ್ಡಿನಲ್ಲಿ ಕತ್ತರಿ, ಚಾಕು ಮೊದಲಾದ ಅಲಗಿನ ಸಾಮಾನುಗಳೂ, ನ್ಯೂಕ್ಯಾಸಲಿನಲ್ಲಿ ಹೊಗೆಯ ಯಂತ್ರಗಳೂ, ರೈಲುಗಾಡಿಗಳೂ, ಯುದ್ಧಕ್ಕೆ ಬೇಕಾದ ಆಯುಧ ಗಳೂ ತಯಾರಾಗುವುವು. ಹಲ್, ಲಿವರ್‌ಪೂಲ್, ಲಂಡನ್, ಗ್ಲಾಸ್ಗೊ, ಬೆಲ್‌ಫಾಸ್ಟ್‌ಗಳ ಸಮೀಪದಲ್ಲಿ ಕಬ್ಬಿಣ, ಕಲ್ಲಿದ್ದಲುಗಳು ಸಿಕ್ಕುವುದಲ್ಲದೆ ಒಳ್ಳೆಯ ಬಂದರುಗಳು ಇರುವುದರಿಂದ ವ್ಯಾಪಾರದ ಹಡಗುಗಳನ್ನು ವಿಶೇಷವಾಗಿ ಕಟ್ಟುವರು. ಗ್ಲಾಸ್ಗೊ ಮೊದಲಾದ ರೇವುಪಟ್ಟಣಗಳ ಬಳಿ ಕ್ಲೈಡ್ ಅಳಿವೆ ಯಲ್ಲಿ ಕಟ್ಟುವಷ್ಟು ಹೊಗೆ ಜಹಜುಗಳನ್ನು ಪ್ರಪಂಚದ ಮತ್ಯಾವ ಬಂದರಿನಲ್ಲಿಯೂ ಕಟ್ಟುವುದಿಲ್ಲ. ಹೊಗೆ ಜಹಜುಗಳನ್ನು ಕಟ್ಟುವುದಕ್ಕೆ 1812 ರಲ್ಲಿ ಈ ಬಂದರಿನಲ್ಲಿ ಉಪಕ್ರಮವಾಯಿತು; ಅದಕ್ಕೆ ಹಿಂದೆ ಗಾಳಿಯ ಸಹಾಯದಿಂದ ಹಡಗುಗಳನ್ನು ನಡೆಯಿಸುತ್ತಿದ್ದರು. ಚಾತಂ, ಪೋರ್ಟ್ಸ ಮತ್, ಪ್ಲಿಮತ್ ಮೊದಲಾದ ರೇವುಪಟ್ಟಣಗಳಲ್ಲಿಯೂ ಯುದ್ಧದ ಹಡಗು ಗಳನ್ನು ಕಟ್ಟುವರು.

ಕಟ್ಟಡಗಳಿಗೆ ಉಪಯೋಗವಾಗುವ ಕಲ್ಲುಗಳು, ಸ್ಲೇಟು, ಉಪ್ಪು, ತವರ ಇವು ಈ ದ್ವೀಪಗಳಲ್ಲಿ ಸಿಕ್ಕುವ ಇತರ ಖನಿಜಗಳಾಗಿವೆ. ಗಾಜನ್ನು ಮಾಡುವುದಕ್ಕೆ ತಕ್ಕ ಮರಗಳು ಎಲ್ಲಾ ಕಡೆಯಲ್ಲಿಯೂ ಸಿಕ್ಕುವುವು; ಆದರೆ ಮುಖ್ಯವಾಗಿ ನ್ಯೂಕ್ಯಾಸಲ್, ಬರ್ಮಿಂಗ್ಹಾಂಗಳಲ್ಲಿ ಗಾಜಿನ ಸಾಮಾನುಗಳು ತಯಾರಾಗುವುವು. ಚೆಷೈರಿನಲ್ಲಿ ಗಣಿಗಳಿಂದ ಉಪ್ಪನ್ನು ತೆಗೆಯುವರು. ಡಾರ್ಬಿಯಲ್ಲಿ ಮಣ್ಣಿನ ಪಾತ್ರೆಗಳು ತಯಾರಾಗುವುವು. ಇಂಗ್ಲೆಂಡಿನ ನೈರುತ್ಯ ದಲ್ಲಿರುವ ಕಾರನ್‌ವಾಲ್ ಪರ್ಯಾಯದ್ವೀಪದಲ್ಲಿ ತವರವು ದೊರೆಯುವುದು. ಈ ದ್ವೀಪಗಳಲ್ಲಿ ನಡೆಯುವ ಇತರ ಮುಖ್ಯವಾದ ಕೈಗಾರಿಕೆಗಳು ಯಾವು ವೆಂದರೆ:—

**ಉಣ್ಣೆಯ ಬಟ್ಟೆಗಳನ್ನು ನೇಯುವುದು.**—(1) ಯಾರ್ಕ್‌ಷೈರಿನಲ್ಲಿ ಈ ಕೈಗಾರಿಕೆಗೆ ವಿಶೇಷ ಸೌಕರ್ಯಗಳಿರುವುವು. ಕಬ್ಬಿಣ ಕಲ್ಲಿದ್ದಲುಗಳು ಯಥೇಚ್ಛವಾಗಿರುವುವು. ಅನೇಕ ಸಣ್ಣಸಣ್ಣ ನದಿಗಳಿರುವುದರಿಂದ ಕಾರ್ಖಾನೆಗಳಲ್ಲಿ ನೀರಿನ ಶಕ್ತಿಯನ್ನು ಪ್ರಯೋಗಿಸಬಹುದು. ಉಣ್ಣೆಯನ್ನು ತರಿಸಿಕೊಳ್ಳಲು ಸಮೀಪದಲ್ಲಿಯೇ ಹೆಲ್ ಮತ್ತು ಲಿವರ್‌ಪೂಲ್ ರೇವುಪಟ್ಟಣಗಳಿರುವುವು. ಇವುಗಳ ಮೂಲಕ ಉಣ್ಣೆಯನ್ನು ಆಸ್ಟ್ರೇಲಿಯ, ದಕ್ಷಿಣ ಆಫ್ರಿಕಗಳಿಂದ ತರಿಸಿಕೊಳ್ಳುವರು. ಲೀಡ್ ಎಂಬುದು ಈ ಪ್ರದೇಶದಲ್ಲಿ ಈ ಕೈಗಾರಿಕೆಗೆ ಮುಖ್ಯ ಪಟ್ಟಣವು.

(2) ಇಂಗ್ಲೆಂಡಿನ ಪಶ್ಚಿಮಭಾಗ. ಇಲ್ಲಿನ ಉಣ್ಣೆಯು ಉತ್ತಮವಾದುದು. ಆದುದರಿಂದ ನಾಜೋಕಾದ ಬಟ್ಟೆಗಳು ತಯಾರಾಗುವುವು. ಲೆಸ್ಟರ್ ಎಂಬುದು ಮುಖ್ಯ ಪಟ್ಟಣವು.

(3) ಸ್ಕಾಟ್ಲೆಂಡಿನ ದಕ್ಷಿಣಭಾಗದಲ್ಲಿ ಸ್ವೀಡ್, ಡಂಫ್ರಿಸ್ ಪಟ್ಟಣಗಳೂ ಈ ಕೈಗಾರಿಕೆಗೆ ಪ್ರಸಿದ್ಧವಾಗಿವೆ.

**ಹತ್ತಿಯ ಬಟ್ಟೆಗಳನ್ನು ನೇಯುವುದು.**—ಈ ಕೈಗಾರಿಕೆಯು ಈ ದ್ವೀಪಗಳಲ್ಲಿ ಅತಿ ಮುಖ್ಯವಾದುದು. ಇದು ಮುಖ್ಯವಾಗಿ ಲಾಂಕಷೈರಿನಲ್ಲಿ ನಡೆಯುವುದು. ಈ ಕೈಗಾರಿಕೆಗೆ ಬೇಕಾದ ಯಂತ್ರಗಳನ್ನು ಮಾಡುವುದಕ್ಕೂ ಅವುಗಳನ್ನು ನಡೆಯಿಸುವುದಕ್ಕೂ ಕಬ್ಬಿಣ ಕಲ್ಲಿದ್ದಲುಗಳು ಇಲ್ಲಿ ಯಥೇಚ್ಛವಾಗಿ ಸಿಕ್ಕುವುವು. ಗಾಳಿಯಲ್ಲಿ ತೇವವು ಹೆಚ್ಚಾಗಿರುವುದರಿಂದ ನೌರಾಗಿ ದಾರವನ್ನು ಎಳೆಯುವುದು ಸುಲಭವು. ಸಂಯುಕ್ತಸಂಸ್ಥಾನಗಳು, ಈಜಿಪ್ಟ್, ಇಂಡಿಯಗಳಿಂದ ಹತ್ತಿಯನ್ನು ಲಿವರ್‌ಪೂಲ್ ಮೂಲಕ ತರಿಸಿಕೊಳ್ಳಬಹುದು.

**ಮ್ಯಾಂಚೆಸ್ಟರ್.**—ಈ ಪಟ್ಟಣವು ಕೈಗಾರಿಕೆಗೆ ಮುಖ್ಯ ಪಟ್ಟಣವು. ಇಲ್ಲಿ ತಯಾರಾಗುವಷ್ಟು ಹತ್ತಿಯ ಬಟ್ಟೆಗಳು ಪ್ರಪಂಚದಲ್ಲಿ ಇನ್ನಾವ ಪಟ್ಟಣದಲ್ಲಿಯೂ ತಯಾರಾಗುವುದಿಲ್ಲ. ಹತ್ತಿಯ ಬಟ್ಟೆಗಳನ್ನು ಸಾಗಿಸುವುದಕ್ಕೆ ಮರ್ಸಿನದೀಮುಖದಿಂದ ಈ ಪಟ್ಟಣಕ್ಕೆ ಕಡಲ್ಗಾಲುವೆಯನ್ನು ಮಾಡಿರುವರು. ಲಿವರ್‌ಪೂಲ್ ಮತ್ತು ಸ್ಕಾಟ್ಲೆಂಡ್‌ನಲ್ಲಿರುವ ಗ್ಲಾಸ್ಗೊ, ಪೇಸ್ಲಿ ಇವು ಈ ಕೈಗಾರಿಕೆಗೆ ಪ್ರಸಿದ್ಧವಾದ ಇತರ ಪಟ್ಟಣಗಳು.

**ನಾರುಬಟ್ಟೆಗಳನ್ನು ನೇಯುವುದು.**—ಈ ಕೈಗಾರಿಕೆಗೆ ಸ್ಕಾಟ್ಲೆಂಡಿನಲ್ಲಿರುವ ಡಂಡಿ ಎಂಬ ಪಟ್ಟಣವು ಪ್ರಸಿದ್ಧವಾದುದು. ಶುದ್ಧವಾದ ನೀರು ಇಲ್ಲಿ ದೊರೆಯುವುದು. ರಷ್ಯ, ಇಂಡಿಯ, ಐರ್ಲೆಂಡುಗಳಿಂದ ನಾರನ್ನು ತರಿಸಿಕೊಳ್ಳುವರು. ಐರ್ಲೆಂಡಿನಲ್ಲಿ ಬೆಲ್‌ಫಾಸ್ಟ್ ಈ ಕೈಗಾರಿಕೆಗೆ ಮುಖ್ಯವಾದುದು. ಇಂಗ್ಲೆಂಡಿನಲ್ಲಿ ಈ ಕೈಗಾರಿಕೆಯು ಹೆಚ್ಚಾಗಿ ನಡೆಯುವುದಿಲ್ಲ.

**ರೇಷ್ಮೆ ಬಟ್ಟೆಗಳನ್ನು ನೇಯುವುದು.**—ಇಂಗ್ಲೆಂಡಿನಲ್ಲಿರುವ ಡಾರ್ಬಿ, ಕೊವೆಂಟ್ರಿ ಮೊದಲಾದ ಪಟ್ಟಣಗಳಲ್ಲಿ ಈ ಕೈಗಾರಿಕೆಯು ನಡೆಯುವುದು.

ತೊಗಲಿನ ಸಾಮಾನು, ಗಾಜಿನ ಸಾಮಾನು, ಕಾಗದ, ದ್ರಾವಕಗಳು ಮೊದಲಾದುವು ಇಂಗ್ಲೆಂಡಿನಲ್ಲಿ ತಯಾರಾಗುವ ಇತರ ಕೈಗಾರಿಕೆಯ ಸಾಮಾನುಗಳಾಗಿವೆ.

**ಒಳದೇಶದ ವ್ಯಾಪಾರ ಮಾರ್ಗಗಳು.**—ಇಂಗ್ಲೆಂಡು ದೇಶದಲ್ಲಿರುವಷ್ಟು ರೈಲುಮಾರ್ಗಗಳು, ರಸ್ತೆಗಳು ಮತ್ತು ಕಾಲುವೆಗಳು ಇನ್ನಾವ ದೇಶದಲ್ಲಿಯೂ ಇಲ್ಲ. ಈ ಸೌಕರ್ಯಗಳಿಂದ ಈ ದೇಶದಲ್ಲಿ ಸರಕುಗಳ ಬೆಲೆಯು ಎಲ್ಲಾ ಪಟ್ಟಣಗಳಲ್ಲಿಯೂ ಸಾಮಾನ್ಯವಾಗಿ ಒಂದೇ ಆಗಿರುವುದು ; ಆದರೆ ನಮ್ಮ ದೇಶದಲ್ಲಿ ಅನೇಕ ಸರಕುಗಳ ಬೆಲೆಯು ಬೇರೆ ಬೇರೆ ಕಡೆಗಳಲ್ಲಿ ಹೆಚ್ಚು ವ್ಯತ್ಯಾಸವಾಗಿರುವುದು.

ಇಂಗ್ಲೆಂಡಿನಲ್ಲಿ ಬೆಟ್ಟಗಳು ಹೆಚ್ಚು ಎತ್ತರವಾಗಿಲ್ಲದಿರುವುದರಿಂದ ರೈಲುಮಾರ್ಗಗಳನ್ನು ಮಾಡುವುದು ಸುಲಭವು; ನದಿಗಳು ಚಿಕ್ಕವಾದುದರಿಂದ ಸಾಮಾನ್ಯವಾಗಿ ದೊಡ್ಡ ದೊಡ್ಡ ಸೇತುವೆಗಳನ್ನು ಕಟ್ಟಬೇಕಾದುದಿಲ್ಲ ; ಯಾವ ಪಟ್ಟಣವೂ ರೇವುಪಟ್ಟಣಕ್ಕೆ ಬಹು ದೂರವಾಗಿಲ್ಲ. ಆದುದರಿಂದ ನಮ್ಮ ಇಂಡಿಯಾದೇಶದಲ್ಲಿ ಸುಮಾರು 36,000 ಮೈಲಿ ರೈಲುಮಾರ್ಗಗಳಿದ್ದರೆ, ಈ ಸಣ್ಣ ದೇಶದಲ್ಲಿ 24,000 ಮೈಲಿಗಳಿಗಿಂತ ಹೆಚ್ಚಾಗಿ ರೈಲುಮಾರ್ಗಗಳಿರುವುವು. ಇವು ಸಮುದ್ರದ ವ್ಯಾಪಾರ ಮಾರ್ಗಗಳಿಗೆ ಕೇಂದ್ರವಾಗಿರುವ ಲಂಡನ್ ಪಟ್ಟಣದಿಂದ ನಾನಾಮುಖವಾಗಿ ಹೋಗುವುವು. ಮುಖ್ಯವಾದ ಪಟ್ಟಣಗಳಿಗೆಲ್ಲಾ 2–3 ಬೇರೆ ಬೇರೆ ಮಾರ್ಗಗಳಿರುವುದರಿಂದ ರೈಲು ಕಂಪನಿಯವರು ತಮ್ಮ ತಮ್ಮಲ್ಲಿ ಪೈಪೋಟಿಯಿಂದ ಪ್ರಯಾಣಕ್ಕೂ, ಸರಕುಗಳನ್ನು ಸಾಗಿಸುವುದಕ್ಕೂ ನಮ್ಮ ದೇಶಕ್ಕಿಂತ ಹೆಚ್ಚಾಗಿ ಸೌಕರ್ಯಗಳನ್ನು ಉಂಟುಮಾಡುವುದಲ್ಲದೆ ಕಡಿಮೆ ಛಾರ್ಜನ್ನು ವಸೂಲುಮಾಡುವರು.

ಇಂಗ್ಲೆಂಡಿನಲ್ಲಿ ಟ್ರೆಂಜ್, ಟೆಮ್ಸ್, ಮರ್ಸಿ, ಸೆವರನ್ ನದಿಗಳನ್ನು ಅನೇಕ ಕಾಲುವೆಗಳಿಂದ ಸಂಬಂಧಿಸಿರುವರು. ಈ ನದಿಗಳೂ, ಅವುಗಳ ಉಪನದಿಗಳೂ, ಕಾಲುವೆಗಳೂ ವ್ಯಾಪಾರದ ಹಡಗುಗಳ ಸಂಚಾರಕ್ಕೆ ಬಹಳ ಉಪಯೋಗವಾಗಿವೆ.

ಸ್ಕಾಟ್ಲೆಂಡಿನಲ್ಲಿ ಹೆಚ್ಚು ಭಾಗವು ಬೆಟ್ಟದ ಸೀಮೆಯಾಗಿರುವುದರಿಂದ ಅಲ್ಲಿ ಮಾರ್ಗ ಸೌಕರ್ಯಗಳು ಕಡಿಮೆ ; ಆದರೂ ಅಲ್ಲಿ ಅನೇಕ ಸಮುದ್ರ ಶಾಖೆಗಳಿರುವುದರಿಂದ ಒಳ್ಳೆಯ ಬಂದರುಗಳಿರುವುವು. ಪೂರ್ವ ದಕ್ಷಿಣ ಭಾಗ

ಗಳಲ್ಲಿ ಅನೇಕ ರೈಲುಮಾರ್ಗಗಳಿರುವುವು. ಎಲ್ಲಾ ಭಾಗಗಳಲ್ಲಿಯೂ ಉತ್ತಮ ವಾದ ರಸ್ತೆಗಳನ್ನು ಮಾಡಿರುವರು.

ಇಂಗ್ಲೆಂಡಿನಲ್ಲಿ ಮಧ್ಯಭಾಗವು ಮೈದಾನವಾಗಿರುವುದರಿಂದ ಷಾನನ್ ನದಿಯಿಂದ ಡಬ್ಲಿನ್, ಬೆಲ್‌ಫಾಸ್ಟ್ ಪಟ್ಟಣಗಳವರೆಗೆ ಕಾಲುವೆಗಳಿರುವುವು. ಇವೂ ಷಾನನ್ ನದಿಯೂ ಉತ್ತಮವಾದ ಜಲಮಾರ್ಗಗಳಾಗಿವೆ. ರೈಲು ಮಾರ್ಗಗಳೂ ರಸ್ತೆಗಳೂ ಸಾಕಾದಷ್ಟು ಇವೆ.

ಈ ದ್ವೀಪಗಳ ಒಳದೇಶದ ವ್ಯಾಪಾರವು ಸಮುದ್ರತೀರದ ಮಾರ್ಗ ವಾಗಿಯೂ ನಡೆಯುವುದು. ಸಮುದ್ರತೀರದಲ್ಲಿ ಅಳಿವೆ, ಖಾರಿ ಮೊದಲಾದ ಸಮುದ್ರಶಾಖೆಗಳು ವಿಶೇಷವಾಗಿರುವುದರಿಂದಲೂ ಸಮುದ್ರದ ಉಬ್ಬರವಿಳಿತಗಳು ಅನುಕೂಲವಾಗಿರುವುದರಿಂದಲೂ ಈ ಮಾರ್ಗವು ವ್ಯಾಪಾರಕ್ಕೆ ಅನುಕೂಲ ವಾಗಿದೆ.

**ಪರದೇಶದ ವ್ಯಾಪಾರಮಾರ್ಗಗಳು.**—ಇಂಗ್ಲೆಂಡ್, ಇಂಡಿಯಾದೇಶ ಗಳಿಗೆ ಪ್ರಯಾಣಕ್ಕೂ, ವ್ಯಾಪಾರಕ್ಕೂ ಮುಖ್ಯವಾಗಿ ಮೂರು ಮಾರ್ಗಗಳಿವೆ. ಇಂಗ್ಲೆಂಡಿನಿಂದ ಹೊರಟು ಅಟ್ಲಾಂಟಿಕ್ ಹಿಂದೂಸಾಗರಗಳ ಮಾರ್ಗವಾಗಿ ಆಫ್ರಿಕಾಖಂಡದ ಗುಡ್‌ಹೋಪ್ ಭೂಶಿರವನ್ನು ಬಳಸಿಕೊಂಡು, ಇಂಡಿಯಾಕ್ಕೆ ಬರಬಹುದು. ಈ ಮಾರ್ಗವು ಬಹು ದೂರವು (ಸುಮಾರು 11,000 ಮೈಲಿಗಳು). ಬಹುಕಾಲ ಹಿಡಿಯುವುದು (3 ತಿಂಗಳು). ಸೂಯಿಸ್ ಕಾಲುವೆ ಯನ್ನು ತೆಗೆಯುವುದಕ್ಕೆ ಮೊದಲು ಇದು ಒಂದೇ ಮಾರ್ಗವಾಗಿತ್ತು; ಈಚೆಗೆ ಯುದ್ಧಕಾಲದಲ್ಲಿ ಏನಾ ಇದನ್ನು ಉಪಯೋಗಿಸುತ್ತಿಲ್ಲ.

(2) ಲಂಡನ್ನಿನಿಂದ ಜಿಬ್ರಾಲ್ಟರ್, ಮಾಲ್ಟ, ಸೂಯಿಸ್ ಕಾಲುವೆ ಏಡನ್‌ಗಳ ಮಾರ್ಗವಾಗಿ ಬೊಂಬಾಯಿಗೆ ಬರುವ ಜಲಮಾರ್ಗವು ಈಗ ವ್ಯಾಪಾರ ಪ್ರಯಾಣಗಳಿಗೆ ಬಹಳ ಬಳಕೆಯಲ್ಲಿರುವುದು. ಇದು ಸುಮಾರು 6½ ಸಾವಿರ ಮೈಲಿ ದೂರವಿರುವುದು. 22 ದಿನಗಳಲ್ಲಿ ಈ ಪ್ರಯಾಣವನ್ನು ಮಾಡಬಹುದು.

(3) ಟಪ್ಪಾಲುಗಳನ್ನು ಜಾಗ್ರತೆ ಕಳುಹಿಸುವುದಕ್ಕೂ ಜಾಗ್ರ ಹೋಗಬೇಕೆಂದಿರುವ ಪ್ರಯಾಣಿಕರಿಗೂ ಮತ್ತೊಂದು ಮಾರ್ಗವಿರುವುದು. ಇದನ್ನು ಮೆಯಿಲ್ ಮಾರ್ಗವೆಂದು ಕರೆಯುವರು. ಲಂಡನ್ನಿನಿಂದ ಡೋವರಿ ರೈಲುಮಾರ್ಗದಲ್ಲಿ ಬಂದು ಅಲ್ಲಿಂದ ಜಹಜಿನಲ್ಲಿ ಕಲೆಯನ್ನು ಸೇರುವರು. ಅಲ್ಲಿಂದ ರೈಲುಮಾರ್ಗವಾಗಿ ಮಾಂಟ್‌ಸೆನಿಸ್‌ಟನಲ್ಲನ್ನು ಹಾದು ಬ್ರಿಂಡಿಸಿಗೆ 6 ಗಂಟೆಗಳ ಕಾಲದಲ್ಲಿ ತಲಪುವರು. ಅಲ್ಲಿಂದ ಸೂಯಿಸ್ ಕಾಲುವೆಯ ಮಾರ್ಗ ವಾಗಿ ಬೊಂಬಾಯಿಗೆ ಹಡಗಿನಲ್ಲಿ ಬರುವರು. ಈ ಮಾರ್ಗವು ಸುಮಾರು ಸಾವಿರ ಮೈಲಿ ದೂರವಿರುವುದು. ಸುಮಾರು 14 ದಿನಗಳು ಹಿಡಿಯುವುದು.

ಇಂಗ್ಲೆಂಡಿನ ವ್ಯಾಪಾರದ ಒಂದು ಭಾಗವು ಮಾತ್ರ ಇಂಡಿಯದೊಡನೆ ನಡೆಯುವುದು. ಆ ದೇಶದ ವ್ಯಾಪಾರವು ಪ್ರಪಂಚದ ಎಲ್ಲಾ ದೇಶಗಳೊಡನೆಯೂ ಮುಖ್ಯವಾಗಿ ಐದು ವ್ಯಾಪಾರಮಾರ್ಗಗಳ ಮೂಲಕವಾಗಿ ನಡೆಯುವುದು. ಈ ಐದು ಮುಖ್ಯ ಮಾರ್ಗಗಳಿಂದ ಅಲ್ಲಲ್ಲಿ ಇತರ ದೇಶಗಳಿಗೆ ಕವಲುಗಳು ಒಡೆಯುವುವು. ಈ ಮುಖ್ಯ ಮಾರ್ಗಗಳು ಯಾವುವೆಂದರೆ:—

(1) **ಅಟ್ಲಾಂಟಿಕ್ ಸಾಗರದ ಮಾರ್ಗವು.**—ಈ ಮಾರ್ಗವಾಗಿ ಉತ್ತರ ಅಮೆರಿಕದೊಡನೆ ವ್ಯಾಪಾರವು ನಡೆಯುವುದು. ಲಿವರ್ಪೂಲ್, ಗ್ಲಾಸ್ಗೊ, ಬ್ರಿಸ್ಟಲ್, ಸೌತಾಂಪ್ಟನ್ ರೇವುಪಟ್ಟಣಗಳಿಂದ ನ್ಯೂಆರ್ಲಿಯನ್ಸ್, ಬಾಸ್ಟನ್, ನ್ಯೂಯಾರ್ಕ್, ಹಲಿಫಾಕ್ಸ್, ಕ್ವಿಬೆಕ್, ವೆಸ್ಟಿಂಡಿಯಾ ದ್ವೀಪಗಳಿಗೆ ವ್ಯಾಪಾರದ ಹಡಗುಗಳು ಹೋಗುವುವು. ಲಿವರ್ಪೂಲಿನಿಂದ ನ್ಯೂಯಾರ್ಕಿಗೆ ಸುಮಾರು 3,000 ಮೈಲಿಗಳು. ಒಳ್ಳೆಯ ಜಹಜುಗಳು ಒಂದು ವಾರದಲ್ಲಿಯೇ ಹೋಗುವುವು. ಈ ಮಾರ್ಗದ ಎರಡು ಕೊನೆಗಳಲ್ಲಿಯೂ ಕಲ್ಲಿದ್ದಲು ವಿಶೇಷವಾಗಿರುವುದು. ಆದುದರಿಂದ ಮಾರ್ಗದ ಮಧ್ಯೆ ಕಲ್ಲಿದ್ದಲನ್ನು ಒದಗಿಸುವ ಸ್ಟೇಷನ್ನುಗಳಿಲ್ಲದಿದ್ದರೂ ತೊಂದರೆಯೇನೂ ಇಲ್ಲ.

(2) **ಸೂಯಿಸ್ ಕಾಲುವೆಯ ಮಾರ್ಗವು.**—ಸೂಯಿಸ್ ಕಾಲುವೆಯು ಒಬ್ಬ ಫ್ರೆಂಚ್ ಇಂಜಿನಿಯರಿಂದ ಅಂದಾಜು ಮಾಡಲ್ಪಟ್ಟು (1860–1869ರಲ್ಲಿ) ಅಗೆಯಲ್ಪಟ್ಟಿತು. ಇದು 66 ಮೈಲಿ ಉದ್ದವಿರುವುದು. ಈ ಪೈಕಿ 21 ಮೈಲಿಗಳು ಸರೋವರಗಳಾಗಿವೆ. ಉಳಿದ ಭಾಗವು ಕಾಲುವೆಯಾಗಿದೆ. ಈ ಕಾಲುವೆಯು 28 ಅಡಿ ಆಳವಿರುವುದು. ತಳದಲ್ಲಿ 72 ಅಡಿ ಅಗಲವಿರುವುದು. ಒಂದು ಹಡಗು ಹೋಗುವುದಕ್ಕೆ ತಕ್ಕಷ್ಟುಮಾತ್ರ ಅಗಲವಿರುವುದರಿಂದ ಇದಿರಿಗೆ ಮತ್ತೊಂದು ಹಡಗು ಬಂದರೆ ಅದು ಒಂದು ಪಕ್ಕಕ್ಕೆ ಹೋಗಿ ನಿಂತು ಮತ್ತೊಂದಕ್ಕೆ ದಾರಿ ಬಿಡಲು ಅಲ್ಲಲ್ಲಿ ಕೊಲ್ಲಿಗಳೋಪಾದಿಯಲ್ಲಿ ಹಾದು ಹೋಗುವ ಸ್ಥಳಗಳಿರುವುವು. ಈ ಕಾಲುವೆಯ ದಡಗಳಲ್ಲಿ ರಾತ್ರಿ ಕಾಲದಲ್ಲಿ ಎಲೆಕ್ಟ್ರಿಕ್ ದೀಪಗಳಿರುವುವು. ಆದುದರಿಂದ ಕಾಲುವೆಯು ಚಿಕ್ಕದಾದರೂ ರಾತ್ರಿಯೂ ಹಡಗುಗಳು ಕ್ಷೇಮವಾಗಿ ಸಂಚರಿಸಬಹುದು. ಆದರೆ ದಡಗಳಿಗೆ ಅಲೆಗಳು ಹೊಡೆದು ಅವು ಕುಸಿಯದಂತೆ ನಿಧಾನವಾಗಿ ಹೋಗಬೇಕು. ಆದುದರಿಂದ 61 ಮೈಲಿಗಳು ಹೋಗುವುದಕ್ಕೆ ಹಡಗುಗಳು 18 ಗಂಟೆಗಳ ಕಾಲವನ್ನು ತೆಗೆದುಕೊಳ್ಳುವುವು. ಈ ಕಾಲುವೆಯ ಪಶ್ಚಿಮದಲ್ಲಿ ಪಕ್ಕದಲ್ಲಿಯೇ ಸೂಯಿಸ್ ಕಾಲುವೆಯ ರೈಲುಮಾರ್ಗವು ಹೋಗುವುದು. ಈ ರೈಲುಮಾರ್ಗದಿಂದ ಕೈರೊ ಪಟ್ಟಣಕ್ಕೆ ಒಂದು ಕವಲು ಹೋಗುವುದು. ಈ ಕಾಲುವೆಯ ದಕ್ಷಿಣ ಭಾಗದಲ್ಲಿ ಸೂಯಿಸ್ ಪಟ್ಟಣವೂ, ಮಧ್ಯಭಾಗದಲ್ಲಿ ಇಸ್ಮೇಲಿಯ ಪಟ್ಟಣವೂ, ಉತ್ತರ ಭಾಗದಲ್ಲಿ ಪೋರ್ಟ್ಸೆಡ್ ಪಟ್ಟಣವೂ ಇರುವುವು.

ಈ ಕಾಲುವೆಯು ಪ್ರಪಂಚದಲ್ಲಿನ ವ್ಯಾಪಾರಕ್ಕೆ ಉಪಯುಕ್ತವಾದ ಸಮುದ್ರದ ಕಾಲುವೆಗಳಲ್ಲೆಲ್ಲಾ ಅತಿ ಮುಖ್ಯವಾದುದು. ಇದರಿಂದ ಪೂರ್ವ ದೇಶಗಳೊಡನೆ ಬ್ರಿಟಿಷರ ವ್ಯಾಪಾರಕ್ಕೆ ಉಂಟಾಗಿರುವ ಅನುಕೂಲವನ್ನು ಅಷ್ಟಿಷ್ಟೆಂದು ಹೇಳುವುದಕ್ಕಾಗುವುದಿಲ್ಲ. ಈ ಕಾಲುವೆಯು ತಮ್ಮ ಅಧಿಕಾರ ದಲ್ಲಿಯೇ ಇರುವುದು ಬ್ರಿಟಿಷರಿಗೆ ಅತ್ಯಾವಶ್ಯಕವು; ಇಲ್ಲದಿದ್ದರೆ ಯುದ್ಧಕಾಲ ದಲ್ಲಿ ಇದು ಶತ್ರುಗಳ ವಶವಾಗುವುದು. ಈ ಕಾರಣದಿಂದ ಈಜಿಪ್ಟನ್ನು ಇವರು ತಮ್ಮ ಅಧಿಕಾರಕ್ಕೆ ಒಳಪಡಿಸಿಕೊಂಡಿರುವರು.

ಈ ಕಾಲುವೆಯ ಮಾರ್ಗವಾಗಿ ಆಫ್ರಿಕದ ಪೂರ್ವಭಾಗ, ಪರ್ಷಿಯ, ಅರೇಬಿಯ, ಇಂಡಿಯ, ಮಲಯದ್ವೀಪಗಳು, ಚೀಣ, ಜಪಾನ್, ಆಸ್ಟ್ರೇಲಿಯ ಗಳೊಡನೆ ವ್ಯಾಪಾರವು ನಡೆಯುವುದು. ಶತ್ರುಗಳಿಂದ ಈ ಮಾರ್ಗವನ್ನು ಸಂರಕ್ಷಿಸಲು ಜಿಬ್ರಾಲ್ಟರ್, ಮಾಲ್ಟ, ಏಡನ್, ಪೆರಿಂ, ಸಿಂಗಪೂರ್, ಹಾಂಕಾಂಗ್ ರೇವುಪಟ್ಟಣಗಳಲ್ಲಿ ಬಲವಾದ ಕೋಟೆಗಳನ್ನು ಕಟ್ಟಿರುವರು. ಅಲೆಕ್ಸೆಂಡ್ರಿಯಾ, ಜೆಡ್ಡಾ, ಬುಷೈರ್, ಬೊಂಬಾಯಿ, ಕೊಲಂಬೊ, ಸಿಂಗಪೂರ್, ಬಾಂಕಾಕ್, ಕ್ಯಾಂಟನ್, ಷಾಂಗೈ, ನಾಗಸಾಕಿ, ಯಾಕೋಹಾಮ ಇವು ಈ ಮಾರ್ಗದಲ್ಲಿರುವ ವ್ಯಾಪಾರಕ್ಕೆ ಪ್ರಸಿದ್ಧವಾದ ರೇವುಪಟ್ಟಣಗಳು.

(3) **ಗುಡ್‌ಹೋಪ್ ಭೂಶಿರದ ಮಾರ್ಗ.**—ಈಗ ಈ ಮಾರ್ಗ ವಾಗಿ ದಕ್ಷಿಣ ಆಫ್ರಿಕದೊಡನೆಯೂ, ಸ್ವಲ್ಪಮಟ್ಟಿಗೆ ಆಸ್ಟ್ರೇಲಿಯದೊಡನೆಯೂ ವ್ಯಾಪಾರವು ನಡೆಯುವುದು. ಸೌತಾಂಪ್ಟನ್ನಿನಿಂದ ಕೇಪ್‌ಟೌನಿಗೆ ಸುಮಾರು 6,000 ಮೈಲಿಗಳು. ಹಡಗುಗಳಿಗೆ ಸುಮಾರು 15 ದಿನಗಳು ಹಿಡಿಯುವುವು. ಅಸೆನ್‌ಷನ್, ಸೆಂಟ್‌ಹೆಲೀನಾ ದ್ವೀಪಗಳು ಈ ಮಾರ್ಗವನ್ನು ರಕ್ಷಿಸುತ್ತವೆ.

(4) **ಲಪ್ಲಾಟ ನದಿಯ ಮಾರ್ಗ.**—ದಕ್ಷಿಣ ಅಮೆರಿಕದೊಡನೆ ಈ ಮಾರ್ಗವಾಗಿ ವ್ಯಾಪಾರವು ನಡೆಯುವುದು. ಲಂಡನ್ನಿನಿಂದ ಬೋನಸ್ ಐರಿಸ್ಸಿಗೆ ಸುಮಾರು 5,000 ಮೈಲಿಗಳು. ಬಾಹಿಯ, ರೈಯೊಡಿಜನೈರೋ, ಮಾಂಟವಿಡಿಯೋ ಇವು ಈ ಮಾರ್ಗದಲ್ಲಿ ಸಿಕ್ಕುವ ಮುಖ್ಯವಾದ ರೇವು ಪಟ್ಟಣಗಳು.

(5) **ವೆಸ್ಟಿಂಡಿಯಾ ದ್ವೀಪಗಳ ಮಾರ್ಗ.**—ಈ ಮಾರ್ಗವಾಗಿ ವೆಸ್ಟಿಂಡಿಯಾ ದ್ವೀಪಗಳೊಡನೆ ವ್ಯಾಪಾರವು ನಡೆಯುವುದಲ್ಲದೆ, ಈಚೆಗೆ ಪನಾಮ ಕಾಲುವೆಯನ್ನು ಮಾಡಿರುವುದರಿಂದ ಉತ್ತರ ಅಮೆರಿಕದ ಪಶ್ಚಿಮಭಾಗ ದೊಡನೆಯೂ ವ್ಯಾಪಾರವು ನಡೆಯುತ್ತಲಿರುವುದು. ಲಂಡನ್ನಿನಿಂದ ಸಾನ್ ಫ್ರಾನ್‌ಸಿಸ್ಕೋವಿಗೆ ಹಾರನ್ ಭೂಶಿರವನ್ನು ಸುತ್ತಿಕೊಂಡು ಹಿಂದೆ ಹೋಗ ಬೇಕಾಗಿತ್ತು. ಅದು 12,500 ಮೈಲಿಗಳಾಗುತ್ತಿತ್ತು. ಬ್ರಿಸ್ಟಲ್ಲಿನಿಂದ ಜಮೇಕ

ದ್ವೀಪ ಮತ್ತು ಪನಾಮ ಕಾಲುವೆಗಳ ಮೂಲಕ ಸಾನ್‌ಫ್ರಾನ್‌ಸಿಸ್ಕೋವಿಗೆ 6,500 ಮೈಲಿಗಳು ಮಾತ್ರವಾಗುವುದು.

**ವ್ಯಾಪಾರಕ್ಕೆ ಪ್ರಸಿದ್ಧವಾದ ರೇವು ಪಟ್ಟಣಗಳು; ಲಂಡನ್.**— ವಿಸ್ತಾರದಲ್ಲಿಯೂ, ಐಶ್ವರ್ಯದಲ್ಲಿಯೂ, ಜನಸಂಖ್ಯೆಯಲ್ಲಿಯೂ ಪ್ರಪಂಚದಲ್ಲೆಲ್ಲಾ ಇದೇ ದೊಡ್ಡ ಪಟ್ಟಣವು. ಇದು 16 ಮೈಲಿಗಳುದ್ದವೂ 10 ಮೈಲಿಗಳ ಅಗಲವೂ ಇರುವುದು. ಈ ಪಟ್ಟಣವು ಎಲ್ಲಾ ವಿಧದಲ್ಲಿಯೂ ಪ್ರಮುಖತೆಯನ್ನು ಪಡೆದಿದೆ. ಧಾನ್ಯಗಳ ವ್ಯಾಪಾರವು ಬಹು ಹೆಚ್ಚು. ಕೈಗಾರಿಕೆಯ ಕಾರ್ಖಾನೆಗಳು ಅಸಂಖ್ಯಾಕವಾಗಿರುವುವು. ಇಂಗ್ಲೆಂಡಿನ ಮುಖ್ಯವಾದ ರೈಲು ಮಾರ್ಗಗಳೆಲ್ಲವೂ ಇಲ್ಲಿ ಸಂಧಿಸುವುವು. ಮುಖ್ಯವಾದ ಸಾಗರದ ವ್ಯಾಪಾರ ಮಾರ್ಗಗಳೆಲ್ಲವೂ ಇಲ್ಲಿ ಸೇರುವುವು. ಪ್ರಪಂಚದ ಒಟ್ಟು ವ್ಯಾಪಾರಕ್ಕೂ ಲೇವಾದೇವಿಗಳಿಗೂ ಇದು ಕೇಂದ್ರಸ್ಥಾನವಾಗಿರುವುದು. ಈ ಪಟ್ಟಣವು ಇನ್ನೂ ಅಪಾರವಾಗಿ ಬೆಳೆಯುತ್ತಲೇ ಇರುವುದು. ವರ್ಷವರ್ಷಕ್ಕೂ ದಿನ ಒಂದಕ್ಕೆ ಒಂದೊಂದು ಮನೆಯಂತೆ ಮನೆಗಳನ್ನು ಕಟ್ಟುತ್ತಿರುವರು. ಪ್ರಜಾಸಂಖ್ಯೆಯು ದಿನಕ್ಕೆ 300 ರಂತೆ ಹೆಚ್ಚುತ್ತಲಿದೆ. ಅಂದರೆ ವರ್ಷ ಒಂದಕ್ಕೆ ಒಂದೊಂದು ಬೆಂಗಳೂರು ಪಟ್ಟಣವನ್ನು ಸೇರಿಸಿದಂತೆ ಇದು ವೃದ್ಧಿಹೊಂದುತ್ತಿರುವುದು. ಇದರ ಮನೆಗಳನ್ನು ಒಂದರ ಪಕ್ಕದಲ್ಲಿ ಒಂದನ್ನು ಇಡುತ್ತಾ ಹೋದರೆ ಲಂಡನ್ನಿನಿಂದ ಟೋಕಿಯೋವರೆಗೂ ವಿಸ್ತರಿಸುವುವು. ಈ ಪಟ್ಟಣದಲ್ಲಿ 30,000 ಬೀದಿಗಳಿರುವುವು; 70 ಲಕ್ಷ ಜನರು ವಾಸವಾಗಿರುವರು. ಈ ಪಟ್ಟಣದಲ್ಲಿ ಪ್ರಪಂಚದ ಎಲ್ಲಾ ದೇಶದ ಜನರನ್ನೂ ನೋಡಬಹುದು. ಪ್ರತಿದಿನವೂ 10 ಲಕ್ಷ ಜನರು ಇಲ್ಲಿಗೆ ರೈಲುಮಾರ್ಗಗಳಲ್ಲಿ ಬರುವರು, 10 ಲಕ್ಷ ಜನರು ಇಲ್ಲಿಂದ ಹೊರಡುವರು. ಕೋಟ್ಯಂತರ ರೂಪಾಯಿನ ವ್ಯಾಪಾರ ನಡೆಯುವ ಅಂಗಡಿಗಳೂ, ದೊಡ್ಡ ಸೌಧಗಳೂ, ವಿಶಾಲವಾದ ಉದ್ಯಾನಗಳೂ, ದೊಡ್ಡದೊಡ್ಡ ಸೇತುವೆಗಳೂ, ನೆಲದಲ್ಲಿ ರೈಲುಗಾಡಿಗಳು ಹೋಗಲು ಸುರಂಗ ಮಾರ್ಗಗಳೂ ಅಸಂಖ್ಯಾಕವಾಗಿ ಇರುವುವು. ಇವುಗಳ ಸೊಬಗನ್ನೂ ಆಶ್ಚರ್ಯವನ್ನೂ ವರ್ಣಿಸುವುದು ಇವುಗಳನ್ನು ನೋಡದೆ ಇರುವವರಿಗೆ ಅಸಾಧ್ಯವು; ನಮ್ಮ ದೇಶದಲ್ಲಿ ಬೊಂಬಾಯಿ, ಸಿಂಮ್ಲ, ಕಲ್ಕತ್ತಾ ಪಟ್ಟಣಗಳನ್ನು ನೋಡಿರುವವರಿಗೆ ಈ ಪಟ್ಟಣವು ಹೇಗಿರುವುದೆಂಬುದನ್ನು ಸ್ವಲ್ಪಮಟ್ಟಿಗೆ ಊಹಿಸಿ ತಿಳಿಯಲು ಸಾಧ್ಯವಾಗಬಹುದು.

ಇಂಗ್ಲೆಂಡ್ ದೇಶದ ಒಟ್ಟು ವ್ಯಾಪಾರದಲ್ಲಿ ⅓ ಭಾಗವೇ ಈ ಪಟ್ಟಣದ ಮೂಲಕ ನಡೆಯುವುದು. ಸಮುದ್ರತೀರದ ಮಾರ್ಗವಾಗಿಯೂ, ರೈಲು ಮತ್ತು ಕಾಲುವೆಗಳ ಮಾರ್ಗವಾಗಿಯೂ ಅಗಾಧವಾದ ಒಳದೇಶದ ವ್ಯಾಪಾರವೂ ನಡೆಯುವುದು.

ಇದು ಬ್ರಿಟಿಷ್ ದ್ವೀಪಗಳಿಗೂ ಬ್ರಿಟಿಷ್ ಚಕ್ರಾಧಿಪತ್ಯಕ್ಕೂ ರಾಜಧಾನಿಯು. ಇಲ್ಲಿಯೇ ನಮ್ಮನ್ನು ಆಳುವ ಚಕ್ರವರ್ತಿ ಸಾರ್ವಭೌಮರೂ ವಾಸಮಾಡುವುದು. ಈ ಚಕ್ರಾಧಿಪತ್ಯವನ್ನು ಆಳುವ ಪಾರ್ಲಿಮೆಂಟು ಎಂಬ ಪ್ರತಿನಿಧಿಗಳ ಸಭೆಯೂ, ಮಂತ್ರಿಗಳೂ ಇಲ್ಲಿ ಇರುವರು.

ಲಂಡನ್ ಪಟ್ಟಣವು ಇಷ್ಟು ಪ್ರಮುಖತೆಯನ್ನು ಪಡೆಯಲು ಇದಕ್ಕಿರುವ ಸ್ವಾಭಾವಿಕವಾದ ಅನುಕೂಲ್ಯಗಳು ಯಾವುವೆಂದರೆ:—

(1) ಸಮುದ್ರದಿಂದ ಈ ಪಟ್ಟಣದ ಮೇಲ್ಭಾಗದವರೆಗೂ ದೊಡ್ಡ ಜಹಜುಗಳೂ ಟೆಮ್ಸ್ ನದಿಯಮೇಲೆ ಹೋಗುವುವು. ಸಮುದ್ರದ ಉಬ್ಬರದ ಅಲೆಯು ದಿನಕ್ಕೆರಡಾವೃತ್ತಿ ನದೀಮುಖದಿಂದ 80 ಮೈಲಿಗಳವರೆಗೂ ಹೋಗುವುದರಿಂದ ಈ ಅನುಕೂಲ್ಯ ಉಂಟಾಗಿದೆ.

(2) ಇದು ಸ್ಥಲಾರ್ಧಗೋಳದ ಮಧ್ಯದಲ್ಲಿಯೂ, ಪ್ರಪಂಚದ ವ್ಯಾಪಾರ ಮಾರ್ಗಗಳು ಸೇರುವ ಸ್ಥಳದಲ್ಲಿಯೂ ಇದೆ.

(3) ಸುತ್ತುಮುತ್ತಿನ ಪ್ರದೇಶಗಳೂ ಬಹು ಫಲವತ್ತಾಗಿವೆ.

(4) ಈ ದೇಶದ ಒಳಭಾಗದ ಅನೇಕ ರೈಲುಮಾರ್ಗಗಳೂ ಜಲಮಾರ್ಗಗಳೂ ಇಲ್ಲಿ ಸೇರುವುವು. ಆದುದರಿಂದ ಕಬ್ಬಿಣ, ಕಲ್ಲಿದ್ದಲುಗಳು ಸಮೀಪದಲ್ಲಿ ಸಿಕ್ಕದಿದ್ದರೂ, ಕೈಗಾರಿಕೆಗಳು ವಿಶೇಷವಾಗಿ ನಡೆಯುವುವು. ವ್ಯಾಪಾರವಂತೂ ಹೇಳಬೇಕಾದುದೇ ಇಲ್ಲ.

(5) ವಾಯುಗುಣವು ಹಿತಕರವಾಗಿಯೂ ಆರೋಗ್ಯಕರವಾಗಿಯೂ ಇರುವುದು.

**ಲಿವರ್‌ಪೂಲ್.**—ಇದು ಮರ್ಸೀ ನದಿಯಮುಖದಲ್ಲಿದೆ. ಇದು ವ್ಯಾಪಾರದಲ್ಲಿ ಬ್ರಿಟಿಷ್ ದ್ವೀಪಗಳಲ್ಲಿ ಎರಡನೆಯ ಪಟ್ಟಣವಾಗಿಯೂ, ಪ್ರಪಂಚದಲ್ಲೆಲ್ಲಾ ಮೂರನೆಯದಾಗಿಯೂ ಇರುವುದು. ಒಟ್ಟು ವ್ಯಾಪಾರದಲ್ಲಿ ಇಂಗ್ಲೆಂಡಿನ ¼ ಭಾಗವು ಇದರ ಮೂಲಕ ನಡೆಯುವುದು. ಈ ಪಟ್ಟಣದ ಪ್ರಾಮುಖ್ಯಕ್ಕೆ ಕಾರಣಗಳು ಯಾವುವೆಂದರೆ:—

(1) ಇದರ ಬಂದರು ಪ್ರಪಂಚದಲ್ಲೆಲ್ಲಾ ಅತ್ಯುತ್ತಮವಾದುದೆಂದು ಹೇಳಬಹುದು. ಇದು ಬಹು ವಿಸ್ತಾರವಾಗಿಯೂ, ಆಳವಾಗಿಯೂ, ಗಾಳಿ ಅಲೆಗಳ ಹೊಡೆತವಿಲ್ಲದೆಯೂ ಇರುವುದು.

(2) ಇದರ ಸುತ್ತುಮುತ್ತಲೂ ವಿಶೇಷವಾಗಿ ಕಲ್ಲಿದ್ದಲಿನ ಗಣಿಗಳಿರುವುದರಿಂದ ಕೈಗಾರಿಕೆಗಳು ಹೇರಳವಾಗಿ ನಡೆಯುವುವು.

(3) ಅಮೆರಿಕದಿಂದ ಬರುವ ಹತ್ತಿ, ಗೋಧಿ, ಚಿನ್ನ ಮೊದಲಾದುವು ಸಾಮಾನ್ಯವಾಗಿ ಈ ರೇವುಪಟ್ಟಣದ ಮೂಲಕವಾಗಿಯೇ ಆಮದಾಗುವುವು.

(4) ಹತ್ತಿಯ ಕಾರ್ಖಾನೆಗಳಿಗೆ ಅತ್ಯಂತ ಪ್ರಸಿದ್ಧವಾದ ಮಾಂಚೆಸ್ಟರ್ ಪಟ್ಟಣಕ್ಕೂ, ಲಿವರ್‌ಪೂಲಿಗೂ ಮಧ್ಯೆ ಹಡಗುಗಳು ಸಂಚರಿಸಲು ದೊಡ್ಡ ಕಾಲುವೆಯನ್ನು ತೆಗೆದಿರುವರು.

**ಗ್ಲಾಸ್ಗೊ.**—ಇದು ಕ್ಲೈಡ್ ನದಿಯ ಎರಡು ದಡಗಳಲ್ಲಿಯೂ ಇರುವುದು. ಸ್ಕಾಟ್ಲೆಂಡಿನಲ್ಲೆಲ್ಲಾ ಇದೇ ಬಹಳ ಕೈಗಾರಿಕೆ ಮತ್ತು ವ್ಯಾಪಾರಗಳುಳ್ಳ ಪಟ್ಟಣವು. ಇದೂ ಲಿವರ್‌ಪೂಲಿನಂತೆಯೇ ಅಮೆರಿಕಖಂಡದೊಡನೆ ಹೆಚ್ಚು ವ್ಯಾಪಾರವನ್ನು ಮಾಡುವುದರಿಂದ ಅಭಿವೃದ್ಧಿಗೆ ಬಂದಿದೆ. ಜನಸಂಖ್ಯೆಯಲ್ಲಿಯೂ ಅದರಷ್ಟು ದೊಡ್ಡದಾಗಿದೆ (9 ಲಕ್ಷ). ಇದರ ಪ್ರಾಮುಖ್ಯಕ್ಕೆ ಕಾರಣಗಳಾವುವೆಂದರೆ :—

(1) ಕ್ಲೈಡ್ ಅಳಿವೆಯನ್ನು ಆಳಮಾಡಿ ಭಾರಿ ಹಡಗುಗಳು ಈ ಪಟ್ಟಣಕ್ಕೆ ಬರುವಂತೆ ಮಾಡಿರುವರು. ಇದು ಮಾನುಷಕೃತವಾದ ಬಂದರುಗಳಲ್ಲಿ ಬಹು ಉತ್ತಮವಾದುದಾಗಿದೆ.

(2) ಇದರ ಸುತ್ತುಮುತ್ತಲೂ ಕಬ್ಬಿಣ, ಕಲ್ಲಿದ್ದಲುಗಳು ವಿಶೇಷವಾಗಿರುವುದರಿಂದ, ಇಲ್ಲಿ ವಿಶೇಷವಾಗಿ ಹಡಗುಗಳನ್ನು ತಯಾರುಮಾಡುವರು.

(3) ಇದು ಸ್ಕಾಟ್ಲೆಂಡಿನ ಮೈದಾನಪ್ರದೇಶದಲ್ಲಿರುವುದು. ದೇಶದ ಒಳಭಾಗಕ್ಕೆ ರೈಲುಮಾರ್ಗಗಳೂ ಜಲಮಾರ್ಗಗಳೂ ಹೇರಳವಾಗಿರುವುವು.

(4) ಅಮೆರಿಕದೊಡನೆ ವಿಶೇಷವಾಗಿ ವ್ಯಾಪಾರವು ನಡೆಯುವುದು.

**ಬ್ರಿಸ್ಟಲ್.**—ಇದು ಸೆವರ್ನ್ ನದೀಮುಖದಲ್ಲಿದೆ. ಹಿಂದೆ ಅಮೆರಿಕದೊಡನೆ ವಿಶೇಷವಾಗಿ ವ್ಯಾಪಾರವು ನಡೆಯುತ್ತಿತ್ತು. ಈಗ ಈ ವ್ಯಾಪಾರವು ಲಿವರ್‌ಪೂಲ್, ಗ್ಲಾಸ್ಗೊಗಳ ಮೂಲಕ ನಡೆಯುವುದರಿಂದ, ಈ ರೇವುಪಟ್ಟಣವು ಅಷ್ಟು ಮುಖ್ಯವಾಗಿಲ್ಲ. ಸೆವರ್ನ್ ನದಿಯು ಹಡಗುಗಳ ಸಂಚಾರಕ್ಕೆ

ಅಷ್ಟು ಅನುಕೂಲವಾಗಿಲ್ಲ. ಹತ್ತಿರದಲ್ಲಿ ಸಿಕ್ಕುವ ಕಲ್ಲಿದ್ದಲು ಸಾಲದು. ಈ ಕಾರಣಗಳಿಂದ ಇದು ಈಚೆಗೆ ಹಿಂದಾಗುತ್ತಿರುವುದು.

**ಕಾರ್ಡಿಫ್.**—ಇದು ಬ್ರಿಸ್ಟಲ್ ಕಡಲ್ಗಾಲುವೆಯ ತೀರದಲ್ಲಿದೆ. ವೇಲ್ಸಿನ ದಕ್ಷಿಣಭಾಗದಲ್ಲಿ ಹೊಗೆಯಿಲ್ಲದೆ ಉರಿಯುವ ಕಲ್ಲಿದ್ದಲು ಹೇರಳವಾಗಿ ಸಿಕ್ಕುವುದರಿಂದ, ಇದು ಈಚೆಗೆ ವಿಶೇಷವಾಗಿ ಪ್ರಮುಖತೆಗೆ ಬಂದಿದೆ. ಸತುವನ್ನೂ ತಾಮ್ರವನ್ನೂ ಇಲ್ಲಿ ಅದುರಿನಿಂದ ತೆಗೆಯುವರು. ವ್ಯಾಪಾರದಲ್ಲಿ ಇದು ಇಂಗ್ಲೆಂಡಿನಲ್ಲಿ ಮೂರನೆಯ ಪಟ್ಟಣವಾಗಿದೆ.

**ನ್ಯೂಕ್ಯಾಸಲ್.**—ಇದು ಟೈನ್ ನದಿಯ ದಡದಲ್ಲಿದೆ. ಇಲ್ಲಿಂದ ಕಲ್ಲಿದ್ದಲು ವಿಶೇಷವಾಗಿ ರಫ್ತಾಗುವುದು. ಹಡಗುಗಳೂ, ಗಾಜಿನ ಸಾಮಾನೂ, ದ್ರಾವಕಗಳೂ ಇಲ್ಲಿ ತಯಾರಾಗುವುವು.

**ಹಲ್.**—ಹಿಂದೆ ಈ ಖಂಡದ ಇತರ ದೇಶಗಳೊಡನೆ ಇಲ್ಲಿಂದ ವಿಶೇಷವಾಗಿ ವ್ಯಾಪಾರವು ನಡೆಯುತ್ತಿತ್ತು. ಈಗ ಇದರಂತೆಯೇ ಹಂಬರ್ ನದೀಮುಖದಲ್ಲಿರುವ ಗ್ರಿಂಸ್ಬೈ ಎಂಬ ಇನ್ನೊಂದು ಪಟ್ಟಣವು ವೃದ್ಧಿಹೊಂದಿ ಇದು ಮೂಲೆಗೆ ಬೀಳುತ್ತಲಿದೆ. ಪ್ಲಿಮತ್, ಸೌತಾಂಪ್ಟನ್, ಪೋರ್ಟ್ಸ್ಮತ್—ಇವು ಇಂಗ್ಲೆಂಡಿನ ದಕ್ಷಿಣ ತೀರದಲ್ಲಿರುವ ಮುಖ್ಯವಾದ ರೇವುಪಟ್ಟಣಗಳು.

**ಡಬ್ಲಿನ್.**—ಇದು ಐರ್ಲೆಂಡಿನಲ್ಲಿ ದೊಡ್ಡ ಪಟ್ಟಣ. ಲಿಫೆ ನದಿಯ ದಡದಲ್ಲಿದೆ; ನದಿಯು ಆಳವಾಗಿಲ್ಲದೆ ಇರುವುದರಿಂದ ಹಡಗುಗಳು ಕಿಂಗ್ಸ್‌ಟನ್ ಬಳಿಯಲ್ಲಿಯೇ ನಿಲ್ಲುವುವು. ಇದು ಫಲವತ್ತಾದ ಪ್ರದೇಶದಲ್ಲಿರುವುದರಿಂದಲೂ ಶುದ್ಧವಾದ ನೀರಿರುವುದರಿಂದಲೂ, ಇಲ್ಲಿ ಮದ್ಯಗಳು ಮತ್ತು ಉಣ್ಣೆಯ ಬಟ್ಟೆಗಳು ತಯಾರಾಗುವುವು.

**ಬೆಲ್‌ಫಾಸ್ಟ್.**—ಕೈಗಾರಿಕೆ ವ್ಯಾಪಾರಗಳಲ್ಲಿ ಐರ್ಲೆಂಡಿನಲ್ಲಿ ಮೊದಲನೆಯ ಪಟ್ಟಣವಾದ ಈ ರೇವುಪಟ್ಟಣವು ಬೆಲ್‌ಫಾಸ್ಟ್ ಖಾರಿಯ ತೀರದಲ್ಲಿದೆ. ಸ್ಕಾಟ್ಲೆಂಡಿನಿಂದ ಇಲ್ಲಿಗೆ ಸುಲಭವಾಗಿ ಕಲ್ಲಿದ್ದಲನ್ನು ಸಾಗಿಸಿ, ಇದರ ಸುತ್ತಮುತ್ತಲೂ ಸಿಕ್ಕುವ ಕಬ್ಬಿಣ ಮತ್ತು ನಾರುಗಳನ್ನು ಉಪಯೋಗಿಸಿ, ಇಲ್ಲಿ ಹಡಗುಗಳನ್ನು ಕಟ್ಟುವರು; ನಾರುಬಟ್ಟೆಗಳನ್ನೂ ಮಾಡುವರು. ನಾರುಬಟ್ಟೆಗಳು ಬ್ರಿಟಿಷ್ ದ್ವೀಪಗಳಲ್ಲಿ ಇನ್ನಾವ ಪಟ್ಟಣದಲ್ಲಿಯೂ ಇಲ್ಲಿನಷ್ಟು ತಯಾರಾಗುವುದಿಲ್ಲ.

**ಎಡಿನ್‌ಬರೊ.**—ಫೋರ್ತ್ ಖಾರಿಯ ತೀರದಲ್ಲಿದೆ. ಇದರ ಮಗ್ಗುಲಲ್ಲಿರುವ ಇದರ ರೇವುಪಟ್ಟಣವಾದ ಲೀತ್ ಎಂಬ ಪಟ್ಟಣವೂ ಸೇರಿ 7 ಲಕ್ಷ ಜನಗಳುಳ್ಳ ದೊಡ್ಡ ಪಟ್ಟಣವಾಗಿದೆ. ಇದು ಹಿಂದಿನ ಕಾಲದಿಂದಲೂ ಸ್ಕಾಟ್ಲೆಂಡಿನ ರಾಜಧಾನಿಯು. ಇಲ್ಲಿ ಪುರಾತನ ಕಾಲದ ಅನೇಕ ಕಟ್ಟಡಗಳಿರುವುವು. ಇದರ

ವಿಶ್ವವಿದ್ಯಾಲಯವು ಪ್ರಸಿದ್ಧವಾದುದು. ಇಲ್ಲಿ ಅನೇಕ ಶ್ರೀಮಂತರು ವಾಸ ಮಾಡುವರು.

**ಆಮದು ರಫ್ತುಗಳು.**—ಗ್ರೇಟ್ ಬ್ರಿಟನ್ ದ್ವೀಪದಿಂದ ಕೈಗಾರಿಕೆಯ ಸರಕುಗಳು ರಫ್ತಾಗುವುವೆಂದೂ, ಅಲ್ಲಿಗೆ ಆಹಾರ ಸಾಮಗ್ರಿಗಳೂ, ಕೈಗಾರಿಕೆಗಳಿಗೆ ಬೇಕಾದ ಹತ್ತಿ, ಲೋಹ ಮೊದಲಾದ ಸರಕುಗಳೂ ಆಮದಾಗುವುವೆಂದೂ ಸಾಮಾನ್ಯವಾಗಿ ಹೇಳಬಹುದು. ಗ್ರೇಟ್‌ಬ್ರಿಟನ್ನಿಗೆ ಐರ್ಲೆಂಡಿನಿಂದ ದನಗಳು ರಫ್ತಾಗುವುವು. ಅಲ್ಲಿಗೆ ಗ್ರೇಟ್ ಬ್ರಿಟನ್ನಿನಿಂದ ಕೈಗಾರಿಕೆಯ ಸರಕುಗಳೂ ಕಲ್ಲಿದ್ದಲೂ, ಅಮೆರಿಕದಿಂದ ಗೋಧಿಯೂ ಆಮದಾಗುವುವು.

ಸಸ್ಯ, ಪ್ರಾಣಿಗಳ ಬೆಳೆವಳಿಕೆಗೆ ಇತರ ದೇಶಗಳಲ್ಲಿರುವ ಸೌಕರ್ಯಗಳನ್ನೂ ಅಲ್ಲಿನ ಪ್ರಜಾಸಂಖ್ಯೆ ಕೈಗಾರಿಕೆಗಳನ್ನೂ ಯೋಚಿಸಿ ನೋಡಿದರೆ, ಯಾವ ಯಾವ ದೇಶಗಳಿಂದ ಯಾವ ಯಾವ ಸಾಮಗ್ರಿಗಳು ಇಲ್ಲಿಗೆ ಆಮದಾಗುವುವೆಂಬುದನ್ನು ಸುಲಭವಾಗಿ ಊಹಿಸಬಹುದು.

ಸಂಯುಕ್ತ ಸಂಸ್ಥಾನಗಳು, ರಷ್ಯ, ಇಂಡಿಯಾ, ಕೆನಡ, ಆಸ್ಟ್ರೇಲಿಯಗಳಿಂದ ಗೋಧಿಯೂ, ಅಮೆರಿಕ, ಆಸ್ಟ್ರೇಲಿಯಗಳಿಂದ ಮಾಂಸವೂ, ಕೆನಡ, ಡೆನ್‌ಮಾರ್ಕ್‌ಗಳಿಂದ ದನಗಳೂ, ಜರ್ಮನಿ, ಜಾವಾ, ವೆಸ್ಟಿಂಡಿಯಾ ದ್ವೀಪಗಳಿಂದ ಸಕ್ಕರೆಯೂ, ಇಂಡಿಯಾ, ಸಿಲೋನ್, ಚೀಣಾಗಳಿಂದ ಟೀಯೆಲೆಯೂ, ಫ್ರಾನ್ಸ್, ಸ್ಪೇನ್, ಪೋರ್ಚುಗಲ್‌ಗಳಿಂದ ವೈನುಗಳೂ, ಬ್ರೆಜಿಲ್, ಇಂಡಿಯಗಳಿಂದ ಕಾಫಿಯೂ ಆಮದಾಗುವುವು.

ಸಂಯುಕ್ತಸಂಸ್ಥಾನಗಳು, ಇಂಡಿಯಾ, ಈಜಿಪ್ಟ್‌ಗಳಿಂದ ಹತ್ತಿಯೂ, ಆಸ್ಟ್ರೇಲಿಯ, ದಕ್ಷಿಣ ಆಫ್ರಿಕ, ಇಂಡಿಯಗಳಿಂದ ಉಣ್ಣೆಯೂ, ಐಬೀರಿಯನ್ ಪರ್ಯಾಯದ್ವೀಪ, ದಕ್ಷಿಣ ಆಫ್ರಿಕ, ನಾರ್ವೆ ಸ್ವೀಡನ್‌ಗಳಿಂದ ಕಬ್ಬಿಣವೂ, ಚೀಣ, ಫ್ರಾನ್ಸ್‌ಗಳಿಂದ ರೇಷ್ಮೆಯೂ, ರಷ್ಯ, ಇಂಡಿಯಾಗಳಿಂದ ನಾರೂ, ಇಂಡಿಯ, ಸಂಯುಕ್ತಸಂಸ್ಥಾನಗಳು, ದಕ್ಷಿಣ ಆಫ್ರಿಕ, ದಕ್ಷಿಣ ಅಮೆರಿಕಗಳಿಂದ ತೊಗಲೂ, ಇಂಡಿಯ, ಆಸ್ಟ್ರೇಲಿಯ, ದಕ್ಷಿಣ ಆಫ್ರಿಕಗಳಿಂದ ಚಿನ್ನವೂ, ಆಫ್ರಿಕ, ಬ್ರೆಜಿಲ್‌ಗಳಿಂದ ರಬ್ಬರೂ ಆಮದಾಗುವುವು.

ಗ್ರೇಟ್‌ಬ್ರಿಟನ್ನಿನಿಂದ ಇಂಡಿಯ, ಚೀಣಾ, ಈಜಿಪ್ಟ್‌ಗಳಿಗೆ ಹತ್ತಿಯ ನೂಲೂ, ಬಟ್ಟೆಗಳೂ, ಸಂಯುಕ್ತಸಂಸ್ಥಾನಗಳು, ಇಂಡಿಯಗಳಿಗೆ ಉಣ್ಣೆಯೂ, ವೈನುಗಳೂ, ಇಂಡಿಯ ಕಾಲೋನಿಗಳು ಮತ್ತು ಇತರ ದೇಶಗಳಿಗೆ ಹೊಗೆಯ ಯಂತ್ರಗಳೂ, ದ್ರಾವಕಗಳೂ ರಫ್ತಾಗುವುವು.

ಲೋಹದ ಸಾಮಾನು, ನಾರು ಬಟ್ಟೆ, ಗೋಣಿಚೀಲಗಳು, ಮಣ್ಣಿನ ಪಾತ್ರೆಗಳು, ಕಲ್ಲಿದ್ದಲು ಮೊದಲಾದುವು ಕೆಲವು ದೇಶಗಳಿಗೆ ರಫ್ತಾಗುವುವು.

ಬ್ರಿಟಿಷ್ ದ್ವೀಪಗಳ ಆಮದು ರಫ್ತುಗಳಲ್ಲಿ 90% ಇಂಗ್ಲೆಂಡಿನವಾಗಿವೆ. ಈ ವ್ಯಾಪಾರವು ಚಕ್ರಾಧಿಪತ್ಯದ ಇತರ ದೇಶಗಳೊಡನೆಯೂ, ಸಂಯುಕ್ತ ಸಂಸ್ಥಾನಗಳೊಡನೆಯೂ, ಜರ್ಮನಿ, ಫ್ರಾನ್ಸ್, ರಷ್ಯ, ಅರ್ಜೆಂಟೈನ್, ಬೆಲ್ಜಿಯಂ, ಹಾಲೆಂಡ್, ಈಜಿಪ್ಟ ಈ ದೇಶಗಳೊಡನೆಯೂ ಮುಖ್ಯವಾಗಿ ನಡೆಯುವುದು.

**ಜನಗಳು; ಜನಸಾಂದ್ರತೆ.**—ಈ ದ್ವೀಪಗಳ ಜನಸಂಖ್ಯೆಯು ಸುಮಾರು 4½ ಕೋಟಿ. ಎಂದರೆ ಸರಾಸರಿ 1 ಚ. ಮೈ. ಗೆ 373 ಜನಗಳು ಇರುವರು. ಇಂಗ್ಲೆಂಡ್, ವೇಲ್ಸ್‌ಗಳಲ್ಲಿಯೇ 3½ ಕೋಟಿ ಜನರಿರುವರು. ಜನಸಾಂದ್ರತೆಯು ಹಾಲೆಂಡ್ (1 ಚ. ಮೈ. ಗೆ 460), ಬೆಲ್ಜಿಯಂ (1 ಚ. ಮೈ. ಗೆ 590) ಗಳಲ್ಲಿ ಮಾತ್ರ ಈ ದ್ವೀಪಗಳಿಗಿಂತ ಹೆಚ್ಚಾಗಿರುವುದು. ಆದರೆ ಇಂಗ್ಲೆಂಡನ್ನು ಮಾತ್ರವೇ ಗಣಿಸಿದರೆ 1 ಚ. ಮೈ. ಗೆ 620 ಜನರಿರುವರು. ಆದುದರಿಂದ ಯೂರೋಪಿನಲ್ಲಿ ಇಂಗ್ಲೆಂಡೇ ಅತಿ ಹೆಚ್ಚು ಜನಸಾಂದ್ರತೆಯುಳ್ಳ ದೇಶವೆಂದು ಹೇಳಬಹುದು.

ಇಂಗ್ಲೆಂಡಿನಲ್ಲಿ ಲಂಡನ್, ಮಾಂಚೆಸ್ಟರುಗಳ ಬಳಿಯಲ್ಲಿಯೂ, ಈಶಾನ್ಯ, ಪಶ್ಚಿಮ ಭಾಗಗಳಲ್ಲಿಯೂ, ಸ್ಕಾಟ್ಲೆಂಡಿನಲ್ಲಿ ಫೋರ್ತ್, ಕ್ಲೈಡ್‌ಗಳಿಗೆ ಮಧ್ಯ ದಲ್ಲಿಯೂ, ಐರ್ಲೆಂಡಿನಲ್ಲಿ ಡಬ್ಲಿನ್ ಸಮೀಪದಲ್ಲಿಯೂ ಜನಸಾಂದ್ರತೆಯು ಬಹಳ ಹೆಚ್ಚಾಗಿರುವುದು. ಸ್ಕಾಟ್ಲೆಂಡಿನ ಪರ್ವತಪ್ರದೇಶದಲ್ಲಿ ಜನಸಾಂದ್ರತೆಯು ಬಹಳ ಕಡಿಮೆ. ಕಬ್ಬಿಣ, ಕಲ್ಲಿದ್ದಲುಗಳು ಹೆಚ್ಚಾಗಿ ಸಿಕ್ಕುವ ಕಡೆಗಳಲ್ಲಿ ಜನಸಾಂದ್ರತೆಯು ಹೆಚ್ಚಾಗಿರುವುದೆಂದು ಸಾಮಾನ್ಯವಾಗಿ ಹೇಳಬಹುದು. ಅಲ್ಲಿ ಕೈಗಾರಿಕೆಗಳು ವಿಶೇಷವಾಗಿ ನಡೆಯುವುವು. ದೊಡ್ಡ ಪಟ್ಟಣಗಳು ಹೆಚ್ಚಾಗಿರುವುವು. ಆದುದರಿಂದ ಜನಸಾಂದ್ರತೆಯು ಹೆಚ್ಚು.

ಇಂಗ್ಲೆಂಡು ದೇಶದಲ್ಲಿರುವಷ್ಟು ದೊಡ್ಡ ಪಟ್ಟಣಗಳು ಇನ್ನಾವ ದೇಶ ದಲ್ಲಿಯೂ ಇಲ್ಲ. 1911 ನೆಯ ಇಸವಿಯ ಖಾನೇಷುಮಾರಿ ಲೆಕ್ಕದ ಮೇರೆ 50 ಸಾವಿರಕ್ಕಿಂತ ಹೆಚ್ಚು ಜನಸಂಖ್ಯೆಯುಳ್ಳ ಪಟ್ಟಣಗಳು 99 ಇದ್ದುವು. 2,50,0000ಕ್ಕಿಂತ ಹೆಚ್ಚು ಜನಸಂಖ್ಯೆಯುಳ್ಳವು 16 ಇದ್ದವು. ಈ ಹದಿನಾರರ ಪೈಕಿ ಮುಖ್ಯವಾದುವು ಲಂಡನ್ (70 ಲಕ್ಷ), ಲಿವರ್‌ಪೂಲ್ (7½ ಲಕ್ಷ), ಮಾಂಚೆಸ್ಟರ್ (7 ಲಕ್ಷ), ಬರ್ಮಿಂಗ್ಹಾಂ (5 ಲಕ್ಷ), ಲೀಡ್ಸ್ (4½ ಲಕ್ಷ) ಮತ್ತು ಷೆಫೀಲ್ಡ್ (4½ ಲಕ್ಷ).

**ಭಾಷೆ ಮತ್ತು ಮತ.**—ಇಂಗ್ಲಿಷು ಭಾಷೆಯು ಈ ಜನಗಳಿಗೆ ಮಾತೃ ಭಾಷೆಯಾಗಿದೆ. ಆದರೆ ವೇಲ್ಸ್, ಸ್ಕಾಟ್ಲೆಂಡುಗಳ ಪರ್ವತಪ್ರದೇಶಗಳ

ಲ್ಲಿಯೂ, ಐರ್ಲೆಂಡಿನ ಕೆಲವು ಭಾಗಗಳಲ್ಲಿಯೂ ಕೆಲವು ಜನರು ಬೇರೆ ಭಾಷೆಗಳನ್ನೂ ಆಡುವರು. ಇಂಗ್ಲೆಂಡಿನಲ್ಲಿಯೂ, ಸ್ಕಾಟ್ಲೆಂಡಿನ ಮಧ್ಯಭಾಗದಲ್ಲಿಯೂ ಪ್ರಾಟಿಸ್ಟೆಂಟು ಪಂಗಡದ ಕ್ರೈಸ್ತರೇ ಹೆಚ್ಚು. ಇವರಲ್ಲಿ ಅನೇಕ ಒಳಪಂಗಡಗಳಿರುವುವು. ಸ್ಕಾಟ್ಲೆಂಡಿನ ಪರ್ವತಪ್ರದೇಶದಲ್ಲಿಯೂ, ವೇಲ್ಸ್, ಐರ್ಲೆಂಡುಗಳಲ್ಲಿಯೂ ರೋಮನ್ ಕ್ಯಾಥೋಲಿಕ್ ಪಂಗಡದ ಕ್ರೈಸ್ತರೇ ಅಧಿಕವಾಗಿರುವರು. ಅಂದರೆ ಕೈಗಾರಿಕೆ, ವ್ಯಾಪಾರಗಳು ನಡೆಯುವ ಪ್ರದೇಶಗಳಲ್ಲಿ ಪ್ರಾಟಿಸ್ಟೆಂಟರೂ, ಪಶುಪಾಲನೆ, ವ್ಯವಸಾಯಗಳು ನಡೆಯುವ ಪ್ರದೇಶಗಳಲ್ಲಿ ರೋಮನ್ ಕ್ಯಾಥೋಲಿಕ್ ಜನರೂ ಹೆಚ್ಚಾಗಿರುವರೆಂದು ಸಾಮಾನ್ಯವಾಗಿ ಹೇಳಬಹುದು.

**ವಿದ್ಯಾಭ್ಯಾಸ.**—ಈ ದೇಶದಲ್ಲಿ ಬಲಾತ್ಕಾರ ವಿದ್ಯಾಭ್ಯಾಸವು ಜಾರಿಯಲ್ಲಿರುವುದರಿಂದ, ಜನರಲ್ಲಿ ಓದು ಬರಹಗಳನ್ನು ತಿಳಿದಿರುವುದು ಸರ್ವಸಾಮಾನ್ಯವಾಗಿದೆ. ಅನೇಕ ಪ್ರೌಢ ಪಾಠಶಾಲೆಗಳೂ, ಕಲಾಶಾಲೆಗಳೂ ಇರುವುವು. ಲಂಡನ್, ಆಕ್ಸ್‌ಫರ್ಡ್, ಕೇಂಬ್ರಿಡ್ಜ್, ಮಾಂಚೆಸ್ಟರ್, ಎಡಿನ್‌ಬರೊ, ಡಬ್ಲಿನ್ ಮೊದಲಾದ ಪಟ್ಟಣಗಳಲ್ಲಿ ವಿಶ್ವವಿದ್ಯಾನಿಲಯಗಳಿರುವುವು. ಆದುದರಿಂದ ಸಾಮಾನ್ಯ ಜನರೂ ಕಸಬುಗಳಲ್ಲಿ ಕುಶಲರಾಗಿಯೂ ಬುದ್ಧಿಶಾಲಿಗಳಾಗಿಯೂ, ರಾಜಕೀಯ, ಸಾಮಾಜಿಕ ವಿಚಾರಗಳಲ್ಲಿ ಆಸಕ್ತರಾಗಿಯೂ ಇರುವರು. ಅಲ್ಲದೆ ಅನೇಕ ಶಾಸ್ತ್ರಜ್ಞರೂ ಇರುವರು. ಇವರು ದೇಶಸಂಪತ್ತಿಗೆ ಬೇಕಾಗುವ ತಿಳಿವಳಿಕೆಯನ್ನೂ, ಸಾಧನಗಳನ್ನೂ ವೃದ್ಧಿಪಡಿಸುವುದರಲ್ಲಿ ಚತುರರಾಗಿರುವರು. ಈ ದೇಶದ ಪ್ರಮುಖತೆಗೆ ಈ ವಿದ್ಯಾಭ್ಯಾಸವು ಬಹು ಸಹಕಾರಿಯಾಗಿದೆ.

**ರಾಜ್ಯಭಾರ.**—ಬ್ರಿಟಿಷ್ ರಾಜ್ಯವು ಸಾಂಕುಶಪ್ರಭುತ್ವಕ್ಕೆ ತವರುಮನೆಯಾಗಿದೆ. ಈ ಬಗೆಯ ರಾಜ್ಯಭಾರವು ಬ್ರಿಟಿಷ್ ಕಾಲೋನಿಗಳಲ್ಲಿಯೂ ಯೂರೋಪಿನ ಇತರ ರಾಜ್ಯಗಳಲ್ಲಿಯೂ ಹರಡಿರುವುದಲ್ಲದೆ ನಮ್ಮ ಇಂಡಿಯಾ ದೇಶದಲ್ಲಿಯೂ ಹರಡುವುದಕ್ಕೆ ಮೊದಲಾಗಿದೆ. ಇಲ್ಲಿ ರಾಜರು ಪ್ರಜೆಗಳ ಇಷ್ಟಾನುಸಾರ ರಾಜ್ಯಭಾರ ಮಾಡಬೇಕೇ ಹೊರ್ತು ಇಷ್ಟಬಂದಂತೆ ನಡೆಯುವುದಕ್ಕೆ ಅವಕಾಶವಿಲ್ಲ. ಪ್ರಜೆಗಳ ಪ್ರತಿನಿಧಿಗಳ ಸಮ್ಮತಿಯಿಲ್ಲದೆ ಕಂದಾಯಗಳನ್ನು ಹಾಕುವುದಕ್ಕೇ ಆಗಲಿ, ಹಣವನ್ನು ಖರ್ಚುಮಾಡುವುದಕ್ಕೇ ಆಗಲಿ, ಕಾನೂನುಗಳನ್ನು ಮಾಡುವುದಕ್ಕೇ ಆಗಲಿ ಇವರಿಗೆ ಅಧಿಕಾರವಿಲ್ಲ. ಈ ರಾಜರಿಗೆ ತಮಗೆ ತೋರಿದವರನ್ನು ಮಂತ್ರಿ ಪದವಿಗೆ ನಿಯಮಿಸುವುದಕ್ಕೂ ಅವಕಾಶವಿಲ್ಲ. ಪ್ರಜೆಗಳ ಪ್ರತಿನಿಧಿಸಭೆ(ಹೌಸ್ ಆಫ್ ಕಾಮನ್ಸ್)ಯಲ್ಲಿ ಮುಖ್ಯವಾದ ಎರಡು ಪಂಗಡಗಳು ಅಥವಾ ಪಾರ್ಟಿಗಳು ಇರುವುವು. ಒಂದು

ಸಲ ಚುನಾಯಿಸಲ್ಪಟ್ಟ ಸಭೆಯಲ್ಲಿ ಯಾವ ಪಾರ್ಟಿಯ ಮೆಂಬರುಗಳು ಹೆಚ್ಚಾಗಿರುವರೋ ಆ ಪಾರ್ಟಿಯ ಮುಖಂಡನನ್ನು ರಾಜರು ಮುಖ್ಯ ಮಂತ್ರಿಯನ್ನಾಗಿ ನೇಮಿಸುವರು. ಆತನು ತನ್ನ ಪಂಗಡದಿಂದ ಇತರ ಮಂತ್ರಿಗಳನ್ನು ಚುನಾಯಿಸಿಕೊಳ್ಳುವನು. ಈ ಮಂತ್ರಿಗಳು ರಾಜ್ಯಭಾರವನ್ನು ನಡೆಯಿಸುವುದಲ್ಲದೆ ಕಾನೂನುಗಳ ಮಸೂದೆಗಳನ್ನೂ ತಯಾರುಮಾಡುವರು. ಈ ಸಭೆಯಲ್ಲದೆ ಶ್ರೀಮಂತರನ್ನೂ, ಬಿಷಪ್ಪುಗಳೆಂಬ ಗುರುಗಳನ್ನೂ ಒಳಗೊಂಡಿರುವ ಹೌಸ್ ಆಫ್ ಲಾರ್ಡ್ಸ್ ಎಂಬ ಮತ್ತೊಂದು ಸಭೆ ಇರುವುದು. ಈ ಎರಡು ಸಭೆಗಳಿಗೂ ಒಟ್ಟು ಪಾರ್ಲಿಮೆಂಟ್ ಎಂದು ಹೆಸರು. ಪ್ರತಿಯೊಂದು ಕಾನೂನೂ, ಕಂದಾಯವೂ, ವೆಚ್ಚವೂ, ಪಾರ್ಲಿಮೆಂಟಿನ ಮತ್ತು ರಾಜರ ಒಪ್ಪಿಗೆಯನ್ನು ಪಡೆಯಬೇಕಾದರೂ ವಸ್ತುತಃ ಹೌಸ್ ಆಫ್ ಕಾಮನ್ಸ್‌ರವರ ಅಧಿಕಾರವೇ ಬಹು ಮುಖ್ಯವಾಗಿರುವುದು. ಪ್ರಜೆಗಳು ತಮ್ಮ ಅಭಿಪ್ರಾಯವನ್ನು ಸೂಚಿಸುವುದಕ್ಕೆ ಅರ್ಹರೆಂದು ತಮಗೆ ತೋರಿದವರನ್ನು ತಮ್ಮ ಪ್ರತಿನಿಧಿಗಳಾಗಿ ಚುನಾಯಿಸಿ ಈ ಸಭೆಗೆ ಕಳುಹಿಸುವರು. ಆದುದರಿಂದ ಒಟ್ಟಿನಲ್ಲಿ ಪ್ರಜೆಗಳೇ ತಮಗೆ ಬೇಕಾದಂತೆ ರಾಜ್ಯಭಾರವನ್ನು ನಡೆಯಿಸಿಕೊಳ್ಳುವರು. ಈ ದೇಶದ ರಾಜ್ಯಭಾರ ಕ್ರಮವು ಸಾಂಕುಶಪ್ರಭುತ್ವದಂತೆ ತೋರಿಬಂದರೂ ನಿಜವಾಗಿಯೂ ಸಂಪೂರ್ಣವಾದ ಪ್ರಜಾಪ್ರಭುತ್ವವೇ ಆಗಿದೆ. ಜನಗಳ ಸ್ವಾತಂತ್ರ್ಯಾಭಿಮಾನವೂ ಧೈರ್ಯ ಸಾಹಸಗಳೂ ಅಸಾಧಾರಣವಾದ ದೇಶಾಭಿಮಾನವೂ ಇದಕ್ಕೆ ಮುಖ್ಯ ಕಾರಣಗಳಾಗಿವೆ.

**ರಾಜಕೀಯ ವಿಭಾಗಗಳು.**—ನಮ್ಮ ಸೀಮೆಯನ್ನು ಡಿಸ್ಟ್ರಿಕ್ಟುಗಳಾಗಿ ವಿಭಾಗಿಸಿರುವಂತೆ ಇಂಗ್ಲೆಂಡನ್ನು 40 ಕೌಂಟಿ ಅಥವಾ ಷೈರುಗಳಾಗಿಯೂ, ವೇಲ್ಸನ್ನು 12 ಆಗಿಯೂ, ಸ್ಕಾಟ್ಲೆಂಡನ್ನು 33 ಆಗಿಯೂ, ಐರ್ಲೆಂಡನ್ನು 32 ಆಗಿಯೂ ರಾಜ್ಯಭಾರಕ್ಕೋಸ್ಕರ ವಿಭಾಗಿಸಿರುವರು. ಪ್ರತಿಯೊಂದು ಕೌಂಟಿಯಲ್ಲಿಯೂ ಅನೇಕ ಉಪಭಾಗಗಳು ಇರುವುವು. ಈ ಎಲ್ಲಾ ಭಾಗಗಳಲ್ಲಿಯೂ ಪ್ರಜಾಪ್ರತಿನಿಧಿಗಳನ್ನುಳ್ಳ ಕಾರ್ಯನಿರ್ವಾಹಕ ಸಭೆಗಳು ಅಥವಾ ಕೌನ್‌ಸಿಲ್‌ಗಳು ಇರುವುವು. ಇವು ರಸ್ತೆ, ಪಾಕೀಜ, ನೀರಿನ ಸರಬರಾಯಿ, ಬೆಳಕು, ಪ್ರೈಮರಿ ಸ್ಕೂಲುಗಳು ಮೊದಲಾದ ಚಿಲ್ಲರೆ ಬಾಬುಗಳನ್ನೂ, ತಮಗೆ ಸೇರಿದ ಪಟ್ಟಣ ಅಥವಾ ಗ್ರಾಮದಲ್ಲಿ ನೋಡಿಕೊಳ್ಳುವರು. ನಮ್ಮ ಮ್ಯುನಿಸಿಪಾಲಿಟಿ, ಡಿಸ್ಟ್ರಿಕ್ಟು ಬೋರ್ಡು, ತಾಲ್ಲೂಕು ಬೋರ್ಡು, ಗ್ರಾಮದ ಯೂನಿಯನ್‌ಗಳು ಇವುಗಳನ್ನು ಹೋಲುವುವು. ಆದರೆ ನಮ್ಮ ಕೌನ್‌ಸಿಲ್‌ಗಳಿಗಿಂತ ಇವುಗಳಿಗೆ ಆದಾಯ ವ್ಯಯವು ಹೆಚ್ಚಾಗಿರುವುದು. ಅಧಿಕಾರವೂ ಹೆಚ್ಚಾಗಿರುವುದು.

## ಬ್ರಿಟಿಷ್ ಚಕ್ರಾಧಿಪತ್ಯ

**ಬ್ರಿಟಿಷ್ ಚಕ್ರಾಧಿಪತ್ಯದ ಪ್ರಮುಖತೆ.**–ಏಷ್ಯಾ, ಯುರೋಪ್ ಖಂಡಗಳ ಸಾಮಾನ್ಯ ವಿವರಣೆಯನ್ನೂ, ಈ ಖಂಡಗಳಲ್ಲಿ ಕೆಲವು ದೇಶಗಳ ವಿವರಣೆಯನ್ನೂ ಈಗ ತಿಳಿದಿರುವಿರಿ. ಒಂದು ಪ್ರದೇಶದ ವಿವರಣೆಯನ್ನು ಕಲಿಯುವಾಗ ಆ ಪ್ರದೇಶದ ತೀರಲಕ್ಷಣ, ಭೂಲಕ್ಷಣ, ವಾಯುಗುಣ, ಮಳೆ ಮೊದಲಾದುವು ಹೇಗಿರುವುದೆಂಬುದನ್ನು ಮೊದಲು ತಿಳಿದು, ಇವುಗಳಿಂದ ಅಲ್ಲಿನ ಜನರ ನಾಗರಿಕತೆಯು ಅಂದರೆ ಕಸಬು, ವ್ಯಾಪಾರ, ರಾಜ್ಯಭಾರ, ನಡೆ ನುಡಿ ಮೊದಲಾದುವು ಹೇಗೆ ಏರ್ಪಟ್ಟಿರುವುದೆಂಬುದನ್ನು ತಿಳಿದಿರಿ.

ಹೀಗೆಯೇ ನಮ್ಮ ಇಂಡಿಯಾದೇಶದ ಸ್ವಾಭಾವಿಕ ಲಕ್ಷಣಗಳು ಆವುವು? ಅವು ನಮ್ಮ ಭಾರತೀಯರ ಸಂಪತ್ತಿಗೂ ನಾಗರಿಕತೆಗೂ ಎಷ್ಟು ಮಟ್ಟಿಗೆ ಸಹಾಯಮಾಡಿರುವುವು? ಎಂಬುದನ್ನು ತಿಳಿದಿರುವಿರಲ್ಲವೇ! ಆದರೆ ಇಷ್ಟೇ ಸಾಲದು. ನಮ್ಮ ದೇಶವು ಅನೇಕ ವರ್ಷಗಳಿಂದ ಬ್ರಿಟಿಷ್ ಜನಗಳ ಪ್ರಭುತ್ವಕ್ಕೆ ಒಳಪಟ್ಟಿರುವುದು. ಆದುದರಿಂದ ಆಂಗ್ಲೇಯರ ಭಾಷೆ, ಅವರ ರಾಜ್ಯಭಾರಕ್ರಮ, ಅವರ ಕೈಗಾರಿಕೆಗಳು, ವ್ಯಾಪಾರಗಳಲ್ಲಿ ಅವರಿಗೆ ಇರುವ ಕುಶಲತೆ, ಪಾಶ್ಚಾತ್ಯ ಶಾಸ್ತ್ರಗಳು ಮೊದಲಾದುವು ಇಲ್ಲಿ ಪ್ರಚಾರಕ್ಕೆ ಬಂದು ನಮ್ಮ ದೇಶದ ಪುರಾತನವಾದ ನಾಗರಿಕತೆಯು ಬದಲಾಯಿಸುತ್ತಿರುವುದು.

ಈ ನಮ್ಮ ನಾಗರಿಕತೆಯು ಈಗಿನ ಕಾಲದಲ್ಲಿ ಹೀಗೆ ಬದಲಾಯಿಸುತ್ತಿರುವಲ್ಲಿ ಒಳ್ಳೆಯ ಫಲವನ್ನು ಪಡೆಯಬೇಕಾದರೆ, ಈ ಬ್ರಿಟಿಷ್ ಜನರಿಗೆ ಸೇರಿದ ಚಕ್ರಾಧಿಪತ್ಯದ ವಿಸ್ತಾರವನ್ನೂ ಅದಕ್ಕೆ ಸೇರಿರುವ ರಾಷ್ಟ್ರಗಳ ವಿವರಣೆಯನ್ನೂ, ಅದರ ಐಶ್ವರ್ಯ, ನಾಗರಿಕತೆಗಳನ್ನೂ ವಿಶದವಾಗಿ ತಿಳಿಯುವುದು ಆವಶ್ಯಕವು.

ಈ ಬ್ರಿಟಿಷ್ ಜನರ ಆಧಿಪತ್ಯವು ಪ್ರಪಂಚದ ಎಲ್ಲಾ ಕಡೆಗಳಲ್ಲಿಯೂ ಆವರಿಸಿರುವುದು. ಅಮೆರಿಕ ಖಂಡದ ಸಂಯುಕ್ತಸಂಸ್ಥಾನಗಳು ಈ ಆಧಿಪತ್ಯಕ್ಕೆ ಸೇರದಿದ್ದರೂ, ಕುಲದಲ್ಲಿ ಅಲ್ಲಿನ ಜನಗಳು ಅನೇಕರು ಬ್ರಿಟಿಷರೇ ಆಗಿದ್ದಾರೆ. ಈ ಸಂಸ್ಥಾನಗಳನ್ನೂ, ಈ ಚಕ್ರಾಧಿಪತ್ಯವನ್ನೂ ಒಟ್ಟುಗೂಡಿಸಿ ನೋಡಿದರೆ, ಪ್ರಪಂಚದಲ್ಲಿನ ಕಾಲುಭಾಗ ನೆಲವನ್ನೂ, ಮೂರನೆಯ ಒಂದು ಭಾಗ ಪ್ರಜೆಗಳನ್ನೂ ಇವು ಒಳಗೊಂಡಿರುವುವು. ಈ ಎರಡು ಜನಾಂಗದವರಿಗೂ ಮಾತೃಭಾಷೆಯಾದ ಇಂಗ್ಲಿಷ್ ಭಾಷೆಯು 14 ಕೋಟಿ ಜನರಿಗೆ ಮಾತೃಭಾಷೆಯಾಗಿರುವುದು. ಪ್ರಪಂಚದ ಜನರಲ್ಲಿ ಈ ಭಾಷೆಯಷ್ಟು ಇನ್ಯಾವ ಭಾಷೆಯೂ ಪ್ರಚಾರದಲ್ಲಿಲ್ಲ. ಇವರ ನಾಗರಿಕತೆಯೂ, ಕುಶಲವಿದ್ಯೆಗಳೂ, ರಾಜ್ಯಭಾರ ಕ್ರಮವೂ ಇವರಿಗೆ ಅಧೀನವಾಗಿರುವ ರಾಜ್ಯಗಳಲ್ಲಿಯೇ ಅಲ್ಲದೆ, ಇತರ ಅನೇಕ

ಸ್ವತಂತ್ರ ರಾಜ್ಯಗಳಲ್ಲಿಯೂ ಹರಡುತ್ತಿರುವುವು. ಆದುದರಿಂದ ಪ್ರಪಂಚದ ನಾಗರಿಕತೆಯು ಮುಂದೆ ಯಾವ ಬಗೆಯಲ್ಲಿ ಅಭಿವೃದ್ಧಿಯಾಗುವುದೆಂಬುದು ಇವರ ಕೈಯಲ್ಲಿದೆ ಎಂದು ಹೇಳಬಹುದು. ಈಗಿನ ಯುದ್ಧದಲ್ಲಿ ಇವರು ಪ್ರಪಂಚದ ಎಲ್ಲಾ ರಾಜ್ಯಗಳ ಮತ್ತು ಪ್ರತಿಯೊಂದು ರಾಜ್ಯದಲ್ಲಿಯೂ ಇರುವ ಪ್ರಜೆಗಳ ಸ್ವಾತಂತ್ರ್ಯಕ್ಕಾಗಿ ಹೋರಾಡಿದುದು ನಮ್ಮೆಲ್ಲರಿಗೂ ತಿಳಿದೇ ಇದೆ.

ಬ್ರಿಟಿಷ್ ಜನರು ಇಷ್ಟು ಪ್ರಮುಖರಾಗಲು ಕಾರಣವೇನಿರಬಹುದು? ಸನ್ನಿವೇಶ, ತೀರಲಕ್ಷಣ, ವಾಯುಗುಣ, ಖನಿಜಗಳು, ಜಲಮಾರ್ಗಗಳು ಮೊದಲಾದ ವಿಷಯಗಳಲ್ಲಿ ಇವರ ದೇಶವು ಇವರಿಗೆ ವಿಶೇಷ ಸೌಕರ್ಯಗಳನ್ನುಂಟು ಮಾಡಿದೆ. ಈ ಸೌಕರ್ಯಗಳಿಂದ ಈ ಜನರು ಸ್ವಾತಂತ್ರ್ಯದಲ್ಲಿ ಅಭಿಮಾನವುಳ್ಳವರಾಗಿಯೂ, ದೇಶಾಭಿಮಾನವುಳ್ಳವರಾಗಿಯೂ, ಅಪಾಯಗಳನ್ನು ಲಕ್ಷಿಸದವರಾಗಿಯೂ, ಬಹು ಸಾಹಸಿಗಳಾಗಿಯೂ, ಬಹು ಐಶ್ವರ್ಯವಂತರಾಗಿಯೂ, ನಾಗರಿಕರಾಗಿಯೂ ಇರುವರು. ಆದುದರಿಂದ ಇವರ ಚಕ್ರಾಧಿಪತ್ಯದ ವಿವರಣೆಯನ್ನು ತಿಳಿಯುವುದು ನಮಗೆ ಪ್ರಯೋಜನಕರವಾಗಿಯೂ ಇರುವುದು.

**ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಸೇರಿರುವ ರಾಷ್ಟ್ರಗಳು.**—ಈ ಚಕ್ರಾಧಿಪತ್ಯದ ರಾಷ್ಟ್ರಗಳನ್ನು ಕೆಂಪುಬಣ್ಣದಿಂದ ತೋರಿಸಿರುವ ಪ್ರಪಂಚದ ಭೂಪಟವನ್ನಾಗಲಿ, ಈ ರಾಷ್ಟ್ರಗಳನ್ನೇ ಬೇರೆ ವಿಂಗಡಿಸಿ ತೋರಿಸಿರುವ ಭೂಪಟವನ್ನಾಗಲಿ ನೋಡಿ ಈ ಚಕ್ರಾಧಿಪತ್ಯದ ವಿಸ್ತೀರ್ಣವನ್ನು ಊಹಿಸಿರಿ. ಪ್ರಪಂಚದ ನೆಲದಲ್ಲಿ $\frac{1}{6}$ ಭಾಗವೂ, ಜನಸಂಖ್ಯೆಯಲ್ಲಿ $\frac{1}{4}$ ಭಾಗವೂ ಇದಕ್ಕೆ ಸೇರಿರುವುವು. ಈ ಚಕ್ರಾಧಿಪತ್ಯಕ್ಕೆ ಸೇರಿದ ಈ ರಾಷ್ಟ್ರಗಳಲ್ಲಿ ಮುಖ್ಯವಾದುವು ಯಾವುವೆಂಬುದನ್ನು ಇಲ್ಲಿ ಸಂಕ್ಷೇಪವಾಗಿ ಸೂಚಿಸಿದೆ. ಅವುಗಳ ವಿವರಣೆಯು ಈ ಪುಸ್ತಕದಲ್ಲಿಯೇ ಅಲ್ಲಲ್ಲಿ ಕೊಡಲ್ಪಟ್ಟಿದೆ.

### ಯೂರೊಪು ಖಂಡದಲ್ಲಿ

(1) ಬ್ರಿಟಿಷ್ ದ್ವೀಪಗಳು ಈ ಚಕ್ರಾಧಿಪತ್ಯದ ಮಾತೃಸ್ಥಾನವು.

(2) ಸ್ಪೇನ್ ದೇಶದ ದಕ್ಷಿಣದಲ್ಲಿರುವ ಜಿಬ್ರಾಲ್ಟರ್ ಕೋಟೆ ಮತ್ತು ಮೆಡಿಟರೇನಿಯನ್ ಸಮುದ್ರದಲ್ಲಿರುವ ಮಾಲ್ಟದ್ವೀಪ. ಇವು ಬಹು ಚಿಕ್ಕವಾದರೂ ವ್ಯಾಪಾರಕ್ಕೂ, ಚಕ್ರಾಧಿಪತ್ಯದ ಸಂರಕ್ಷಣೆಗೂ ಬಹು ಪ್ರಯೋಜನಕಾರಿಗಳಾಗಿವೆ.

### ಆಫ್ರಿಕಾ ಖಂಡದಲ್ಲಿ

(1) ಈಜಿಪ್ಟ್ ಮತ್ತು ಸೂಡಾನ್.

(2) ಪಶ್ಚಿಮತೀರದಲ್ಲಿ ಗಾಂಬಿಯ, ಸಿರಾಲಿಯೋನಿ, ಮೊದಲಾದುವು.

(3) ಮಧ್ಯ ಆಫ್ರಿಕ.
(4) ನೆಟಾಲ್, ಕೇಪ್ ಕಾಲೋನಿ, ಟ್ರಾನ್ಸ್ವಾಲ್, ಮೊದಲಾದ ಕಾಲೋನಿಗಳನ್ನು ಒಳಗೊಂಡಿರುವ ದಕ್ಷಿಣ ಆಫ್ರಿಕ.
(5) ಮಾರಿಷೆಸ್, ಸೆಂಟ್‌ಹೆಲಿನಾ, ಅಸೆನ್‌ಷನ್ ದ್ವೀಪಗಳು.

### ಏಷ್ಯಾ ಖಂಡದಲ್ಲಿ

(1) ಸೈಪ್ರಸ್, ಪೆರಿಂ ದ್ವೀಪಗಳು ಮತ್ತು ಏಡನ್ ಪಟ್ಟಣ.
(2) ಇಂಡಿಯಾದೇಶದ ಚಕ್ರಾಧಿಪತ್ಯ, ಇದು ಬ್ರಿಟಿಷ್ ಚಕ್ರಾಧಿಪತ್ಯದಲ್ಲಿ ಒಂದು ಒಳಚಕ್ರಾಧಿಪತ್ಯವಾಗಿದೆ.
(3) ಸಿಲೋನ್ ದ್ವೀಪ.
(4) ಸ್ಟ್ರೇಟ್ ಸೆಟಲ್ಮೆಂಟ್ಸ್.
(5) ಹಾಂಕಾಂಗ್ ದ್ವೀಪ.

### ಅಮೆರಿಕಾ ಖಂಡದಲ್ಲಿ

(1) ಕನಡಾರಾಜ್ಯ ಮತ್ತು ನ್ಯೂಫೌಂಡ್ಲೆಂಡ್.
(2) ವೆಸ್ಟಿಂಡಿಯಾ ದ್ವೀಪಗಳಲ್ಲಿ ಅನೇಕ ದ್ವೀಪಗಳು.
(3) ಬ್ರಿಟಿಷ್ ಹಾಂಡೊರಾಸ್.
(4) ಬ್ರಿಟಿಷ್ ಗಯಾನಾ.
(5) ಫಾಕ್ಲೆಂಡ್ ದ್ವೀಪಗಳು.

### ಓಷಿಯೇನಿಯದಲ್ಲಿ

(1) ಆಸ್ಟ್ರೇಲಿಯ ಮತ್ತು ಟಾಸ್ಮೇನಿಯ ದ್ವೀಪಗಳು.
(2) ನ್ಯೂಜೀಲೆಂಡ್ ದ್ವೀಪಗಳು.
(3) ನ್ಯೂಗಿನಿಯ ಒಂದು ಭಾಗ.
(4) ಫೀಜಿ ಮೊದಲಾದ ಅನೇಕ ಸಣ್ಣ ಸಣ್ಣ ದ್ವೀಪಗಳು.

**ಈ ರಾಷ್ಟ್ರಗಳಿಂದ ಈ ಚಕ್ರಾಧಿಪತ್ಯದ ಸಂರಕ್ಷಣೆಗೂ ವ್ಯಾಪಾರಕ್ಕೂ ಉಂಟಾಗಿರುವ ಪ್ರಯೋಜನಗಳು.**— ನೀವು ಸ್ಥಲಾರ್ಧಗೋಳದ ಭೂಪಟವನ್ನು ನೋಡಿದರೆ, ಬ್ರಿಟಿಷ್ ದ್ವೀಪಗಳು ಆ ಗೋಳದ ಮಧ್ಯಭಾಗದಲ್ಲಿರುವುದು ತೋರಿಬರುವುದು. ಈ ಕೇಂದ್ರಸ್ಥಾನದಿಂದ ಯಾವ ದಿಕ್ಕಿಗೆ ಹೋದರೂ ಬ್ರಿಟಿಷರಿಗೆ ಸೇರಿದ ನಾಡುಗಳು ಸಿಕ್ಕುವುವು. ಹೀಗೆ ಭೂಮಿಯ ಎಲ್ಲಾ ಭಾಗಗಳಲ್ಲಿಯೂ ಈ ಚಕ್ರಾಧಿಪತ್ಯವು ಹರಡಿರುವುದರಿಂದ ಇದನ್ನು ಸೂರ್ಯನು ಅಸ್ತಮಿಸದೇ ಇರುವ ಚಕ್ರಾಧಿಪತ್ಯವೆಂದು ಕರೆಯುವರು. ಇದರ ಒಂದು ಭಾಗದಲ್ಲಿ ರಾತ್ರಿಯಾಗಿದ್ದರೆ ಮತ್ತೊಂದರಲ್ಲಿ ಹಗಲಾಗಿರುವುದು.

ಹೀಗೆ ಛಿದ್ರ ಛಿದ್ರವಾಗಿ ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ವಿಸ್ತರಿಸಿರುವ ಈ ಚಕ್ರಾಧಿಪತ್ಯವನ್ನು ಶತ್ರುಗಳಿಂದ ಸಂರಕ್ಷಿಸುವುದು ಬಹಳ ಕಷ್ಟವು. ಆದರೆ ಈ ಕಷ್ಟಕ್ಕೆ ತಕ್ಕಂತೆ ವಿಶೇಷ ಅನುಕೂಲಗಳೂ ಇರುವುವು. ಇವುಗಳಲ್ಲಿ ಮುಖ್ಯವಾದುದು ವಿಶೇಷ ಐಶ್ವರ್ಯವನ್ನು ಕೊಡುವ ವ್ಯಾಪಾರವು. ವ್ಯಾಪಾರದಲ್ಲಿ ಪ್ರಪಂಚದ ಜನಾಂಗಗಳಲ್ಲೆಲ್ಲಾ ಬ್ರಿಟಿಷರೇ ಬಹು ಪ್ರಬಲರಾಗಿರುವರು.

ಮುಖ್ಯವಾದ ದೇಶಗಳ ವ್ಯಾಪಾರವನ್ನು ಎಂದರೆ ಆಮದು ರಫ್ತುಗಳ ಬೆಲೆಯನ್ನು ಹೋಲಿಸಿ ನೋಡಿದರೆ ಬ್ರಿಟಿಷ್ ದ್ವೀಪಗಳ ವ್ಯಾಪಾರವು ಅದಕ್ಕೆ ಎರಡನೆಯದಾದ ಜರ್ಮನ್ ಚಕ್ರಾಧಿಪತ್ಯದ ವ್ಯಾಪಾರಕ್ಕೆ ಎರಡರಷ್ಟಕ್ಕಿಂತ ಸ್ವಲ್ಪ ಕಡಿಮೆಯಾಗಿಯೂ, ಮೂರನೆಯದಾದ ಅಮೆರಿಕದ ಸಂಯುಕ್ತಸಂಸ್ಥಾನಗಳ ವ್ಯಾಪಾರಕ್ಕೆ ಎರಡರಷ್ಟಕ್ಕಿಂತ ಹೆಚ್ಚಾಗಿಯೂ, ಇರುವುದು.

ಬ್ರಿಟಿಷರ ವ್ಯಾಪಾರದ ಹಡಗುಗಳು ತಮ್ಮ ದೇಶದ ವ್ಯಾಪಾರದ ಸರಕುಗಳನ್ನಲ್ಲದೆ ಇತರ ಅನೇಕ ದೇಶಗಳ ವ್ಯಾಪಾರದ ಸರಕುಗಳನ್ನೂ ಒಯ್ಯುವುವು. ಪ್ರಪಂಚದಲ್ಲಿ ಈಗ ವ್ಯಾಪಾರಕ್ಕಾಗಿ ಸಂಚರಿಸುತ್ತಿರುವ ಒಟ್ಟು ಹಡಗುಗಳಲ್ಲಿ ಅರ್ಧ ಪಾಲೇ ಬ್ರಿಟಿಷರದಾಗಿರುವುದು. ಬ್ರಿಟಿಷರ ವ್ಯಾಪಾರವೂ ಅವರ ಹಡಗುಗಳ ಸಂಖ್ಯೆಯೂ ಇಷ್ಟು ಅಧಿಕವಾಗಿರುವುದಕ್ಕೆ ಆ ಜನರ ಬುದ್ಧಿ ಕುಶಲತೆ ಧೈರ್ಯ ಸಾಹಸಗಳಲ್ಲದೆ, ಅವರ ದ್ವೀಪಗಳ ಉತ್ತಮವಾದ ಸ್ವಾಭಾವಿಕ ಲಕ್ಷಣಗಳೂ ಕಾರಣಗಳಾಗಿವೆ. ಆ ದ್ವೀಪಗಳು ಸ್ಥಲಾರ್ಧಗೋಳದ ಮಧ್ಯ ಭಾಗದಲ್ಲಿರುವುವಲ್ಲದೆ, ವ್ಯಾಪಾರದಲ್ಲಿ ಪ್ರಮುಖವಾದ ಯೂರೊಪಿನ ಇತರ ದೇಶಗಳಿಗೆ ಸಮೀಪದಲ್ಲಿರುವುವು. ತೀರವು ವಿಶೇಷವಾಗಿ ಒಡೆದಿರುವುದು. ಆದುದರಿಂದ ಉತ್ತಮವಾದ ಬಂದರುಗಳನೇಕವಿರುವುವು. ವಾಯುಗುಣವು ಸಮಧಾತುವಾಗಿರುವುದು. ಮೀನು ಹಿಡಿಯುವುದು ಒಂದು ಮುಖ್ಯವಾದ ಕಸಬಾಗಿರುವುದರಿಂದ, ಇವರಿಗೆ ಸಮುದ್ರಯಾನದಲ್ಲಿ ಅಭಿಲಾಷೆಯು ವಿಶೇಷ ವಾಗಿ ವೃದ್ಧಿಯಾಗಿರುವುದು. ಇಂಗ್ಲೆಂಡ್ ದೇಶದ ಪರ್ವತಗಳಲ್ಲಿ ಖನಿಜಗಳು ಹೇರಳವಾಗಿರುವುವು. ಮೈದಾನಗಳಲ್ಲಿ ವ್ಯವಸಾಯವು ನಡೆಯುವುದಲ್ಲದೆ ವ್ಯಾಪಾರಕ್ಕೆ ಬೇಕಾದ ಜಲಮಾರ್ಗಗಳನ್ನೂ ರೈಲುಮಾರ್ಗಗಳನ್ನೂ ಮಾಡುವುದು ಬಹು ಸುಲಭವಾಗಿರುವುದು. ಎಲ್ಲಾ ಕೈಗಾರಿಕೆಗಳಿಗೂ ಅತಿ ಮುಖ್ಯವಾಗಿ ಬೇಕಾಗಿರುವ ಕಲ್ಲಿದ್ದಲು, ಕಬ್ಬಿಣಗಳು ಬಹು ಹೇರಳವಾಗಿಯೂ, ಒಂದಕ್ಕೊಂದು ಸಮೀಪದಲ್ಲಿಯೂ ಸಿಕ್ಕುವುವು. ಈ ದೇಶದ ಸ್ವಾಭಾವಿಕ ಲಕ್ಷಣಗಳಿಂದ ಇಂತಹ ಅನೇಕ ಉತ್ತಮವಾದ ಸೌಕರ್ಯಗಳು ಈ ದೇಶಕ್ಕೆ ಉಂಟಾಗಿವೆ.

ಈ ಜನರ ವ್ಯಾಪಾರದ ಹಡಗುಗಳನ್ನೂ, ಪ್ರಪಂಚದ ಅನೇಕ ಭಾಗಗಳಲ್ಲಿ ಇವರಿಗೆ ಅಧೀನವಾಗಿರುವ ರೇವುಪಟ್ಟಣಗಳನ್ನೂ, ರಾಷ್ಟ್ರಗಳನ್ನೂ ಶತ್ರುಗಳು ಕಸುಕೊಳ್ಳದಂತೆ ಸಂರಕ್ಷಿಸುವುದಕ್ಕೆ ಪ್ರಬಲವಾದ ನೌಕಾಸೈನ್ಯವು ಅಥವಾ ಯುದ್ಧದ ಹಡಗುಗಳು ಆವಶ್ಯಕವಾಗಿವೆ. ಈ ಚಕ್ರಾಧಿಪತ್ಯದ ಮತ್ತು ಇದರ ವ್ಯಾಪಾರದ ಕ್ಷೇಮವು ಈ ನೌಕಾ ಬಲದ ಶಕ್ತಿಸಾಹಸಗಳಲ್ಲಿರುವುದು. ಆದುದರಿಂದ ಬ್ರಿಟಿಷರು ಇತರ ಜನರಿಗಿಂತ ಹೆಚ್ಚಾಗಿ ನಾನಾತರದ ನಾವೆಗಳನ್ನು ಇಟ್ಟುಕೊಂಡಿರುವರು. ಇವರ ನಾವೆಗಳು ಇವರಿಗೆ ಎರಡನೆಯವರಾಗಿರುವ ಜರ್ಮನರ ಅಥವಾ ಸಂಯುಕ್ತಸಂಸ್ಥಾನಗಳ ನಾವೆಗಳನ್ನೂ, ಇತರ ಒಂದು ಸಾಮಾನ್ಯ ದೇಶದ (ಉದಾ:—ಹಾಲೆಂಡ್, ಇಟಲಿ) ನಾವೆಗಳನ್ನೂ ಒಟ್ಟು ಗೂಡಿಸಿದರೆ ಎಷ್ಟಾಗುವುವೋ ಅಷ್ಟಿರುವುವು. ಈಚೆಗೆ ನಡೆದ ಯುದ್ಧದಲ್ಲಿ ಜರ್ಮನಿಯವರು ನೆಲದಮೇಲೆ ಎಷ್ಟು ಮುಂದರಿದರೂ ಅವರು ಸೋತು, ಈ ಚಕ್ರಾಧಿಪತ್ಯಕ್ಕೆ ಯಾವ ಅಪಾಯವೂ ಉಂಟಾಗದೇ ಇದ್ದುದು ಈ ಯುದ್ಧದ ಹಡಗುಗಳ ಬಲದಿಂದಲೇ ಆಗಿದೆ.

ಈ ಚಕ್ರಾಧಿಪತ್ಯದಲ್ಲಿ ಅನೇಕ ರೇವುಪಟ್ಟಣಗಳಿಗೆ ಬಲವಾದ ಕೋಟೆಗಳನ್ನು ಕಟ್ಟಿರುವರು. ಅವುಗಳ ಬಂದರುಗಳಲ್ಲಿ ಹಡಗುಗಳು ತಂಗಿ ತಮಗೆ ಬೇಕಾದ ಕಲ್ಲಿದ್ದಲನ್ನೂ ಆಹಾರಸಾಮಗ್ರಿಗಳನ್ನೂ ತೆಗೆದುಕೊಳ್ಳುವುವು. ಕೆಟ್ಟಿದ್ದರೆ ನಿರಾತಂಕವಾಗಿ ದುರಸ್ತಾಗುವುವು. ಇಂತಹ ರೇವುಪಟ್ಟಣಗಳಲ್ಲಿ ಮುಖ್ಯವಾದವು ಯಾವುವೆಂದರೆ:—ಯೂರೋಪಿನಲ್ಲಿ—ಜಿಬ್ರಾಲ್ಟರ್, ಮಾಲ್ಟ; ಏಷ್ಯಾದಲ್ಲಿ—ಟ್ರಿನ್‌ಕಾಮೊಲಿ, ಹಾಂಕಾಂಗ್; ಆಫ್ರಿಕಾದಲ್ಲಿ—ಗುಡ್‌ಹೋಪ್ ಭೂಶಿರದ ಬಳಿಯಲ್ಲಿರುವ ಸೈಮನ್ಸ್‌ಟೌನ್, ಅಸೆನ್‌ಷನ್; ಅಮೆರಿಕದಲ್ಲಿ—ಹಾಲಿಫಾಕ್ಸ್, ಬರ್ಮುಡ, ಜಮೈಕ, ಬ್ರಿಟಿಷ್ ಕೊಲಂಬಿಯಾದಲ್ಲಿರುವ ಎಸ್ಕ್ವಿ, ಮಾಲ್ಟ; ಆಸ್ಟ್ರೇಲಿಯದಲ್ಲಿ—ಸಿಡ್ನಿ ಇವುಗಳಲ್ಲದೆ ಬ್ರಿಟಿಷ್ ದ್ವೀಪಗಳಲ್ಲಿಯೇ ಇಂತಹ ಅನೇಕ ರೇವುಪಟ್ಟಣಗಳಿರುವುವು. ಪ್ರಪಂಚದ ಮುಖ್ಯವಾದ ವ್ಯಾಪಾರ ಮಾರ್ಗಗಳಾವುವೆಂಬುದನ್ನು ನೀವು ಸ್ವಲ್ಪ ಮಟ್ಟಿಗೆ ತಿಳಿದಿರುವಿರಿ. ಈಗ ಭೂಪಟ ದಲ್ಲಿ ಇವುಗಳನ್ನು ಗುರ್ತಿಸಿ ನೋಡಿ ಆ ಮಾರ್ಗಗಳನ್ನು ರಕ್ಷಿಸುವುದಕ್ಕೆ ಎಷ್ಟು ಅನುಕೂಲವಾಗಿ ಈ ರೇವುಪಟ್ಟಣಗಳು ಹರಡಿವೆಯೆಂಬುದನ್ನು ನೋಡಿ ನೆನಪಿಟ್ಟುಕೊಳ್ಳಿ.

ಸಮುದ್ರವು ಈ ದ್ವೀಪಗಳನ್ನು ಸ್ವಾಭಾವಿಕವಾಗಿ ಯೂರೋಪು ಖಂಡ ದಿಂದ ಪ್ರತ್ಯೇಕಿಸಿರುವುದರಿಂದಲೂ, ದೇಶಸಂರಕ್ಷಣೆಗೆ ಇಷ್ಟು ಬಲವಾದ ನೌಕಾ ಸೈನ್ಯವು ಇರುವುದರಿಂದಲೂ ಈ ದೇಶದಲ್ಲಿ ಈಗಿನ ಯುದ್ಧಕ್ಕೆ ಮೊದಲು ಭೂಸೈನ್ಯವು ಬಹು ಕಡಿಮೆಯಾಗಿತ್ತು. ಜರ್ಮನಿಯವರು ಭೂಸೈನ್ಯದಲ್ಲಿಯೂ

ಬ್ರಿಟಿಷರು ನೌಕಾಸೇನೆಯಲ್ಲಿಯೂ ಪ್ರಪಂಚದಲ್ಲಿ ಅಗ್ರಗಣ್ಯರೆಸಿಸಿಕೊಂಡಿರುವ ರೆಂದು ಸಾಮಾನ್ಯವಾಗಿ ಹೇಳಬಹುದು. ಈ ಮೇರೆಗೆ ಸ್ವಾತಂತ್ರ್ಯಾಭಿಮಾನ, ಸಾಹಸ, ಕುಶಲತೆ ಮೊದಲಾದ ಲಕ್ಷಣಗಳನ್ನು ಹೊಂದಿರುವ ಜನಗಳಿಂದ ಆಳಲ್ಪಟ್ಟು ಉತ್ತಮವಾದ ವ್ಯಾಪಾರಗಳನ್ನೂ, ಐಶ್ವರ್ಯವನ್ನೂ, ನಾಗರಿಕತೆ ಯನ್ನೂ ಪಡೆದು ಬಲವಾದ ನೌಕಾಸೈನ್ಯದಿಂದ ರಕ್ಷಿಸಲ್ಪಟ್ಟು, ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ವಿಸ್ತರಿಸಿಕೊಂಡು, ಪ್ರಪಂಚದ ನಾಗರಿಕತೆಯ ಮುಂದಿನ ಅಭಿವೃದ್ಧಿಗೆ ಮುಖ್ಯ ಕಾರಣಭೂತವಾಗಿರುವ ಈ ಮಹಾಚಕ್ರಾಧಿಪತ್ಯದಲ್ಲಿ ನಮ್ಮ ಇಂಡಿಯಾ ದೇಶವೂ ಒಳಗೊಂಡಿರುವುದು.

ಈ ಚಕ್ರಾಧಿಪತ್ಯದ ವಿವರಣೆಯೊಂದನ್ನೇ ಪ್ರತ್ಯೇಕವಾಗಿ ತಿಳಿಯುವುದು ಬಹು ಕಷ್ಟವು. ಇದರ ಭಾಗಗಳು ಎಲ್ಲಾ ವಲಯಗಳಲ್ಲಿಯೂ, ಎಲ್ಲಾ ಖಂಡ ಗಳಲ್ಲಿಯೂ ಇರುವುವು. ಈ ಭಾಗಗಳಲ್ಲಿ ಒಂದೊಂದಕ್ಕೆ ತೀರಲಕ್ಷಣ, ಮೇಲ್ಮೈಯ್ಯ ಲಕ್ಷಣ, ವಾಯುಗುಣ, ಖನಿಜಗಳು ಮೊದಲಾದ ವಿಷಯಗಳಲ್ಲಿ ವಿಶೇಷ ವ್ಯತ್ಯಾಸಗಳಿರುವುವು. ಆದುದರಿಂದ ಎಲ್ಲಾ ಖಂಡಗಳ ವಿವರಣೆಯನ್ನೂ ತಿಳಿದ ಹೊರತು, ಈ ಚಕ್ರಾಧಿಪತ್ಯದ ವಿವರಣೆಯನ್ನು ತಿಳಿಯಲು ಸಾಧ್ಯವಲ್ಲ; ಅದೂ ಅಲ್ಲದೆ ಈ ಚಕ್ರಾಧಿಪತ್ಯಗಳ ವಿವರಣೆಯಿಲ್ಲದೆ, ಪ್ರಪಂಚದ ಇತರ ಮುಖ್ಯ ಭಾಗಗಳ ವಿವರಣೆಯನ್ನು ತಿಳಿಯುವುದೂ ನಮಗೆ ಲೋಕವ್ಯವಹಾರದಲ್ಲಿ ಅವಶ್ಯಕವಾಗಿದೆ.

ಖಂಡಗಳ ಮತ್ತು ದೇಶಗಳ ವಿವರಣೆಯಲ್ಲಿ ಈ ಚಕ್ರಾಧಿಪತ್ಯಕ್ಕೆ ಸೇರಿದ ರಾಷ್ಟ್ರಗಳ ವಿವರಣೆಯು ಅಲ್ಲಲ್ಲಿ ತಕ್ಕಷ್ಟು ವಿಶದವಾಗಿ ಕೊಡಲ್ಪಟ್ಟಿದೆ.

---

## ಫ್ರಾನ್ಸ್

**ವಿಸ್ತೀರ್ಣ, ಮೇರೆಗಳು ಮತ್ತು ಸನ್ನಿವೇಶ.**—ಇದು ವಿಸ್ತೀರ್ಣದಲ್ಲಿ ಗ್ರೇಟ್ ಬ್ರಿಟನ್ ದ್ವೀಪಕ್ಕೆ ಎರಡರಷ್ಟಕ್ಕಿಂತ ಸ್ವಲ್ಪ ಹೆಚ್ಚಾಗಿದೆ. ಜರ್ಮನಿ ಯಷ್ಟು ವಿಸ್ತಾರವಿದೆಯೆಂದು ಹೇಳಬಹುದು.

ದಕ್ಷಿಣದಲ್ಲಿ ಪಿರನೀಸ್ ಪರ್ವತಗಳೂ, ಪೂರ್ವದಲ್ಲಿ ಆಲ್ಪ್ಸ್, ಜೂರಾ ಮೊದಲಾದ ಪರ್ವತಗಳೂ ಸ್ವಾಭಾವಿಕವಾದ ಎಲ್ಲೆಗಳಾಗಿವೆ. ಈಶಾನ್ಯದಲ್ಲಿ ಸ್ವಾಭಾವಿಕವಾದ ಎಲ್ಲೆಯಲ್ಲಿ ದೇಶ ಸಂರಕ್ಷಣೆಗಾಗಿ ಅನೇಕ ಕೋಟೆಗಳನ್ನು ಕಟ್ಟಿರುವರು; ಆದರೂ ಈ ಕಡೆಯೇ ಶತ್ರುಗಳಿಂದ ಅಪಾಯ ಉಂಟೆಂಬುದು ಈಚೆಗೆ ನಡೆದ ಯುದ್ಧದಲ್ಲಿ ನಿದರ್ಶಿಸಲ್ಪಟ್ಟಿತು.

ಉಳಿದ ಕಡೆಗಳಲ್ಲಿ ಮೆಡಿಟರೇನಿಯನ್ ಸಮುದ್ರ, ಬಿಸ್ಕೇ ಕೊಲ್ಲಿ, ಇಂಗ್ಲಿಷ್ ಕಡಲ್ಗಾಲುವೆ ಮತ್ತು ನಾರ್‍ತ್ ಸೀಗಳು ಇರುವುದರಿಂದಲೂ, ಈ ದೇಶವು ಈ ಖಂಡದ ಉತ್ತರ ದಕ್ಷಿಣ ಭಾಗಗಳಿಗೆ ಮಧ್ಯದಲ್ಲಿರುವುದರಿಂದಲೂ, ಪ್ಯಾರಿಸ್ಸಿನಿಂದ ಈ ಖಂಡದ ಎಲ್ಲಾ ಮುಖ್ಯವಾದ ಪಟ್ಟಣಗಳಿಗೂ ರೈಲುಮಾರ್ಗಗಳಿರುವುದರಿಂದಲೂ, ಈ ಭೂಜಲಮಾರ್ಗಗಳ ಮೂಲಕ ವಿಶೇಷವಾಗಿ ವ್ಯಾಪಾರವು ನಡೆದು, ದೇಶದ ಐಶ್ವರ್ಯವು ಹೆಚ್ಚಾಗುವುದಕ್ಕೆ ಉತ್ತಮವಾದ ಸನ್ನಿವೇಶವು ಈ ದೇಶಕ್ಕಿರುವುದು.

**ತೀರಲಕ್ಷಣ.**—ಈ ದೇಶದ ಎಲ್ಲೆಗಳಲ್ಲಿ ಮೂರು ಸಮುದ್ರಗಳು ಇದ್ದರೂ ತೀರವು ಇಂಗ್ಲೆಂಡಿನಲ್ಲಿರುವಷ್ಟು ಅನುಕೂಲವಾಗಿಲ್ಲ. ಮೆಡಿಟರೇನಿಯನ್ ತೀರದಲ್ಲಿ ಒಳ್ಳೆಯ ಬಂದರುಗಳಿಲ್ಲ. ಈ ತೀರದಲ್ಲಿ ಮಾರ್ಸೇಲ್ಸ್ ಎಂಬುವುದು ಒಂದೇ ಮುಖ್ಯವಾದ ರೇವುಪಟ್ಟಣವಾಗಿದೆ. ಬಿಸ್ಕೇ ಕೊಲ್ಲಿಯಲ್ಲಿ ಬಿರುಗಾಳಿಗಳು ಹೆಚ್ಚು. ಅಲ್ಲದೆ ಈ ತೀರದ ದಕ್ಷಿಣಭಾಗದಲ್ಲಿ ಮರಳುದಿಣ್ಣೆಗಳು ಹೆಚ್ಚು. ಆದುದರಿಂದ ಈ ದೇಶದ ಮುಖ್ಯವಾದ ಬಂದರುಗಳು ನದಿಯ ಬಂದರುಗಳಾಗಿವೆ. ಇವುಗಳ ಬಳಿಯಲ್ಲಿ ಕಲ್ಲಿದ್ದಲೂ ಇಲ್ಲ. ಇವುಗಳಲ್ಲಿ ಮುಖ್ಯವಾದುವು ಡನ್‌ಕರ್ಕ್, ಕಲೇ, ಬಲೋಗ್, ಹಾವರ್, ರೂಯನ್ ಬೋರ್ಡೋ ಎಂಬುವು. ಬ್ರಿಟನ್ ಪರ್ಯಾಯದ್ವೀಪದಲ್ಲಿರುವ ಬ್ರೆಸ್ಟ್ ಎಂಬುದು ಮುಖ್ಯವಾದ ಹಡಗಿನ ಸ್ಟೇಷನ್ ಆಗಿದೆ.

ಕಲೇಯಿಂದ ಡೋವರ್ ಪಟ್ಟಣಕ್ಕೆ 20 ಮೈಲಿಗಳು ಮಾತ್ರ ದೂರವಿರುವುದು. ಈ ಡೋವರ್ ಜಲಸಂಧಿಯಲ್ಲಿ ವರ್ಷಕ್ಕೆ 2 ಲಕ್ಷ ಹಡಗುಗಳು ತಿರುಗಾಡುವುವು. ಈ ಜಲಸಂಧಿಯಲ್ಲಿ 414 ಅಡಿಗಳ ಕೆಳಗೆ ಈ ಎರಡು ಪಟ್ಟಣಗಳ ನಡುವೆ ಸುರಂಗದ ಮಾರ್ಗವನ್ನು ಮಾಡಿ ರೈಲು ರಸ್ತೆಯನ್ನು ಹಾಕುವ ಏರ್ಪಾಡು ನಡೆಯುತ್ತಿರುವುದು.

**ಮೇಲ್ಮೈಯ್ಯ ಲಕ್ಷಣ.**—ಪಶ್ಚಿಮಭಾಗವು ವಿಶಾಲವಾದ ಮೈದಾನವಾಗಿದೆ. ಇದು ತ್ರಿಕೋಣಾಕಾರವಾದ ಯೂರೊಪಿನ ದೊಡ್ಡ ಮೈದಾನದ ಶಿರೋಭಾಗವಾಗಿದೆ. ಆಗ್ನೇಯ ಪೂರ್ವಭಾಗಗಳು ಅನೇಕ ಬೆಟ್ಟಗಳುಳ್ಳ ಪ್ರಸ್ಥಭೂಮಿಯಾಗಿದೆ; ಆದುದರಿಂದ ದೇಶವು ಸಾಮಾನ್ಯವಾಗಿ ವಾಯುವ್ಯಕ್ಕೂ ಪಶ್ಚಿಮಕ್ಕೂ ಇಳಿಜಾರಾಗಿದೆ. ಈ ಇಳಿಜಾರಿನಲ್ಲಿ ಹರಿಯುವ ಸೇನ್, ಲ್ವಾರ್, ಗಾರೋನ್ ನದಿಗಳು ಹಡಗಿನ ಪ್ರಯಾಣಕ್ಕೆ ಅನುಕೂಲವಾಗಿವೆ. ಪೂರ್ವಭಾಗದ ಪ್ರಸ್ಥಭೂಮಿಯಲ್ಲಿ ಇರುವ ಇಕ್ಕಟ್ಟಾದ ಮೈದಾನದಲ್ಲಿ ದಕ್ಷಿಣಾಭಿಮುಖವಾಗಿ ಹರಿಯುವ ರೋನ್ ನದಿಯು ಹಡಗುಗಳಿಗೆ ಪ್ರಯೋಜನಕಾರಿಯಾಗಿಲ್ಲ. ವ್ಯವಸಾಯಕ್ಕೆ ತುಂಬಾ ಅನುಕೂಲವಾಗಿದೆ.

ಮೈದಾನ ಭಾಗದಲ್ಲಿ ಸುಮಾರು 100 ನದಿಗಳಿರುವುವು. ಪರ್ವತಪ್ರದೇಶವು ದೂರವಾಗಿ ಪೂರ್ವಭಾಗದಲ್ಲಿರುವುದರಿಂದಲೂ, ಮೈದಾನವು ತಟ್ಟೆಯಾಗಿರುವುದರಿಂದಲೂ, ಇವು ನಿಧಾನವಾಗಿಯೂ ಉದ್ದವಾಗಿಯೂ ಹರಿಯುವುವು.

**ವಾಯುಗುಣ ಮತ್ತು ಮಳೆ.**—ಪೂರ್ವಭಾಗದಲ್ಲಿ ಶೀತೋಷ್ಣಗಳ ವ್ಯತ್ಯಾಸವು ಹೆಚ್ಚು. ಪಶ್ಚಿಮಭಾಗದಲ್ಲಿ ಅಟ್ಲಾಂಟಿಕ್ ಸಾಗರ ಮತ್ತು ಗಲ್ಫ್ ಸ್ಟ್ರೀಮುಗಳಿಂದ ವಾಯುಗುಣವು ಸಮಶೀತೋಷ್ಣವಾಗಿರುವುದು. ಮಳೆ-ಮೋಡಗಳು ಉತ್ತರ ಪಶ್ಚಿಮಗಳಿಂದ ಬರುವುವು. ಇವು ದಕ್ಷಿಣ ಪೂರ್ವಕ್ಕೆ ಹೋದ ಹಾಗೆ ಕ್ರಮವಾಗಿ ಎತ್ತರವಾದ ಪ್ರಸ್ಥಭೂಮಿಯಿಂದ ತಡೆಯಲ್ಪಡುವುದರಿಂದ ಈ ದೇಶದಲ್ಲಿ ಮಳೆಯು ಹೆಚ್ಚಾಗಿ ಬೀಳುವುದು.

**ಸಸ್ಯಗಳು.**—ಉತ್ತರಭಾಗದಲ್ಲಿ ಗೋಧಿ, ಬೀಟ್‌ರೂಟ್‌ಗಳೂ, ಮಧ್ಯಭಾಗದಲ್ಲಿ ದ್ರಾಕ್ಷೆಯ ಲತೆಗಳೂ, ದಕ್ಷಿಣಭಾಗದಲ್ಲಿ ಆಲೀವ್, ಹಿಪ್ಪಲಿನೇರಳೆ ಮರಗಳೂ, ಮೆಕ್ಕೆಜೋಳವೂ, ಹಣ್ಣುಗಳೂ ಬೆಳೆಯುವುವು. ಈ ದೇಶದಲ್ಲಿ ತಯಾರಾಗುವಷ್ಟು ವೈನುಗಳು ಅಥವಾ ದ್ರಾಕ್ಷೆಯ ರಸಗಳು ಪ್ರಪಂಚದ ಇನ್ನಾವ ದೇಶದಲ್ಲಿಯೂ ತಯಾರಾಗುವುದಿಲ್ಲ.

**ಪ್ರಾಣಿಗಳು.**—ವ್ಯವಸಾಯಕ್ಕೆ ಎತ್ತುಗಳನ್ನೂ ಕುದುರೆಗಳನ್ನೂ ಹೇಸರಕತ್ತೆಗಳನ್ನೂ ಉಪಯೋಗಿಸುವರು. ಉತ್ತರಭಾಗದಲ್ಲಿ ಕುದುರೆಗಳನ್ನೂ, ದಕ್ಷಿಣಭಾಗದಲ್ಲಿ ಹೇಸರಕತ್ತೆಗಳನ್ನೂ ಉಪಯೋಗಿಸುವುದು ಹೆಚ್ಚು.

**ಖನಿಜಗಳು.**—ಖನಿಜ ಸಂಪತ್ತಿಯು ಈ ದೇಶದಲ್ಲಿ ಕಡಿಮೆ. ಕಬ್ಬಿಣವು ಹೆಚ್ಚಾಗಿ ಸಿಕ್ಕಿದರೂ ಕಲ್ಲಿದ್ದಲು ಸಿಕ್ಕುವುದು ಬಹಳ ಕಡಿಮೆ. ಉತ್ತರದಲ್ಲಿ ಒಂದು ಕಡೆಯಲ್ಲಿಯೂ, ಪೂರ್ವದಲ್ಲಿ ಒಂದು ಕಡೆಯಲ್ಲಿಯೂ ಮಾತ್ರ ಕಲ್ಲಿದ್ದಲು ಸಿಕ್ಕುವುದು. ಕಟ್ಟಡದಕಲ್ಲು ಈ ದೇಶದಲ್ಲಿ ಬಹು ವಿಶೇಷವಾಗಿ ಸಿಕ್ಕುವುದು.

**ಕೈಗಾರಿಕೆಗಳು.**—ಉತ್ತರಭಾಗದಲ್ಲಿ ಹತ್ತಿ, ಉಣ್ಣೆ, ನಾರುಗಳಿಂದ ಬಟ್ಟೆಗಳನ್ನು ತಯಾರುಮಾಡುವರು. **ಹಾವರ್** ರೇವುಪಟ್ಟಣದ ಮೂಲಕ ಅಮೆರಿಕದಿಂದ ಹತ್ತಿಯನ್ನು ತರಿಸಿಕೊಂಡು, **ರೂಯನ್** ಪಟ್ಟಣದಲ್ಲಿ ಹತ್ತಿಯ ಬಟ್ಟೆಗಳನ್ನು ಮಾಡುವರು. ರೂಯನ್ ಪಟ್ಟಣವನ್ನು ಫ್ರಾನ್ಸ್ ದೇಶದ ಮಾಂಚಸ್ಟರ್ ಎಂದು ಕರೆಯಬಹುದು. **ಲಿಲಿ** ಪಟ್ಟಣದಲ್ಲಿ ಉಣ್ಣೆ, ಸೂಲು ಬಟ್ಟೆಗಳನ್ನೂ, ಯಂತ್ರಗಳನ್ನೂ ತಯಾರುಮಾಡುವರು. **ರೋನ್** ಮೈದಾನದಲ್ಲಿ ರೇಷ್ಮೆಯು ವಿಶೇಷವಾಗಿ ತಯಾರಾಗುವುದರಿಂದಲೂ, ಶುದ್ಧವಾದ ನೀರೂ ಕಲ್ಲಿದ್ದಲೂ ದೊರೆಯುವುದರಿಂದಲೂ ಲಯನ್ಸ್ ಮೊದಲಾದ ಪಟ್ಟಣಗಳಲ್ಲಿ ರೇಷ್ಮೆಯ ಬಟ್ಟೆಗಳನ್ನು ಮಾಡುವರು. ಕಲಾಬತ್ತು, ಕಬ್ಬಿಣದ ಸಾಮಾನು, ಗಾಜಿನ

ಸಾಮಾನು, ಮಣ್ಣಿನ ಪಾತ್ರೆ ಇವುಗಳನ್ನು ಮಾಡುವುದು ಈ ದೇಶದ ಇತರ ಕೈಗಾರಿಕೆಗಳಾಗಿವೆ.

**ವ್ಯಾಪಾರ.**—ಈ ದೇಶದಲ್ಲಿ ರೈಲುಮಾರ್ಗಗಳೂ, ಕಾಲುವೆಗಳೂ ಹೇರಳವಾಗಿವೆ; ಉತ್ತಮವಾದ ಕೆಲವು ಬಂದರುಗಳೂ ಇವೆ. ಆದುದರಿಂದ ಬ್ರಿಟಿಷ್ ದ್ವೀಪಗಳನ್ನೂ ಜರ್ಮನಿಯನ್ನೂ ಬಿಟ್ಟರೆ ಯೂರೊಪಿನಲ್ಲಿ ಇನ್ನಾವ ದೇಶದಲ್ಲಿಯೂ ಇಲ್ಲಿನಷ್ಟು ವ್ಯಾಪಾರವು ನಡೆಯುವುದಿಲ್ಲ. ಈ ವ್ಯಾಪಾರವು ಮುಖ್ಯವಾಗಿ ಬ್ರಿಟಿಷರ ಹಡಗುಗಳಲ್ಲಿ ನಡೆಯುವುದು. ಮಾರ್ಸೇಲ್ಸ್, ಹಾವರ್, ಪ್ಯಾರಿಸ್ ಈ ಮೂರು ರೇವುಪಟ್ಟಣಗಳ ಮೂಲಕ ಈ ದೇಶದ ವ್ಯಾಪಾರದಲ್ಲಿ $\frac{1}{2}$ ಭಾಗವು ನಡೆಯುವುದು.

**ಜನಗಳು.**—ಈ ದೇಶದಲ್ಲಿ ಸುಮಾರು 4 ಕೋಟಿ ಜನರಿರುವರು. ಸರಾಸರಿ ಜನಸಾಂದ್ರತೆಯು 1·185. ಕಲ್ಲಿದ್ದಲಿನ ಗಣಿಗಳೂ, ಕೈಗಾರಿಕೆಯ ಪಟ್ಟಣಗಳೂ ಇರುವ ಈಶಾನ್ಯ ಮೂಲೆಯಲ್ಲಿಯೂ, ಲಯನ್ಸ್ ಪಟ್ಟಣದ ಪ್ರದೇಶದಲ್ಲಿಯೂ ಜನಸಾಂದ್ರತೆಯು 1 ಚ. ಮೈಲಿಗೆ 500ಕ್ಕಿಂತ ಹೆಚ್ಚಾಗಿರುವುದು.

ಜನರು ಬಹಳ ಕಷ್ಟಪಟ್ಟು ಕೆಲಸಮಾಡುವವರಾಗಿಯೂ, ಮಿತವ್ಯಯ ಮಾಡುವವರಾಗಿಯೂ ಇರುವರು. ಇವರು ಬುದ್ಧಿಶಾಲಿಗಳು ಮತ್ತು ಇವರಲ್ಲಿ ಸಹೋದರಭಾವವು ಹೆಚ್ಚು.

ಇವರಲ್ಲಿ $\frac{1}{2}$ ಕೋಟಿ ಜನರು ಪ್ರಾಟೆಸ್ಟೆಂಟರು, ಉಳಿದವರೆಲ್ಲರೂ ರೋಮನ್ ಕ್ಯಾಥೊಲಿಕ್ ಪಂಗಡದ ಕ್ರೈಸ್ತರು.

**ರಾಜ್ಯಭಾರ.**—ಈ ದೇಶದಲ್ಲಿ ಪ್ರಜಾಪ್ರತಿನಿಧಿ ಪ್ರಭುತ್ವವಿರುವುದು. ಎಲ್ಲ ದರ್ಜೆಗಳ ವಿದ್ಯಾಭ್ಯಾಸವು ಚೆನ್ನಾಗಿ ನಡೆಯುತ್ತಿರುವುದು. ಮುಖ್ಯ ಪಟ್ಟಣವು ಪ್ಯಾರಿಸ್. ಇದು ಸೇನ್ ನದಿಯ ಎರಡು ದಡಗಳಲ್ಲಿಯೂ, ಮಧ್ಯದಲ್ಲಿರುವ ದ್ವೀಪದಲ್ಲಿಯೂ ಪ್ರಸರಿಸಿರುವುದು. ಜನಸಂಖ್ಯೆಯಲ್ಲಿ ಯೂರೊಪಿನಲ್ಲಿ ಇದು ಲಂಡನ್ನಿಗೆ ಎರಡನೆಯದಾಗಿದೆ. ಫ್ರಾನ್ಸಿನ ಎಲ್ಲಾ ರೈಲು ರಸ್ತೆಗಳೂ ಇಲ್ಲಿರುವುವು. ಇದರ ಬಂದರಿನಲ್ಲಿ 11 ಮೈಲಿಗಳಷ್ಟು ಉದ್ದವಾಗಿ ಹಡಗುಗಳು ನಿಲ್ಲಲು ಜಾಗಗಳಿವೆ. ಅನೇಕ ಕೈಗಾರಿಕೆಗಳೂ ನಡೆಯುವುವು. ಆದುದರಿಂದ ಇದು ಫ್ರಾನ್ಸಿನ ಮುಖ್ಯ ವ್ಯಾಪಾರದ ಪಟ್ಟಣವಾಗಿದೆ. ಇದರ ಕೋಟೆಯು 22 ಮೈಲಿ ಸುತ್ತಳತೆಯುಳ್ಳದಾಗಿದೆ. ಇದೇ ಪ್ರಪಂಚದಲ್ಲೆಲ್ಲಾ ದೊಡ್ಡದಾದ ಕೋಟೆಯು. ಈ ಪಟ್ಟಣವು ಬೀದಿಗಳ ಮತ್ತು ಕಟ್ಟಡಗಳ ಸೌಂದರ್ಯದಲ್ಲಿ ಪ್ರಪಂಚದ ಇತರ ಪಟ್ಟಣಗಳೆಲ್ಲವನ್ನೂ ಮೀರಿಸುವುದು.

**ಫ್ರೆಂಚರಿಗೆ ಸೇರಿದ ಇತರ ರಾಷ್ಟ್ರಗಳು.**—ಯೂರೊಪಿನಲ್ಲಿ ಕಾರ್ಸಿಕ ದ್ವೀಪ, ಆಫ್ರಿಕದಲ್ಲಿ ಆಲ್ಜೀರಿಯ, ಟ್ಯೂನಿಸ್, ಸಿನಿಗಲ್, ಫ್ರೆಂಚ್ ಸೂಡನ್,

ಫ್ರೆಂಚ್ ಕಾಂಗೊ, ಮಡಗಾಸ್ಕರ್ ದ್ವೀಪ; ಏಷ್ಯಾದಲ್ಲಿ **ಪುದುಚೇರಿ** ಮೊದಲಾದ ಪಟ್ಟಣಗಳು, ಫ್ರೆಂಚ್ ಹಿಂದೂಚೀಣ; ಅಮೆರಿಕದಲ್ಲಿ ಫ್ರೆಂಚ್ ಗಯಾನ, ಪಿಯೋನಿಯದಲ್ಲಿ ಚ್ಯಾಕೆಲಡೋನಿಯ ಮೊದಲಾದ ಕೆಲವು ದ್ವೀಪಗಳು—ಇವು ಫ್ರೆಂಚರಿಗೆ ಸೇರಿವೆ. ಫ್ರೆಂಚರ ವ್ಯಾಪಾರಕ್ಕೂ ನೌಕಾಬಲಕ್ಕೂ ಈ ರಾಷ್ಟ್ರಗಳು ವಿಶೇಷ ಸಹಕಾರಿಗಳಾಗಿವೆ. ಈ ದೇಶದ ಪಾರ್ಲಿಮೆಂಟಿನಲ್ಲಿ ಈ ರಾಷ್ಟ್ರಗಳ ಜನಗಳ ಪ್ರತಿನಿಧಿಗಳೂ ಇರುವರು.

---

## ಜರ್ಮನ್ ಚಕ್ರಾಧಿಪತ್ಯ

**ವಿಸ್ತೀರ್ಣ, ಮೇರೆ ಮತ್ತು ಸನ್ನಿವೇಶ.**—ಈ ಚಕ್ರಾಧಿಪತ್ಯವು ಇಂಡಿಯದ ⅙ ಭಾಗದಷ್ಟು ಅಥವಾ ಇಂಗ್ಲೆಂಡ್ ಮತ್ತು ವೇಲ್ಸ್‌ಗಳ 4ರಷ್ಟು ವಿಸ್ತೀರ್ಣವುಳ್ಳದಾಗಿದೆ. ಭೂಪಟದಲ್ಲಿ ಇದರ ಮೇರೆಗಳನ್ನು ನೋಡಿ. ಉತ್ತರದಲ್ಲಿ ನಾರ್ತ್‌ಸಿಯೂ, ಬಾಲ್ಟಿಕ್ ಸಮುದ್ರವೂ, ದಕ್ಷಿಣದಲ್ಲಿ ಆಲ್ಪ್ಸ್ ಪರ್ವತಗಳೂ, ಅವುಗಳ ಶಾಖೆಗಳೂ ಸ್ವಾಭಾವಿಕವಾದ ಎಲ್ಲೆಗಳಾಗಿವೆ. ಪೂರ್ವ ಪಶ್ಚಿಮದಲ್ಲಿ ಸ್ವಾಭಾವಿಕವಾದ ಎಲ್ಲೆಗಳಿಲ್ಲ; ಬಲವಾದ ಕೋಟೆಗಳನ್ನು ಕಟ್ಟಿರುವರು.

ಈ ಚಕ್ರಾಧಿಪತ್ಯವು ಯೂರೋಪಿನ ಮಧ್ಯಭಾಗದಲ್ಲಿರುವುದರಿಂದ ಇತರ ದೇಶಗಳೊಡನೆ ಭೂಮಾರ್ಗವಾಗಿ ವ್ಯಾಪಾರವು ನಡೆಯಲು ಸನ್ನಿವೇಶವು ಬಹಳ ಅನುಕೂಲವಾಗಿದೆ. ಉತ್ತರಭಾಗದ ಸಮುದ್ರಗಳ ಮಾರ್ಗವಾಗಿ ಬಾಲ್ಟಿಕ್ ಸಮುದ್ರದ ಸುತ್ತಲಿರುವ ದೇಶಗಳು ಗ್ರೇಟ್ ಬ್ರಿಟನ್ ಅಮೆರಿಕಗಳೊಡನೆ ವ್ಯಾಪಾರವು ನಡೆಯಲು ಅನುಕೂಲವಾಗಿವೆ. ರಾಜ್ಯಗಳ ಮಧ್ಯದಲ್ಲಿರುವುದರಿಂದ ಸುತ್ತುಮುತ್ತಲಿನ ರಾಜ್ಯಗಳಿಂದ ಅಪಾಯವು ಉಂಟಾಗದಂತೆ ನೋಡಿಕೊಳ್ಳಬೇಕಾದ ಆವಶ್ಯಕತೆ ಇರುವುದು. ಆ ರಾಜ್ಯಗಳ ಮೇಲೆ ತಾವೇ ಬೀಳುವುದಕ್ಕೂ ಅನುಕೂಲವಿರುವುದು.

**ತೀರಲಕ್ಷಣ.**—ಉತ್ತರಭಾಗದಲ್ಲಿ ಮಾತ್ರ ತೀರವಿರುವುದು. ಸಕ್ಸ್‌ಸಿಯ ತೀರವು ಅನೇಕ ಕಡೆ ತಗ್ಗಾಗಿರುವುದು. ಸಮುದ್ರವು ದೇಶದೊಳಕ್ಕೆ ನುಗ್ಗದಂತೆ ಭಾರಿ ಕಟ್ಟೆಗಳನ್ನು ಅಥವಾ ಡೈಕುಗಳನ್ನು ಕಟ್ಟಿರುವರು. ಬಾಲ್ಟಿಕ್ ಸಮುದ್ರದ ತೀರವು ಎತ್ತರವಾಗಿರುವುದು ; ಆದರೆ ಅನೇಕ ಲಗೂನ್ (ಅಥವಾ ತೀರದಲ್ಲಿರುವ ಸಮುದ್ರಕ್ಕೆ ಸೇರಿರುವ ಆಳವಿಲ್ಲದ ಸರೋವರ)ಗಳು ಇರುವುವು. ಅಲ್ಲಿನ ಬಂದರುಗಳಲ್ಲಿ ಚಳಿಗಾಲದಲ್ಲಿ ಉತ್ತರ ಪೂರ್ವ ಶೀತಮಾರುತಗಳಿಂದ ನೀರು ಗಡ್ಡೆ ಕಟ್ಟುವುದು. ತೀರಲಕ್ಷಣಗಳಲ್ಲಿ ಈ ಕೊರತೆಗಳಿದ್ದರೂ, ಉತ್ತಮವಾದ ಕೆಲವು ರೇವುಪಟ್ಟಣಗಳಿರುವುವು. ಇವು ಸಾಮಾನ್ಯವಾಗಿ ನದೀಮುಖಗಳಲ್ಲಿ ಮಾತ್ರವೇ ಇರುವುವು. ಇವುಗಳಲ್ಲಿ ಮುಖ್ಯವಾದುವು ಯಾವುವೆಂದರೆ:—

**ಹಾಂಬರ್ಗ್.**—ಇದು ಎಲ್ಬ್ ನದಿಯ ಮುಖದಲ್ಲಿ ಸಮುದ್ರತೀರಕ್ಕೆ 60 ಮೈಲಿಗಳ ದೂರದಲ್ಲಿರುವುದು. ಇದರ ಬಂದರು ಉತ್ತಮವಾದುದು. ಎಂತಹ ಭಾರಿ ಹಡಗುಗಳಾದರೂ ಇಲ್ಲಿಗೆ ಬರಬಹುದು. ನಾರ್ತ್ ಸಿಯಿಂದ ಇಲ್ಲಿಗೆ ಬರಲು ಮಾರ್ಗವಾದ ಎಲ್ಬ್ ನದಿಯ ಮುಖವನ್ನು ಹೆಲಿಗೊಲ್ಯಾಂಡ್ ದ್ವೀಪದಲ್ಲಿ ಇಟ್ಟಿರುವ ಫಿರಂಗಿಗಳು ಸಂರಕ್ಷಿಸುವುವು. ಎಲ್ಬ್ ನದಿಯ ಮುಖದಿಂದ ಕೀಲ್ ಪಟ್ಟಣದವರೆಗೆ ಹೋಗುವ ಒಂದು ಸಮುದ್ರದ ಕಾಲುವೆಯಿಂದ ಬಾಲ್ಟಿಕ್ ಸಮುದ್ರದೊಡನೆಯೂ, ರೈಲುಮಾರ್ಗ ಕಾಲುವೆಗಳಿಂದ ಒಳಭಾಗದ ಎಲ್ಲಾ ಪ್ರದೇಶಗಳೊಡನೆಯೂ ಈ ರೇವುಪಟ್ಟಣವು ಸಂಬಂಧಿಸಲ್ಪಟ್ಟಿದೆ. ಆದುದರಿಂದ ಇದು ಯುರೋಪಿನ ಅಂಡದಲ್ಲಿ (ಭಾಗ) ವ್ಯಾಪಾರಕ್ಕೆ ಅತ್ಯಂತ ಪ್ರಸಿದ್ಧವಾದ ರೇವುಪಟ್ಟಣವಾಗಿದೆ. ಪ್ರಪಂಚದಲ್ಲಿ ಇದು ನಾಲ್ಕನೆಯ ರೇವುಪಟ್ಟಣವು. ಲಂಡನ್, ನ್ಯೂಯಾರ್ಕ್, ಲಿವರ್‌ಪೂಲುಗಳು ಮಾತ್ರ ಇದನ್ನು ಮೀರಿಸಿರುವುವು. ಈ ಚಕ್ರಾಧಿಪತ್ಯದ ಇತರ ಎಲ್ಲಾ ರೇವುಪಟ್ಟಣಗಳ ಮೂಲಕ ನಡೆಯುವ ಒಟ್ಟು ವ್ಯಾಪಾರಕ್ಕಿಂತ ಈ ಒಂದು ರೇವುಪಟ್ಟಣದಲ್ಲಿಯೇ ಹೆಚ್ಚು ವ್ಯಾಪಾರವು ನಡೆಯುವುದು. ಜನಸಂಖ್ಯೆಯಲ್ಲಿ ಇದು ಚಕ್ರಾಧಿಪತ್ಯದಲ್ಲಿ ಬರ್ಲಿನ್‌ಗೆ ಎರಡನೆಯದಾಗಿದೆ.

ಓಡರ್ ನದಿಯ ತೀರದಲ್ಲಿರುವ ಸ್ಟೆಟ್ಟಿನ್, ವೀಸರ್ ನದಿಯ ತೀರದಲ್ಲಿರುವ ಬ್ರಿಮೆನ್ ಮತ್ತು ವಿಸ್ಟುಲದ ತೀರದಲ್ಲಿರುವ ಡಾನ್‌ಜಿಗ್ ಎಂಬುವು ಇತರ ಮುಖ್ಯವಾದ ರೇವುಪಟ್ಟಣಗಳು.

**ದೇಶದ ಮೇಲ್ಮೈಯ ಲಕ್ಷಣ.**—ಉತ್ತರಭಾಗದ ಮೈದಾನ, ದಕ್ಷಿಣಭಾಗದ ಪ್ರಸ್ಥಭೂಮಿ, ಪಶ್ಚಿಮಭಾಗದ ರೈನ್ ನದಿಯ ಬೈಲು—ಇವು ಈ ದೇಶದ ಮುಖ್ಯವಾದ ಸ್ವಾಭಾವಿಕ ವಿಭಾಗಗಳಾಗಿವೆ. ಉತ್ತರಭಾಗದ ಮೈದಾನದಲ್ಲಿ ಈಶಾನ್ಯಭಾಗವು ಮರಳುನೆಲವಾಗಿದೆ; ನೈರುತ್ಯಭಾಗವು ಫಲವತ್ತಾಗಿದೆ. ದಕ್ಷಿಣ ಪ್ರಸ್ಥಭೂಮಿಯಲ್ಲಿರುವ ಬೆಟ್ಟಗಳಲ್ಲಿ ಬ್ಲಾಕ್‌ಫಾರೆಸ್ಟ್ ಮತ್ತು ಹಾರ್ಜ್ ಬೆಟ್ಟಗಳು ಪ್ರಸಿದ್ಧವಾದುವು.

**ನದಿಗಳು.**—ಫ್ರಾನ್ಸ್ ದೇಶದಲ್ಲಿನಂತೆ ಇಲ್ಲಿಯೂ ಸಾಮಾನ್ಯವಾಗಿ ಎಲ್ಲಾ ನದಿಗಳೂ ವಾಯುವ್ಯಾಭಿಮುಖವಾಗಿ ಹರಿಯುವುವು. ಮತ್ತು ಹಡಗುಗಳ ಸಂಚಾರಕ್ಕೆ ತಕ್ಕಷ್ಟು ಆಳವಾಗಿರುವುವು. ನದಿಗಳು ಉದ್ದವಾಗಿಯೂ, ನಿಧಾನವಾಗಿಯೂ, ಒಂದಕ್ಕೊಂದು ಸಾಮಾನ್ಯವಾಗಿ ಸರಳರೇಖೆಯಲ್ಲಿಯೂ ಹರಿಯುವುದರಿಂದ ಒಳದೇಶದ ವ್ಯಾಪಾರಕ್ಕೂ ಅನುಕೂಲವಾಗಿವೆ. ಇವುಗಳಲ್ಲಿ ಮುಖ್ಯವಾದುವು ರೈನ್, ಎಲ್ಬ್, ವಿಸ್ಟುಲ, ಓಡರ್ ಮತ್ತು ಡಾನ್ಯೂಬ್.

ರೈನ್ ನದಿಯು ಹಿಮಪೂರಿತವಾದುದರಿಂದಲೂ, ಫಲವತ್ತಾದ ಪ್ರದೇಶದಲ್ಲಿ ಹರಿಯುವುದರಿಂದಲೂ, ಹಡಗುಗಳ ಸಂಚಾರಕ್ಕೂ, ವ್ಯಾಪಾರಕ್ಕೂ ಅನುಕೂಲ ವಾಗಿದೆ. ಸಮುದ್ರದ ದೊಡ್ಡ ಹಡಗುಗಳು ಫ್ರಾಂಕ್‌ಫರ್ಟ್‌ನವರೆಗೂ, ನದಿಯ ಸಣ್ಣ ಹಡಗುಗಳು ಈ ನದಿಯ ತೀರದಲ್ಲಿರುವ ಬಾಸಲ್‌ವರೆಗೂ, ಅಲ್ಲದೆ ಇದರ ಉಪನದಿಯಾದ ಮೆಯಿನ್ ನದಿಯ ದಡದಲ್ಲಿರುವ ಬ್ಯಾಂಬರ್ಗ್‌ವರೆಗೂ ಹೋಗು ವುವು.

ಎಲ್ಬ್ ನದಿಯು ಬೊಹಿಮಿಯದಲ್ಲಿರುವ ಪ್ರೇಗ್‌ಪಟ್ಟಣದವರೆಗೂ ಹಡಗು ಗಳ ಸಂಚಾರಕ್ಕೆ ಅನುಕೂಲವಾಗಿದೆ. ಈ ನದಿಯಿಂದ ಬರ್ಲಿನ್‌ಗೆ ಕಾಲುವೆ ಗಳನ್ನು ಮಾಡಿರುವರು. ಆದುದರಿಂದ ಬರ್ಲಿನ್ ಪಟ್ಟಣದಿಂದ ಹಾಂಬರ್ಗ್‌ಗೆ ಹಡಗುಗಳು ಸಂಚರಿಸುವುವು. ಇದು ಹರಿಯುವ ಪ್ರದೇಶಗಳಲ್ಲಿ ಕಲ್ಲಿದ್ದಲು, ಬೆಳ್ಳಿ, ಉಪ್ಪು ವಿಶೇಷವಾಗಿ ಸಿಕ್ಕುವುವು.

ಡಾನ್ಯೂಬಿನ ಮೊದಲಿನ ಭಾಗವು ಮಾತ್ರ ಈ ದೇಶದಲ್ಲಿ ಹರಿಯುವುದು. ಇದನ್ನು ರೈನ್ ಮತ್ತು ಮೆಯಿನ್ ನದಿಗಳೊಡನೆ ಕಾಲುವೆಗಳನ್ನು ಮಾಡಿ ಸಂಧಿ ಸಿರುವರು.

**ವಾಯುಗುಣ ಮತ್ತು ಮಳೆ.**—ಈ ದೇಶವು ಅಟ್ಲಾಂಟಿಕ್ ಸಾಗರಕ್ಕೆ ದೂರವಾಗಿರುವುದು. ಉತ್ತರ ಪೂರ್ವಗಳಿಂದ ಬೀಸುವ ಶೀತಮಾರುತಗಳನ್ನು ತಡೆಯುವುದಕ್ಕೆ ಬೆಟ್ಟಗಳಿಲ್ಲ. ಆದುದರಿಂದ ಉತ್ತರಭಾಗದ ಮೈದಾನದಲ್ಲಿ ಸಾಮಾನ್ಯವಾಗಿ ಶೀತೋಷ್ಣಗಳ ವ್ಯತ್ಯಾಸವು ಹೆಚ್ಚು. ದಕ್ಷಿಣಭಾಗದಲ್ಲಿ ಎತ್ತರವು ಹೆಚ್ಚಾದರೂ, ಅಕ್ಷಾಂಶವು ಕಡಿಮೆಯಾಗಿರುವುದರಿಂದ ವಾಯು ಗುಣವು ಸಾಮಾನ್ಯವಾಗಿ ಉತ್ತರಭಾಗದಂತೆಯೇ ಇರುವುದು. ಬೆಟ್ಟಗಳಿರುವ ದಕ್ಷಿಣಭಾಗದಲ್ಲಿ ಮಳೆ ಹೆಚ್ಚಾಗಿ ಬೀಳುವುದು. ರೈನ್ ನದಿಯ ಬೈಲಿಗೆ ಮೂರು ಕಡೆ ಪ್ರಸ್ಥಭೂಮಿಗಳಿರುವುದರಿಂದ ಈ ದೇಶದಲ್ಲೆಲ್ಲಾ ಆ ಬೈಲಿ ನಲ್ಲಿಯೇ ಸೆಕೆ ಹೆಚ್ಚು.

**ಸಸ್ಯಗಳು.**—ದಕ್ಷಿಣಭಾಗದ ಪ್ರಸ್ಥಭೂಮಿಯಲ್ಲಿ ಕಾಡುಗಳು ವಿಶೇಷ ವಾಗಿರುವುವು. ಅಲ್ಲಿಂದ ಮರಗಳನ್ನು ಕಡಿದು ತುಂಡುಮಾಡಿ ಅವುಗಳನ್ನು ವಿಸ್ಟುಲ, ಓಡರ್ ನದಿಗಳಮೇಲೆ ತೇಲಿಸಿ ಸಾಗಿಸುವರು. ಉತ್ತರಭಾಗದಲ್ಲಿ ಗೋಧಿ, ರೈನ್, ಆಲೂಗಡ್ಡೆಗಳನ್ನೂ, ಆಗ್ನೇಯಭಾಗದಲ್ಲಿ ಬೀಟ್‌ರೂಟ್‌ಗಳನ್ನೂ ಬೆಳೆಯುವರು. ನೈರುತ್ಯಭಾಗದ ನದಿಯ ಬೈಲುಗಳಲ್ಲಿ ದ್ರಾಕ್ಷೆಬಳ್ಳಿ, ಹೊಗೆಯ ಸೊಪ್ಪುಗಳನ್ನು ಬೆಳೆಯುವರು.

**ಪ್ರಾಣಿಗಳು.**—ಮಳೆ ಕಡಿಮೆಯಾಗಿರುವ ಮತ್ತು ಗುಡ್ಡಗಳಿರುವ ಪೂರ್ವ ದಕ್ಷಿಣಭಾಗಗಳಲ್ಲಿ ಕುರಿಗಳನ್ನೂ, ಮಳೆ ಹೆಚ್ಚಾಗಿ ಬೀಳುವ ಉತ್ತರ ಪಶ್ಚಿಮಗಳ

ಮೈದಾನದ ಪ್ರದೇಶಗಳಲ್ಲಿ ದನ, ಕುದುರೆಗಳನ್ನೂ ವಿಶೇಷವಾಗಿ ಸಾಕುವರು. ಸಾಕ್ಸೊನಿ, ಸೈಲೀಷಿಯ ಪ್ರಾಂತಗಳ ಉಣ್ಣೆಯು ಪ್ರಸಿದ್ಧವಾದುದು.

**ಖನಿಜಗಳು.**—ಖನಿಜ ಸಂಪತ್ತಿಯಲ್ಲಿ ಇದು ಈ ಖಂಡದಲ್ಲಿ ಬ್ರಿಟಿಷ್ ದ್ವೀಪಗಳಿಗೆ ಎರಡನೆಯದಾಗಿದೆ. ಸಂಚಾರಕ್ಕೆ ಅನುಕೂಲವಾಗಿರುವ ರೈನ್ ಎಲ್ಬ್, ಓಡರ್ ನದಿಗಳ ಬೈಲುಗಳ ಕೆಲವು ಭಾಗಗಳಲ್ಲಿ ಕಬ್ಬಿಣ, ಕಲ್ಲಿದ್ದಲುಗಳು ಒಂದಕ್ಕೊಂದು ಸಮೀಪದಲ್ಲಿ ಬಹು ಹೇರಳವಾಗಿ ಸಿಕ್ಕುವುವು. ಬೆಳ್ಳಿ, ಉಪ್ಪು, ಸತು, ತಾಮ್ರ, ಟಿನ್ ಇವು ಈ ದೇಶದಲ್ಲಿ ಹೆಚ್ಚಾಗಿ ದೊರೆಯುವ ಇತರ ಖನಿಜಗಳು.

**ಕೈಗಾರಿಕೆಗಳು.**—ರೈನ್ ನದಿಯ ಪ್ರಾಂತ್ಯದಲ್ಲಿ (ಕೊಲೊನ್, ಎಲ್ಬರ್, ಫೀಲ್ಡ್ ಮೊದಲಾದ ಪಟ್ಟಣಗಳಲ್ಲಿ) ರೇಷ್ಮೆಯ ಬಟ್ಟೆಗಳು, ಹತ್ತಿ ಬಟ್ಟೆಗಳು ಮತ್ತು ಕಬ್ಬಿಣದ ಸಾಮಾನುಗಳೂ, ಸಾಕ್ಸೊನಿಯಲ್ಲಿ ಉಣ್ಣೆಯ ಬಟ್ಟೆಗಳೂ, ಬರ್ಲಿನ್ ಪಟ್ಟಣದಲ್ಲಿ ಗಾಜಿನ ಸಾಮಾನು, ಲೋಹದ ಸಾಮಾನು ಮತ್ತು ಜವಾಹಿರಿಗಳೂ ತಯಾರಾಗುವುವು. ಎಸೆನ್ ಪಟ್ಟಣವು ಜರ್ಮನಿಯ ಬರ್ಮಿಂಗ್ಹಾಂ ಆಗಿರುವುದು; ಇಲ್ಲಿ ನಾನಾಬಗೆಯ ಕಬ್ಬಿಣದ ಸಾಮಾನುಗಳೇ ತಯಾರಾಗುವುವು. ಇಲ್ಲಿ ಫಿರಂಗಿಗಳನ್ನು ತಯಾರುಮಾಡುವ ಬಹು ಭಾರಿ ಕಾರ್ಖಾನೆ ಇರುವುದು.

**ಮಾರ್ಗಗಳು.**—ಹಿಂದೆ ವಿವರಿಸಿರುವ ನದಿಗಳಲ್ಲದೆ ಅವುಗಳ ಕಾಲುವೆಗಳೂ ಹಡಗುಗಳ ಸಂಚಾರಕ್ಕೆ ಬಹು ಅನುಕೂಲವಾಗಿವೆ. ರೈಲು ಮಾರ್ಗಗಳೂ, ರಸ್ತೆಗಳೂ ವಿಶೇಷವಾಗಿವೆ. ಡ್ರೆಸ್‌ಡನ್, ಫ್ರಾನ್‌ಕ್‌ಫರ್ಟ್, ಕೊಲೋನ್ ಪಟ್ಟಣಗಳಲ್ಲಿ ಅನೇಕ ರೈಲುಮಾರ್ಗಗಳು ಸೇರುವುವು.

**ವ್ಯಾಪಾರ.**—ಈ ದೇಶದಲ್ಲಿ ಒಳದೇಶದ ಮತ್ತು ಪರದೇಶಗಳ ವ್ಯಾಪಾರಗಳು 50 ವರ್ಷಗಳಿಂದೀಚೆಗೆ ಬಹಳ ಅಭಿವೃದ್ಧಿಸ್ಥಿತಿಗೆ ಬಂದಿವೆ. ಈಗಿನ ಯುದ್ಧಕ್ಕೆ ಮುಂಚೆ ಈ ಚಕ್ರಾಧಿಪತ್ಯದ ಪರದೇಶದ ವ್ಯಾಪಾರವು ಯೂರೊಪಿನಲ್ಲಿ ಬ್ರಿಟಿಷ್ ದ್ವೀಪಗಳ ವ್ಯಾಪಾರಕ್ಕೆ ಎರಡನೆಯದಾಗಿತ್ತು. (ಅದರ ⅔ ರಷ್ಟು ಆಗಿತ್ತು.) ಸಕ್ಕರೆ, ರೇಷ್ಮೆ, ಹತ್ತಿಯ ಮತ್ತು ಉಣ್ಣೆಯ ಬಟ್ಟೆಗಳು, ಕಲ್ಲಿದ್ದಲು, ಚಕ್ಕಳದ ಸಾಮಾನು ಇವುಗಳನ್ನು ಈ ದೇಶದಿಂದ ರಫ್ತುಮಾಡುವರು. ಉಣ್ಣೆ, ಹತ್ತಿ, ಗೋಧಿ, ಕಾಫಿ, ಚಕ್ಕಳ, ರೇಷ್ಮೆ ಇವುಗಳನ್ನು ತರಿಸಿಕೊಳ್ಳುವರು. ಒಳದೇಶದಲ್ಲಿ ಅನೇಕ ಸಂತೆಗಳು ಕೂಡುವುವು. ಅವುಗಳಲ್ಲಿ ಲೀಪ್ಸಿಗ್ ಮತ್ತು ಫ್ರಾನ್‌ಕ್‌ಪರ್ಟ್‌ಗಳ ಸಂತೆಗಳು ಬಹಳ ಭಾರಿಯಾದುವು.

**ಪಟ್ಟಣಗಳು.**—ರೇವುಪಟ್ಟಣಗಳನ್ನು ಮೊದಲೇ ವಿವರಿಸಿದೆ. ಇತರ ಪಟ್ಟಣಗಳು ಯಾವುವೆಂದರೆ:—

**ಬರ್ಲಿನ್.**—ಇದು ಸ್ಪ್ರೀ ಎಂಬ ಸಣ್ಣ ನದಿಯ ದಡದಲ್ಲಿದೆ. ಇಲ್ಲಿ 20 ಲಕ್ಷ ಜನರು ವಾಸಮಾಡುವರು. ಜನಸಂಖ್ಯೆಯಲ್ಲಿ ಈ ಪಟ್ಟಣವು ಲಂಡನ್ನಿನ $\frac{1}{4}$ ರಷ್ಟು ಇದೆ. ಇದು ಈ ಖಂಡದಲ್ಲಿ ಲಂಡನ್, ಪ್ಯಾರಿಸ್ ವಿನಾ ದೊಡ್ಡ ಪಟ್ಟಣವಾಗಿದೆ. ಇದು ಪ್ರಷ್ಯಾಕ್ಕೂ, ಜರ್ಮನ್ ಚಕ್ರಾಧಿಪತ್ಯಕ್ಕೂ ರಾಜಧಾನಿಯಾಗಿದೆ. ಅನೇಕ ಮುಖ್ಯವಾದ ಕೈಗಾರಿಕೆಗಳು ಇಲ್ಲಿ ನಡೆಯುವುವು. ಇಲ್ಲಿಂದ ನಾನಾಕಡೆಗೂ ಮಾರ್ಗಗಳಿರುವುವು.

**ಮ್ಯೂನಿಚ್.**—ಇದು ಬವೇರಿಯಾಕ್ಕೆ ರಾಜಧಾನಿ.

**ಲೀಪ್ಸಿಗ್.**—ಇದು ರೈಲುಮಾರ್ಗಗಳು ಸೇರುವ ಸ್ಥಳ. ಇಲ್ಲಿ ಭಾರಿ ಸಂತೆಯಾಗುವುದು. ತುಪ್ಪಳದ ವ್ಯಾಪಾರಕ್ಕೆ ಇದು ಪ್ರಪಂಚದಲ್ಲೆಲ್ಲಾ ಬಹು ಪ್ರಸಿದ್ಧಿಯಾದ ಪಟ್ಟಣವು.

**ಬ್ರೆಸ್ಲೋ.**—ಹಡಗುಗಳ ಸಂಚಾರಕ್ಕೆ ಅನುಕೂಲವಾದ ಓಡರ್ ನದಿಯ ತೀರದಲ್ಲಿ ಕಬ್ಬಿಣ, ಕಲ್ಲಿದ್ದಲುಗಳು ಸಿಕ್ಕುವ ಪ್ರದೇಶದಲ್ಲಿರುವುದು. ಇಲ್ಲಿ ಕೈಗಾರಿಕೆಗಳು ನಡೆಯುವುದಲ್ಲದೆ, ರಷ್ಯಾ ಮೊದಲಾದ ಪೂರ್ವದಿಕ್ಕಿನ ದೇಶಗಳಿಗೂ, ಜರ್ಮನಿಗೂ ನಡೆಯುವ ವ್ಯಾಪಾರಕ್ಕೆ ಇದು ಮುಖ್ಯ ಪಟ್ಟಣವಾಗಿರುವುದು.

**ಕೊಲೋನ್.**—ಪೂರ್ವಭಾಗದಲ್ಲಿ ಬ್ರೆಸ್ಲೋ ಪ್ರಸಿದ್ಧವಾಗಿರುವಂತೆ, ಇದು ಪಶ್ಚಿಮಭಾಗದಲ್ಲಿ ಫ್ರಾನ್ಸ್, ಜರ್ಮನಿಗಳ ವ್ಯಾಪಾರಕ್ಕೆ ಮುಖ್ಯ ಪಟ್ಟಣವಾಗಿದೆ. ಇದು ರೈನ್ ನದಿಯ ತೀರದಲ್ಲಿರುವುದು. ಅನೇಕ ರೈಲು ರಸ್ತೆಗಳು ಇಲ್ಲಿ ಸೇರುವುವು. ಸಮೀಪದಲ್ಲಿ ಕಬ್ಬಿಣ, ಕಲ್ಲಿದ್ದಲುಗಳು ಸಿಕ್ಕುವುವು.

**ಫ್ರಾಂಕ್‌ಫರ್ಟ್.**—ಇದು ಮೆಯಿನ್ ನದಿಯ ದಡದಲ್ಲಿದೆ. ಜಲಮಾರ್ಗಗಳೂ, ರೈಲುಮಾರ್ಗಗಳೂ ಬಹು ಅನುಕೂಲವಾಗಿವೆ. ಉತ್ತರ ದಕ್ಷಿಣಭಾಗಗಳ ವ್ಯಾಪಾರಕ್ಕೆ ಮುಖ್ಯ ಪಟ್ಟಣವಾಗಿದೆ. ಇದರ ಬಳಿ ದ್ರಾಕ್ಷಿಯಬಳ್ಳಿಗಳು ವಿಶೇಷವಾಗಿ ಬೆಳೆಯುವುವು. ಜರ್ಮನಿಯ ಸಮೀಪದಲ್ಲಿ ಕಾಡುಗಳು ವಿಶೇಷವಾಗಿವೆ; ಗ್ರಾಫೈಟ್ ಸಿಕ್ಕುವುದು. ಆದುದರಿಂದ ಇದು ಪೆನ್‌ಸಿಲ್‌ಗಳ ಮತ್ತು ಆಟದಸಾಮಾನುಗಳ ತಯಾರಿಗೆ ಪ್ರಖ್ಯಾತವಾಗಿದೆ.

**ನೂರೆಂಬರ್ಗ್.**—ಇದು ಮೆಯಿನ್ ನದಿಯ ಒಂದು ಉಪನದಿಯ ದಡದಲ್ಲಿದೆ.

**ಜನಗಳು.**—ಇದು ಜನಸಂಖ್ಯೆಯಲ್ಲಿ ಬ್ರಿಟಿಷ್ ದ್ವೀಪಗಳ $1\frac{1}{5}$ ಯಷ್ಟೂ ಇಂಡಿಯದ $\frac{1}{6}$ ರಷ್ಟೂ ಇರುವುದು. ಸಾಕ್ಸೊನಿಯಲ್ಲಿ ಜನಸಂಖ್ಯೆಯು ಬಹು ಸಾಂದ್ರವಾಗಿರುವುದು. (ಚ. ಮೈ. ಗೆ ಸುಮಾರು 550.) ಜನಗಳಲ್ಲಿ ಅರ್ಧಕ್ಕೆ

ಹೆಚ್ಚು ಪ್ರಾಟಸ್ಟೆಂಟು ಪಂಗಡದವರಾಗಿದ್ದಾರೆ. ಎಲ್ಲಾ ದರ್ಜೆಗಳ ವಿದ್ಯಾಭ್ಯಾಸವು ಈ ದೇಶದಲ್ಲಿ ಬಹು ಚೆನ್ನಾಗಿ ನಡೆಯುವುದು. ವಿದ್ಯಾಭ್ಯಾಸದಲ್ಲಿ ಈ ದೇಶವು ಈ ಖಂಡದ ಇತರ ಎಲ್ಲಾ ದೇಶಗಳಿಗಿಂತಲೂ ಉಚ್ಚಾಛ್ರಯಸ್ಥಿತಿಯಲ್ಲಿರುವುದು. ಇಲ್ಲಿ 21 ವಿಶ್ವವಿದ್ಯಾಲಯಗಳಿರುವುವು. ಅವುಗಳಲ್ಲಿ ಬರ್ಲಿನ್, ಲೀಪ್ಸಿಗ್, ಮ್ಯೂನಿಚ್‌ಗಳಿನವು ಮುಖ್ಯವಾದುವು. ಜನಗಳು ಸಾಹಸಿಗಳಾಗಿಯೂ, ಚತುರರಾಗಿಯೂ ಇರುವರು. ದೇಶವು ವ್ಯಾಪಾರದಲ್ಲಿಯೂ, ಐಶ್ವರ್ಯದಲ್ಲಿಯೂ ಯುದ್ಧಕ್ಕೆ ಮೊದಲು ಬಹು ಪ್ರಬಲಿಸುತ್ತಲಿತ್ತು.

**ರಾಜ್ಯಭಾರ ಮುಂತಾದ ವಿಷಯಗಳು.**—ಈ ಚಕ್ರಾಧಿಪತ್ಯದಲ್ಲಿ 25 ಸಂಸ್ಥಾನಗಳಿರುವುವು. ಇವುಗಳಲ್ಲಿ ಮುಖ್ಯವಾದುವು ಪ್ರಷ್ಯ, ಬವೇರಿಯ, ಸಾಕ್ಸೊನಿ ಮತ್ತು ವರ್ಟೆಂಬರ್ಗ್. ಇಲ್ಲಿನ ರಾಜ್ಯಭಾರವು, ಈ ಸಂಸ್ಥಾನಗಳು ಒಟ್ಟುಗೂಡಿ ಸಂಯುಕ್ತ ಪ್ರಭುತ್ವವಾಗಿದೆ. ಈಗ ಪ್ರಜಾಪ್ರತಿನಿಧಿ ಪ್ರಭುತ್ವವಿರುವುದು. ಯುದ್ಧಕ್ಕೆ ಮೊದಲು ಪ್ರಷ್ಯದ ರಾಜನೇ ಚಕ್ರವರ್ತಿಯಾಗಿದ್ದನು. ಪ್ರಷ್ಯವು ಇತರ ಎಲ್ಲಾ ಸಂಸ್ಥಾನಗಳನ್ನು ಒಟ್ಟುಗೂಡಿಸಿದರೂ ಅದಕ್ಕಿಂತ ದೊಡ್ಡದಾಗಿರುವುದರಿಂದ, ಈ ಚಕ್ರಾಧಿಪತ್ಯದ ಪ್ರಭುತ್ವವು ಸಾಮಾನ್ಯವಾಗಿ ಪ್ರಷ್ಯದವರ ಅಧೀನದಲ್ಲಿರುವುದೆಂದು ಹೇಳಬಹುದು.

ಜರ್ಮನರಿಗೆ ಆಫ್ರಿಕದಲ್ಲಿ ಕೊಗೇಲಾಂಡ್, ಕಾಮರೂನ್, ಜರ್ಮನರ ನೈರುತ್ಯ ಆಫ್ರಿಕ, ಜರ್ಮನರ ಪೂರ್ವ ಆಫ್ರಿಕಗಳೂ, ಪೆಸಿಫಿಕ್ ಸಾಗರದಲ್ಲಿ ನ್ಯೂಗಿನಿಯ ಒಂದು ಭಾಗ, ಲಡ್ರೋನ್, ಕರೋಲಿನ್ ಮೊದಲಾದ ದ್ವೀಪಗಳೂ, ಚೀಣಾದಲ್ಲಿ ಕೈಚೂ ಎಂಬ ಭಾಗವೂ ಸೇರಿದ್ದುವು. ಈಚೆಗೆ ನಡೆದ ಯುದ್ಧದಲ್ಲಿ ಇವೆಲ್ಲವೂ ಮಿತ್ರಮಂಡಲಿಯವರ ಕೈವಶವಾದುವು.

---

## ಆಸ್ಟ್ರಿಯ ಮತ್ತು ಹಂಗೇರಿ

**ವಿಸ್ತೀರ್ಣ, ಮೇರೆಗಳು ಮತ್ತು ಸನ್ನಿವೇಶ.**—ಇವೆರಡು ರಾಜ್ಯಗಳೂ ಸೇರಿ ಒಂದು ಚಕ್ರಾಧಿಪತ್ಯವಾಗಿರುವುದು. ಇದು ವಿಸ್ತೀರ್ಣದಲ್ಲಿ ಇಂಗ್ಲೆಂಡು, ವೇಲ್ಸುಗಳಿಗೆ ನಾಲ್ಕರಷ್ಟು ಇರುವುದು. ರಷ್ಯವನ್ನು ಬಿಟ್ಟರೆ ಇದೇ ಈ ಖಂಡದಲ್ಲಿ ಅತಿ ವಿಸ್ತಾರವಾದ ದೇಶವು. ಇದರ ಮೇರೆಗಳನ್ನು ಭೂಪಟದಲ್ಲಿ ನೋಡಿ. ಈ ದೇಶಕ್ಕೆ ಸಾಮಾನ್ಯವಾಗಿ ಎಲ್ಲಾ ಕಡೆಗಳಲ್ಲಿಯೂ ಪರ್ವತಗಳು ಸ್ವಾಭಾವಿಕವಾದ ಎಲ್ಲೆಗಳಾಗಿವೆ. ಈಶಾನ್ಯ, ವಾಯುವ್ಯ ಮೂಲೆಗಳಲ್ಲಿರುವ ಬೊಹೀಮಿಯ, ಗಲೀಷಿಯ ಪ್ರಾಂತಗಳನ್ನು ವಿನಾ ಉಳಿದ ಭಾಗವನ್ನು ಆಲ್ಪ್ಸ್, ಕಾರ್ಫೇಥಿಯನ್, ಟ್ರಾನ್ಸಿಲ್ವೇನಿಯನ್ ಮತ್ತು ಡಾಲ್ಮೇಷಿಯನ್ ಪರ್ವತಗಳು ಶತ್ರುಬಾಧೆ

ಯಿಲ್ಲದಂತೆ ಕಾಪಾಡುವುವು. ಈ ದೇಶಕ್ಕೆ ಸಮುದ್ರತೀರವು ವಿಶೇಷವಾಗಿಲ್ಲ ದಿದ್ದರೂ, ಇದರ ಸುತ್ತಮುತ್ತಲೂ ಅನೇಕ ದೇಶಗಳಿರುವುದರಿಂದಲೂ, ಇದು ಈ ಖಂಡದ ಮಧ್ಯಭಾಗದಲ್ಲಿರುವುದರಿಂದಲೂ ಇದರ ಸನ್ನಿವೇಶವು ವ್ಯಾಪಾರಕ್ಕೆ ಅನುಕೂಲವಾಗಿದೆ. ಇದರ ಸಮುದ್ರತೀರದಲ್ಲಿ ಪರ್ವತಗಳಿರುವುದರಿಂದ ಟ್ರಿಯುಸ್ಟ ಎಂಬುದು ಒಂದೇ ಒಳ್ಳೆಯ ರೇವುಪಟ್ಟಣವಾಗಿರುವುದು. ಎಡ್ರಿಯಾಟಿಕ್ ಸಮುದ್ರತೀರದಲ್ಲಿರುವ ಈ ಪಟ್ಟಣದಲ್ಲಿ ಡಾನ್ಯೂಬ್ ಮತ್ತು ಆಲ್ಪ್ಸ್ ಪ್ರದೇಶಗಳಿಂದ ಬರುವ ಮಾರ್ಗಗಳು ಸೇರುವುವು. ಈ ಕಾರಣಗಳಿಂದ ಇಲ್ಲಿ ವಿಶೇಷವಾಗಿ ವ್ಯಾಪಾರವು ನಡೆಯುವುದು.

**ನೈಸರ್ಗಿಕ ಲಕ್ಷಣ.**—ಸ್ವಿಡ್ಜರ್ಲೆಂಡನ್ನು ಬಿಟ್ಟರೆ ಇದೇ ಈ ಖಂಡದಲ್ಲೆಲ್ಲಾ ಅತ್ಯಂತ ಪರ್ವತಸೀಮೆಯೆಂದು ಹೇಳಬಹುದು. ಈ ದೇಶದಲ್ಲಿ $\frac{3}{4}$ ಪಾಲು ಪರ್ವತಸೀಮೆಯಾಗಿಯೂ, $\frac{1}{4}$ ಪಾಲು ಮೈದಾನ ಪ್ರದೇಶವಾಗಿಯೂ ಇರುವುದು. ಮೈದಾನಗಳಲ್ಲಿ ಮುಖ್ಯವಾದುದು ಹಂಗೇರಿಯ ಮೈದಾನವು. ಇಲ್ಲಿ ಡಾನ್ಯೂಬ್ ನದಿಯು ಹರಿಯುವುದರಿಂದ ಇದು ಕೃಷಿಗೂ ವ್ಯಾಪಾರಕ್ಕೂ ವಿಶೇಷ ಸೌಕರ್ಯವನ್ನು ಹೊಂದಿರುವುದು. ಡಾನ್ಯೂಬ್, ನೀಸ್ಟರ್, ವಿಸ್ಟುಲ, ಎಲ್ಬ್, ಅಡೀಜ್ ಇವು ಈ ದೇಶದಲ್ಲಿ ಹರಿಯುವ ಮುಖ್ಯವಾದ ನದಿಗಳು. ಪರ್ವತಗಳ ಮಧ್ಯೆ ಅನೇಕ ಸರೋವರಗಳಿವೆ. ಆದರೆ ಅವುಗಳೆಲ್ಲವೂ ಚಿಕ್ಕವು.

**ವಾಯುಗುಣ, ಸಸ್ಯಗಳು ಮತ್ತು ಪ್ರಾಣಿಗಳು.**—ವಾಯುಗುಣಕ್ಕನುಸಾರವಾಗಿ ಈ ದೇಶವನ್ನು ಮೂರು ಪ್ರದೇಶಗಳಾಗಿ ವಿಂಗಡಿಸಬಹುದು.

**ಉತ್ತರಕ್ಕೆ ಇಳಿಜಾರಾಗಿರುವ ಪ್ರದೇಶಗಳು.**—ಇಲ್ಲಿ ಸೂರ್ಯ ರಶ್ಮಿಯು ಕಡಿಮೆ. ಚಳಿಗಾಲದಲ್ಲಿ ಶೀತಮಾರುತಗಳು ಬೀಸುವುದರಿಂದಲೂ, ಸಮುದ್ರಕ್ಕೆ ದೂರವಾಗಿರುವುದರಿಂದಲೂ ಶೀತೋಷ್ಣಗಳ ವ್ಯತ್ಯಾಸವು ಹೆಚ್ಚಾಗಿರುವುದು. ಇಲ್ಲಿ ಗೋಧಿ, ನಾರು, ಹೊಗೆಸೊಪ್ಪು ಬೆಳೆಯುವುವು. ಕುರಿಗಳು ವಿಶೇಷವಾಗಿರುವುವು. ಇಲ್ಲಿನ ಕಾಡುಗಳಿಂದ ಮರಗಳನ್ನು ವಿಶೇಷವಾಗಿ ವಿಯನ್ನಾ ಪಟ್ಟಣಕ್ಕೂ, ಪರದೇಶಗಳಿಗೂ ಸಾಗಿಸುವರು.

(2) **ಹಂಗೇರಿ ಮೈದಾನ ಮತ್ತು ಅದರ ದಕ್ಷಿಣಭಾಗದ ಇಳಿಜಾರು ಪ್ರದೇಶಗಳು.**—ಸುತ್ತಲೂ ಎತ್ತರವಾದ ಬೆಟ್ಟಗಳಿರುವುದರಿಂದ ಇಲ್ಲಿ ಚಳಿಗಾಲದಲ್ಲಿ ಚಳಿ ಹೆಚ್ಚು. ಮಳೆ ಬೀಳುವುದು ಕಡಿಮೆ. ಇಳಿಜಾರು ಪ್ರದೇಶಗಳಲ್ಲಿ ದ್ರಾಕ್ಷೆಯ ಬಳ್ಳಿಗಳೂ, ಮೈದಾನದಲ್ಲಿ ಮುಸುಕಿನಜೋಳ, ಗೋಧಿ, ಬೀಟ್ ರೂಟ್‌ಗಳೂ ಮುಖ್ಯವಾದ ಬೆಳೆಗಳಾಗಿವೆ. ಇಲ್ಲಿ ದನಗಳು ವಿಶೇಷವಾಗಿವೆ.

(3) **ಮೆಡಿಟರೇನಿಯನ್ ಸಮುದ್ರತೀರದ ಇಳಿಜಾರು ಪ್ರದೇಶಗಳು.**—ಇಲ್ಲಿ ವಾಯುಗುಣವು ಸ್ವಲ್ಪ ಮಟ್ಟಿಗೆ ಸಮಧಾತುವಾಗಿರುವುದು.

ಮಳೆಯೂ ಸ್ವಲ್ಪ ಬೀಳುವುದು. ಆಲಿವ್ ಎಣ್ಣೆಯನ್ನು ಮಾಡುವುದು ಮತ್ತು ರೇಷ್ಮೆ ಹುಳುಗಳನ್ನು ಸಾಕುವುದು ಇಲ್ಲಿ ಹೆಚ್ಚು. ದ್ರಾಕ್ಷಿ, ಕಿತ್ತಿಳೆ, ನಿಂಬೆ ಮೊದಲಾದ ಹಣ್ಣುಗಳು ಇಲ್ಲಿ ಚೆನ್ನಾಗಿ ಬೆಳೆಯುವುವು. ಹಂದಿಗಳು ಹೇರಳವಾಗಿರುವುವು.

**ಖನಿಜಗಳು.**—ಖನಿಜಗಳು ಈ ದೇಶದಲ್ಲಿ ಜರ್ಮನಿ ದೇಶದಲ್ಲಿನಷ್ಟು ಹೇರಳವಾಗಿರುವುವೆಂದು ಹೇಳಬಹುದು. ಆಸ್ಟ್ರಿಯದ ವಾಯುವ್ಯ ಆಗ್ನೇಯ ಭಾಗಗಳಲ್ಲಿ ಕಲ್ಲಿದ್ದಲು ವಿಶೇಷವಾಗಿ ಸಿಕ್ಕುವುದು. ಆದರೆ ಕಬ್ಬಿಣವು ಈ ಎರಡು ಪ್ರದೇಶಗಳಲ್ಲಿ ದೊರೆತರೂ ಈ ಗಣಿಗಳು ಕಲ್ಲಿದ್ದಲಿನ ಗಣಿಗಳಿಗೆ ದೂರದಲ್ಲಿರುವುವು. ಈಶಾನ್ಯ, ಆಗ್ನೇಯ ಭಾಗಗಳಲ್ಲಿ ಉಪ್ಪು ಹೆಚ್ಚಾಗಿ ದೊರೆಯುವುದು. ಗಲೀಷಿಯದ ಉಪ್ಪಿನ ಗಣಿಗಳು ಪ್ರಪಂಚದಲ್ಲೆಲ್ಲಾ ಪ್ರಸಿದ್ಧವಾಗಿವೆ. ಇಲ್ಲಿ ಉಪ್ಪಿನ ರೇಕೆಯು 300 ಮೈಲಿ ಉದ್ದವೂ 4,000 ಅಡಿ ಆಳವೂ ಇರುವುದು. ಈ ಉಪ್ಪನ್ನು 600 ವರ್ಷಗಳಿಂದ ತೆಗೆಯುತ್ತಿರುವರು. ಇನ್ನೂ ನೂರಾರು ವರ್ಷಗಳು ತೆಗೆಯಬಹುದು. ಚಿನ್ನ, ಬೆಳ್ಳಿ, ಸೀಸ, ತಾಮ್ರ, ಪಾದರಸ, ಗ್ರಾನೈಟ್ ಇವು ಈ ದೇಶದಲ್ಲಿ ವಿಶೇಷವಾಗಿ ದೊರೆಯುವುವು. ಬೊಹೀಮಿಯದಲ್ಲಿ ಗಾಜಿನ ಸಾಮಾನುಗಳು ತಯಾರಾಗುವುವು.

**ಕೈಗಾರಿಕೆಗಳು ಮತ್ತು ವ್ಯಾಪಾರ.**—ಈ ದೇಶದಲ್ಲಿ ಶೇಕಡ 60 ಪಾಲು ಜನರು ಕೃಷಿಯಿಂದ ಜೀವಿಸುವರು. ಉಳಿದವರು ಮುಖ್ಯವಾಗಿ ಪಶುಪಾಲನೆಯಿಂದ ಜೀವಿಸುವರು. ಆಸ್ಟ್ರಿಯದ ವಾಯುವ್ಯ ಭಾಗದಲ್ಲಿ ಮಾತ್ರ ಕೈಗಾರಿಕೆಗಳು ಚೆನ್ನಾಗಿ ನಡೆಯುವುವು. ಹಂಗೇರಿಯಲ್ಲಿ ಕೈಗಾರಿಕೆಗಳು ಬಹು ಕಡಿಮೆ. ಮೆಡಿಟರೇನಿಯನ್ ತೀರದ ಪ್ರದೇಶಗಳಲ್ಲಿ ಇಲ್ಲವೇ ಇಲ್ಲ.

ಈ ದೇಶದ ವ್ಯಾಪಾರದಲ್ಲಿ $\frac{1}{8}$ ಭಾಗವು ಜರ್ಮನಿಯೊಡನೆ ನಡೆಯುವುದು. ಈ ದೇಶದಿಂದ ಮುಖ್ಯವಾಗಿ ಧಾನ್ಯ, ಸಕ್ಕರೆ, ಮರಗಳನ್ನು ರಫ್ತುಮಾಡುವರು. ಹತ್ತಿ, ಉಣ್ಣೆ, ಕಾಫಿಗಳನ್ನು ತರಿಸಿಕೊಳ್ಳುವರು. ರೈಲುಮಾರ್ಗಗಳೂ, ಗಾಡಿಯ ರಸ್ತೆಗಳೂ ಹೆಚ್ಚಾಗಿವೆ. 60 ಪರ್ವತ ಕಣಿವೆಗಳಲ್ಲಿ ಈ ರಸ್ತೆಗಳು ಹಾಯುವುವು. ಆದರೆ ಈ ರಸ್ತೆಗಳಿಗಿಂತಲೂ ಡಾನ್ಯೂಬ್ ನದಿಯ ಜಲಮಾರ್ಗವು ವ್ಯಾಪಾರಕ್ಕೆ ಹೆಚ್ಚು ಉಪಯೋಗವಾಗಿದೆ.

**ಪಟ್ಟಣಗಳು; ವಿಯನ್ನ.**—ಆಸ್ಟ್ರಿಯಾ ದೇಶಕ್ಕೆ ರಾಜಧಾನಿಯಾದ ಈ ಪಟ್ಟಣವು ಪ್ರಪಂಚದ ಮುಖ್ಯವಾದ ಪಟ್ಟಣಗಳಲ್ಲಿ ಒಂದಾಗಿದೆ. ಇಲ್ಲಿ 10 ಲಕ್ಷ ಜನರು ವಾಸಮಾಡುವರು. ಇದು ಡಾನ್ಯೂಬ್ ನದಿಯ ಒಂದು ಕವಲಿನ ದಡದಲ್ಲಿರುವುದು. ಉತ್ತರ ದಕ್ಷಿಣಗಳಿಂದ ಬರುವ ಮಾರ್ಗಗಳು ಇಲ್ಲಿ ಸೇರುವುವು. ಮೂರುಕಡೆ ಪರ್ವತಗಳು ಇದ್ದರೂ ಇದು ಮೈದಾನದಲ್ಲಿರುವುದು. 56 ಮೈಲಿ

ದೂರದಿಂದ ಆಲ್ಪ್ಸ್ ಪರ್ವತಗಳಿಂದ ನೀರನ್ನು ಕೊಳವೆಯಲ್ಲಿ ಈ ಪಟ್ಟಣಕ್ಕೆ ಸಾಗಿಸಿ ನೀರಿನ ಶಕ್ತಿಯನ್ನು ಉಪಯೋಗಿಸಿ ಕೈಗಾರಿಕೆಗಳನ್ನು ನಡೆಸುವರು. ಇಲ್ಲಿ ರೇಷ್ಮೆ ಬಟ್ಟೆಗಳು, ಮಕಮಲ್ ಬಟ್ಟೆಗಳು ಮತ್ತು ಮಣ್ಣಿನ ಪಾತ್ರೆಗಳು ವಿಶೇಷವಾಗಿ ತಯಾರಾಗುವುವು. ಈ ಕಾರಣಗಳಿಂದ ಈ ಪಟ್ಟಣವು ಪ್ರಮುಖತೆಗೆ ಬಂದಿದೆ.

**ಬೂಡಾಫೆಸ್ಟ್.**—ಇದು ಹಂಗೇರಿಯ ರಾಜಧಾನಿ. ಬೂಡಾ, ಡಾನ್ಯೂಬ್ ನದಿಯ ಬಲದಡದಲ್ಲಿಯೂ, ಫೆಸ್ಟ್ ಎಡದಡದಲ್ಲಿಯೂ ಇರುವುವು. ಈ ಎರಡು ಪಟ್ಟಣಗಳನ್ನು ಸಂಧಿಸುವುದಕ್ಕೆ ಡಾನ್ಯೂಬ್ ನದಿಯ ಮೇಲೆ ಒಂದು ತೂಗು ಹಾಕಿರುವ ಸೇತುವೆಯನ್ನು ಕಟ್ಟಿರುವರು. ಈ ಎರಡು ಪಟ್ಟಣಗಳು ಸೇರಿ ಬೂಡಾಫೆಸ್ಟ್ ಎನಿಸಿಕೊಂಡಿರುವುದು. ಈ ಪಟ್ಟಣವು ಹಂಗೇರಿಯ ಮೈದಾನದ ಮಧ್ಯಭಾಗದಲ್ಲಿ ಸಂಚಾರಕ್ಕೆ ಬಹಳ ಅನುಕೂಲವಾದ ಡಾನ್ಯೂಬ್ ನದಿಯ ದಡದಲ್ಲಿರುವುದರಿಂದ ಪ್ರಾಮುಖ್ಯಕ್ಕೆ ಬಂದಿದೆ. ಇಲ್ಲಿ 5 ಲಕ್ಷ ಜನರು ವಾಸ ಮಾಡುವರು.

**ಪ್ರೇಗ್.**—ಇದು ಎಲ್ಬಿಯ ಉಪನದಿಯ ದಡದಲ್ಲಿರುವುದು. ಬೊಹಿಮಿಯಾದಲ್ಲಿ ಇದು ಮುಖ್ಯ ಪಟ್ಟಣ. ವ್ಯಾಪಾರ, ಕೈಗಾರಿಕೆಗಳಿಗೆ ಪ್ರಸಿದ್ಧವಾಗಿರುವುದಲ್ಲದೆ, ಇದು ಈ ಖಂಡದಲ್ಲಿರುವ ಅತಿ ಸುಂದರವಾದ ಪಟ್ಟಣಗಳಲ್ಲಿ ಒಂದಾಗಿದೆ.

**ಜನಗಳು.**—ಈ ದೇಶದಲ್ಲಿ ಬೆಟ್ಟ ಕಣಿವೆಗಳೂ, ಪರ್ವತ ಪ್ರಸ್ಥಭೂಮಿಗಳೂ, ಕಾಡುಗಳೂ, ನದಿಗಳೂ ಹೇಗೆ ಅನೇಕವಾಗಿರುವುವೋ ಹಾಗೆಯೇ ಅನೇಕ ಜನಾಂಗಗಳೂ, ಭಾಷೆಗಳೂ ಇರುವುವು. ಇಲ್ಲಿರುವ ಜನಾಂಗಗಳಲ್ಲಿ ಜರ್ಮನ್, ಮಾಗ್ಯರ್, ಇಟಾಲಿಯನ್ ಮತ್ತು ಸ್ಲಾವ್ ಜನಾಂಗಗಳು ಮುಖ್ಯವಾದುವು. ಇವರಲ್ಲಿ ಪ್ರತಿಯೊಂದು ಜನಾಂಗದವರೂ ಬೇರೆ ಬೇರೆ ಭಾಷೆಯನ್ನು ಆಡುವರು. ಸುಮಾರು 20 ಭಾಷೆಗಳು ಇರುವುವು. ರೋಮನ್ ಕ್ಯಾಥೋಲಿಕ್ ಪಂಗಡದ ಕ್ರೈಸ್ತರೇ ಇಲ್ಲಿ ಹೆಚ್ಚು.

**ರಾಜ್ಯಭಾರ ಮುಂತಾದ ವಿಷಯಗಳು.**—ಆಸ್ಟ್ರಿಯದ ಚಕ್ರವರ್ತಿಗಳೇ ಹಂಗೇರಿಗೆ ರಾಜರಾಗಿದ್ದರು. ಈಗ ಎರಡೂ ಪ್ರಜಾಪ್ರತಿನಿಧಿ ಪ್ರಭುತ್ವಗಳಾಗಿವೆ. ಈ ಎರಡು ರಾಜ್ಯಗಳಿಗೂ ಹೀಗೆ ಒಂದೇ ಪ್ರಭುತ್ವವಿದ್ದರೂ ಅವುಗಳ ಒಳಆಡಳಿತಗಳೆಲ್ಲಕ್ಕೂ ಬೇರೆ ಬೇರೆ ಪಾರ್ಲಿಮೆಂಟುಗಳೂ, ಮಂತ್ರಿಗಳೂ ಇರುವರು. ಪರದೇಶ ಸಂಬಂಧವಾದ ವಿಚಾರಗಳು, ಸೈನ್ಯ, ನಾವೆಗಳು ಮಾತ್ರ ಒಂದೇ ಆಗಿ ಎರಡು ದೇಶಗಳ ಪ್ರತಿನಿಧಿಗಳನ್ನೂ ಒಳಗೊಂಡಿರುವ ಮಂತ್ರಿಗಳ ವಶದಲ್ಲಿರುವುವು.

ಟ್ರಿಯಸ್ಟಿಗೆ ದಕ್ಷಿಣದಲ್ಲಿ ಎಡ್ರಿಯಾಟಿಕ್ ಸಮುದ್ರತೀರದಲ್ಲಿರುವ ಪೋಲ ಎಂಬುದು ನೌಕಾಸೈನ್ಯಕ್ಕೆ ಮುಖ್ಯ ರೇವುಪಟ್ಟಣವಾಗಿದೆ.

---

## ರಷ್ಯ

**ವಿಸ್ತೀರ್ಣ, ಮೇರೆಗಳು ಮತ್ತು ಸನ್ನಿವೇಶ.**—ಇದು ವಿಸ್ತೀರ್ಣದಲ್ಲಿ ಈ ಖಂಡದ ಅರ್ಧಭಾಗಕ್ಕಿಂತ ಹೆಚ್ಚಾಗಿರುವುದು. ಗ್ರೇಟ್ ಬ್ರಿಟನ್ ದ್ವೀಪದ 24 ರಷ್ಟೂ ಇಂಡಿಯಾದೇಶದ $1\frac{1}{4}$ ರಷ್ಟೂ ವಿಸ್ತಾರವಾಗಿರುವುದು. ಇದರ ಮೇರೆಗಳನ್ನು ಭೂಪಟದಲ್ಲಿ ನೋಡಿ. ಪಶ್ಚಿಮದಲ್ಲಿ ಇದಕ್ಕೂ, ಜರ್ಮನಿ, ಆಸ್ಟ್ರಿಯ, ಹಂಗೇರಿ, ರೊಮೇನಿಯಗಳಿಗೂ ಮಧ್ಯೆ ಸಾಮಾನ್ಯವಾಗಿ ಸ್ವಾಭಾವಿಕವಾದ ಎಲ್ಲೆ ಯಾವುದೂ ಇಲ್ಲ. ಆದುದರಿಂದ ಬಲವಾದ ಕೋಟೆಗಳು ಅವಶ್ಯಕವಾಗಿರುವುವು. ಪೂರ್ವದಲ್ಲಿ ಯೂರಲ್ ಬೆಟ್ಟಗಳೂ, ಯೂರಲ್ ನದಿಯೂ ಇರುವುವು. ಆದರೆ ಇವುಗಳನ್ನು ಹಾದು ಹೋಗುವುದು ಸುಲಭವು. ಈ ದೇಶವು ಈ ಖಂಡದ ಅತ್ಯಂತ ಪೂರ್ವಭಾಗದಲ್ಲಿರುವುದರಿಂದಲೂ, ಇದರ ಪೂರ್ವಕ್ಕಿರುವ ಏಷ್ಯದ ರಷ್ಯದಲ್ಲಿ ಜನಸಂಖ್ಯೆಯೂ, ಐಶ್ವರ್ಯವೂ ಕಡಿಮೆಯಾಗಿರುವುದರಿಂದಲೂ, ವ್ಯಾಪಾರಾಭಿವೃದ್ಧಿಗೆ ಇದರ ಸನ್ನಿವೇಶವು ಅಷ್ಟು ಅನುಕೂಲವಾಗಿಲ್ಲ.

**ತೀರಲಕ್ಷಣ.**—ಈ ದೇಶಕ್ಕೆ ಎಲ್ಲಾ ಕಡೆಯೂ ಒಂದೊಂದು ಸಮುದ್ರವಿದ್ದರೂ ಅವುಗಳಿಂದ ವಾಯುಗುಣಕ್ಕೂ, ವ್ಯಾಪಾರಕ್ಕೂ ಹೆಚ್ಚು ಅನುಕೂಲ್ಯವಿಲ್ಲ. ಉತ್ತರಸಾಗರದ ತೀರದಲ್ಲಿ ನೀರು ಸಾಮಾನ್ಯವಾಗಿ ಗಡ್ಡೆಕಟ್ಟಿಯೇ ಇರುವುದು. ಅದರ ಕೊಲ್ಲಿಯಾದ ಬಿಳಿಯ ಸಮುದ್ರವು ಆಳವಾಗಿಲ್ಲ. ಇದರ ತೀರದಲ್ಲಿರುವ ಆರ್ಕೆಂಜಲ್ ಎಂಬ ಸಣ್ಣ ರೇವುಪಟ್ಟಣವು ಈ ಉತ್ತರ ತೀರದಲ್ಲೆಲ್ಲಾ ಒಂದೇ ರೇವುಪಟ್ಟಣವಾಗಿರುವುದು. ಇದರ ಬಂದರಿನಲ್ಲಿಯೂ ಸಮುದ್ರವು ವರ್ಷದಲ್ಲಿ ಆರು ತಿಂಗಳಿಗೆ ಹೆಚ್ಚಾಗಿ ಗಡ್ಡೆಕಟ್ಟಿರುವುದು. ಇದು ಡ್ವೈನಾ ಮುಖದಲ್ಲಿರುವುದು. ಈ ನದಿಯು ನೂರಾರು ಮೈಲಿಗಳವರೆಗೂ ಹಡಗಿನ ಸಂಚಾರಕ್ಕೆ ತಕ್ಕಷ್ಟು ಆಳವಾಗಿದ್ದರೂ 4–5 ತಿಂಗಳು ಮಾತ್ರ ಗಡ್ಡೆ ಕಟ್ಟದೆ ಇರುವುದು. ಆದುದರಿಂದ 3–4ನೆಯ ಸಸ್ಯವಲಯಗಳ ಮರಮುಟ್ಟುಗಳನ್ನು ಸಾಗಿಸುವುದಕ್ಕೆ ಮಾತ್ರ ಅನುಕೂಲವಾಗಿದೆ. ಬಾಲ್ಟಿಕ್ ಸಮುದ್ರ, ಕಪ್ಪು ಸಮುದ್ರ, ಕ್ಯಾಸ್ಪಿಯನ್ ಸಮುದ್ರ ತೀರಗಳಲ್ಲಿ ಕೆಲವು ರೇವುಪಟ್ಟಣಗಳಿರುವುವು. ಅವುಗಳಲ್ಲಿ ಮುಖ್ಯವಾದುವು ಯಾವುವೆಂದರೆ:—

**ಪಿಟ್ರೋಗ್ರಾಡ್.**—ಇದು ನೀವಾ ನದಿಯ ದಡದಲ್ಲಿದೆ. ಫಿನ್‌ಲೆಂಡ್ ಕೊಲ್ಲಿಯಿಂದ ಇಲ್ಲಿಗೆ ಹಡಗಿನ ಕಾಲುವೆಗಳನ್ನು ಮಾಡಿರುವರು. ಇಲ್ಲಿ ವರ್ಷದಲ್ಲಿ

ಸುಮಾರು 6 ತಿಂಗಳು ನೀರುಗಡ್ಡೆಯಾಗಿದ್ದರೂ, ಇದೇ ಈ ದೇಶದ ವ್ಯಾಪಾರಕ್ಕೆ ಮುಖ್ಯಪಟ್ಟಣವಾಗಿಯೂ, ರಾಜಧಾನಿಯಾಗಿಯೂ ಇದೆ. ಇಲ್ಲಿ 15 ಲಕ್ಷ ಜನರು ವಾಸಮಾಡುವರು. ಈ ಪಟ್ಟಣವನ್ನು ಈಚಿನ ಯುದ್ಧಕ್ಕೆ ಮೊದಲು ಸೆಂಟ್ ಪೀಟರ್ಸ್‌ಬರ್ಗ್ ಎಂದು ಕರೆಯುತ್ತಿದ್ದರು.

**ರೀಗ.**—ಇದು ಪಿಟ್ರೋಗ್ರಾಡಿನಂತೆಯೇ ನದಿಯ ರೇವುಪಟ್ಟಣವಾಗಿರುವುದು. ರಷ್ಯದ ಪಶ್ಚಿಮ ಪ್ರದೇಶಗಳ ಧಾನ್ಯಗಳೂ, ಮರಮುಟ್ಟುಗಳೂ ಇಲ್ಲಿಂದ ರಫ್ತಾಗುವುವು.

ಕಪ್ಪು ಸಮುದ್ರ ತೀರದಲ್ಲಿ **ಒಡೆಸ್ಸ** ಎಂಬುದು ಮುಖ್ಯವಾದ ರೇವು ಪಟ್ಟಣವು. ಸೂಯಿಸ್ ಕಾಲುವೆಯ ಮಾರ್ಗವಾಗಿ ನಡೆಯುವ ರಷ್ಯದ ವ್ಯಾಪಾರವೆಲ್ಲವೂ ಇದರ ಮೂಲಕ ನಡೆಯುವುದು. ಇಲ್ಲಿಂದ ಧಾನ್ಯಗಳು ರಫ್ತಾಗುವುವು. ಸೆಬಾಸ್ಟ್‌ಪೂಲ್ ಎಂಬುದು ಕಪ್ಪುಸಮುದ್ರ ತೀರದಲ್ಲಿರುವ ಭಾರಿ ಹಡಗುಗಳ ಸ್ಟೇಷನ್ ಆಗಿದೆ. ವೊಲ್ಗಾ ನದಿಯ ಮುಖದಲ್ಲಿರುವ ಆಸ್ಟ್ರಖಾನ್ ರೇವು ಪಟ್ಟಣದ ಮಾರ್ಗವಾಗಿ ಪರ್ಶಿಯಾ, ಮಧ್ಯ ರಷ್ಯಗಳೊಡನೆ ವ್ಯಾಪಾರವು ನಡೆಯುವುದು. ಬಾಕು ಎಂಬ ರೇವುಪಟ್ಟಣವು ಇದಕ್ಕಿಂತ ದೊಡ್ಡದು. ಕೆರೋಸಿನ್ ಎಣ್ಣೆಯ ವ್ಯಾಪಾರಕ್ಕೆ ಪ್ರಸಿದ್ಧವಾಗಿದೆ.

**ದೇಶದ ಮೇಲ್ಮೈಯ್ಯ ಲಕ್ಷಣ.**—ಈ ದೇಶದ ಅಂಚುಗಳಲ್ಲಿರುವ ಕಾಕಸಸ್, ಯೂರಲ್ ಪರ್ವತ ಪ್ರದೇಶಗಳು ವಿನಾ ಉಳಿದ ಭಾಗವೆಲ್ಲವೂ ತಗ್ಗಾದ ಮೈದಾನವಾಗಿದೆ. ಈ ಮೈದಾನವು ಯೂರೋಪಿನ ಮಹತ್ತಾದ ಮೈದಾನದ ಮುಖ್ಯ ಭಾಗವಾಗಿದೆ. ಇಲ್ಲಿ ಅತ್ಯಂತ ಎತ್ತರ ಪ್ರದೇಶವು ವೊಲ್ಡೈ ಬೆಟ್ಟಗಳು. ಇವು 1,200 ಅಡಿಗಳು ಮಾತ್ರ ಎತ್ತರವಾಗಿರುವುವು. ಕ್ಯಾಸ್ಪಿಯನ್ ಸಮುದ್ರಕ್ಕೆ ಉತ್ತರದಲ್ಲಿರುವ ಪ್ರದೇಶವು ಸಮುದ್ರ ಮಟ್ಟಕ್ಕೆ ತಗ್ಗಾಗಿರುವುದು. ಕ್ಯಾಸ್ಪಿಯನ್ ಸಮುದ್ರವು ಸಮುದ್ರ ಮಟ್ಟಕ್ಕೆ 85 ಅಡಿ ತಗ್ಗಾಗಿರುವುದು.

**ನದಿಗಳು.**—ವೊಲ್ಡೈ ಬೆಟ್ಟಗಳೇ ಈ ದೇಶದ ಮುಖ್ಯವಾದ ಜಲವಿಭಾಗ ಸ್ಥಾನವು. ಇಲ್ಲಿಂದ ಎಲ್ಲಾ ಕಡೆಗಳಿಗೂ ನದಿಗಳು ಹರಿಯುವುವು. ಜಲವಿಭಾಗ ಸ್ಥಾನವು ತಗ್ಗಾಗಿರುವುದರಿಂದ ನದಿಗಳು ನಿಧಾನವಾಗಿಯೂ, ಬಹಳ ಡೊಂಕು ಡೊಂಕಾಗಿಯೂ ಹರಿಯುವುವು. ಅವುಗಳ ಮೂಲಗಳು ಒಂದಕ್ಕೊಂದು ಸಮೀಪದಲ್ಲಿರುವುದರಿಂದಲೂ, ಅವುಗಳನ್ನು ಸರೋವರಗಳೇ ಸಂಬಂಧಿಸುವುದರಿಂದಲೂ, ಕ್ಯಾಸ್ಪಿಯನ್ ಸಮುದ್ರದಿಂದ ಬಾಲ್ಟಿಕ್ ಸಮುದ್ರಕ್ಕೂ, ಕಪ್ಪು ಸಮುದ್ರದಿಂದ ಬಿಳೀ ಸಮುದ್ರಕ್ಕೂ ಹಡಗುಗಳು ಈ ನದಿಗಳ ಮೇಲೆ ಬೇಸಗೆಯಲ್ಲಿ ಸಂಚರಿಸಬಹುದು. ಈ ನದಿಗಳಲ್ಲಿ ಅತಿಮುಖ್ಯವಾದುವು ವೋಲ್ಗಾ, ನೀಫರ್ ಮತ್ತು ಡಾನ್.

ವೋಲ್ಗಾ ನದಿಯು ವೊಲ್ಡೈ ಬೆಟ್ಟಗಳಲ್ಲಿ ಹುಟ್ಟಿ, 2,400 ವೈಲಿ ಹರಿದು, 200 ಮುಖಗಳಾಗಿ ಒಡೆದು ಕ್ಯಾಸ್ಪಿಯನ್ ಸಮುದ್ರವನ್ನು ಸೇರುವುದು. ಇದೇ ಈ ಖಂಡದಲ್ಲೆಲ್ಲಾ ಉದ್ದವಾದ ನದಿಯು. ನೀಪರ್ ನದಿಯು ವೋಲ್ಗಾ ನದಿಯ ಮೂಲದ ಬಳಿ ಹುಟ್ಟಿ, ದಕ್ಷಿಣಕ್ಕೆ ಹರಿದು, ಕಪ್ಪುಸಮುದ್ರುವನ್ನು ಸೇರುವುದು. ಇದರ ಮುಖದಲ್ಲಿ 40 ವೈಲಿ ಉದ್ದವಾದ ಅಳಿವೆ ಇರುವುದು.

**ಸರೋವರಗಳು.**—ಫಿನ್‌ಲೆಂಡನ್ನು ಸಾವಿರ ಸರೋವರಗಳ ಪ್ರದೇಶವೆಂದು ಕರೆಯಬಹುದು. ರಷ್ಯದಲ್ಲಿರುವ ಸರೋವರಗಳಲ್ಲಿ ಲಡೋಗ, ಒನೀಗ ಎಂಬುವು ದೊಡ್ಡವು. ಈ ಎರಡೂ ಆಳವಾಗಿರುವುವು. ಲಡೋಗ ಸರೋವರಕ್ಕೆ 60 ಸಣ್ಣ ನದಿಗಳು ಹರಿಯುವುವು. ಈ ಸರೋವರಗಳ ಲಕ್ಷಣಗಳನ್ನೂ, ಉಪಯೋಗ ಗಳನ್ನೂ ಈ ಖಂಡದ ಸಾಮಾನ್ಯ ವಿವರಣೆಯಲ್ಲಿ ಸೂಚಿಸಿದೆ.

**ವಾಯುಗುಣ ಮತ್ತು ಮಳೆ.**—ಉತ್ತರದಲ್ಲಿ ಪರ್ವತಗಳಿಲ್ಲದೆ ಇರುವುದ ರಿಂದಲೂ, ಪೂರ್ವದಲ್ಲಿ ಯೂರಲ್ ಬೆಟ್ಟಗಳು ಎತ್ತರವಿಲ್ಲದೆ ಇರುವುದರಿಂದಲೂ ಆ ದಿಕ್ಕುಗಳಿಂದ ಈ ದೇಶದಲ್ಲೆಲ್ಲಾ ಶೀತಮಾರುತಗಳು ಬೀಸುವುವು. ಬೇಸಗೆ ಯಲ್ಲಿ ದಕ್ಷಿಣದಿಕ್ಕಿನಿಂದ ಬೀಸುವ ಉಷ್ಣಮಾರುತಗಳನ್ನು ತಡೆಯುವುದಕ್ಕೆ ಪರ್ವತಗಳಿಲ್ಲ. ಸಮುದ್ರಗಳು ದೇಶದ ಒಳಭಾಗಕ್ಕೆ ಬಹುದೂರದಲ್ಲಿರುವುವು. ಈ ಕಾರಣಗಳಿಂದ ವಿಸ್ತಾರವಾದ ಈ ದೇಶದ ವಾಯುಗುಣದಲ್ಲಿ ಶೀತೋಷ್ಣಗಳ ವ್ಯತ್ಯಾಸಗಳು ವಿಪರೀತವಾಗಿರುವುವು. ಇಲ್ಲಿ ಮಳೆ ಬೀಳುವುದು ಬಹಳ ಕಡಿಮೆ.

**ಸಸ್ಯಗಳು.**—ಅತ್ಯಂತ ಉತ್ತರಭಾಗವು ಪಂಡ್ರಾ ಪ್ರದೇಶವು. ಅದಕ್ಕೆ ದಕ್ಷಿಣದಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಮಾಸ್ಕೋವರೆಗೆ ಮೇರುವೃತ್ತದ ಮತ್ತು ಶೀತವಲಯದ ಸಮೀಪದ ಸಸ್ಯವಲಯಗಳಿವೆ. ಇಲ್ಲಿ ಫೈಫರ್ ಮರಗಳೂ, ಜವೆಗೋಧಿ, ತೋಕೆಗೋಧಿಗಳೂ, ನಾರೂ ಬೆಳೆಯುವುವು. ಈ ದೇಶದ ದಕ್ಷಿಣ ಭಾಗದಲ್ಲಿ ಕರಿಯನೆಲವಿರುವುದು. ಕೃಷಿಯು ಹೆಚ್ಚು. ಗೋಧಿ, ಮುಸುಕಿನ ಜೋಳ ವಿಶೇಷವಾಗಿ ಬೆಳೆಯುವುವು. ಹೂಗಳನ್ನು ಬೆಳೆದು, ಜೇನುಹುಳುಗಳನ್ನು ಸಾಕಿ, ಜೇನುತುಪ್ಪವನ್ನು ವಿಶೇಷವಾಗಿ ಶೇಖರಿಸುವರು. ಆಗ್ನೇಯಭಾಗದ ಸ್ಟೆಪ್ಸಿ ಅಥವಾ ಹುಲ್ಲುಗಾವಲು ಪ್ರದೇಶದಲ್ಲಿ ವರ್ಷದಲ್ಲಿ ಆರುತಿಂಗಳು ಹುಲ್ಲು ಬೆಳೆಯುವುದು. ಅಲ್ಲಿ ಕುದುರೆಗಳನ್ನೂ, ದನಗಳನ್ನೂ ಸಾಕುತ್ತಾರೆ. ವೊರಿಯ ಪರ್ಯಾಯದ್ವೀಪದಲ್ಲಿಯೂ, ಕಾಕಸಸ್ ಬಳಿಯ ಪ್ರದೇಶದಲ್ಲಿಯೂ ಹಣ್ಣುಗಳು ಮುಖ್ಯವಾಗಿ ದ್ರಾಕ್ಷೆ ಹಣ್ಣುಗಳು ವಿಶೇಷವಾಗಿ ಬೆಳೆಯುವುವು.

ವ್ಯವಸಾಯವೇ ಈ ದೇಶದಲ್ಲಿ 90% ಜನಗಳಿಗೆ ಉದ್ಯೋಗವಾಗಿದೆ. ಧಾನ್ಯ ಗಳನ್ನು ಬೆಳೆದು ರಫ್ತುಮಾಡುವುದರಲ್ಲಿ ಪ್ರಪಂಚದಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನಗಳಿಗೆ ಇದು ಎರಡನೆಯ ದೇಶವಾಗಿದೆ.

**ಪ್ರಾಣಿಗಳು.**—ಈ ದೇಶದಲ್ಲಿ ಈ ಖಂಡದ ಪ್ರಾಣಿಗಳೆಲ್ಲವೂ ವಾಸ ಮಾಡುವುವು. ಇಲ್ಲಿ 2 ಕೋಟಿ ಕುದುರೆಗಳು ಇರುವುವು. ಈ ಸಂಖ್ಯೆಯನ್ನು ಜನಸಂಖ್ಯೆಗೆ ಹೋಲಿಸಿ ನೋಡಿದರೆ ಈ ದೇಶದಲ್ಲಿ ಪ್ರತಿ 4 ಜನಗಳಿಗೆ 1 ಕುದುರೆ ಇರುವುದು. ಈ ದೇಶದಲ್ಲಿರುವಷ್ಟು ಕುದುರೆಗಳು ಪ್ರಪಂಚದ ಇನ್ನಾವ ದೇಶದಲ್ಲಿಯೂ ಇಲ್ಲ. ಈ ಭಾಗದಲ್ಲಿ ಅಮೆರಿಕದ ಸಂಯುಕ್ತಸಂಸ್ಥಾನಗಳು ಈ ದೇಶಕ್ಕೆ ಎರಡನೆಯದಾಗಿರುವುದು. ಈ ದೇಶದಲ್ಲಿ ದೊರೆಯುವಷ್ಟು ಏಾಸು ಗಳು ಇನ್ನಾವ ದೇಶದಲ್ಲಿಯೂ ಸಿಕ್ಕುವುದಿಲ್ಲ. ಉತ್ತಮವಾದ ತೊಗಲೂ ಇಲ್ಲಿ ದೊರೆಯುತ್ತದೆ.

**ಖನಿಜಗಳು.**—ಈ ದೇಶದಲ್ಲಿ ಖನಿಜಗಳು ವಿಶೇಷವಾಗಿರುವುವು. ಆದರೆ ಜನರ ನಾಗರಿಕತೆಯು ಕಡಿಮೆಯಾಗಿರುವುದರಿಂದ ಇವುಗಳನ್ನು ಭೂಮಿಯಿಂದ ಹೆಚ್ಚಾಗಿ ತೆಗೆಯುತ್ತಾ ಇಲ್ಲ. ಲಾಡ್ಜ್, ಟೊಲ ಪಟ್ಟಣಗಳ ಸುತ್ತಲೂ ವಿಶಾಲ ವಾದ ಕಲ್ಲಿದ್ದಲಿನ ಪ್ರದೇಶಗಳಿವೆ. ಇಲ್ಲಿ ಕಬ್ಬಿಣವೂ, ಸುಣ್ಣಕಲ್ಲೂ ದೊರೆಯು ವುವು. ಚಿನ್ನ, ತಾಮ್ರ, ಪ್ಲಾಟಿನಂ, ವಜ್ರಗಳು ಯೂರಲ್ ಬೆಟ್ಟಗಳಲ್ಲಿ ದೊರೆ ಯುವುವು. ಈ ದೇಶದಲ್ಲಿ ಸಿಗುವಷ್ಟು ಪ್ಲಾಟಿನಂ ಮತ್ತಾವ ದೇಶದಲ್ಲಿಯೂ ಸಿಗುವುದಿಲ್ಲ. ಕ್ಯಾಸ್ಪಿಯನ್ ಸಮುದ್ರದ ತೀರದಲ್ಲಿ ಕೆರೋಸಿನ್ ಎಣ್ಣೆಯ ಬಾವಿಗಳಿರುವುವು.

**ಕೈಗಾರಿಕೆಗಳು, ವ್ಯಾಪಾರ, ಮುಂತಾದ ವಿಷಯಗಳು.**—ಲಾಡ್ಸ್‌ನಲ್ಲಿ ಹತ್ತಿಯ ಬಟ್ಟೆಗಳೂ, ಪೆಟ್ರೋಗ್ರಾಡ್, ಮಾಸ್ಕೊ, ವಾರ್ಸಾಗಳಲ್ಲಿ ಉಣ್ಣೆಯ ಬಟ್ಟೆಗಳೂ, ರಷ್ಯದ ಬರ್ಮಿಂಗ್ಹಾಂ ಎಂದು ಕರೆಯಲ್ಪಟ್ಟಿರುವ ಟೂಲಾದಲ್ಲಿ ಕಬ್ಬಿಣದ ಸಾಮಾನುಗಳೂ, ಕಾಕಸಸ್ ಪರ್ವತ ಪ್ರದೇಶದಲ್ಲಿ ರೇಷ್ಮೆಯ ಬಟ್ಟೆಗಳೂ ತಯಾ ರಾಗುವುವು. ಈ ದೇಶದಿಂದ ಧಾನ್ಯಗಳು, ನಾರು, ತೊಲೆಗಳು ರಫ್ತಾಗುವುವು. ಇಲ್ಲಿಗೆ ಹತ್ತಿ, ಟೀ, ಯಂತ್ರಗಳು ಆಮದಾಗುವುವು.

ಈ ದೇಶದಲ್ಲಿ ನದಿಗಳೂ, ಕಾಲುವೆಗಳೂ ಬೇಸಗೆಯಲ್ಲಿ ಉತ್ತಮವಾದ ಜಲ ಮಾರ್ಗಗಳಾಗಿರುವುವು. ಚಳಿಗಾಲದಲ್ಲಿ ದೇಶದ ಮೇಲೆಲ್ಲಾ ಹಿಮವು ಸುರಿದು ಗಟ್ಟಿಯಾಗುವುದರಿಂದ ಚಕ್ರವಿಲ್ಲದ ಗಾಡಿಗಳಲ್ಲಿ ಪ್ರಯಾಣಮಾಡಬಹುದು. ರಸ್ತೆಗಳೂ, ರೈಲುಮಾರ್ಗಗಳೂ ಬಹು ಕಡಿಮೆ. ಮಾಸ್ಕೊ ಪಟ್ಟಣವು ಈ ದೇಶದ ಜಲಮಾರ್ಗಗಳಿಗೂ, ರೈಲುಮಾರ್ಗಗಳಿಗೂ ಮಧ್ಯಸ್ಥಳವಾಗಿದೆ. ಇಲ್ಲಿ ಅನೇಕ ಕೈಗಾರಿಕೆಗಳು ನಡೆಯುವುದಲ್ಲದೆ, ಇದು ಒಳದೇಶ ವ್ಯಾಪಾರಕ್ಕೆ ಮುಖ್ಯ ಪಟ್ಟಣವಾಗಿರುವುದು. ವಿಸ್ಟ್ಯುಲ ನದಿಯ ದಡದಲ್ಲಿರುವ ವಾರ್ಸಾ ಪಟ್ಟಣವೂ ಹೀಗೆ ಸ್ವಲ್ಪಮಟ್ಟಿಗೆ ಜಲಮಾರ್ಗಗಳುಳ್ಳದಾಗಿ ವ್ಯಾಪಾರಕ್ಕೆ ಪ್ರಸಿದ್ಧವಾಗಿರು ವುದು.

**ಜನಗಳು.**—ಈ ದೇಶದ ವಿಸ್ತಾರವು ನಮ್ಮ ದೇಶಕ್ಕಿಂತ ಹೆಚ್ಚಾಗಿದ್ದರೂ ಜನಸಂಖ್ಯೆಯು $\frac{1}{8}$ ಭಾಗದಷ್ಟು ಮಾತ್ರವಾಗಿರುವುದು. ಜನಸಾಂದ್ರತೆಯು ಉತ್ತರಭಾಗದಲ್ಲಿ ಬಹಳ ಕಡಿಮೆ. (ಚ. ಮೈ. ಗೆ 1.) ಕೈಗಾರಿಕೆ, ವ್ಯಾಪಾರ ಗಳು ನಡೆಯುವ ಪಶ್ಚಿಮ ದಕ್ಷಿಣ ಭಾಗಗಳಲ್ಲಿ ಜನಸಾಂದ್ರತೆಯು ಹೆಚ್ಚು (1 ಚ. ಮೈ. ಗೆ 100).

ಈ ದೇಶದಲ್ಲಿ ಸುಮಾರು 40 ಭಾಷೆಗಳು ಪ್ರಚಾರದಲ್ಲಿರುವುವು. ಸುಮಾರು ಅರ್ಧ ಜನರು ರಷ್ಯನ್ ಭಾಷೆಯನ್ನು ಆಡುವರು. ಈ ದೇಶದ ಜನರು ಮುಖ್ಯ ವಾಗಿ ಗ್ರೀಕ್ ಚರ್ಚಿಗೆ ಸೇರಿದ ಕ್ರೈಸ್ತರು; ಉಳಿದವರು ರೋಮನ್ ಕ್ಯಾಥೋ ಲಿಕ್ ಕ್ರೈಸ್ತರೂ, ಯೆಹೂದ್ಯರೂ, ಮಹಮ್ಮದೀಯರೂ, ಚೈತನ್ಯ ಪೂಜಕರೂ ಆಗಿರುವರು.

**ರಾಜ್ಯಭಾರ ಮುಂತಾದ ವಿಷಯಗಳು.**—ಈ ದೇಶದಲ್ಲಿ ಪ್ರಜಾಪ್ರತಿನಿಧಿ ಪ್ರಭುತ್ವವು ಇರುವುದು. ಈ ದೇಶದಲ್ಲಿ ವಿದ್ಯಾಭ್ಯಾಸ ಪ್ರಚಾರವು ಕಡಿಮೆ. 12% ಜನರು ಮಾತ್ರ ಓದುಬರಹ ತಿಳಿದವರಾಗಿರುವರು. ಏಷ್ಯದ ರಷ್ಯವು ಈ ದೇಶಕ್ಕೆ ಸೇರಿದೆ. ರಷ್ಯಾ ಚಕ್ರಾಧಿಪತ್ಯವು ಬಾಲ್ಟಿಕ್ ಸಮುದ್ರದಿಂದ ಪೆಸಿಫಿಕ್ ಸಾಗರದವರೆಗೂ ವಿಸ್ತರಿಸಿರುವುದು. ಇದು ವಿಸ್ತಾರದಲ್ಲಿ ಬಹು ದೊಡ್ಡದಾಗಿ ತೋರಿದರೂ, ಜನಸಂಖ್ಯೆ, ಐಶ್ವರ್ಯಗಳಲ್ಲಿ ಬಹು ಹಿಂದಾಗಿರುವುದು.

---

## ಇಟಲಿ

**ವಿಸ್ತೀರ್ಣ, ಮೇರೆಗಳು ಮತ್ತು ಸನ್ನಿವೇಶ.**—ಈ ದೇಶವು ಇಂಗ್ಲೆಂಡು ವೇಲ್ಸುಗಳಿಗೆ ಎರಡರಷ್ಟು ವಿಸ್ತೀರ್ಣವುಳ್ಳುದಾಗಿರುವುದು. ಏಷ್ಯಾಖಂಡದ ದಕ್ಷಿಣಭಾಗದಲ್ಲಿ ಮೂರು ಪರ್ಯಾಯದ್ವೀಪಗಳು ಇರುವಂತೆಯೇ ಯೂರೋಪಿ ನಲ್ಲಿ ದಕ್ಷಿಣಭಾಗಗಳಲ್ಲಿಯೂ ಮೂರು ಪರ್ಯಾಯದ್ವೀಪಗಳಿರುವುವು. ಇವುಗಳಲ್ಲಿ ಮಧ್ಯದ ಪರ್ಯಾಯದ್ವೀಪವಾದ ಇಂಡಿಯಾದೇಶವು ಮೂರು ಕಡೆಗಳಲ್ಲ ನೀರಿನಿಂದ ಸುತ್ತಲ್ಪಟ್ಟು, ಈಶಾನ್ಯ, ವಾಯುವ್ಯ, ಉತ್ತರ ಭಾಗಗಳಲ್ಲಿ ಎತ್ತರವಾದ ಪರ್ವತ ಗಳಿಂದ ಹೇಗೆ ಪ್ರತ್ಯೇಕಿಸಲ್ಪಟ್ಟಿದೆಯೋ ಹಾಗೆಯೇ ಇಟಲಿಯೂ ಮೂರುಕಡೆ ನೀರಿನಿಂದ ಸುತ್ತಲ್ಪಟ್ಟು ಉತ್ತರದಲ್ಲಿ ಆಲ್ಪ್ಸ್‌ಪರ್ವತಗಳಿಂದ ಪ್ರತ್ಯೇಕಿಸಲ್ಪಟ್ಟಿ ರುವುದು. ಆದರೆ ಈ ಪರ್ವತಗಳಲ್ಲಿ ಮಾಂಟ್‌ಸೇಸ್, ಸಿಂಪ್ಲನ್ ಮೊದಲಾದ ಟನ್ನಲ್‌ಗಳನ್ನು ಮಾಡಿರುವುದರಿಂದ, ಈ ದೇಶಕ್ಕೂ, ಕೈಗಾರಿಕೆ ವ್ಯಾಪಾರಗಳಿಗೆ ಪ್ರಸಿದ್ಧವಾದ ಫ್ರಾನ್ಸ್, ಜರ್ಮನಿ, ಸ್ವಿಟ್ಜರ್ಲೆಂಡ್‌ಗಳಿಗೂ ವಿಶೇಷವಾಗಿ ವ್ಯಾಪಾ ರವು ನಡೆಯಲು ಅನುಕೂಲವಾಗಿದೆ. ಈ ದೇಶವು ಮೆಡಿಟರೇನಿಯನ್ ಸಮು ದ್ರದ ಮಧ್ಯಭಾಗದಲ್ಲಿರುವುದರಿಂದ ವ್ಯಾಪಾರಾಭಿವೃದ್ಧಿಗೆ ಇದರ ಸನ್ನಿವೇಶವು ಮತ್ತಷ್ಟು ಅನುಕೂಲವಾಗಿದೆ.

**ತೀರಲಕ್ಷಣ.**—ಪಶ್ಚಿಮ ದಕ್ಷಿಣ ತೀರಗಳಲ್ಲಿ ಅನೇಕ ಕೊಲ್ಲಿಗಳೂ, ಒಳ್ಳೆಯ ಬಂದರುಗಳೂ ಇರುವುವು. ಈ ಕಡೆಗಳಲ್ಲಿ ಜಿನೋವ, ನೇಪಲ್ಸ್, ಸಲಾರ್ನೊ, ಟರಾಂಟೋ ಕೊಲ್ಲಿಗಳೂ, ಮೆಸ್ಸೀನ ಜಲಸಂಧಿಯಿಂದ ಪ್ರತ್ಯೇಕಿಸಲ್ಪಟ್ಟಿರುವ ಸಿಸಿಲಿ ದ್ವೀಪವೂ ಇರುವುವು. ಪೂರ್ವ ತೀರದಲ್ಲಿ ಕೊಲ್ಲಿಗಳೂ, ಬಂದರುಗಳೂ ಬಹಳ ಕಡಿಮೆ. ಈ ದೇಶದ ಮುಖ್ಯವಾದ ರೇವುಪಟ್ಟಣಗಳಾವುವೆಂದರೆ:—

**ಜಿನೋವ.**—ಜಿನೋವ ಕೊಲ್ಲಿಯ ತೀರದಲ್ಲಿರುವ ಈ ರೇವುಪಟ್ಟಣವು ಉತ್ತಮವಾದ ಬಂದರನ್ನು ಹೊಂದಿದೆ. ಇಟಲಿಯ ಉತ್ತರಭಾಗದ ರೈಲುಮಾರ್ಗಗಳೆಲ್ಲಾ ಇಲ್ಲಿ ಸೇರುವುವು; ಗಂಗಾನದಿಯ ಬೈಲಿನಂತೆ ಬಹು ಫಲವತ್ತಾದ ಮತ್ತು ಜನಭರಿತವಾದ ಲೊಂಬಾರ್ಡಿ ಮೈದಾನವು ಇದರ ಹಿಂದೆ ಇರುವುದು. ಆದುದರಿಂದ ಇದು ಹಿಂದಿನ ಕಾಲದಲ್ಲಿ ಈ ಖಂಡದಲ್ಲೆಲ್ಲಾ ಬಹು ಪ್ರಸಿದ್ಧವಾದ ಪಟ್ಟಣವಾಗಿತ್ತು. ಈಗಲೂ ಇದು ಈ ದೇಶದ ಮುಖ್ಯವಾದ ರೇವುಪಟ್ಟಣವಾಗಿದೆ.

**ನೇಪಲ್ಸ್.**—ಇದು ನೇಪಲ್ಸ್ ಕೊಲ್ಲಿಯ ತೀರದಲ್ಲಿ ವಿಸೂವಿಯಸ್ ಅಗ್ನಿಪರ್ವತದ ಬಳಿ ಇರುವುದು. ಇದರ ಸುತ್ತುಮುತ್ತಲಿನ ಪ್ರದೇಶವು ಬಹು ಸುಂದರವಾಗಿದೆ. ಇಲ್ಲಿ ತಂತಿಗಳನ್ನು ಮಾಡುವುದು ಮುಖ್ಯವಾದ ಕೈಗಾರಿಕೆಯು. ಈ ದೇಶದಲ್ಲಿ ಇದೇ ದೊಡ್ಡ ಪಟ್ಟಣವು. 15 ಲಕ್ಷ ಜನರು ವಾಸಮಾಡುವರು. ಮೆಸ್ಸೀನ ಜಲಸಂಧಿಯ ಮಾರ್ಗವಾಗಿ ನಡೆಯುವ ವ್ಯಾಪಾರವೆಲ್ಲವೂ ಈ ರೇವುಪಟ್ಟಣದ ಮಾರ್ಗವಾಗಿ ನಡೆಯುವುದು.

**ವೆನಿಸ್.**—ಇದು 72 ದ್ವೀಪಗಳ ಮೇಲೆ ಕಟ್ಟಲ್ಪಟ್ಟಿರುವ ರೇವುಪಟ್ಟಣವು. ಇಲ್ಲಿ ಮನೆಗಳ ಮಗ್ಗುಲಲ್ಲಿಯೇ ರಸ್ತೆಗಳಿಗೆ ಬದಲಾಗಿ ಕಾಲುವೆಗಳಿರುವುವು. ಜನರು ಗಾಡಿಗಳಿಗೆ ಬದಲಾಗಿ ದೋಣಿಗಳನ್ನು ಉಪಯೋಗಿಸುವರು. ಇದು ಜಿನೋವದಂತೆಯೇ ಹಿಂದೆ ವ್ಯಾಪಾರಕ್ಕೆ ಬಹು ಪ್ರಸಿದ್ಧವಾಗಿತ್ತು. ಈಗಲೂ ಇಲ್ಲಿ ಸ್ವಲ್ಪ ಮಟ್ಟಿಗೆ ವ್ಯಾಪಾರವು ನಡೆಯುವುದು. ಇದರ ಹಿಂದೆ ಫಲವತ್ತಾದ ಮೈದಾನವಿರುವುದು. ಜರತಾರಿಯನ್ನೂ ಗಾಜಿನ ಸಾಮಾನುಗಳನ್ನೂ ಇಲ್ಲಿ ತಯಾರುಮಾಡುವರು.

**ಬ್ರಿಂಡಿಸಿ.**—ಇಂಗ್ಲೆಂಡಿನಿಂದ ಇಂಡಿಯಾದೇಶಕ್ಕೆ ಹೋಗುವ ಟಪಾಲು ರೈಲುಮಾರ್ಗವು ಇಲ್ಲಿಗೆ ಬಂದು ಸೇರುವುದು. ಇಲ್ಲಿಂದ ಬೊಂಬಾಯಿಗೆ ಹಡಗುಗಳು ಹೊರಡುವುವು.

**ಮೇಲ್ಮೈಯ್ಯ ಲಕ್ಷಣ.**—ಈ ದೇಶದ ಉತ್ತರಭಾಗದಲ್ಲಿ ಪೋ ಮತ್ತು ಅದರ ಉಪನದಿಗಳು ಹಿಮಪೂರಿತಗಳಾಗಿ ನಿಧಾನವಾಗಿ ಹರಿಯುವ ಬಹು ಫಲ

ವತ್ತಾದ ವಿಸ್ತಾರವಾದ ಮೈದಾನವಿರುವುದು. ದಕ್ಷಿಣಭಾಗದಲ್ಲಿ ಅಪೆನೈನ್ ಬೆಟ್ಟಗಳು ಉತ್ತರ ದಕ್ಷಿಣವಾಗಿ ಹಬ್ಬಿರುವುವು. ಈ ಬೆಟ್ಟಗಳ ಪಙ್ಕ್ತಿಗೂ ಪೂರ್ವ ಪಶ್ಚಿಮ ತೀರಗಳಿಗೂ ನಡುವೆ ಮೈದಾನಗಳಿರುವುವು. ಪಶ್ಚಿಮತೀರದ ಮೈದಾನವು ಪೂರ್ವತೀರದ ಮೈದಾನಕ್ಕಿಂತ ಅಗಲವಾಗಿದ್ದರೂ, ಜೌಗು ಪ್ರದೇಶವಾಗಿ ಬಹು ಅನಾರೋಗ್ಯಕರವಾಗಿರುವುದು. ಸಿಸಿಲಿ, ಸಾರ್ಡಿನಿಯ ದ್ವೀಪಗಳು ಪರ್ವತಗಳಿಂದ ಕೂಡಿದ ಪ್ರಸ್ಥಭೂಮಿಗಳಾಗಿವೆ. ವಿಸೂವಿಯಸ್, ಲಿಪಾರಿ ದ್ವೀಪಗಳಲ್ಲಿರುವ ಸ್ಟ್ರಾಂಬೊಲಿ, ಸಿಸಿಲಿಯಲ್ಲಿರುವ ಎಟ್ನ ಇವು ಈ ದೇಶದಲ್ಲಿರುವ ಅಗ್ನಿಪರ್ವತಗಳು.

**ನದಿಗಳು ಮತ್ತು ಸರೋವರಗಳು.**—ಪೋ ನದಿಯು ಈ ದೇಶದ ಮುಖ್ಯವಾದ ನದಿಯು. ಇದರ ಉಪನದಿಗಳಲ್ಲಿ ಟಿಕಿನೊ ಎಂಬುದು ದೊಡ್ಡದು. ಇವುಗಳಿಗೆ ಆಲ್ಪ್ಸ ಪರ್ವತಗಳ ಹಿಮದಿಂದಲೂ, ಅಪೆನೈನ್ ಬೆಟ್ಟಗಳ ಮಳೆಯಿಂದಲೂ ಹೆಚ್ಚಾಗಿ ನೀರು ಬರುವುದರಿಂದ ಗಂಗಾ, ಯಮುನೆಗಳಂತೆ ಸದಾ ತುಂಬಿ ಹರಿಯುವುವು. ಅಡೀಜ್, ಟೈಬರ್ ಮೊದಲಾದ ಇತರ ನದಿಗಳು ವ್ಯವಸಾಯಕ್ಕೆ ಉಪಯೋಗವಾಗಿವೆ. ಗಾರ್ಡ, ಮಾಗಿಯೋರ್, ಕೋಮೊ ಇವು ಮುಖ್ಯವಾದ ಸರೋವರಗಳು. ಈ ಆಲ್ಪ್ಸ ಪರ್ವತಗಳ ಸರೋವರಗಳ ಲಕ್ಷಣಗಳನ್ನು ಹಿಂದೆಯೇ ವಿವರಿಸಿದೆ.

**ವಾಯುಗುಣ, ಸಸ್ಯಗಳು ಮತ್ತು ಪ್ರಾಣಿಗಳು.**—ಸಮುದ್ರವು ದೂರವಾಗಿರುವುದರಿಂದಲೂ, ದಕ್ಷಿಣದಿಕ್ಕಿನಿಂದ ಆಫ್ರಿಕದ ಉಷ್ಣಮಾರುತಗಳು ಬೀಸುವುದರಿಂದಲೂ ಉತ್ತರ ಭಾಗದ ಮೈದಾನದಲ್ಲಿ ಶೀತೋಷ್ಣಗಳ ವ್ಯತ್ಯಾಸವು ಹೆಚ್ಚಾಗಿರುವುದು. ಪೋ ನದಿಯ ಬೈಲುಗಳಲ್ಲಿ ಬತ್ತವೂ, ಇತರ ಭಾಗಗಳಲ್ಲಿ ಗೋಧಿ, ಮುಸುಕಿನ ಜೋಳ, ದ್ರಾಕ್ಷೆಯ ಬಳ್ಳಿ, ಸೀಮೆಯ ಹಿಪ್ಪೆ, ಹಿಪ್ಪಲಿ ನೇರಿಳೆಗಳೂ ಬೆಳೆಯುವುವು. ಸಮುದ್ರ ತೀರದಲ್ಲಿ ಕಿತ್ತಿಳೆ, ನಿಂಬೆಹಣ್ಣುಗಳೂ, ದಕ್ಷಿಣ ಕೊನೆಯಲ್ಲಿ ಕಬ್ಬು ಬೆಳೆಯುತ್ತವೆ. ಪರ್ವತ ಪ್ರದೇಶಗಳಲ್ಲಿ ಕೆಲವು ಕಾಡುಗಳಿವೆ. ಸೀಮೆಯ ಹಿಪ್ಪೆ ಹಣ್ಣುಗಳನ್ನು ಗಾಣದಲ್ಲಿ ಆಡಿಸಿ ಎಣ್ಣೆಯನ್ನು ತೆಗೆಯುವರು. ಹಿಂಡಿಯನ್ನು ದನಗಳಿಗೆ ಹಾಕುವರು. ಕಾಯಿಗಳನ್ನು ಉಪ್ಪು ನೀರಿನಲ್ಲಿ ನೆನೆಹಾಕಿ ತಿನ್ನುವರು.

ಪರ್ವತಪ್ರದೇಶಗಳಲ್ಲಿ ಕುರಿಗಳು ವಿಶೇಷವಾಗಿರುವುವು. ನೇಪಲ್ಸಿನಲ್ಲಿ ಇವುಗಳ ನರಗಳಿಂದ ಪಿಟೀಲಿನ ತಂತಿಗಳನ್ನೂ ಮಾಡುವರು. ಟ್ಯೂರಿನ್ ಪಟ್ಟಣದಲ್ಲಿ ಉಣ್ಣೆಯ ಬಟ್ಟೆಗಳು ತಯಾರಾಗುವುವು. ಮೈದಾನಪ್ರದೇಶಗಳಲ್ಲಿ ದನಗಳನ್ನು ಹೆಚ್ಚಾಗಿ ಸಾಕುವರು. ಕೃಷಿಗೆ ದನಗಳನ್ನೂ, ಸಾಮಾನು ಹೊರುವುದಕ್ಕೆ ಹೇಸರ ಕತ್ತೆಗಳನ್ನೂ, ತಟ್ಟುಗಳನ್ನೂ ಈ ದೇಶದಲ್ಲಿ ಉಪಯೋಗಿಸುತ್ತಾರೆ.

ಲೋಂಬಾರ್ಡಿ ಮೈದಾನದಲ್ಲಿ ರೇಷ್ಮೆ ಹುಳುಗಳನ್ನು ಸಾಕುವರು. ಮೈಲಾನ್ ಪಟ್ಟಣದಲ್ಲಿ ರೇಷ್ಮೆಯ ದಾರದಿಂದ ಬಟ್ಟೆಗಳನ್ನು ನೇಯುವರು.

**ಖನಿಜಗಳು ಮತ್ತು ಕೈಗಾರಿಕೆಗಳು.**—ಈ ದೇಶದಲ್ಲಿ ಕಲ್ಲಿದ್ದಲು ದೊರೆಯದಿರುವುದು ದೊಡ್ಡ ಕೊರತೆಯು. ಆದರೆ ನೀರಿನ ಶಕ್ತಿಯನ್ನು ಕೈಗಾರಿಕೆಗೆ ಉಪಯೋಗಿಸುವರು. ಈ ದೇಶದಲ್ಲಿ ಗಂಧಕ, ಉಪ್ಪು, ಅಮೃತಶಿಲೆಗಳು ಹೇರಳವಾಗಿ ಸಿಕ್ಕುವುವು. ವ್ಯವಸಾಯವೂ, ರೇಷ್ಮೆಹುಳುಗಳನ್ನು ಸಾಕುವುದೂ ಈ ದೇಶದ ಜನರ ಮುಖ್ಯವಾದ ಉದ್ಯೋಗಗಳಾಗಿವೆ. ಕಲ್ಲಿದ್ದಲು ಕಬ್ಬಿಣಗಳು ಬಹು ಕಡಿಮೆಯಾಗಿರುವುದರಿಂದ ಕೈಗಾರಿಕೆಗಳೂ ಬಹು ಕಡಿಮೆ. ನೂಲಿನ ಬಟ್ಟೆ, ಕಬ್ಬಿಣದ ಸಾಮಾನು, ಮಣ್ಣಿನ ಪಾತ್ರೆ ಇವುಗಳು ಸ್ವಲ್ಪ ಮಟ್ಟಿಗೆ ತಯಾರಾಗುವುವು.

**ವ್ಯಾಪಾರ.**—ಈ ದೇಶದಲ್ಲಿ ರೈಲುಮಾರ್ಗಗಳು ಹೇರಳವಾಗಿವೆ. ಉತ್ತರ ಭಾಗದಲ್ಲಿ ನದಿಗಳೂ, ಕಾಲುವೆಗಳೂ ಉತ್ತಮವಾದ ಜಲಮಾರ್ಗಗಳಾಗಿವೆ. ಸೂಯಿಸ್ ಕಾಲುವೆಯನ್ನು ಮಾಡಿದ ಮೇಲೆ ಈ ದೇಶದಲ್ಲಿ ಪರದೇಶದ ಸಂಗಡ ವ್ಯಾಪಾರವು ಹೆಚ್ಚುತ್ತಲಿದೆ. ಆದರೆ ಈಗಲೂ ಈ ದೇಶದ ವ್ಯಾಪಾರವು ಫ್ರಾನ್ಸಿನೊಡನೆ ನಡೆಯುವಷ್ಟು ಮತ್ತಾವ ದೇಶದೊಡನೆಯೂ ನಡೆಯುವುದಿಲ್ಲ. ಈ ದೇಶದವರು ರೇಷ್ಮೆಯದಾರ ಮತ್ತು ಬಟ್ಟೆಗಳು, ಹಿಪ್ಪೆಯೆಣ್ಣೆ, ವೈನುಗಳನ್ನು ರಫ್ತುಮಾಡುವರು. ಧಾನ್ಯ, ಹತ್ತಿ, ಕಬ್ಬಿಣಗಳನ್ನು ತರಿಸಿಕೊಳ್ಳುವರು.

**ಜನಗಳು ಮತ್ತು ರಾಜ್ಯಭಾರ.**—ಈ ದೇಶದಲ್ಲಿ ಜನಸಾಂದ್ರತೆಯು ಹೆಚ್ಚಾಗಿರುವುದು. 1 ಚ. ಮೈ. ಗೆ. 260 ಜನರಿರುವರು. ಕೈಗಾರಿಕೆ, ವ್ಯಾಪಾರಗಳು ಹಿಂದಾಗಿರುವುದರಿಂದ ಈ ದೇಶದ ಜನರು ಯೂರೋಪಿನಲ್ಲಿ ಬಹು ಬಡವರು. ಆದರೆ ಇವರು ಬಹು ಮರ್ಯಾದೆಯುಳ್ಳವರಾಗಿಯೂ, ಕಷ್ಟಪಟ್ಟು ಕೆಲಸಮಾಡುವವರಾಗಿಯೂ, ದೇಶಾಭಿಮಾನಿಗಳಾಗಿಯೂ ಇರುವರು. ಪ್ರೌಢ ವಿದ್ಯಾಭ್ಯಾಸಕ್ಕೆ 21 ವಿಶ್ವವಿದ್ಯಾಲಯಗಳಿರುವುವು. ಪ್ರಾಥಮಿಕ ವಿದ್ಯಾಭ್ಯಾಸವು ಕಡಿಮೆ. ಇಟಾಲಿಯನ್ ಭಾಷೆಯು ಬಹು ಲಲಿತವಾದುದು. ಸಾಂಕುಶ ಪ್ರಭುತ್ವವು ಈ ದೇಶದಲ್ಲಿ ನೆಲೆಗೊಂಡಿದೆ. ಈ ದೇಶದ ರಾಜಧಾನಿಯು **ರೋಮ್.** ಇದು ಟೈಬರ್ ನದಿಯ ತೀರದಲ್ಲಿರುವುದು. ಈ ನದಿಯು ಹಡಗಿನ ಸಂಚಾರಕ್ಕೆ ಅನುಕೂಲವಾಗಿಲ್ಲದುದರಿಂದ ಈ ಪಟ್ಟಣದಲ್ಲಿ ವ್ಯಾಪಾರವು ಬಹಳ ಕಡಿಮೆ. ಇದು ರೋಮನ್ ಕ್ಯಾಥೋಲಿಕ್ ಪಂಗಡದ ಕ್ರೈಸ್ತರಿಗೆ ಪರಮಗುರುವಾದ ಪೋಪ್‌ರವರ ವಾಸಸ್ಥಳವಾಗಿದೆ. ಹಿಂದೆ ಬಹು ಪ್ರಸಿದ್ಧಿಹೊಂದಿದ್ದ ರೋಮನ್ ಚಕ್ರಾಧಿಪತ್ಯಕ್ಕೆ ಇದು ಮುಖ್ಯ ಪಟ್ಟಣವಾಗಿತ್ತು. ಆದುದರಿಂದ ಪುರಾತನ ಕಾಲದ ಕಟ್ಟಡಗಳ ಚಿತ್ರಗಳೂ, ಪ್ರತಿಮೆಗಳೂ ಹೇರಳವಾಗಿವೆ. **ಪೋಪ್**

ರವರು ವಾಸಮಾಡುವ ವಾಟಿಕನ್ ಎಂಬ ಕಟ್ಟಡವು ಪ್ರಪಂಚದಲ್ಲೆಲ್ಲಾ ಅತ್ಯಂತ ವಿಸ್ತಾರವಾದ ಅರಮನೆಯು. ಸೆಂಟ್‌ಪೀಟರ್ ದೇವಾಲಯವು ಪ್ರಪಂಚದಲ್ಲೆಲ್ಲಾ ಅತ್ಯಂತ ದೊಡ್ಡ ದೇವಾಲಯವಾಗಿದೆ. ಈ ಪಟ್ಟಣದಲ್ಲಿ 3 ಲಕ್ಷ ಜನರು ವಾಸಮಾಡುವರು.

---

## ಇತರ ದೇಶಗಳು

**ಹಾಲೆಂಡ್ ಮತ್ತು ಬೆಲ್ಜಿಯಂ.**—ಈ ಎರಡು ಸಣ್ಣ ದೇಶಗಳು ಯುರೋಪಿನ ದೊಡ್ಡ ಮೈದಾನದ ಪಶ್ಚಿಮದ ಕೊನೆಯಲ್ಲಿವೆ. ಇವು ಸಣ್ಣ ಸಣ್ಣ ರಾಜ್ಯಗಳಾದರೂ, ಹಾಲೆಂಡು ದೇಶವು ವ್ಯಾಪಾರಕ್ಕೂ, ಬೆಲ್ಜಿಯಂ ದೇಶವು ಕೈಗಾರಿಕೆ, ಜನಸಾಂದ್ರತೆಗಳಿಗೂ ಪ್ರಸಿದ್ಧವಾಗಿವೆ. ಹಾಲೆಂಡ್ ದೇಶದ ಜನರು ಅಥವಾ ಡಚ್ಚರು 17 ನೆಯ ಶತಮಾನದಲ್ಲಿ ವಿಶೇಷ ವ್ಯಾಪಾರವನ್ನು ನಡೆಯಿಸುತ್ತಿದ್ದರು. ಈಗಲೂ ಅನೇಕ ಹಡಗುಗಳನ್ನಿಟ್ಟುಕೊಂಡು ಇತರ ದೇಶಗಳ ವ್ಯಾಪಾರದ ಸರಕುಗಳನ್ನು ಸಾಗಿಸುವರು. ಬೆಲ್ಜಿಯಂ ದೇಶದಲ್ಲಿ ಕಲ್ಲಿದ್ದಲು, ಕಬ್ಬಿಣಗಳು ಹೇರಳವಾಗಿ ದೊರೆಯುವುದರಿಂದ ಕಬ್ಬಿಣದ ಸಾಮಾನುಗಳನ್ನೂ, ಬಟ್ಟೆಗಳನ್ನೂ ವಿಶೇಷವಾಗಿ ತಯಾರುಮಾಡುವರು. ಅನೇಕ ಪಟ್ಟಣಗಳು ಒತ್ತೊತ್ತಾಗಿರುವುದರಿಂದ ಈ ದೇಶದಲ್ಲಿರುವಷ್ಟು ಜನಸಾಂದ್ರತೆಯು ಈ ಖಂಡದ ಇನ್ನಾವ ದೇಶದಲ್ಲಿಯೂ ಇಲ್ಲ. ಹೇಗ್ ಎಂಬ ಪಟ್ಟಣವು ಹಾಲೆಂಡಿಗೂ, ಬ್ರುಸೆಲ್ ಎಂಬ ಪಟ್ಟಣವು ಬೆಲ್ಜಿಯಮ್ಮಿಗೂ ರಾಜಧಾನಿಗಳಾಗಿವೆ. ಆದರೆ ರಾಟರ್‌ಡಾಂ ಮತ್ತು ಆಂಟ್‌ವರ್ಪ್ ಎಂಬುವು ಬಹು ಪ್ರಸಿದ್ಧವಾದ ಪಟ್ಟಣಗಳು. ರಾಟರ್‌ಡಾಂ ಎಂಬುದು ರೈನ್ ನದಿಯ ಒಂದು ಮುಖದಲ್ಲಿರುವ ಹಾಲೆಂಡಿನ ಮುಖ್ಯವಾದ ರೇವುಪಟ್ಟಣವು. ಇಲ್ಲಿಂದ ಸಮುದ್ರಕ್ಕೆ ಸಮುದ್ರದ ಕಾಲುವೆಯನ್ನು ಮಾಡಿ ಭಾರಿ ಹಡಗುಗಳ ಸಂಚಾರಕ್ಕೆ ಅನುಕೂಲಪಡಿಸಿರುವರು. ಆಂಟ್‌ವರ್ಪ್ ಎಂಬುದು ಷೆಡಲ್ಟ್ ನದಿಯ ಮುಖದಲ್ಲಿರುವ ಉತ್ತಮವಾದ ಬಂದರು. ಇದು ಯುರೋಪಿನ ಮುಖ್ಯವಾದ ರೇವು ಪಟ್ಟಣಗಳಲ್ಲಿ ಒಂದಾಗಿದೆ. ಬೆಲ್ಜಿಯಂ ದೇಶದ ವ್ಯಾಪಾರದಲ್ಲ ಮುಖ್ಯ ಭಾಗವು ಈ ಪಟ್ಟಣದ ಮೂಲಕ ನಡೆಯುವುದು.

**ಸ್ವಿಟ್ಜರ್ಲೆಂಡ್.**—ಇದು ಪರ್ವತಮಯವಾಗಿರುವ ಸಣ್ಣ ದೇಶವು. ಆದರೂ ಇದು ಈ ಖಂಡದ ಮಧ್ಯಭಾಗದಲ್ಲಿರುವುದರಿಂದಲೂ, ಪರ್ವತಗಳಿಂದ ಹರಿಯುವ ಅನೇಕ ಸಣ್ಣ ಸಣ್ಣ ಹೊಳೆಗಳಿಂದ ಕೈಗಾರಿಕೆಗೆ ನೀರಿನ ಶಕ್ತಿಯು ಒದಗುವುದರಿಂದಲೂ, ಕೈಗಾರಿಕೆಗಳಿಗೆ ಪ್ರಸಿದ್ಧವಾಗಿವೆ. ಇಲ್ಲಿ ಜಿನೀವ ಎಂಬ ಪಟ್ಟಣದಲ್ಲಿ ಗಡಿಯಾರಗಳನ್ನೂ, ಜ್ಯೂರಿಚ್‌ನಲ್ಲಿ ರೇಷ್ಮೆಯ ಮತ್ತು ಹತ್ತಿಯ

ಬಟ್ಟೆಗಳನ್ನೂ ತಯಾರು ಮಾಡುವರು. ಆಲ್ಪ್ಸ್ ಪರ್ವತಗಳನ್ನೂ, ಅವುಗಳಲ್ಲಿರುವ ಸರೋವರಗಳನ್ನೂ, ಅಲ್ಲಿ ಹುಟ್ಟುವ ನದಿಗಳನ್ನೂ ನೋಡುವುದಕ್ಕೆ ಈ ದೇಶಕ್ಕೆ ಪ್ರತಿವರ್ಷವೂ ಲಕ್ಷಾಂತರ ಜನರು ಬರುವರು.

**ನಾರ್ವೆ ಮತ್ತು ಸ್ವೀಡನ್.**—ಇವು ಸ್ಕಾಂಡಿನೇವಿಯ ಪರ್ಯಾಯದ್ವೀಪದಲ್ಲಿರುವ ಎರಡು ರಾಜ್ಯಗಳು. ಇಲ್ಲಿ ಕಾಡುಗಳು ವಿಶೇಷವಾಗಿವೆ. ನಾರ್ವೆಯವರು ಹಡಗುಗಳನ್ನು ಕಟ್ಟಿ ಮೀನು ಹಿಡಿಯುವುದೂ, ವ್ಯಾಪಾರಮಾಡುವುದೂ ಹೆಚ್ಚು. ಸ್ವೀಡನ್ನಿನವರು ಖನಿಜಗಳನ್ನು ತೆಗೆಯುವುದೂ, ದೀಪದಕಡ್ಡಿ ಮೊದಲಾದ ಸಾಮಾನುಗಳನ್ನು ಮಾಡುವುದೂ ಹೆಚ್ಚು. ಕ್ರಿಶ್ಚಿಯಾನ ಎಂಬ ಪಟ್ಟಣವು ನಾರ್ವೆಗೆ ರಾಜಧಾನಿ. ಸ್ಟಾಕೋಂ ಎಂಬ ಪಟ್ಟಣವು ಸ್ವೀಡನ್ನಿಗೆ ರಾಜಧಾನಿ. ಇವು ರೇವುಪಟ್ಟಣಗಳಾಗಿಯೂ ಇವೆ.

**ಡೆನ್ಮಾರ್ಕ್.**—ಇದು ಜಟ್ಲೆಂಡ್ ಪರ್ಯಾಯದ್ವೀಪವನ್ನೂ, ಕೆಲವು ಸಣ್ಣ ದ್ವೀಪಗಳನ್ನೂ ಒಳಗೊಂಡಿರುವ ಸಣ್ಣ ರಾಜ್ಯವು. ಇಲ್ಲಿ ದನಗಳನ್ನು ಸಾಕಿ ಗಿಣ್ಣು ಬೆಣ್ಣೆಗಳನ್ನು ರಫ್ತುಮಾಡುವುದು ಹೆಚ್ಚು. ಕೋಪನ್‌ಹೇಗನ್ ಎಂಬುದು ಈ ದೇಶದ ರಾಜಧಾನಿಯಾಗಿಯೂ, ರೇವುಪಟ್ಟಣವಾಗಿಯೂ ಇದೆ.

**ಐಬೀರಿಯನ್ ಪರ್ಯಾಯದ್ವೀಪ.**—ಈ ಪರ್ಯಾಯದ್ವೀಪದಲ್ಲಿ **ಪೋರ್ಚುಗಲ್, ಸ್ಪೇನ್** ಎಂಬ ಎರಡು ರಾಜ್ಯಗಳಿವೆ. ಪೋರ್ಚುಗಲ್ಲಿನಲ್ಲಿ ಮಳೆ ಬೀಳುವುದು ಹೆಚ್ಚು. ಆದುದರಿಂದ ಅನೇಕ ಕಾಡುಗಳಿವೆ. ಚೆನ್ನಾಗಿ ವ್ಯವಸಾಯವು ನಡೆಯುವುದು. ಇಲ್ಲಿ ತಕ್ಕಮಟ್ಟಿಗೆ ವ್ಯಾಪಾರವು ನಡೆಯುವುದು. ಸ್ಪೇನ್ ದೇಶವು ಪ್ರಸ್ಥಭೂಮಿಯಾಗಿದೆ. ಮಳೆ ಕಡಿಮೆ. ಪಶುಪಾಲನೆ, ವ್ಯವಸಾಯಗಳು ಇಲ್ಲಿ ಮುಖ್ಯವಾದ ಕಸಬುಗಳಾಗಿವೆ. ಲಿಸ್ಬನ್ ಎಂಬ ಪಟ್ಟಣವು ಟೇಗಸ್ ನದಿಯ ಮುಖದಲ್ಲಿರುವುದು. ಇದು ಪೋರ್ಚುಗಲ್ ದೇಶದ ಮುಖ್ಯ ಪಟ್ಟಣವು ಮತ್ತು ಮುಖ್ಯವಾದ ರೇವುಪಟ್ಟಣವು. ಟೇಗಸ್ ನದಿಯು ಮಾರ್ಗವಾಗಿಯೂ, ಒಂದು ರೈಲು ರಸ್ತೆಯ ಮಾರ್ಗವಾಗಿಯೂ ಒಳಭಾಗದೊಡನೆ ವ್ಯಾಪಾರವು ನಡೆಯುವುದು. ಕಾನ್‌ಸ್ಟಾಂಟಿನೋಪಲ್‌ನಂತೆ ಹೊರಗಿನಿಂದ ನೋಡುವುದಕ್ಕೆ ಬಹು ಸುಂದರವಾದ ಪಟ್ಟಣಗಳಲ್ಲಿ ಇದು ಒಂದಾಗಿದೆ. ಮೆಡ್ರಿಡ್ ಎಂಬುದು ಸ್ಪೇನಿಗೆ ಮುಖ್ಯ ಪಟ್ಟಣ; ಅನೇಕ ರೈಲುಮಾರ್ಗಗಳು ಸೇರುವ ಸ್ಥಳ. 5 ಲಕ್ಷ ಜನರು ವಾಸಮಾಡುವರು. ಇಲ್ಲಿ ಶೀತೋಷ್ಣಗಳ ವ್ಯತ್ಯಾಸವು ವಿಪರೀತವಾಗಿರುವುದರಿಂದ ಇಲ್ಲಿ ವಾಸಮಾಡುವುದನ್ನು ಮೂರು ತಿಂಗಳು ಹಿಮದ ಮನೆಯಲ್ಲಿಯೂ, ಒಂಭತ್ತು ತಿಂಗಳು ಬೆಂಕಿಯ ಮನೆಯಲ್ಲಿಯೂ ವಾಸಮಾಡುವುದು ಎಂದು ವರ್ಣಿಸಿರುವರು. ಬಾರ್ಸಿಲೋನ ಎಂಬ ಪಟ್ಟಣವು ಮೆಡಿಟರೇನಿಯನ್ ಸಮುದ್ರ ತೀರದಲ್ಲಿರುವುದು. ಇದರ ಬಂದರು

ಸ್ಪೇನ್ ದೇಶದಲ್ಲಿ ಅತ್ಯುತ್ತಮವಾದುದು. ಇದು ಈ ದೇಶದ ಮುಖ್ಯ ರೇವು ಪಟ್ಟಣವಾಗಿಯೂ, ಮುಖ್ಯ ಕೈಗಾರಿಕೆಯ ಪಟ್ಟಣವಾಗಿಯೂ ಇದೆ. ಇಲ್ಲಿ ವಿಶೇಷವಾಗಿ ಹತ್ತಿಯ ಬಟ್ಟೆಗಳು ತಯಾರಾಗುವುವು.

**ಬಾಲ್ಕನ್ ಪರ್ಯಾಯದ್ವೀಪ.**—ಇದು ಪರ್ವತಮಯವಾಗಿರುವ ಪರ್ಯಾಯ ದ್ವೀಪವು. ಇಲ್ಲಿ ಪರ್ವತ ಪಙ್ಕ್ತಿಗಳಿಂದ ಪ್ರತ್ಯೇಕಿಸಲ್ಪಟ್ಟ ಅನೇಕ ಚಿಕ್ಕ ಚಿಕ್ಕ ಸಂಸ್ಥಾನಗಳಿರುವುವು.

ಟರ್ಕೀ ದೇಶವು ಮಹಮ್ಮದೀಯ ಸುಲ್ತಾನರಿಂದ ಆಳಲ್ಪಟ್ಟಿದೆ. ಕಾನ್ ಸ್ಟಾಂಟಿನೋಪಲ್ ಎಂಬುದು ಮುಖ್ಯ ಪಟ್ಟಣ. ಇದರ ಬಂದರು ಪ್ರಪಂಚದಲ್ಲಿ ಬಹಳ ಉತ್ತಮವಾದುವುಗಳಲ್ಲಿ ಒಂದಾಗಿದೆ. ಬಾಸ್ಫೊರಸ್ ಜಲಸಂಧಿಯ ಬಳಿ ಇದರ ಸನ್ನಿವೇಶವು ವ್ಯಾಪಾರಾಭಿವೃದ್ಧಿಗೆ ಬಹಳ ಸಹಾಯವಾಗಿದೆ. ಇಲ್ಲಿ ಬಲವಾದ ಕೋಟೆಯೂ ಇದೆ. ಈ ಪಟ್ಟಣದಲ್ಲಿ ಅನೇಕ ಮಸೀದಿಗಳೂ, ಸೌಧ ಗಳೂ ಇರುವುದರಿಂದ ಹೊರಕ್ಕೆ ಬಹಳ ಸುಂದರವಾಗಿ ಕಾಣುವುದು. ಆದರೆ ಪಟ್ಟಣದೊಳಗೆ ಕಲ್ಮಷವು ಬಹಳ ಹೆಚ್ಚಾಗಿರುವುದು. ಇಲ್ಲಿ 9 ಲಕ್ಷ ಜನರು ವಾಸಮಾಡುವರು.

ಗ್ರೀಸ್ ದೇಶದಲ್ಲಿ ಸಮುದ್ರತೀರವು ಬಹಳ ಉದ್ದವಾಗಿರುವುದರಿಂದ ಗ್ರೀಕರು ವ್ಯಾಪಾರದಲ್ಲಿ ಗಟ್ಟಿಗರಾಗಿರುವರು. ಅಥೆನ್ಸ್ ಎಂಬುದು ಮುಖ್ಯ ವಾದ ರೇವುಪಟ್ಟಣ ಮತ್ತು ರಾಜಧಾನಿಯು.

ರೊಮೇನಿಯ, ಸರ್ವಿಯ, ಮಾಂಟೆನಿಗ್ರೊ, ಬಲ್ಗೇರಿಯ ಎಂಬುವು ಈ ಪರ್ಯಾಯದ್ವೀಪದಲ್ಲಿರುವ ಇತರ ರಾಜ್ಯಗಳು.

---

## ಆಫ್ರಿಕಾ ಖಂಡ

## ಸಾಮಾನ್ಯ ವಿವರಣೆ

**ಮೇರೆಗಳು, ಸನ್ನಿವೇಶ ಮತ್ತು ವಿಸ್ತೀರ್ಣ.**—ಆಫ್ರಿಕಾ ಖಂಡವನ್ನು ಏಷ್ಯಾ ಖಂಡಕ್ಕೆ ಸೇರಿದ ದೊಡ್ಡ ಪರ್ಯಾಯದ್ವೀಪವೆನ್ನಬಹುದು. ಈಶಾನ್ಯ ದಲ್ಲಿರುವ ಇಕ್ಕಟ್ಟಾದ ಸೂಯೆಸ್ ಭೂಕಂಠವು ಏಷ್ಯಾಖಂಡದ ಪಶ್ಚಿಮಭಾಗ ವನ್ನೂ, ಆಫ್ರಿಕದ ಉತ್ತರಭಾಗವನ್ನೂ ಕೂಡಿಸಿದೆ. ಆದರೆ ಇದರ ಮಧ್ಯದಲ್ಲಿ ಸಮುದ್ರದ ಕಾಲುವೆಯೊಂದನ್ನು ಮಾಡಿರುವುದರಿಂದ ಆಫ್ರಿಕಾ ಖಂಡವನ್ನು ದ್ವೀಪವೆಂದು ಎಣಿಸಿದರೂ ತಪ್ಪೆನ್ನಲಾಗದು.

ಈ ಖಂಡದ ಪಶ್ಚಿಮದಲ್ಲಿ ಅಟ್ಲಾಂಟಿಕ್ ಸಾಗರವೂ, ಪೂರ್ವದಲ್ಲಿ ಹಿಂದೂ ಸಾಗರವೂ ವಿಸ್ತಾರವಾಗಿ ಪ್ರಸರಿಸಿರುವುವು. ಉತ್ತರದಲ್ಲಿ ಮೆಡಿಟರೇನಿಯನ್ ಸಮುದ್ರವೂ, ಪೂರ್ವದಲ್ಲಿ ಕೆಂಪು ಸಮುದ್ರವೂ ಈ ಖಂಡಕ್ಕೆ ಮೇರೆಗಳಾಗಿ

ರುವುವು. ಮೆಡಿಟರೇನಿಯನ್ ಸಮುದ್ರದ ಪಶ್ಚಿಮದ ಕೊನೆಯಲ್ಲಿರುವ ಜಿಬ್ರಾಲ್ಟರ್ ಜಲಸಂಧಿಯು 9 ಮೈಲಿಗಳಷ್ಟು ಮಾತ್ರವೇ ಅಗಲವಾಗಿರುವುದರಿಂದ ಯುರೋಪ್ ಖಂಡದ ದಕ್ಷಿಣದಲ್ಲಿರುವ ಸ್ಪೇನ್ ದೇಶವು ಆಫ್ರಿಕದ ಉತ್ತರ ತೀರಕ್ಕೆ ಅತಿ ಸಮೀಪದಲ್ಲಿರುವುದು. ಇಟಲಿ, ಗ್ರೀಸ್‌ಗಳ ದಕ್ಷಿಣದಲ್ಲಿಯೂ ಈ ಎರಡು ಖಂಡಗಳು ಒಂದಕ್ಕೊಂದು ಸಮೀಪವಾಗಿರುವುವು. ಕೆಂಪು ಸಮುದ್ರವು ಅಗಲದಲ್ಲಿ ಬಹಳ ಕಡಿಮೆ. ಕೆಂಪು ಸಮುದ್ರವನ್ನೂ ಹಿಂದೂ ಸಾಗರವನ್ನೂ ಸೇರಿಸುವ ಬೇಬಲ್ಮಾಂಡಬ್ ಜಲಸಂಧಿಯು 14 ಮೈಲಿಗಳಷ್ಟು ಮಾತ್ರ ಅಗಲವಾಗಿರುವುದು. ಇಲ್ಲಿ ಆಫ್ರಿಕದ ಪೂರ್ವಭಾಗವೂ, ಅರೇಬಿಯವೂ ಬಹು ಸಮೀಪದಲ್ಲಿರುವುವು.

ಹೀಗಿರುವುದರಿಂದ ಯುರೋಪ್ ಏಷ್ಯಾ ಖಂಡಗಳಿಗೂ, ಆಫ್ರಿಕಾ ಖಂಡದ ಉತ್ತರಭಾಗಕ್ಕೂ ಪೂರ್ವ ಕಾಲದಿಂದಲೂ ವಿಶೇಷ ಬಳಕೆಯುಂಟು. ಆದರೂ ಆಫ್ರಿಕದ ಮಧ್ಯಭಾಗ, ದಕ್ಷಿಣ ಭಾಗಗಳು ಇತರ ಖಂಡದವರಿಗೆ ಚೆನ್ನಾಗಿ ಪರಿಚಿತವಾಗಿರಲಿಲ್ಲ. ಏಕೆಂದರೆ, ಈ ಖಂಡದ ಒಳಭಾಗದಲ್ಲಿ ಮರುಭೂಮಿಗಳೂ, ನಿಬಿಡವಾದ ಕಾಡುಗಳೂ ಇರುವುವು. ಇಲ್ಲಿನ ಜನರೂ ಇತರ ದೇಶದವರ ಸಂಬಂಧವಿಲ್ಲದೆ ಬಹು ಅನಾಗರಿಕರಾಗಿದ್ದರು. ಆದುದರಿಂದ ಈಗ ಸುಮಾರು 150 ವರ್ಷಗಳಿಂದೀಚೆಗೆ ಯುರೋಪಿಯನ್ನರು ಆ ಪ್ರದೇಶಗಳನ್ನೆಲ್ಲಾ ಕಂಡು ಹಿಡಿದು ಈ ಖಂಡಕ್ಕೆ 'ಅನಾಗರಿಕ ಖಂಡ' ಎಂಬ ಹೆಸರನ್ನು ಕೊಟ್ಟರು.

ವಿಸ್ತೀರ್ಣದಲ್ಲಿ ಈ ಖಂಡವು ಯುರೋಪ್ ಖಂಡಕ್ಕೆ ಮೂರರಷ್ಟಿರುವುದು. ಇಂಡಿಯಾದೇಶವು ಈ ಖಂಡದ $\frac{1}{8}$ ಭಾಗದಷ್ಟು ಮಾತ್ರ ವಿಸ್ತಾರವುಳ್ಳದು. ಈ ಖಂಡದ ವಿಸ್ತೀರ್ಣವು ಸುಮಾರು 5,15,00,000 ಚ. ಮೈ. ಗಳು. ವಿಸ್ತೀರ್ಣದಲ್ಲಿ ಇದು ಖಂಡಗಳೊಳಗೆ ಏಷ್ಯಾಕ್ಕೆ ಎರಡನೆಯದಾಗಿದೆ. ಈ ಖಂಡದ ಮಧ್ಯಭಾಗದಲ್ಲಿ ಸಮಭಾಜಕವೃತ್ತವು ಹಾದುಹೋಗುವುದು. ಆದರೆ ಉತ್ತರ ಭಾಗದಲ್ಲಿ ಖಂಡದ ಅಗಲವು ಹೆಚ್ಚಾಗಿರುವುದರಿಂದ ಉತ್ತರಾರ್ಧಗೋಳದಲ್ಲಿಯೇ ಈ ಖಂಡದ ಹೆಚ್ಚು ಭಾಗವು ಇರುವುದು. ಈ ಖಂಡವು ಉ. ಅ. 37 ಯಿಂದ ದ. ಅ. 34 ಗಳವರೆಗೆ ಪ್ರಸರಿಸಿರುವುದು. ಆದುದರಿಂದ ಅತ್ಯಂತ ಉತ್ತರ ದಕ್ಷಿಣ ಭಾಗಗಳು ಸಮಶೀತೋಷ್ಣವಲಯದಲ್ಲಿರುವುವು. ಉಳಿದ ಭಾಗವೆಲ್ಲವೂ ಉಷ್ಣವಲಯದಲ್ಲಿರುವುದು. ಆಕಾರದಲ್ಲಿಯೂ, ಸನ್ನಿವೇಶದಲ್ಲಿಯೂ ಈ ಖಂಡವು ದಕ್ಷಿಣ ಅಮೆರಿಕವನ್ನು ಸ್ವಲ್ಪ ಮಟ್ಟಿಗೆ ಹೋಲುವುದು.

**ತೀರಲಕ್ಷಣ.**—ಈ ಖಂಡದೊಳಕ್ಕೆ ಸಾಗರವು ಚಾಚಿಕೊಂಡು ಹೋಗಿರುವುದು ಬಹು ಸ್ವಲ್ಪವಾಗಿರುವುದರಿಂದ ತೀರದ ಅಳತೆ ಬಹಳ ಕಡಿಮೆಯಾಗಿದೆ. ವಿಸ್ತೀರ್ಣದಲ್ಲಿ ಆಫ್ರಿಕವು ಯುರೋಪಿನ 3ರಷ್ಟು ದೊಡ್ಡದಾಗಿದ್ದರೂ ಈ ಖಂಡದ

ತೀರದಳತೆಯು ಯೂರೋಪ್ ಖಂಡದ ತೀರದಳತೆಗಿಂತಲೂ ಕಡಿಮೆಯಾಗಿದೆ. ಯೂರೋಪಿನ ತೀರದಳತೆಯು ಸುಮಾರು 20,000 ಮೈಲಿಗಳು, ಆಫ್ರಿಕದ ತೀರದಳತೆಯು 16,000 ಮೈಲಿಗಳು. ಈ ಖಂಡದ ತೀರದಳತೆಯ ಸರಾಸರಿಯು 750 ಚ. ಮೈಲಿಗಳಿಗೆ 1 ಮೈಲಿಯು. ಖಂಡಗಳಲ್ಲೆಲ್ಲಾ ಈ ಖಂಡದ ತೀರದಳತೆಯ ಸರಾಸರಿಯೇ ಬಹಳ ಕಡಿಮೆಯಾದುದು. ಆದುದರಿಂದ ಈ ಖಂಡದ ಅನೇಕ ಭಾಗಗಳು ಸಾಗರಕ್ಕೆ 1,000 ಮೈಲಿಗಳಿಗೆ ಹೆಚ್ಚು ದೂರವಾಗಿವೆ.

ಉತ್ತರ ತೀರದಲ್ಲಿ ಕೇಬ್ಸ್ ಮತ್ತು ಸಿಡ್ರಾ ಎಂಬ ಸಮುದ್ರಶಾಖೆಗಳಿರುವುವು. ಈ ತೀರದಲ್ಲಿ ಆಲ್ಜಿಯರ್ಸ್ ಎಂಬುದೊಂದೇ ಉತ್ತಮವಾದ ರೇವು ಪಟ್ಟಣವು. ಟ್ಯೂನಿಸ್ಸಿಗೆ ಉತ್ತರದಲ್ಲಿರುವ ಬಾನ್‌ಭೂಶಿರವು ಈ ಖಂಡದ ಉತ್ತರದ ಕೊನೆಯು. ಪಶ್ಚಿಮದಲ್ಲಿ ಬ್ಲಾಂಕೊ, ವರ್ಡ್ ಮತ್ತು ಪಾಲ್ಮಾಸ್‌ಗಳೆಂಬ ಭೂಶಿರಗಳಿರುವುವು. ಈ ಭೂಶಿರಗಳ ಮಧ್ಯದಲ್ಲಿ ಉತ್ತಮವಾದ ಬಂದರಾವುದೂ ಇಲ್ಲ. ಪಾಲ್ಮಾಸ್ ಭೂಶಿರದ ಪೂರ್ವದಲ್ಲಿ ಗಿನೀ ಸಮುದ್ರಶಾಖೆ ಇರುವುದು. ಇದರ ತೀರದಲ್ಲಿ ಉತ್ತಮ ಬಂದರುಗಳಿಲ್ಲ. ಗಿನೀ ಸಮುದ್ರಶಾಖೆಯಿಂದ ದಕ್ಷಿಣಕ್ಕೆ ಹೋದರೆ ವಾಲ್ಫಿಷ್ ಮತ್ತು ಟೇಬಲ್ ಎಂಬ ಸಣ್ಣ ಕೊಲ್ಲಿಗಳು ಕಾಣಬರುವುವು. ಇವುಗಳಲ್ಲಿ ಉತ್ತಮವಾದ ಬಂದರುಗಳಿರುವುವು. ದಕ್ಷಿಣದಲ್ಲಿ ಗುಡ್‌ಹೋಪ್ ಎಂಬ ಭೂಶಿರವಿರುವುದು. ಪೂರ್ವತೀರದಲ್ಲಿ ಕೆಲವು ಸಣ್ಣ ಖಾರಿಗಳಿರುವುವು. ಇವುಗಳಲ್ಲಿ ತಕ್ಕಮಟ್ಟಿಗೆ ಅನುಕೂಲವಾಗಿರುವ ಬಂದರುಗಳಿರುವುವು. ಮಡಗಾಸ್ಕರ್ ದ್ವೀಪಕ್ಕೂ ಪೂರ್ವತೀರಕ್ಕೂ ಮಧ್ಯದಲ್ಲಿ ಆಳವಾದ ಮೊಜಾಂಬೀಕ್ ಕಡಲ್ಗಾಲುವೆಯಿರುವುದು. ಇದಕ್ಕೆ ಉತ್ತರದಲ್ಲಿ ತೀರದ ಸಮೀಪದಲ್ಲಿ ಜಾಂಜಿಬಾರ್ ಮತ್ತು ಪೆಂಬವೆಂಬ ಎರಡು ಸಣ್ಣ ದ್ವೀಪಗಳಿರುವುವು. ಏಡನ್‌ಖಾರಿಗೆ ಆಗ್ನೇಯದಲ್ಲಿರುವ ಗಾರ್ಡ್‌ಫೊಯಿಯೆಂಬ ಭೂಶಿರವು ಈ ಖಂಡದ ಪೂರ್ವದ ಕೊನೆಯು. ಏಡನ್‌ಖಾರಿಯಲ್ಲಿಯೂ, ಬೇಬಲ್ಮಾಂಡಬ್ ಜಲಸಂಧಿಯಲ್ಲಿಯೂ, ಕೆಂಪು ಸಮುದ್ರದಲ್ಲಿಯೂ ಉತ್ತಮವಾದ ಬಂದರುಗಳಿಲ್ಲ. ಆದರೂ ಸೂಯೆಜ್ ಕಾಲುವೆಯು ತಯಾರಾದ ಮೇಲೆ ಇಂಡಿಯಾ, ಚೀಣ, ಆಸ್ಟ್ರೇಲಿಯಗಳಿಗೂ, ಯೂರೋಪಿಗೂ ನಡೆಯುವ ವ್ಯಾಪಾರವೆಲ್ಲವೂ ಈ ಮಾರ್ಗವಾಗಿ ಹೋಗುತ್ತಿರುವುದರಿಂದ ಈ ಸಮುದ್ರ ಭಾಗಗಳಿಗೆ ಪ್ರಾಮುಖ್ಯವು ಬಂದಿರುವುದು.

ಈ ಖಂಡಕ್ಕೆ ದೂರದಲ್ಲಿ ಅನೇಕ ಸಣ್ಣ ದ್ವೀಪಗಳಿರುವುವು. ಇವುಗಳಲ್ಲೆಲ್ಲಾ ಮಡಗಾಸ್ಕರ್ ಎಂಬುದು ಬಹಳ ದೊಡ್ಡದು.

**ಮೇಲ್ಮೈಯ ಲಕ್ಷಣ.**—ಈ ಖಂಡದಲ್ಲಿ ಏಷ್ಯಾ, ಯೂರೋಪ್, ಅಮೆರಿಕ ಖಂಡಗಳಲ್ಲಿರುವ ಹಾಗೆ ಉನ್ನತವಾದ ಮತ್ತು ಬಹು ದೊಡ್ಡದಾದ ಪರ್ವತ

ಪಙ್ಕ್ತಿಗಳಿಲ್ಲ. ವಿಶಾಲವಾದ ಮೈದಾನಗಳೂ ಇಲ್ಲ. ಈ ಖಂಡವನ್ನು ಪ್ರಸ್ಥ ಭೂಮಿಗಳ ಖಂಡವೆನ್ನಬಹುದು. ಸಾಮಾನ್ಯವಾಗಿ ಉತ್ತರಭಾಗವು 1,500 ಅಡಿಗಳಿಗಿಂತ ಎತ್ತರವಾದ ಪ್ರಸ್ಥಭೂಮಿಗಳಿಂದ ತುಂಬಿದೆ. ದಕ್ಷಿಣಭಾಗವು 3,000 ಅಡಿಗಳಿಗಿಂತ ಎತ್ತರವಾದ ಪ್ರಸ್ಥಭೂಮಿಗಳನ್ನು ಒಳಗೊಂಡಿದೆ. ಪರ್ವತ ಪಙ್ಕ್ತಿಗಳು ತೀರಕ್ಕೆ ಸಮೀಪದಲ್ಲಿ ಒಳಭಾಗದ ಪ್ರಸ್ಥಭೂಮಿಗಳಿಗೆ ಗೋಡೆ ಇಟ್ಟಂತೆ ಇರುವುವು. ಸಮುದ್ರತೀರದಲ್ಲಿ ಮಾತ್ರ ಇಕ್ಕಟ್ಟಾದ ಮೈದಾನ ಗಳಿರುವುವು.

ಸಾಮಾನ್ಯವಾಗಿ ಉತ್ತರ ಆಫ್ರಿಕವನ್ನು ಅಟ್ಲಾಸ್ ಪರ್ವತಗಳ ಪ್ರದೇಶ, ಸಹರಾ ಮರುಭೂಮಿ, ಪೂರ್ವ ಭಾಗದ ಪ್ರಸ್ಥಭೂಮಿಗಳೆಂದು ಮೂರು ಭಾಗ ಗಳಾಗಿ ವಿಂಗಡಿಸಬಹುದು. ವಾಯುವ್ಯದಲ್ಲಿ ಅಟ್ಲಾಸ್ ಪರ್ವತವು ಪೂರ್ವ ಪಶ್ಚಿಮವಾಗಿ ಹಬ್ಬಿರುವುದು. ಈ ಪರ್ವತವು 1,400 ಮೈಲಿಗಳಷ್ಟು ಉದ್ದ ವಾಗಿಯೂ, 14,000 ಅಡಿಗಳಷ್ಟು ಎತ್ತರವಾಗಿಯೂ ಇದೆ. ಅಟ್ಲಾಸ್ ಪರ್ವ ತಕ್ಕೆ ದಕ್ಷಿಣದಲ್ಲಿ ಸಹರಾ ಮರುಭೂಮಿಯಿರುವುದು. ಇದು 3,000 ಮೈಲಿ ಗಳಷ್ಟು ಉದ್ದವಾಗಿಯೂ, 1,000 ಮೈಲಿಗಳಷ್ಟು ಅಗಲವಾಗಿಯೂ, ಅಟ್ಲಾಂ ಟಿಕ್ ಸಾಗರದಿಂದ ಕೆಂಪು ಸಮುದ್ರದವರೆಗೂ ಪ್ರಸರಿಸಿದೆ. ನೈಲ್ ನದಿಯು ಇದರ ಪೂರ್ವದ ಕೊನೆಯಲ್ಲಿ ಹರಿಯುವುದು. ಆ ನದಿಯ ಪೂರ್ವ ಪಶ್ಚಿಮ ಭಾಗಗಳು ನ್ಯೂಬಿಯ ಮತ್ತು ಲಿಬಿಯ ಮರುಭೂಮಿಗಳಾಗಿವೆ. ಈ ಮರುಭೂಮಿಗಳೆರ ಡನ್ನೂ ಸಹರದ ಭಾಗಗಳೆಂದು ಭಾವಿಸಬಹುದು. ಪ್ರಪಂಚದಲ್ಲೆಲ್ಲಾ ಸಹರದಷ್ಟು ದೊಡ್ಡ ಮರುಭೂಮಿಯು ಬೇರೆ ಇಲ್ಲ. ಇದರಲ್ಲಿ ಕೆಲವು ಭಾಗವೂ ಮರಳ್ಗಲ್ಲಿ ನಿಂದ ತುಂಬಿದೆ; ಇನ್ನು ಕೆಲವು ಪ್ರದೇಶಗಳಲ್ಲಿ ವಿಶಾಲವಾದ 'ಓಯಸಿಸ್' ಗಳಿರುವುವು. ಆದರೆ ಅನೇಕ ಭಾಗಗಳಲ್ಲಿ ಮರಳು ತುಂಬಿರುವುದು. ಈ ಮರು ಭೂಮಿಯು ಸಮುದ್ರ ಮಟ್ಟಕ್ಕಿಂತ ಸುಮಾರು 1,500 ಅಡಿಗಳಷ್ಟು ಎತ್ತರ ವಾಗಿದೆ. ಆದರೆ ಇದರ ಮಧ್ಯದಲ್ಲಿ ಒಂದು ಬೆಟ್ಟವು ಉತ್ತರ ದಕ್ಷಿಣವಾಗಿ ಹಬ್ಬಿದೆ. ಸಹರಾ ಮರುಭೂಮಿಗೆ ದಕ್ಷಿಣದಲ್ಲಿ ಸೆನಿಗಾಲ್, ನೈಜರ್ ನದಿಗಳ ಜಲಾನಯನ ಭೂಮಿಗಳೂ, ಚಾಡ್ ಸರೋವರವೂ ಇರುವುವು. ಈ ಮರು ಭೂಮಿಗೆ ಪೂರ್ವದಲ್ಲಿ ಅಬಿಸೀನಿಯ ಪ್ರಸ್ಥಭೂಮಿಯಿರುವುದು. ಇದರಲ್ಲಿ ಎತ್ತರ ವಾದ ಬೆಟ್ಟಗಳೂ, ಕಣಿವೆಗಳೂ, ಸರೋವರಗಳೂ ಬಹಳವಾಗಿವೆ. ಇಲ್ಲಿ ಅತ್ಯು ನ್ನತವಾದ ಶಿಖರವು 16,000 ಅಡಿಗಳಷ್ಟು ಎತ್ತರವಾಗಿದೆ.

ದಕ್ಷಿಣ ಆಫ್ರಿಕದಲ್ಲೆಲ್ಲಾ ವಿಶಾಲವಾದ ಮತ್ತು ಉನ್ನತವಾದ ಪ್ರಸ್ಥ ಭೂಮಿಗಳಿರುವುವು. ಇವುಗಳ ಪೂರ್ವದ ಅಂಚಿನಲ್ಲಿಯೂ, ಪಶ್ಚಿಮದ ಅಂಚಿ ನಲ್ಲಿಯೂ ಎತ್ತರವಾದ ಪರ್ವತಗಳು ತೀರಕ್ಕಿದಿರಾಗಿ ಹಬ್ಬಿರುವುವು. ಸಮುದ್ರದ

ತೀರದಿಂದ ಒಳಭಾಗಕ್ಕೆ ಹೊರಟರೆ ನೆಲವು ಅಂತಸ್ತುಗಳಾಗಿ ಏರುತ್ತಾ ಬರುವಂತೆ ಕಾಣಬರುವುದು. ಪಶ್ಚಿಮ ತೀರದ ಮೈದಾನವು ಬಹಳ ಇಕ್ಕಟ್ಟಾಗಿರುವುದು. ಪೂರ್ವತೀರದ ಮೈದಾನವು ಹೆಚ್ಚು ಅಗಲವಾಗಿರುವುದು. ಇದು ಉತ್ತರಕ್ಕೆ ಹೋದಹಾಗೆ ಅಗಲವಾಗುತ್ತಾ ಗಾರ್ಡಾಫ್ಯೂ ಭೂಶಿರದ ಬಳಿ ವಿಸ್ತಾರವಾಗಿರುವುದು.

ದಕ್ಷಿಣ ಆಫ್ರಿಕದ ಪ್ರಸ್ಥಭೂಮಿಗಳು ಮಧ್ಯದಲ್ಲಿ ತಗ್ಗಾಗಿಯೂ, ಸುತ್ತಲೂ ಎತ್ತರವಾಗಿಯೂ ಇವೆ. ಇವುಗಳ ಪೂರ್ವಭಾಗದಲ್ಲಿ ಪರ್ವತ ಪಙ್ಕ್ತಿಗಳು ಉತ್ತರ ದಕ್ಷಿಣವಾಗಿ ಹಬ್ಬಿವೆ. ಈ ಪರ್ವತ ಪಙ್ಕ್ತಿಗಳ ಮಧ್ಯೆ ಉದ್ದವಾಗಿಯೂ, ಇಕ್ಕಟ್ಟಾಗಿಯೂ ಇರುವ ಅಗಾಧವಾದ ಕಮರಿಗಳಿರುವುವು. ಈ ಕಮರಿಗಳಲ್ಲಿ ನೀರು ನಿಂತು ದೊಡ್ಡ ಸರೋವರಗಳಾಗಿರುವುವು. ಕೆಂಪು ಸಮುದ್ರದಿಂದ ಜಾಂಬಿಸಿ ನದಿಯ ಮುಖದವರೆಗೂ ಇಂತಹ ಸರೋವರಗಳಿರುವುವು. ಇವುಗಳಲ್ಲಿ ಸ್ಟಾನ, ರುಡೋಲ್ಫ್, ವಿಕ್ಟೋರಿಯ ನ್ಯಾಂಜ, ಟಾಂಗನೀಕ, ನ್ಯಾಸ್ಸ ಎಂಬುವು ಮುಖ್ಯವಾದುವು. ಇವುಗಳೆಲ್ಲವೂ ಆಳವಾದ ಕಮರಿಗಳಲ್ಲಿರುವುದರಿಂದ ಇವುಗಳ ದಡಗಳು ಎತ್ತರವಾದ ಗೋಡೆಗಳಂತೆ ಕಾಣಬರುವುವು. ಆಫ್ರಿಕಾ ಖಂಡದಲ್ಲಿರುವಷ್ಟು ವಿಶಾಲವಾದ ಸರೋವರಗಳು ಪೂರ್ವಾರ್ಧಗೋಳದಲ್ಲಿ ಇನ್ನಾವ ಖಂಡದಲ್ಲಿಯೂ ಇಲ್ಲ. ವಿಕ್ಟೋರಿಯ ಸರೋವರವು 29,000 ಚ. ಮೈಲಿಗಳಷ್ಟು ಅಥವಾ ಮೈಸೂರು ಶೀಮೆಯಷ್ಟು ವಿಸ್ತಾರವಾಗಿದೆ.

ಈ ಖಂಡದ ಉನ್ನತವಾದ ಶಿಖರಗಳೆಲ್ಲವೂ ಪೂರ್ವಭಾಗದಲ್ಲಿಯೇ ಇವೆ. ಪಶ್ಚಿಮಭಾಗವು ಅಷ್ಟು ಎತ್ತರವಾಗಿಲ್ಲ. ವಿಕ್ಟೋರಿಯಾನ್ಯಾಂಜಕ್ಕೆ ಈಶಾನ್ಯದಲ್ಲಿರುವ ಕೆನಿಯ, ಪಶ್ಚಿಮದಲ್ಲಿರುವ ರುವೆನ್ಜೋರಿ, ದಕ್ಷಿಣದಲ್ಲಿರುವ ಕಿಲಿಮಂಜೆರೊ ಈ ಮೂರು ಶಿಖರಗಳೂ 18,000 ಅಡಿಗಳಿಗಿಂತ ಹೆಚ್ಚು ಎತ್ತರವಾಗಿವೆ. ಡ್ರೇಕಾನ್‌ಬರ್ಗ್ ಬೆಟ್ಟಗಳು ಆಗ್ನೇಯದಲ್ಲಿ ತೀರಕ್ಕೆ ಸಮೀಪದಲ್ಲಿ ಉತ್ತರ ದಕ್ಷಿಣವಾಗಿ ಹಬ್ಬಿವೆ. ಇವು 12,000 ಅಡಿಗಳಷ್ಟು ಎತ್ತರವಾಗಿವೆ. ಮಧ್ಯಭಾಗದಲ್ಲಿ 2,500 ಅಡಿಗಳಷ್ಟು ಎತ್ತರವಾಗಿರುವ ಕಲಹರಿ ಎಂಬ ಮರುಭೂಮಿ ಇರುವುದು. ಇದರ ಮಧ್ಯದಲ್ಲಿ ನಾಮಿ ಎಂಬ ಸರೋವರವಿರುವುದು.

ಸಾಮಾನ್ಯವಾಗಿ ಈ ಖಂಡದ ಎತ್ತರವಾದ ಪರ್ವತ ಶಿಖರಗಳೆಲ್ಲವೂ ಪೂರ್ವದಲ್ಲಿ ಜ್ವಾಲಾಮುಖಿಗಳಾಗಿದ್ದುವೆಂದು ಹೇಳುತ್ತಾರೆ. ಅಬಿಸೀನಿಯ ಪರ್ವತಗಳಲ್ಲಿಯೂ, ಪಶ್ಚಿಮದಲ್ಲಿ ಕಾಮರೂನ್ ಬೆಟ್ಟಗಳಲ್ಲಿಯೂ ಈಗಲೂ ಹೊಗೆಯಾಡುತ್ತಿರುವ ಜ್ವಾಲಾಮುಖಿಗಳಿವೆ.

**ವಾಯುಗುಣ ಮತ್ತು ಮಳೆ.**—ಸಮಭಾಜಕ ವೃತ್ತವು ಈ ಖಂಡದ ಮಧ್ಯದಲ್ಲಿರುವುದರಿಂದ ಹೆಚ್ಚು ಭಾಗವು ಉಷ್ಣವಲಯದಲ್ಲಿದೆ. ಉತ್ತರದಕ್ಷಿಣದ

ಕೊನೆಗಳು ಮಾತ್ರ ಸಮಶೀತೋಷ್ಣವಲಯದಲ್ಲಿ ಉಷ್ಣವಲಯದ ಪಕ್ಕದಲ್ಲಿವೆ. ಇನ್ನಾವ ಖಂಡದಲ್ಲಿಯೂ ಇಷ್ಟು ಹೆಚ್ಚು ಭೂಭಾಗವು ಉಷ್ಣವಲಯದಲ್ಲಿಲ್ಲ. ಸಮುದ್ರಶಾಖೆಗಳಿಲ್ಲದಿರುವುದರಿಂದ ಇಲ್ಲಿ ಸೆಕೆಯು ಕಡಿಮೆಯಾಗಲವಕಾಶವಿಲ್ಲ. ಆದುದರಿಂದ ಒಟ್ಟಿನಲ್ಲಿ ಇದನ್ನು ಖಂಡಗಳಲ್ಲೆಲ್ಲಾ ಬಹಳ ಉಷ್ಣವಾದ ವಾಯು ಗುಣವುಳ್ಳ ಖಂಡವೆಂದು ಭಾವಿಸಬಹುದು.

ಈ ಖಂಡದಲ್ಲಿ ಉತ್ತರಭಾಗವು ಬಹಳ ಅಗಲವಾಗಿರುವುದು. ಅಲ್ಲಿ ಸಾಗರವು ಖಂಡದೊಳಕ್ಕೆ ವಿಶೇಷವಾಗಿ ಚಾಚಿಕೊಂಡಿಲ್ಲ. ಅರೇಬಿಯಾ ಮರುಭೂಮಿಯಿಂದ ಅತ್ಯುಷ್ಣವಾದ ಮಾರುತವು ಬೀಸುವುದು. ಈ ಕಾರಣಗಳಿಂದ ಅಲ್ಲಿ ಸೆಕೆಯು ಬಹು ಹೆಚ್ಚಾಗಿರುವುದು.

ದಕ್ಷಿಣ ಆಫ್ರಿಕವು ಅಷ್ಟು ಅಗಲವಾಗಿಲ್ಲ. ಸಾಗರದ ಕಡೆಯಿಂದ ಬೀಸಿ ಕೊಂಡು ಬರುವ ಮಾರುತವು ಮಳೆಯನ್ನು ಸುರಿಸಿ ಇಲ್ಲಿ ಸೆಕೆಯನ್ನೂ ಕಡಿಮೆ ಮಾಡುವುದು. ಇದಲ್ಲದೆ ಇದು ಉತ್ತರ ಆಫ್ರಿಕಕ್ಕಿಂತಲೂ ಎತ್ತರವಾಗಿರುವುದು. ಈ ಕಾರಣಗಳಿಂದ ದಕ್ಷಿಣ ಆಫ್ರಿಕದಲ್ಲಿ ಉತ್ತರ ಆಫ್ರಿಕಕ್ಕಿಂತ ಸೆಕೆಯು ಕಡಿಮೆ.

ಈ ಖಂಡದ ಉಷ್ಣವಲಯದ ಭಾಗದಲ್ಲಿ ವಾಣಿಜ್ಯಸಹಾಯಕ ಮಾರುತಗಳು ಈಶಾನ್ಯ ಆಗ್ನೇಯ ದಿಕ್ಕುಗಳಿಂದ ಬೀಸಿ ಮಳೆಯನ್ನು ತರುವುವು. ಸಮ ಶೀತೋಷ್ಣವಲಯ ಪ್ರದೇಶಗಳಲ್ಲಿ ವಾಣಿಜ್ಯಸಹಾಯಕ ಪ್ರತಿಮಾರುತಗಳು ವಾಯುವ್ಯ ನೈರುತ್ಯ ದಿಕ್ಕುಗಳಿಂದ ಬೀಸಿ ಮಳೆಯನ್ನು ತರುವುವು. ಈ ಮೇಲೆ ಹೇಳಿದ ಮುಖ್ಯ ವಿಷಯಗಳನ್ನು ನೆನಪಿಟ್ಟರೆ ಈ ಖಂಡದ ವಾಯುಗುಣ ವನ್ನು ತಪಶೀಲಾಗಿ ಸುಲಭವಾಗಿ ತಿಳಿಯಬಹುದು.

ಈ ಖಂಡದ ಉತ್ತರದಲ್ಲಿ ಮೆಡಿಟರೇನಿಯನ್ ಸಮುದ್ರತೀರ ಪ್ರದೇಶದಲ್ಲಿ ಸಮುದ್ರದ ಸಾಮೀಪ್ಯದಿಂದ ವಾಯುಗುಣವು ಹಿತಕರವಾಗಿರುವುದು. ಅಟ್ಲಾಂಟಿಕ್ ಸಾಗರದ ಕಡೆಯಿಂದ ಬೀಸುವ ವಾಣಿಜ್ಯಸಹಾಯಕ ಪ್ರತಿಮಾರುತಗಳನ್ನು ಅಟ್ಲಾಸ್ ಪರ್ವತಗಳು ತಡೆಯುವುವು. ಆದುದರಿಂದ ವಾಯುವ್ಯತೀರದ ಪ್ರದೇಶದಲ್ಲಿಯೂ ಆ ಪರ್ವತಗಳ ತಪ್ಪಲುಗಳಲ್ಲೂ ಮಳೆಯು ಚೆನ್ನಾಗಿ ಸುರಿಯುವುದು. ಅಟ್ಲಾಸ್ ಪರ್ವತಗಳನ್ನು ದಾಟಿದ ಮೇಲೆ ಈ ಗಾಳಿಯಲ್ಲಿ ಜಲಾಂಶವು ಕಡಿಮೆಯಾಗುವುದು. ಆದುದರಿಂದ ಪೂರ್ವಕ್ಕೆ ಹೋದಹಾಗೆಲ್ಲಾ ಉತ್ತರ ತೀರದಲ್ಲಿ ಮಳೆಯು ಕಡಿಮೆಯಾಗುತ್ತಾ ಬರುವುದು. ಅಟ್ಲಾಸ್ ಪರ್ವತ ಶ್ರೇಣಿಯಲ್ಲಿ ಎರಡು ಮುಖ್ಯವಾದ ಪರ್ವತದ ಸಾಲುಗಳಿರುವುವು. ಇವೆರಡಕ್ಕೂ ಮಧ್ಯೆಯಿರುವ ಕಣಿವೆಗಳಲ್ಲಿ ಮಳೆಯು ಸಾಮಾನ್ಯವಾಗಿ ಬೀಳುವುದು. ಅಲ್ಲಿ ಹುಲ್ಲುಗಾವಲುಗಳಿರುವುವು. ಮತ್ತು ಸಣ್ಣ ಸಣ್ಣ ಉಪ್ಪುನೀರಿನ ಸರೋವರಗಳು ಅಧಿಕವಾಗಿರುವುವು.

ಅಟ್ಲಾಸ್ ಪರ್ವತಗಳಿಗೆ ದಕ್ಷಿಣದಲ್ಲಿ ಅಟ್ಲಾಂಟಿಕ್ ಸಾಗರದಿಂದ ಕೆಂಪು ಸಮುದ್ರದವರೆಗೂ ವಿಸ್ತರಿಸಿರುವ ಮರಳುಕಾಡಿನಲ್ಲಿ ಮಳೆ ಹೊಯ್ಯುವುದು ಅಪರೂಪವು. ಇಲ್ಲಿ ಮಳೆಯು ಬೀಳುವಾಗ ಗಾಳಿಯು ವೇಗವಾಗಿ ಬೀಸಿ ಗುಡುಗೂ ಮಿಂಚೂ ಹೆಚ್ಚಾಗಿ ಬಂದು ಸ್ವಲ್ಪಕಾಲದಲ್ಲಿಯೇ ನೀರು ನೆಲದಮೇಲೆ ಹರಿಯಲಾರಂಭಿಸುವುದು. ಹೀಗೆ ಹುಟ್ಟಿದ ಜರಿಗಳನ್ನು ಇಲ್ಲಿ ವಾಡಿಗಳೆಂದು ಕರೆಯುವರು. ಈ ವಾಡಿಗಳು ಹರಿಯುವಾಗ ಸ್ವಲ್ಪ ನೀರು ಆವಿಯಾಗಿ ಹೋಗುವುದು. ಉಳಿದ ನೀರು ಮರಳಿನೊಳಕ್ಕೆ ಇಳಿದು ಭೂಮಿಯೊಳಗೆ ಹರಿಯುವುವು. ಹೀಗೆ ಈ ಝರಿಗಳು ಹೆಚ್ಚು ದೂರ ಹರಿಯದೆ ಬತ್ತಿಹೋಗುವುವು. ಇವುಗಳು ಹರಿಯುವ ಕಡೆಗಳಲ್ಲಿ ತೇವವಿರುವುದರಿಂದ ಹುಲ್ಲುಗಾವಲುಗಳಿರುವುವು. ಭೂಮಿಯೊಳಗೆ ಇಳಿದ ನೀರು ನೆಲಮಟ್ಟದ ಕೆಳಗೇ ಹರಿದು ಅಲ್ಲಲ್ಲಿ ಚಿಲುಮೆಗಳಲ್ಲಿ ಮೇಲಕ್ಕೇರುವುದು. ಇಂತಹ ಕಡೆಗಳಲ್ಲಿ ಅಂದರೆ ಓಯಸಿಸ್‌ಗಳಲ್ಲಿ ಭೂಮಿಯು ಫಲವತ್ತಾಗಿರುವುದು. ಖರ್ಜೂರದ ಮರಗಳು ಚೆನ್ನಾಗಿ ಬೆಳೆವುವು. ಕೆಲವು ಓಯಸಿಸ್‌ಗಳು ನೂರಾರು ಮೈಲಿಗಳಷ್ಟು ವಿಸ್ತಾರವಾಗಿರುವುವು. ಇಂತಹ ಕಡೆಗಳಲ್ಲಿ ಚಿಲುಮೆಗಳಿಂದ ಕಾಲುವೆಗಳನ್ನು ತೆಗೆದು 20–30 ಮೈಲಿಗಳ ದೂರದವರೆಗೂ ವ್ಯವಸಾಯ ಮಾಡುತ್ತಾರೆ. ಓಯಸಿಸ್‌ಗಳು ಈ ಅಗಾಧವಾದ ಮರಳುಕಾಡಿನಲ್ಲಿ ಅಲ್ಲಲ್ಲಿ ಮಾತ್ರ ಇರುವುವು. ಉಳಿದ ಭಾಗಗಳಲ್ಲೆಲ್ಲಾ ನೀರೆಂಬುದೇ ಇಲ್ಲ. ಎಲ್ಲಿ ನೋಡಿದರೂ ಕಾದಮರಳು ತುಂಬಿರುವುದು. ಗಾಳಿಯನ್ನು ತಡೆಯುವುದಕ್ಕೆ ಪರ್ವತ ಪಙ್ಕ್ತಿಗಳಾಗಲೀ ಮರಗಳಾಗಲೀ ಇಲ್ಲದಿರುವುದರಿಂದ ಅದು ಮರುಭೂಮಿಯಮೇಲೆ ಬಹು ವೇಗವಾಗಿ ಬೀಸುವುದು. ಮತ್ತು ಹಗಲು ಹೊತ್ತಿನಲ್ಲಿ ಬಹು ಉಷ್ಣವುಳ್ಳದುದಾಗಿರುವುದು. ಇಂತಹ ಚಂಡವಾದ ಮತ್ತು ಉಗ್ರೋಷ್ಣವಾದ ಮಾರುತಕ್ಕೆ ಸಹರಾ ಮರುಭೂಮಿಯಲ್ಲಿ 'ಸೈಮೂಂ' ಎಂದು ಹೆಸರು. ಮೊರಕ್ಕೋ ದೇಶದಲ್ಲಿ ಇದನ್ನು 'ಸಿರಾಕೊ' ಎಂದು ಕರೆಯುತ್ತಾರೆ. ಈ ಗಾಳಿಯು ಮರಳನ್ನು ತೂರಿಕೊಂಡು ಹೋಗಿ ಅಲ್ಲಲ್ಲಿ ಗುಡ್ಡೆಗಳಾಗಿ ಹಾಕುವುದು. ಪುನಃ ಗಾಳಿಯು ಬೀಸಿ ಆ ಗುಡ್ಡಗಳಲ್ಲಿರುವ ಮರಳು ಒಯ್ಯಲ್ಪಟ್ಟು ಬೇರೆಯ ಕಡೆ ರಾಶಿಯಾಗಿ ಬೀಳುವುದು. ಮರುಭೂಮಿಯಲ್ಲಿ ಪ್ರಯಾಣಮಾಡುವವರು ಈ ಗಾಳಿಯು ತಮ್ಮ ಕಡೆ ಮರಳನ್ನು ಹೊತ್ತುಕೊಂಡು ಬರುವಾಗ ನೆಲದ ಮೇಲೆ ಅಡ್ಡಲಾಗಿ ಬಿದ್ದುಕೊಳ್ಳುವರು. ಒಂಟೆಗಳೂ ಹಾಗೆಯೇ ಮಾಡುವುವು; ಗಾಳಿಯು ಹೋದಮೇಲೆ ಎದ್ದು ಮುಂದಕ್ಕೆ ಪ್ರಯಾಣಮಾಡುವರು.

ಸಹರಾ ಮರುಭೂಮಿಯ ಪೂರ್ವಭಾಗದಲ್ಲಿ ನೈಲ್ ನದಿಯು ಹರಿಯುವುದು. ಈ ನದಿಯು ಹರಿಯುವ ಮೈದಾನವು ಫಲವತ್ತಾಗಿರುವುದು. ಆದರೆ ಅದರ ಎಡಕ್ಕೂ ಬಲಕ್ಕೂ ಮರುಭೂಮಿಗಳಿರುವುವು. ಎಡಭಾಗದಲ್ಲಿ ಲಿಬಿಯ ಮರುಭೂಮಿಯೂ, ಬಲಭಾಗದಲ್ಲಿ ನ್ಯೂಬಿಯ ಮರುಭೂಮಿಯೂ ಇರುವುವು.

ಇವುಗಳಲ್ಲಿ ಸಹರಾ ಮರುಭೂಮಿಗಿಂತ ಓಯಸಿಸ್‌ಗಳು ಇನ್ನೂ ಕಡಿಮೆ. ಲಿಬಿಯ ಮರುಭೂಮಿಯಲ್ಲಿ ಹೆಚ್ಚಾದ ಬಿಸಿಲಿನಿಂದ 'ಮರೀಚಿಕೆ' ಅಥವಾ ಬಿಸಿಲ್ಗುದುರೆಯು ಕಾಣಿಸುವುದು. ಅಂದರೆ ನೀರಿಲ್ಲದ ಮರಳಿನಲ್ಲಿ ನೀರು ನಿಂತಿರುವಂತೆ ಕಾಣುವುದು. ಇದರಿಂದ ಪ್ರಯಾಣಿಕರು ಕೆಲವು ವೇಳೆ ಮೋಸಹೋಗಿ ದಾರಿತಪ್ಪಿ ಬಹು ಕಷ್ಟಪಡುವರು. ನ್ಯೂಬಿಯದಲ್ಲಿ ಮೊಟ್ಟೆಗಳು ಮರಳಿನಲ್ಲಿ ಹೂಳಲ್ಪಟ್ಟರೆ ಪಕ್ವವಾಗುವುವು. "ನ್ಯೂಬಿಯದಲ್ಲಿ ನೆಲವೇ ಬೆಂಕಿ, ಗಾಳಿಯೇ ಉರಿ" ಎಂಬ ಹೇಳಿಕೆಯು ಅರಬ್ಬಿಯವರಲ್ಲಿ ರೂಢಿಯಾಗಿರುವುದು.

ಸಹರಾಕ್ಕೆ ದಕ್ಷಿಣದಲ್ಲಿ ಸೂಡಾನ್ ಎಂಬ ವಿಸ್ತಾರವಾದ ಪ್ರಸ್ಥಭೂಮಿಯಿರುವುದು. ಇಲ್ಲಿ ಅಟ್ಲಾಂಟಿಕ್ ಸಾಗರದಿಂದಲೂ, ಹಿಂದೂಸಾಗರದಿಂದಲೂ ಮಾರುತಗಳು ಬೇಸಿಗೆಯಲ್ಲಿ ಬೀಸಿ ಮಳೆಯನ್ನು ತರುವುವು. ಉತ್ತರಭಾಗದಲ್ಲಿ ಅಂದರೆ ಸಹರಾ ಮರುಭೂಮಿಯ ಅಂಚಿನಲ್ಲಿ ಮಳೆ ಕಡಿಮೆ. ದಕ್ಷಿಣದಲ್ಲಿ ತಕ್ಕ ಮಟ್ಟಿಗೆ ಮಳೆ ಬರುವುದು. ಇಲ್ಲಿ ಸೆಕೆಯು ಹೆಚ್ಚು. ಅದರಲ್ಲೂ ಈಶಾನ್ಯ ಭಾಗದಲ್ಲಿ ಬಹು ಹೆಚ್ಚು.

ಸೂಡಾನಿಗೆ ಪೂರ್ವದಲ್ಲಿ ಬೆಟ್ಟದ ಸೀಮೆಯಾದ ಅಬಿಸೀನಿಯಾ ಪ್ರಸ್ಥಭೂಮಿಯಿರುವುದು. ಇಲ್ಲಿ ಎತ್ತರವಾದ ಬೆಟ್ಟಗಳಿರುವುದರಿಂದ ಮಳೆಯು ಚೆನ್ನಾಗಿ ಬರುವುದು. ತಗ್ಗಾದ ಕಣಿವೆಗಳಲ್ಲಿ ವಿನಾ ವಾಯುಗುಣವು ಹಿತಕರವಾಗಿರುವುದು. ಚಳಿಗಾಲದಲ್ಲಿ ಹಿಮವು ಅನೇಕ ಪ್ರದೇಶಗಳಲ್ಲಿ ಬೀಳುವುದು.

ಸೂಡಾನಿಗೆ ನೈರುತ್ಯದಲ್ಲಿ ಗಿನೀ ತೀರಪ್ರದೇಶವಿರುವುದು. ಈ ಭಾಗವು ಸಮಭಾಜಕವೃತ್ತಕ್ಕೆ ಸಮೀಪದಲ್ಲಿರುವುದರಿಂದಲೂ, ಅಟ್ಲಾಂಟಿಕ್ ಸಾಗರವು ಸಮೀಪದಲ್ಲಿರುವುದರಿಂದಲೂ, ಅಲ್ಲಲ್ಲಿ ಎತ್ತರವಾದ ಗುಡ್ಡಗಳಿರುವುದರಿಂದಲೂ ಮಳೆಯು ಹೆಚ್ಚು. ಸೆಕೆಯು ಸಹಿಸಲಶಕ್ಯವಾಗಿತುವುದು. ಹೀಗೆ ಸೆಕೆಯೂ ಮಳೆಯೂ ಹೆಚ್ಚಾಗಿರುವುದರಿಂದ ಕಾಡುಗಳು ಹೆಚ್ಚಾಗಿವೆ. ಯೂರೋಪಿಯನ್ನರಿಗೆ ಇಂತಹ ಹವವು ದುಸ್ಸಹವಾದುದರಿಂದ ಈ ಭಾಗವನ್ನು 'ಯೂರೋಪಿಯನ್ನರ ಸಮಾಧಿ'ಯೆಂದು ಕರೆಯುವುದುಂಟು.

ಮಧ್ಯ ಆಫ್ರಿಕದಲ್ಲಿ, ಅಂದರೆ ಸಮಭಾಜಕ ವೃತ್ತದ ಸಮೀಪ ಪ್ರದೇಶಗಳಲ್ಲಿ, ಈಶಾನ್ಯ ಆಗ್ನೇಯ ನೈರುತ್ಯ ಮಾರುತಗಳು ಹಿಂದೂ ಸಾಗರದಿಂದ ಬೀಸಿ ವಿಶೇಷವಾಗಿ ಮಳೆಯನ್ನು ತರುವುವು. ಈ ಪ್ರದೇಶವನ್ನು 'ನಿತ್ಯವರ್ಷವಲಯ'ವೆನ್ನಬಹುದು. ಇಲ್ಲಿ ಸೂರ್ಯನು ಯಾವಾಗಲೂ ಆಕಾಶದಲ್ಲಿ ಎತ್ತರವಾಗಿ ನೆಟ್ಟಗೆ ತಲೆಯಮೇಲೆ ಕಾಣಬರುವನು. ಸೆಕೆಯು ವಿಪರೀತವಾಗಿರುವುದು. ಅಮೆಜಾನ್ ಮೈದಾನದಲ್ಲಿನಂತೆ ದಟ್ಟವಾದ ಕಾಡುಗಳು ಎಲ್ಲೆಲ್ಲೂ ಕಾಣುವುವು. ಈ ಕಾಡುಗಳಲ್ಲಿ ಬಳ್ಳಿಗಳು ಬೆಳೆದು ಜನರು ಒಳಹೋಗಲು ಅಸಾಧ್ಯವಾಗಿರುವುದು.

ಆಫ್ರಿಕದ ದಕ್ಷಿಣಭಾಗದಲ್ಲಿ, ಅಂದರೆ ದ. ಅ. 15 ರಿಂದ ಖಂಡದ ದಕ್ಷಿಣದ ಕೊನೆಯವರೆಗೆ ಹಿಂದೂಸಾಗರದಿಂದ ಮಳೆಯು ಗಾಳಿಯು ಬೀಸುವುದರಿಂದ ಪೂರ್ವತೀರದಲ್ಲಿ ಮಳೆ ಹೆಚ್ಚು. ಆಗ್ನೇಯದ ಕೊನೆಯಲ್ಲಿ ಡ್ರೇಕನ್‌ಬರ್ಗ್ ಬೆಟ್ಟವು ತೀರಕ್ಕೆ ಇದಿರಾಗುವುದರಿಂದ ಮಳೆಯ ಮೋಘಗಳನ್ನು ವಿಶೇಷ ವಾಗಿ ತಡೆಯುತ್ತದೆ. ಹೀಗೆ ತೀರದಲ್ಲಿರುವ ಬೆಟ್ಟಗಳು ಮೋಘಗಳನ್ನು ತಡೆ ಯುವುದರಿಂದಲೂ, ಪಶ್ಚಿಮದಿಂದ ಮಳೆಯ ಗಾಳಿಯು ವಿಶೇಷವಾಗಿ ಬೀಸದಿರು ವುದರಿಂದಲೂ ಮಧ್ಯಭಾಗದಲ್ಲಿ ಕಲಹರಿಯೆಂಬ ಮರುಭೂಮಿ ಇರುವುದು.

ನೈರುತ್ಯದ ಕೊನೆಯಲ್ಲಿ, ಅಂದರೆ ಕೇಪ್‌ಕಾಲೊನಿಯ ದಕ್ಷಿಣದಲ್ಲಿ ಅಟ್ಲಾಂಟಿಕ್ ಸಾಗರದಿಂದ ವಾಣಿಜ್ಯಸಹಾಯಕ ಪ್ರತಿಮಾರುತಗಳು ಬೀಸುವುವು. ಇವು ತೀರದಲ್ಲಿರುವ ಬೆಟ್ಟಗಳಿಂದ ತಡೆಯಲ್ಪಟ್ಟು ಮಳೆಯನ್ನು ಯಥೇಚ್ಛವಾಗಿ ಕೊಡುವುವು. ಈ ತೀರದಲ್ಲಿ ಮೆಡಿಟರೇನಿಯನ್ ತೀರದಲ್ಲಿರುವಂತೆ ಹಿತಕರವಾದ ವಾಯುಗುಣವಿರುವುದು.

**ನದಿಗಳು ಮತ್ತು ಸರೋವರಗಳು.**—ಇತರ ಖಂಡಗಳಲ್ಲಿರುವಂತೆ ಆಫ್ರಿಕಾಖಂಡದಲ್ಲಿ ದೊಡ್ಡದಾದ ಜಲವಿಭಾಗಸ್ಥಾನವಾವುದೂ ಇಲ್ಲ. ಸಾಮಾನ್ಯ ವಾಗಿ ಏಷ್ಯಾಖಂಡದ ಮುಖ್ಯ ನದಿಗಳೆಲ್ಲವೂ ಟಿಬೆಟ್ ಪ್ರಸ್ಥಭೂಮಿಯಲ್ಲಿಯೂ, ಯೂರೋಪ್ ಖಂಡದ ಮುಖ್ಯ ನದಿಗಳೆಲ್ಲವೂ ಆಲ್ಪ್ಸ್ ಪರ್ವತಶ್ರೇಣಿಯಲ್ಲಿಯೂ ಹುಟ್ಟಿ ನಾನಾದಿಕ್ಕುಗಳಿಗೂ ಹರಿಯುತ್ತವೆ. ಆಫ್ರಿಕಾ ಖಂಡದಲ್ಲಿ ನದಿಗಳು ಹೀಗೆ ಒಂದೇ ಕಡೆ ಹುಟ್ಟುವುದಿಲ್ಲ.

ಈ ಖಂಡದ ಉತ್ತರಭಾಗದಲ್ಲಿ ಮಳೆಯು ಸ್ವಲ್ಪವಾದುದರಿಂದಲೂ, ಮರು ಭೂಮಿಯಿರುವುದರಿಂದಲೂ ದೊಡ್ಡ ನದಿಗಳು ಯಾವುವೂ ಹುಟ್ಟುವುದಿಲ್ಲ. ಅಟ್ಲಾಸ್ ಪರ್ವತಶ್ರೇಣಿಯ ಮಧ್ಯದ ಕಣಿವೆಗಳಲ್ಲಿಯೂ, ಸಹರಾ ಮರು ಭೂಮಿಯ ಉತ್ತರದಲ್ಲಿಯೂ ಸಣ್ಣಸಣ್ಣ ಉಪ್ಪುನೀರಿನ ಸರೋವರಗಳಿರುವುವು. ಇವುಗಳಿಗೆ ಷಾಟ್‌ಗಳೆಂದು ಹೆಸರು. ಸಹರಾ ಮರುಭೂಮಿಯಲ್ಲಿ ಮಳೆಗಾಲ ದಲ್ಲಿ ಮಾತ್ರ ಹರಿಯುವ 'ವಾಡಿ'ಗಳಿರುವುವು. ಈ ಮರುಭೂಮಿಯ ದಕ್ಷಿಣ ಭಾಗದಲ್ಲಿ ಚಾಡ್ ಎಂಬ ಸರೋವರವಿರುವುದು. ಈ ಭಾಗದಲ್ಲಿ ಮಳೆ ಕಡಿಮೆ ಯಾದುದರಿಂದಲೂ, ಸೆಕೆಯಿಂದ ನೀರು ಹೆಚ್ಚಾಗಿ ಆವಿಯಾಗಿ ಹೋಗುವುದ ರಿಂದಲೂ ಈ ಸರೋವರದಿಂದ ನೀರು ಹೊರಗೆ ಹರಿಯುವುದಿಲ್ಲ.

ಪಶ್ಚಿಮದಲ್ಲಿ ಸೆನಿಗಾಲ್, ಗಾಂಬಿಯ ಎಂಬ ನದಿಗಳು ಅಟ್ಲಾಂಟಿಕ್ ಸಾಗರಕ್ಕೂ, ನೈಜರ್ ನದಿಯು ಗಿನೀ ಕೊಲ್ಲಿಗೂ ಬೀಳುತ್ತವೆ. ನೈಜರ್‌ನದಿಯು ಕಾಂಗ್ ಪರ್ವತದಲ್ಲಿ ಹುಟ್ಟಿ, ಉತ್ತರಕ್ಕೆ ಹರಿದು, ಬಹುದೂರ ಹೋಗಿ, ಟೆಂಬಕ್ಟೂ ಪಟ್ಟಣದಾಚೆ ಪೂರ್ವಕ್ಕೆ ತಿರುಗಿ, ಆಗ್ನೇಯಾಭಿಮುಖವಾಗಿ ಹರಿದು, ಪೂರ್ವದಿಂದ

ಹರಿದುಬರುವ ಸೊಕೋಟೊ ಮತ್ತು ಬೆನ್ಯೂ ಎಂಬ ಉಪನದಿಗಳನ್ನು ಸ್ವೀಕರಿಸಿ, ದಕ್ಷಿಣಕ್ಕೆ ಹರಿದು, ಗಿನೀ ಸಮುದ್ರಶಾಖೆಗೆ ಬೀಳುತ್ತದೆ. ಈ ನದಿಯ ಮೂಲವು ಇದರ ಮುಖಕ್ಕೆ ಬಹಳ ದೂರವಿಲ್ಲದಿದ್ದರೂ ಬೆಟ್ಟಗಳನ್ನು ಸುತ್ತಿಕೊಂಡು ಹೋಗುವುದರಿಂದ ಈ ನದಿಯ ಉದ್ದವು 2,600 ಮೈಲಿಗಳಾಗಿರುವುದು. ಇದರ ಮೂಲದ ಬಳಿಯಿರುವ ಪರ್ವತಗಳಲ್ಲಿ ಮಳೆಯು ವಿಶೇಷವಾಗಿ ಬೀಳುವುದರಿಂದ ಇದರಲ್ಲಿ ನೀರು ಹೆಚ್ಚಾಗಿರುವುದು. ಇದರ ಬೈಲು ಕಾಡುಗಳಿಂದ ತುಂಬಿರುವುದು ; ಅನಾರೋಗ್ಯಕರವಾಗಿರುವುದು.

ಹಿಂದೆ ವಿವರಿಸಿದಂತೆ, ಪೂರ್ವಭಾಗದ ಪ್ರಸ್ಥಭೂಮಿಯಲ್ಲಿ ಅನೇಕ ಸರೋವರಗಳಿರುವುವು. ಇಲ್ಲಿ ಮಳೆಯು ಹೆಚ್ಚಾಗಿ ಬೀಳುವುದರಿಂದ ಈ ಸರೋವರಗಳಲ್ಲಿ ನೀರು ಹೆಚ್ಚಾಗಿರುವುದು. ಇವುಗಳಿಂದ ಅನೇಕ ನದಿಗಳು ಹೊರಡುವುವು. ಇವುಗಳಲ್ಲಿ ಮುಖ್ಯವಾದುವು ನೈಲ್, ಕಾಂಗೊ ಮತ್ತು ಜಾಂಬೀಸಿ ಎಂಬುವು.

ನೈಲ್ ನದಿಯು 4,000 ಮೈಲಿಗಳಷ್ಟು ಉದ್ದವಾಗಿರುವುದು . ಪೂರ್ವಾರ್ಧ ಗೋಳದ ನದಿಗಳಲ್ಲಿ ಇದೇ ಬಹು ಉದ್ದವಾದುದು. ಇದು ಸಮಭಾಜಕವೃತ್ತಕ್ಕೆ ಸಮೀಪದಲ್ಲಿರುವ ವಿಕ್ಟೋರಿಯಾನ್ಯಾಂಜ ಸರೋವರಕ್ಕೆ ದಕ್ಷಿಣದಲ್ಲಿ ಹುಟ್ಟಿ, ಸ್ವಲ್ಪ ದೂರ ಹರಿದು ಈ ಸರೋವರವನ್ನು ಪ್ರವೇಶಿಸುವುದು. ಈ ಸರೋವರವು ಸಮುದ್ರಮಟ್ಟಕ್ಕೆ 3,720 ಅಡಿಗಳಷ್ಟು ಎತ್ತರದಲ್ಲಿರುವುದು. ಮತ್ತು ಎಲ್ಲಾ ಋತುಗಳಲ್ಲಿಯೂ ಸಮಭಾಜಕವೃತ್ತದ ಸಮೀಪದಲ್ಲಿ ಬೀಳುವ ಮಳೆಯಿಂದ ಪೋಷಿತವಾದ ಅನೇಕ ನದಿಗಳು ಇದನ್ನು ಸೇರುವುವು. ಈ ಸರೋವರದಿಂದ ಹೊರಟು ನೈಲ್ ನದಿಯು ಆಲ್ಬರ್ಟ್‌ನ್ಯಾಂಜ ಸರೋವರವನ್ನು ಹೊಕ್ಕು, ಅಲ್ಲಿಂದ ಹೊರಟು ಪೂರ್ವಭಾಗದ ಪ್ರಸ್ಥಭೂಮಿಯಿಂದಿಳಿದು ಸೂಡಾನನ್ನು ಪ್ರವೇಶಿಸುತ್ತದೆ. ಸೂಡಾನಿಗೆ ಹೋಗುವವರೆಗೂ ಈ ನದಿಯು ವಿಶೇಷವಾಗಿ ಮಳೆ ಬೀಳುವ ಪ್ರದೇಶಗಳಲ್ಲಿ ಹರಿಯುತ್ತದೆ. ಆದುದರಿಂದ ನದಿಯಲ್ಲಿ ನೀರು ಹೆಚ್ಚಾಗಿರುವುದು. ಸರೋವರಗಳ ಮೂಲಕವಾಗಿ ಹರಿದು ಬರುವಾಗ ಅದರ ಕಶ್ಮಲಗಳೆಲ್ಲವೂ ಅಲ್ಲಿಯೇ ನಿಂತು ಶುದ್ಧವಾದ ನೀರು ಹೊರಗೆ ಹರಿಯುವುದು. ಆದುದರಿಂದ ಈ ಭಾಗದಲ್ಲಿ ಹರಿಯುವ ನೈಲ್ ನದಿಗೆ ಬಿಳಿಯ ನೈಲ್ ಎಂದು ಹೆಸರು. ಸರೋವರಗಳ ಮೂಲಕ ಹರಿಯುವುದರಿಂದ ನದಿಯಲ್ಲಿ ಪ್ರವಾಹವು ಏಕಾಏಕಿ ಹೆಚ್ಚುವುದೂ ಇಲ್ಲ.

ಖಾರ್ಟೂಂ ಪಟ್ಟಣದವರೆಗೂ ನೈಲ್ ನದಿಯ ನೀರು ಶುದ್ಧವಾಗಿರುವುದು. ಪ್ರವಾಹವು ಅಗಲವಾಗಿಯೂ, ನಿಧಾನವಾಗಿಯೂ ಹರಿಯುವುದು. ಅಲ್ಲಲ್ಲಿ ನೀರಿನ ಮೇಲೆ 'ಸಡ್' ಎಂಬ ಜೊಂಡು ಬೆಳೆಯುವುದು. ಇದು ನೆಲದ

ಸಂಬಂಧವಿಲ್ಲದೆ ನೀರಿನ ಮೇಲೆಯೇ ಹುಟ್ಟಿ ಬೆಳೆದು, ತೇಲಿಬರುವ ಕಸಕಡ್ಡಿ ಮೊದಲಾದುವುಗಳೊಂದಿಗೆ ಸೇರಿ, ದೋಣಿಗಳ ಸಂಚಾರಕ್ಕೆ ಬಹಳ ತೊಂದರೆಯನ್ನುಂಟುಮಾಡುವುದು.

ನೀಲ ನದಿಯೆಂಬ ಉಪನದಿಯು ಅಬಿಸೀನಿಯದ ಬೆಟ್ಟಗಳಲ್ಲಿ ಹುಟ್ಟಿ, ಅತಿ ವೇಗವಾಗಿ ಹರಿದು ಬಂದು ಖಾರ್ಟೂಮಿನ ಬಳಿ ನೈಲಿನೊಂದಿಗೆ ಸಂಗಮವಾಗುವುದು. ಇನ್ನು ಸ್ವಲ್ಪ ಉತ್ತರದಲ್ಲಿ ಅಬಿಸೀನಿಯದಿಂದಲೇ ಬರುವ ಅತ್ಬಾರ ಎಂಬ ಉಪನದಿಯೂ ಸಂಗಮವಾಗುವುದು. ಬೇಸಿಗೆಯಲ್ಲಿ ಸುಮಾರು 3—4 ತಿಂಗಳು ದಕ್ಷಿಣ ಇಂಡಿಯದ ನದಿಗಳಲ್ಲಿನಂತೆ ಈ ಎರಡು ನದಿಗಳಲ್ಲಿ ನೀರು ವಿಶೇಷವಾಗಿ ಹರಿಯುವುದು ಮತ್ತು ಮಣ್ಣು ಮೆಕ್ಕಲು ಹೆಚ್ಚಾಗಿ ಕೊಚ್ಚಿಕೊಂಡು ಬರುವುದು. ಇದರಿಂದ ಆ ಕಾಲದಲ್ಲಿ ಹೆಚ್ಚಾಗಿ ನೀರೂ, ಮಣ್ಣೂ ಬಂದು ಸೇರಿ ನೈಲ್ ನದಿಯ ನೀರು ಬಂಡಾಗುವುದು.

ಖಾರ್ಟೂಂನಲ್ಲಿ ವರ್ಷಕ್ಕೆ 4 ಅಂಗುಲಗಳಷ್ಟು ಮಳೆ ಬೀಳುವುದು. ಉತ್ತರಕ್ಕೆ ಹೋದಹಾಗೆ ಮಳೆಯು ಇನ್ನೂ ಕಡಿಮೆಯಾಗುವುದು. ಖಾರ್ಟೂಮಿನಿಂದ ಅಸ್ಸೂವನ್‌ವರೆಗೆ ಈ ನದಿಯು ಪ್ರಸ್ಥಭೂಮಿಯಿಂದಿಳಿಯುವುದು. ಆದುದರಿಂದ ಇಲ್ಲಿ ಆರು ದೊಡ್ಡ ಜಲಪಾತಗಳಿರುವುವು. ಅತ್ಬಾರ ನದಿಯು ಸಂಗಮವಾದಮೇಲೆ ನೈಲ್ ನದಿಗೆ ಇನ್ಯಾವ ಉಪನದಿಯೂ ಸೇರುವುದಿಲ್ಲ. ಅಲ್ಲದೆ ಇದು ಮಳೆಯಿಲ್ಲದ ಬೆಂಗಾಡಿನಲ್ಲಿ ಹರಿಯುವುದು. ಆದುದರಿಂದ ಸಿಂಧೂ ನದಿಯಂತೆ ಈ ನದಿಯಲ್ಲಿಯೂ ಮುಖದ ಸಮೀಪಕ್ಕೆ ಹೋದಹಾಗೆಲ್ಲಾ ನೀರು ಕಡಿಮೆಯಾಗುವುದು. ಕೈರೋ ಪಟ್ಟಣದ ಆಚೆ ಇದರ ಮುಖಜಭೂಮಿಯು ಪ್ರಾರಂಭಿಸುವುದು. ನದಿಯು ಅನೇಕ ಶಾಖೆಗಳಾಗಿ ಒಡೆದು ಮೆಡಿಟರೇನಿಯನ್ ಸಮುದ್ರವನ್ನು ಸೇರುವುದು. ಈ ಶಾಖೆಗಳಲ್ಲಿ ಡಾಮಿಯಟ್ಟ ಮತ್ತು ರೊಸೆಟ್ಟ ಎಂಬುವು ಮಾತ್ರ ದೊಡ್ಡವಾಗಿ ಹಡಗುಗಳ ಸಂಚಾರಕ್ಕೆ ಯೋಗ್ಯವಾಗಿರುವುವು

ನೈಲ್ ನದಿಯು ಈಜಿಪ್ಟ್ ದೇಶಕ್ಕೆ ಮಾತೃಪ್ರಾಯವಾಗಿರುವುದು. ಪ್ರವಾಹ ಕಾಲದಲ್ಲಿ ಇದರ ನೀರು ದಡಗಳ ಮೇಲೆ ಹೊರಳಿ ಮಣ್ಣು ನಿಂತು ಭೂಮಿಯು ಫಲವತ್ತಾಗಿರುವುದು. ಈಜಿಪ್ಟ್‌ನಲ್ಲಿ ಮಳೆಯ ಮಾತೇ ಇಲ್ಲದುದರಿಂದ ಈ ನದಿಯ ನೀರನ್ನು ಯಂತ್ರಗಳ ಮೂಲಕ ಎತ್ತಿ ವ್ಯವಸಾಯ ಮಾಡುವರು. ಅಲ್ಲಲ್ಲಿ ಕಾಲುವೆಗಳನ್ನು ತೆಗೆದು ಅದರಿಂದ ಜಮೀನುಗಳಿಗೆ ನೀರನ್ನು ಹಾಯಿಸಿಕೊಳ್ಳುವರು. ಅಸ್ಸೂವನ್ ಪಟ್ಟಣದ ಸಮೀಪದಲ್ಲಿ ಈಚೆಗೆ ಒಂದು ದೊಡ್ಡ ಅಣೆಕಟ್ಟನ್ನು ಕಟ್ಟಿ ಕೆರೆಯನ್ನು ಮಾಡಿ, ಅದರ ನೀರಿನಿಂದ ಸಾವಿರಾರು ಎಕರೆ ಜಮೀನುಗಳನ್ನು ಸಾಗುವಳಿ ಮಾಡುತ್ತಿರುವರು. ನೈಲ್ ನದಿಯ ಪ್ರದೇಶದಲ್ಲಿ ನೀರು ಹಾಯದ ಭಾಗಗಳೆಲ್ಲಾ ಮರಳುಕಾಡುಗಳಾಗಿವೆ.

ಈ ನದಿಯ ಎರಡು ಪಕ್ಕಗಳಲ್ಲಿಯೂ ನೆಲವು ಸ್ವಲ್ಪ ದೂರ ಮಾತ್ರವೇ ಹಸುರಾಗಿ ಕಾಣುವುದು.

ಅಸ್ಸೂವನ್‌ವರೆಗೆ ಸಮುದ್ರದ ಹಡಗುಗಳು ಈ ನದಿಯಮೇಲೆ ಪ್ರಯಾಣ ಮಾಡಬಹುದು. ಅದರಿಂದ ದಕ್ಷಿಣಕ್ಕೆ ಜಲಪಾತಗಳಿರುವುದರಿಂದಲೂ, 'ಸಡ್' ಎಂಬ ಜೊಂಡಿನಿಂದ ತೊಂದರೆಯಾಗುವುದರಿಂದಲೂ ಹಡಗುಗಳು ಸಂಚರಿಸಲಾರವು. ಅಲ್ಲಲ್ಲಿ ದೋಣಿಗಳು ಮಾತ್ರ ಸಂಚರಿಸುವುವು. ಈ ನದಿಯ ಮುಖದ ಸಮೀಪದಲ್ಲಿ ಅಲೆಗ್ಸಾಂಡ್ರಿಯ ಎಂಬ ಪ್ರಸಿದ್ಧವಾದ ರೇವುಪಟ್ಟಣವಿರುವುದು.

ಪೂರ್ವಭಾಗದ ಪ್ರಸ್ಥಭೂಮಿಯಲ್ಲಿ ವಿಕ್ಟೋರಿಯಾನ್ಯಾಂಜ ಸರೋವರವಲ್ಲದೆ ಇನ್ನೂ ಅನೇಕ ಸರೋವರಗಳಿರುವುವು; ಇವುಗಳಲ್ಲಿ ತಾಂಗನೀಕ, ಬಾಂಗಿಯೋಲೊ, ನ್ಯಸ್ಸ ಎಂಬುವು ಮುಖ್ಯವಾದುವು. ಈ ಸರೋವರಗಳೆಲ್ಲವೂ ಉದ್ದುದ್ದವಾಗಿರುವುವು. ಇವುಗಳ ದಡಗಳು ಬಹಳ ಎತ್ತರವಾಗಿರುವುವು. ಇವುಗಳಲ್ಲಿ ಆಳವು ಹೆಚ್ಚಾಗಿರುವುದು.

ಕಾಂಗೋ ನದಿಯು ಬಾಂಗಿಯೋಲೊ ಸರೋವರದಲ್ಲಿ ಹುಟ್ಟಿ, ತಾಂಗನೀಕ ಸರೋವರದಿಂದ ಬರುವ ಲುವಲಾಬ ಎಂಬ ಉಪನದಿಯನ್ನು ಸ್ವೀಕರಿಸಿ, ಸ್ಟ್ಯಾನ್ಲಿ ಜಲಪಾತವೆಂಬ ಸ್ಥಳದಲ್ಲಿ ಪೂರ್ವಭಾಗದ ಪ್ರಸ್ಥಭೂಮಿಯಿಂದ ವೇಗವಾಗಿ ಇಳಿದು, ಅನಂತರ 1,000 ಮೈಲಿಗಳವರೆಗೂ ಮೈದಾನದಲ್ಲಿ ಹರಿಯುವುದು. ಈ ಭಾಗದಲ್ಲಿ ಸಮಭಾಜಕವೃತ್ತದ ಉತ್ತರದಿಂದಲೂ, ದಕ್ಷಿಣದಿಂದಲೂ ಅನೇಕ ಉಪನದಿಗಳು ಈ ನದಿಯನ್ನು ಸೇರುವುವು. ಅನಂತರ ಈ ನದಿಯು ಸ್ಟ್ಯಾನ್ಲಿಪೂಲ್ ಎಂಬ ಸ್ಥಳದ ಆಚೆ ಪಶ್ಚಿಮಭಾಗದ ಪರ್ವತಗಳನ್ನು ಭೇದಿಸಿಕೊಂಡು 1,000 ಅಡಿಗಳಷ್ಟು ಇಳಿದು ಅನೇಕ ಜಲಪಾತಗಳಲ್ಲಿ ಧುಮುಕಿ, ಪಶ್ಚಿಮತೀರದ ಅಂಚಿನಲ್ಲಿರುವ ತಗ್ಗಾದ ಮೈದಾನದಲ್ಲಿ 110 ಮೈಲಿಗಳ ದೂರ ಹರಿದು, ವಿಶಾಲವಾದ ಅಳಿವೆಯನ್ನು ಮಾಡಿಕೊಂಡು ಅಟ್ಲಾಂಟಿಕ್ ಸಾಗರವನ್ನು ಸೇರುವುದು. ಈ ನದಿಯ ಕೊನೆಯ ಭಾಗದಲ್ಲಿ ಮಣ್ಣು ಮೆಕ್ಕಲು ವಿಶೇಷವಾಗಿರುವುದು; ವೇಗವೂ ಬಹಳ ಹೆಚ್ಚಾಗಿರುವುದು. ಆದುದರಿಂದ ಸಾಗರದಲ್ಲಿ ಇದರ ಮುಖಕ್ಕೆ ಮುಂದೆ ಅನೇಕ ಮೈಲಿಗಳವರೆಗೆ ಬಣ್ಣದಿಂದ ಈ ನದಿಯ ನೀರು ಕಾಣಬರುವುದು. ಇದರ ಮುಖದ ಸಮೀಪದಲ್ಲಿ ಬೋಮವೆಂಬ ರೇವು ಪಟ್ಟಣವಿರುವುದು.

ಮಧ್ಯಭಾಗದಲ್ಲಿ ಸಾವಿರಾರು ಮೈಲಿಗಳ ದೂರ ಈ ನದಿಯ ಮೇಲೆ ಹಡಗುಗಳು ಸಂಚರಿಸಬಹುದು. ಜಲಪಾತಗಳಿರುವ ಸ್ಥಳದಲ್ಲಿ ರೈಲುಮಾರ್ಗಗಳನ್ನು ಮಾಡಿರುವರು. ಸದಾ ಮಳೆಯಾಗುವ ಪ್ರದೇಶಗಳಲ್ಲಿ ಹರಿಯುವುದರಿಂದ ಈ ನದಿಯಲ್ಲಿ ನೀರು ಬಹು ಹೆಚ್ಚಾಗಿರುವುದು. ಈ ಖಂಡದ ಇತರ

ನದಿಗಳಲ್ಲೆಲ್ಲಾ ಒಟ್ಟು ಎಷ್ಟು ನೀರು ಹರಿಯುವುದೋ ಅಷ್ಟೂ ಇದೊಂದ ರಲ್ಲಿಯೇ ಹರಿಯುವುದೆಂದು ಹೇಳಬಹುದು. ಹರಿಯುವ ನೀರಿನ ಪರಿಮಾಣದಲ್ಲಿ ಈ ನದಿಯು ಪ್ರಪಂಚದಲ್ಲಿ ಅಮೆಜಾನ್ ನದಿಗೆ ಎರಡನೆಯದಾಗಿದೆ.

ಜಾಂಬೀಸಿ ನದಿಯು ಕಾಂಗೋ ನದಿಯ ಮೂಲದ ಸಮೀಪದಲ್ಲಿ ಹುಟ್ಟಿ ದಕ್ಷಿಣಕ್ಕೆ ಹರಿದು, ಪೂರ್ವಕ್ಕೆ ತಿರುಗಿ, ವಿಕ್ಟೋರಿಯ ಫಾಲ್ಸ್ ಎಂಬ ಜಲಪಾತ ದಲ್ಲಿ ಧುಮುಕುವುದು. ಈ ಜಲಪಾತವು ನೋಡುವುದಕ್ಕೆ ಅತ್ಯಂತ ಸುಂದರ ವಾಗಿರುವುದು. ಸುಮಾರು ಒಂದು ಮೈಲಿಯಷ್ಟು ಅಗಲವಾಗಿರುವ ನದಿಯು ಸುಮಾರು 80 ಅಡಿಗಳಷ್ಟು ಮಾತ್ರ ವಿಸ್ತಾರವುಳ್ಳ ಪಾತ್ರದಲ್ಲಿ ಸಂಕುಚಿತವಾಗಿ 400 ಅಡಿಗಳಷ್ಟು ಕೆಳಕ್ಕೆ ಧುಮುಕುವುದು. ನೀರು ಬೀಳುವ ಕಮರಿಯು 50 ಅಡಿಗಳಷ್ಟು ಮಾತ್ರ ವಿಸ್ತಾರವಾಗಿರುವುದು. ಹೀಗೆ ಮೇಲಿನಿಂದ ಬೀಳುವ ನೀರು ತುಂತುರು ತುಂತುರಾಗಿ ಹೊಗೆಯಂತೆ ಕಾಣುವುದು. ಮತ್ತು ಕೆಳಗಿನ ಗುಂಡಿಯಲ್ಲಿ ಬಹು ಶಬ್ದದಿಂದ ಕುದಿಯುತ್ತಾ ಇರುವಂತೆ ಕಾಣುವುದು. ಈ ಶಬ್ದವು ಅನೇಕ ಮೈಲಿಗಳವರೆಗೂ ಕೇಳಿಸುವುದು. ಈ ಜಲಪಾತವನ್ನು ಅಲ್ಲಿಯ ನಿವಾಸಿಗಳು 'ಗುಡುಗಿನ ಹೊಗೆ'ಯೆಂದು ಕರೆಯುತ್ತಾರೆ. ವಿಕ್ಟೋರಿಯಾ ಜಲಪಾತದಿಂದ ಮುಂದಕ್ಕೆ ಈ ನದಿಯು ಕೆಲವು ಕಡೆಗಳಲ್ಲಿ ಮೈದಾನದಲ್ಲಿ ಅಗಲ ವಾಗಿ ಹರಿಯುತ್ತಲೂ, ಇನ್ನು ಕೆಲವೆಡೆಗಳಲ್ಲಿ ಕಡಿದಾದ ಬಂಡೆಗಳ ಮಧ್ಯದಲ್ಲಿ ಹರಿಯುತ್ತಲೂ ಅಲ್ಲಲ್ಲಿ ಧುಮುಕುತ್ತಲೂ ಹೋಗಿ, ಪೂರ್ವದ ಬೆಟ್ಟಗಳನ್ನು ಭೇದಿಸಿಕೊಂಡು ತಗ್ಗಾದ ತೀರಪ್ರದೇಶದ ಮೈದಾನಕ್ಕೆ ಹರಿದು, ನ್ಯಸ್ಸ ಸರೋವರದಿಂದ ಬರುವ ಷೈರ್ ನದಿಯನ್ನು ಸ್ವೀಕರಿಸಿ, ನದಿಯ ಮುಖಜ ಭೂಮಿಯನ್ನು ನಿರ್ಮಿಸಿಕೊಂಡು, ಶಾಖೆಗಳಾಗಿ ಹಿಂದೂಸಾಗರಕ್ಕೆ ಬೀಳುತ್ತದೆ. ಈ ಶಾಖೆಗಳಲ್ಲೆಲ್ಲಾ ಚಿಂಡೆ ಎಂಬುದೊಂದೇ ಹಡಗುಗಳ ಸಂಚಾರಕ್ಕೆ ಯೋಗ್ಯ ವಾದುದು. ಜಲಪಾತಗಳು ವಿಶೇಷವಾಗಿರುವುದರಿಂದ ಈ ನದಿಯಲ್ಲಿ ಹಡಗು ಗಳು ಪ್ರಯಾಣಮಾಡುವುದು ಕಷ್ಟ. ಈ ನದಿಯು ಹುಲ್ಲುಗಾವಲುಗಳ ಮಧ್ಯ ದಲ್ಲಿ ಹರಿದುಹೋಗುವುದರಿಂದ ಮುಂದೆ ಜನವಸತಿಗೆ ಅನುಕೂಲವಾಗಬಹುದು.

ಜಾಂಬೀಸಿ ನದಿಗೆ ದಕ್ಷಿಣದಲ್ಲಿರುವ ದಕ್ಷಿಣ ಆಫ್ರಿಕದ ನದಿಗಳು ವೇಗ ವಾಗಿ ಬಂಡೆಗಳ ಮೇಲೆ ಹರಿಯುವುದರಿಂದಲೂ, ಬೇಸಿಗೆಯಲ್ಲಿ ಅವುಗಳಲ್ಲಿ ನೀರು ಬಹುಮಟ್ಟಿಗೆ ಬತ್ತಿಹೋಗುವುದರಿಂದಲೂ ವ್ಯಾಪಾರಕ್ಕೂ, ವ್ಯವಸಾಯಕ್ಕೂ ಅನುಕೂಲವಾಗಿಲ್ಲ. ಆರೆಂಜ್ ನದಿಯು 1,200 ಮೈಲಿಗಳಷ್ಟು ಉದ್ದವಾಗಿರು ವುದು. ಆದರೆ ಇದರಲ್ಲಿ ನೀರು ಕಡಿಮೆ. ಈ ನದಿಯೂ ವಾಲ್ ನದಿಯೂ ಡ್ರೇಕನ್‌ಬರ್ಗ್ ಬೆಟ್ಟಗಳಲ್ಲಿ ಹುಟ್ಟಿ, ಪಶ್ಚಿಮಾಭಿಮುಖವಾಗಿ ಹರಿದು ಸಂಗಮ ವಾಗುವುವು. ಆರೆಂಜ್ ನದಿಯು ಪಶ್ಚಿಮದಲ್ಲಿ ಮರುಭೂಮಿಯ ಮೇಲೆ ಹರಿಯುವುದರಿಂದ ಇದರ ನೀರು ಕಡಿಮೆಯಾಗುತ್ತಾ ಹೋಗುವುದು. ಮತ್ತು

ಇಕ್ಕಟ್ಟಾದ ಆಳವಾದ ಕಣಿವೆಗಳಲ್ಲಿ ಹರಿಯುವುದರಿಂದ ವ್ಯಾಪಾರಕ್ಕೆ ಅನುಕೂಲ ವಾಗಿಲ್ಲ. ಲಿಂಪೊಪೊ ನದಿಯು ಟ್ರಾನ್ಸ್‌ವಾಲಿನಲ್ಲಿ ಹುಟ್ಟಿ ಹಿಂದೂಸಾಗರವನ್ನು ಸೇರುವುದು.

ಸಹರದಲ್ಲಿ ಚಾಡ್‌ಸರೋವರವಿರುವಂತೆ ಕಲಹರಿ ಮರುಭೂಮಿಯಲ್ಲಿ ಗಾಮಿಯೆಂಬ ಸರೋವರವಿರುವುದು. ಇದನ್ನು ಕೆಲವು ನದಿಗಳು ಸೇರಿದರೂ ಮರುಭೂಮಿಯ ಮಧ್ಯದಲ್ಲಿರುವುದರಿಂದ ಇದರಿಂದ ನೀರು ಹೊರಕ್ಕೆ ಹರಿಯುವುದಿಲ್ಲ.

**ಸಸ್ಯಗಳು ಮತ್ತು ಪ್ರಾಣಿಗಳು.**—ಆಫ್ರಿಕಾ ಖಂಡದಲ್ಲಿ ಉತ್ತರದಲ್ಲಿಯೂ, ದಕ್ಷಿಣದಲ್ಲಿಯೂ ಮರುಭೂಮಿಗಳು ಹೆಚ್ಚು; ಮಧ್ಯದಲ್ಲಿ ಕಾಡುಗಳು ಹೆಚ್ಚಾಗಿವೆ. ಅಲ್ಲಲ್ಲಿ ಮಾತ್ರ ಕೃಷಿಯು ಜನರ ಉದ್ಯೋಗವಾಗಿರುವುದು.

ಮೆಡಿಟರೇನಿಯನ್ ತೀರಪ್ರದೇಶದಲ್ಲಿ, ಅಂದರೆ ಬಾರ್ಬರಿ ಸಂಸ್ಥಾನಗಳಲ್ಲಿ ಭೂಮಿಯು ಫಲವತ್ತಾಗಿರುವುದು. ಮಳೆಯು ತಕ್ಕಮಟ್ಟಿಗೆ ಬರುವುದು; ವಾಯುಗುಣವು ತಂಪಾಗಿರುವುದು. ಆದುದರಿಂದ ಪರ್ವತಪ್ರದೇಶಗಳಲ್ಲಿ ಕಾಡುಗಳಿವೆ. ಮೈದಾನಗಳಲ್ಲಿ ಗೋಧಿ, ಮೆಕ್ಕೆಜೋಳ, ದ್ವಿದಳಧಾನ್ಯಗಳು ಮತ್ತು ದ್ರಾಕ್ಷಿ, ಅಂಜೂರ ಮೊದಲಾದ ಹಣ್ಣುಗಳು ಬೆಳೆಯುತ್ತವೆ. ಇಲ್ಲಿ ಆಲ್ಪ ಎಂಬ ಹುಲ್ಲು ವಿಶೇಷವಾಗಿ ಬೆಳೆಯುವುದು. ಯೂರೋಪಿಗೆ ಇದನ್ನು ಆಮದು ಮಾಡಿಕೊಂಡು ಇದರಿಂದ ಉತ್ತಮತರದ ಕಾಗದವನ್ನು ತಯಾರುಮಾಡುವರು.

ಅಟ್ಲಾಸ್ ಪರ್ವತಗಳ ದಕ್ಷಿಣಭಾಗದಲ್ಲೂ, ಸಹರಾ ಮರುಭೂಮಿಯಲ್ಲೂ ಮಳೆಯು ಬಹಳ ಕಡಿಮೆ; ಬಿಸಿಲು ಹೆಚ್ಚು. ಆದುದರಿಂದ ಎಲ್ಲೆಲ್ಲೂ ಬೆಂಗಾಡು ಪ್ರದೇಶವಿರುವುದು. ಇಲ್ಲಿ ಮುಳ್ಳುಗಿಡಗಳು ವಿಶೇಷವಾಗಿ ಬೆಳೆಯುವುವು. ವಾಡಿಗಳು ಹರಿಯುವ ಪ್ರದೇಶದಲ್ಲಿಯೂ, ಅಲ್ಪಸ್ವಲ್ಪ ಮಳೆಯು ಬರುವ ಪ್ರದೇಶಗಳಲ್ಲಿಯೂ ಹುಲ್ಲುಗಾವಲುಗಳಿರುವುವು; ಇವುಗಳಲ್ಲಿ ಕುದುರೆಗಳನ್ನೂ, ಕುರಿ, ಮೇಕೆಗಳನ್ನೂ, ಒಂಟೆಗಳನ್ನೂ, ದನಗಳನ್ನೂ ಸಾಕುತ್ತಾರೆ. ಓಯಸಿಸ್‌ಗಳಲ್ಲಿ ಖರ್ಜೂರವು ಹೇರಳವಾಗಿ ಬೆಳೆಯುವುದು. ಕೆಲವು ಓಯಸಿಸ್‌ಗಳು ಬಹಳ ದೊಡ್ಡವಾಗಿರುವುದರಿಂದ ಅವುಗಳಲ್ಲಿ ಕಬ್ಬು, ಹತ್ತಿಯೂ ಬೆಳೆಯುವುವು.

ಈಜಿಪ್ಟ್ ದೇಶದಲ್ಲಿ ನೈಲ್ ನದಿಯ ಪ್ರದೇಶವನ್ನು ದೊಡ್ಡ ಓಯಸಿಸ್ ಎಂದು ಭಾವಿಸಬಹುದು. ಈ ಪ್ರದೇಶದ ಎರಡು ಕಡೆಗಳಲ್ಲಿಯೂ ಮರಳುಕಾಡುಗಳಿರುವುವು. ನೈಲ್ ನದಿಯು ಹರಿಯುವ ಪ್ರದೇಶದಲ್ಲಿ ಆ ನದಿಯಿಂದ ತರಲ್ಪಟ್ಟ ಒಂಡುಮಣ್ಣಿನಿಂದ ಭೂಮಿಯು ಫಲವತ್ತಾಗಿರುವುದು. ನದಿಯಿಂದ ನೀರನ್ನು ಎತ್ತಿ ವ್ಯವಸಾಯ ಮಾಡುತ್ತಾರೆ. ಕಾಲುವೆಗಳನ್ನು ತೋಡಿ ಅವುಗಳಿಂದಲೂ ನೀರು ಹಾಯಿಸುತ್ತಾರೆ. ಆದುದರಿಂದ ಈ ನದಿಯ

ಎರಡು ಕಡೆಗಳಲ್ಲಿಯೂ ಸ್ವಲ್ಪ ದೂರ ವ್ಯವಸಾಯವು ಚೆನ್ನಾಗಿ ನಡೆಯುವುದು. ಗೋಧಿ, ಬತ್ತ, ಹತ್ತಿ, ಜೋಳದಂತಹ ಡೂರ ಎಂಬ ಧಾನ್ಯ, ಹೊಗೆಯಸೊಪ್ಪು ಮತ್ತು ದ್ವಿದಳಧಾನ್ಯಗಳು ಇವುಗಳನ್ನು ವಿಶೇಷವಾಗಿ ಬೆಳೆಯುವರು.

ಕೆಂಪು ಸಮುದ್ರದಲ್ಲಿಯೂ, ಮೆಡಿಟರೇನಿಯನ್ ಸಮುದ್ರದಲ್ಲಿಯೂ ಹವಳವೂ, ಸ್ಪಂಜೂ ಸಿಕ್ಕುವುವು. ಕೆಂಪು ಸಮುದ್ರದಲ್ಲಿ ಮುತ್ತೂ ಸಿಕ್ಕುವುದುಂಟು. ಸೂಡಾನಿನಲ್ಲಿ ಬೇಸಿಗೆಯಲ್ಲಿ ಮಳೆಯು ತಕ್ಕಮಟ್ಟಿಗೆ ಬೀಳುತ್ತದೆ. ಬಿಸಿಲು ಹೆಚ್ಚು. ಆದುದರಿಂದ ಅಲ್ಲಿ ಡೂರಾ, ಮೆಕ್ಕೆಜೋಳ, ಬತ್ತ, ಹತ್ತಿ, ನೀಲಿ ಮತ್ತು ಕಬ್ಬು ಬೆಳೆಯುತ್ತವೆ. ಉದ್ದವಾದ ಹುಲ್ಲುಳ್ಳ ಹುಲ್ಲುಗಾವಲುಗಳು ವಿಶೇಷವಾಗಿವೆ. ಇಲ್ಲಿ ದನಗಳನ್ನು ಹೆಚ್ಚಾಗಿ ಮೇಯಿಸುತ್ತಾರೆ. ಅಬಿಸೀನಿಯದಲ್ಲಿ ತಗ್ಗಾದ ಕಣಿವೆಗಳಲ್ಲಿ ಬಾಳೆಯಹಣ್ಣೂ, ಕಬ್ಬೂ ಬೆಳೆಯುವುವು. ಎತ್ತರವಾದ ಬೆಟ್ಟಗಳ ತಪ್ಪಲುಗಳಲ್ಲಿ ಗೋಧಿಯೂ, ಆಲಿವ್ ಮರವೂ, ಉತ್ತಮವಾದ ಕಾಫಿಯೂ ಬೆಳೆಯುತ್ತವೆ. ಆದರೆ ಅಲ್ಲಿನ ಜನಗಳ ಮುಖ್ಯೋದ್ಯೋಗವು ಪಶುಪಾಲನೆಯು. ಹುಲ್ಲುಗಾವಲುಗಳಲ್ಲಿ ದನಗಳನ್ನು ಮೇಯಿಸುವರು. ಕಾಡುಗಳೂ ವಿಶೇಷವಾಗಿವೆ. ಅವುಗಳಲ್ಲಿ ಆನೆಯೂ, ಕಸ್ತೂರಿ ಮೃಗವೂ ಹೆಚ್ಚಾಗಿವೆ.

ಗಿನೀ ತೀರದ ಪ್ರದೇಶದಲ್ಲೂ, ಕಾಂಗೊ ಮತ್ತು ಜಾಂಬೀಸಿ ನದಿಗಳ ಜಲಾನಯನಭೂಮಿಗಳಲ್ಲಿಯೂ, ಪೂರ್ವ ಆಫ್ರಿಕದಲ್ಲಿಯೂ ಸೆಕೆಯೂ ಮಳೆಯೂ ಹೆಚ್ಚು. ಮಳೆಯು ಸಾಮಾನ್ಯವಾಗಿ ಎಲ್ಲಾ ಋತುಗಳಲ್ಲಿಯೂ ಬೀಳುವುದು. ಆದುದರಿಂದ ಎಲ್ಲೆಲ್ಲೂ ಉಷ್ಣವಲಯದ ಕಾಡುಗಳಿರುವುವು. ಈ ಕಾಡುಗಳಲ್ಲಿ ಮರಗೆಲಸಕ್ಕೆ ಉಪಯೋಗವಾದ ಕರೀಮರ, ರೋಜ್‌ಮರ ಮೊದಲಾದ ಮರಗಳೂ, ರಬ್ಬರ್, ಬಾಳೆ, ತೆಂಗು, ತಾಳೆಗಳೂ, ಇನ್ನೂ ಅನೇಕ ಜಾತಿಯ ವೃಕ್ಷಗಳೂ ಬೆಳೆಯುತ್ತವೆ. ಇಲ್ಲಿ ಬೆಳೆಯುವ 'ಬೇಯೊಬಾಬ್' ಎಂಬ ಮರವು ಮರಗಳಲ್ಲೆಲ್ಲಾ ಅತ್ಯಂತ ದೊಡ್ಡದು. ಇದರ ಮುಂಡದ ಸುತ್ತಳತೆಯು ಕೆಲವು ವೇಳೆ 100 ಅಡಿಗಳಷ್ಟಿರುವುದು. ಇದರ ತೊಗಟೆಯು ಜ್ವರವನ್ನು ಹೋಗಲಾಡಿಸುವುದು. ಇದರ ನಾರಿನಿಂದ ಹಗ್ಗವನ್ನೂ ಬಟ್ಟೆಯನ್ನೂ ಮಾಡಬಹುದು. ಇದರ ಹಣ್ಣು ಕಂಚೀಹಣ್ಣಿನಷ್ಟು ದೊಡ್ಡದಾಗಿರುವುದು. ಈ ಹಣ್ಣಿನ ಹುಳಿಯಾದ ತಿರುಳನ್ನು ಆ ದೇಶದ ಜನರು ತಿನ್ನುವರು.

ಆನೆ, ಜಿಂಕೆ, ಜಿರಾಫ್, ಖಡ್ಗಮೃಗ, ಜೀಬ್ರ, ಕಾಡುಕೋಣ ಮೊದಲಾದ ಮೃಗಗಳು ಉದ್ದವಾಗಿ ಬೆಳೆದಿರುವ ಹುಲ್ಲನ್ನು ತಿಂದು ಕಾಡುಗಳಲ್ಲಿ ಹೇರಳವಾಗಿ ವಾಸವಾಗಿವೆ. ಆಫ್ರಿಕಾಖಂಡದ ಜನರು ಆನೆಯನ್ನು ಪಳಗಿಸುವುದನ್ನರಿಯರು. ಅದನ್ನು ಕೊಂದು ದಂತವನ್ನು ರಫ್ತುಮಾಡುತ್ತಾರೆ. ಕಾಡುಕೋಣವನ್ನು ಸಾಧುಮಾಡುವುದಿಲ್ಲ. ಜಿರಾಫ್ ಎಂಬುದರ ಕುತ್ತಿಗೆ ಬಹು ದೊಡ್ಡದು. ಇದನ್ನು

ಪಳಗಿಸುವುದು ಸುಲಭ. ಉದ್ದವಾದ ಕುತ್ತಿಗೆಯ ಸಹಾಯದಿಂದ ಇದು ಎತ್ತರವಾದ ಮರದ ಎಲೆಗಳನ್ನಾದರೂ ತಿನ್ನಬಲ್ಲುದು. ಜೀಬ್ರುವೆಂಬುದು ಕುದುರೆಯ ಹಾಗಿರುವುದು. ಆದರೆ ಮೈಮೇಲೆ ಹಳದಿ ಕಪ್ಪು ಪಟ್ಟೆಗಳಿರುವುವು. ಈ ಭಾಗದ ನದಿಗಳಲ್ಲಿ ಮೊಸಳೆಗಳು ವಿಶೇಷವಾಗಿರುವುವು. ನೀರಾನೆಯು ನದಿಗಳ ದಡಗಳಲ್ಲಿ ವಾಸಮಾಡುತ್ತದೆ. ಹುಲ್ಲು ತಿನ್ನುವುದು. ಇದರ ಚರ್ಮವು ಬಹು ಗಟ್ಟಿ. ಇದರ ಮಾಂಸವನ್ನು ಆಹಾರವಾಗಿ ಉಪಯೋಗಿಸುತ್ತಾರೆ. ಮೇಲೆ ಹೇಳಿದ ಸಸ್ಯಾಹಾರವುಳ್ಳ ಪ್ರಾಣಿಗಳನ್ನು ಕೊಲ್ಲಲು ಸಿಂಹವೂ, ಸಿವಂಗವೂ, ಕತ್ತೆಕಿರಬವೂ ಕಾಡುಗಳಲ್ಲಿ ಸಂಚರಿಸುವುವು. ದಕ್ಷಿಣ ಆಫ್ರಿಕದ ಪ್ರಾಣಿಗಳು ದಕ್ಷಿಣ ಇಂಡಿಯದ ಪ್ರಾಣಿಗಳ ಜಾತಿಗೆ ಸೇರಿವೆ. ಆದರೆ ಹುಲಿಯು ಆಫ್ರಿಕದಲ್ಲಿಲ್ಲ. ಬಾಭೂನ್ ಮೊದಲಾದ ಮನುಷ್ಯನಂತಿರುವ ಕೋತಿಗಳು ಈ ಖಂಡದಲ್ಲಿ ವಿಶೇಷವಾಗಿವೆ. ನಾಗರಹಾವೂ, ಇತರ ಹಾವುಗಳೂ ಹೆಚ್ಚಾಗಿವೆ.

ಕಾಂಗೋ ಜಲಾನಯನಭೂಮಿಯಲ್ಲಿ ಮಳೆಯು ಯಾವಾಗಲೂ ಬೀಳುವುದರಿಂದ ಮರಗಳು ಒತ್ತಾಗಿ ಬೆಳೆದು ದೊಡ್ಡ ಕಾಡುಗಳಿರುವುವು. ಇವುಗಳಲ್ಲಿ ನದಿಗಳು ಹೊರತು ಬೇರೆ ಮಾರ್ಗಗಳಿಲ್ಲ. ಅನೇಕ ಮರಗಳು 200 ಅಡಿಗಳಿಗಿಂತಲೂ ಹೆಚ್ಚು ಎತ್ತರವಾಗಿ ಬೆಳೆದಿರುವುವು. ಇವುಗಳ ಬುಡದಲ್ಲಿ ಸಣ್ಣ ಸಣ್ಣ ಗಿಡಗಳೂ, ಬಳ್ಳಿಗಳೂ ಬೆಳೆದು ಒಂದಕ್ಕೊಂದು ಸೇರಿಕೊಂಡಿರುವುದರಿಂದ ಸೂರ್ಯನ ಕಿರಣಗಳು ನೆಲದಮೇಲೆ ಬೀಳುವುದೇ ಇಲ್ಲ. ಈ ವೃಕ್ಷಗಳ ಬುಡದಲ್ಲಿ ಹಾವುಗಳೂ, ಕ್ರಿಮಿಕೀಟಗಳೂ, ಮೇಲ್ಭಾಗದಲ್ಲಿ ಕೋತಿಗಳೂ, ಪಕ್ಷಿಗಳೂ ಜೀವಿಸುವುವು. ವೃಕ್ಷಗಳು ನಿಬಿಡವಾಗಿ ಬೆಳೆದಿರುವ ಭಾಗಗಳಲ್ಲಿ ದೊಡ್ಡ ಮೃಗಗಳು ವಾಸಮಾಡಲಾರವು. ಆದರೆ ಕಾಡುಗಳ ಅಂಚುಗಳಲ್ಲಿಯೂ, ಮರಗಳು ಸ್ವಲ್ಪ ವಿರಳವಾಗಿರುವ ಭಾಗಗಳಲ್ಲಿಯೂ ಕಾಡುಮೃಗಗಳು ಸಂಚಾರಮಾಡುವುವು. ಇಂತಹ ಪ್ರದೇಶಗಳಲ್ಲಿ ಇವುಗಳನ್ನು ಬೇಟೆಯಾಡಿಕೊಂಡು ಅದರಿಂದ ಜೀವಿಸುವ ಕುಳ್ಳರಾದ ಅನಾಗರಿಕ ಜನಗಳು ವಾಸಮಾಡುವರು.

ಸೋಮಾಲಿಲ್ಯಾಂಡಿನಿಂದ ಜಾಂಬೀಸಿ ನದಿಯ ಜಲಾನಯನಭೂಮಿಯವರೆಗೆ, ಅಂದರೆ ಪೂರ್ವ ಆಫ್ರಿಕದ ತೀರದಲ್ಲಿರುವ ತಗ್ಗಾದ ಮೈದಾನಗಳಲ್ಲಿಯೂ, ಸರೋವರಗಳಿರುವ ಕಣಿವೆಗಳಲ್ಲಿಯೂ ಬಾಳೆ, ತೆಂಗು, ಸಂಬಾರದ ಜಿನಸುಗಳು ವಿಶೇಷವಾಗಿ ಬೆಳೆಯುತ್ತವೆ. ಬೆಟ್ಟಗಳ ಮೇಲೆ ಡೂರವನ್ನು ಸ್ವಲ್ಪ ಮಟ್ಟಿಗೆ ಬೆಳೆಯುವರು. ಇಲ್ಲಿ ಈಚಿಗೆ ಯೂರೊಪಿಯನ್ ಜನಗಳು ಕಾಫಿಯ ತೋಟಗಳನ್ನು ಮಾಡಿರುವರು. ಇಲ್ಲಿ ಕಾಡುಗಳೂ ಹೆಚ್ಚಾಗಿವೆ.

ಜಾಂಬೀಸಿ ನದಿಯ ಜಲಾನಯನಭೂಮಿಯಲ್ಲಿ ಉತ್ತಮವಾದ ಹುಲ್ಲುಗಾವಲುಗಳಿರುವುವು. ಆದರೆ ಇಲ್ಲಿ 'ಟೀಟ್ಸೆ' ಎಂಬ ಒಂದು ಜಾತಿಯ ನೊಣ

ವಿರುವುದರಿಂದ ಪಶುಪಾಲನೆಯು ಅಸಾಧ್ಯವಾಗಿರುವುದು. ಈ ನೊಣವು ಕಚ್ಚಿದರೆ ದನಗಳೂ, ಕುದುರೆಗಳೂ ಸ್ವಲ್ಪ ಕಾಲದಲ್ಲಿಯೇ ಸಾಯುವುವು. 'ನಿದ್ರೆಯ ರೋಗ' ವೆಂಬ ರೋಗವನ್ನು ಈ ನೊಣವು ಹರಡುವುದರಿಂದ ದನಗಳಿಗೆ ಅಪಾಯಕರ ವಾಗಿದೆ. ಈ ನೊಣಗಳಿಲ್ಲದ ಭಾಗಗಳಲ್ಲಿ ಮಾತ್ರ ದನಗಳನ್ನು ಮೇಯಿ ಸುತ್ತಾರೆ. ಇಲ್ಲಿ ಕಾಡುಗಳಲ್ಲಿ ರಬ್ಬರು ಮರಗಳು ಯಥೇಚ್ಛವಾಗಿರುವುವು.

ಕಾಂಗೋ ನದಿಯ ಜಲಾನಯನಭೂಮಿಗೆ ದಕ್ಷಿಣದಲ್ಲಿ ಬೆಟ್ಟ ಗುಡ್ಡಗಳ ಪ್ರದೇಶಗಳು ವಿಶೇಷವಾಗಿರುವುವು. ಮಳೆಯು ಕಡಿಮೆ; ವಾಯುಗುಣವು ಹಿತಕರವಾಗಿರುವುದು. ಇಲ್ಲಿ ಹುಲ್ಲುಗಾವಲುಗಳು ಹೆಚ್ಚಾಗಿರುವುವು. ಕುರಿ ಯನ್ನೂ ಉಷ್ಟ್ರಪಕ್ಷಿಯನ್ನೂ ವಿಶೇಷವಾಗಿ ಸಾಕುವರು. ಉಷ್ಟ್ರಪಕ್ಷಿಯು ಪಕ್ಷಿಯ ಜಾತಿಗೆ ಸೇರಿದ್ದರೂ ಎತ್ತರದಲ್ಲಿ ಹಾರಲಾರದು, ಆದರೆ ಅತಿವೇಗವಾಗಿ (ಅಂದರೆ ಗಂಟೆಗೆ 25 ಮೈಲಿಗಳವರೆಗೂ) ಓಡಬಲ್ಲುದು. ಇದರ ಮೊಟ್ಟೆಗಳನ್ನು ಆಯ್ದು ಶಾಖವಾದ ಸ್ಥಳದಲ್ಲಿಟ್ಟು ಮರಿಗಳನ್ನು ಮಾಡಿ ಅವುಗಳಿಗೆ ಆಹಾರವನ್ನು ಹಾಕಿ ಸಾಕುವರು. ದೊಡ್ಡವಾದ ಮೇಲೆ ಅವುಗಳ ಗರಿಗಳನ್ನು ಕಿತ್ತು ರಫ್ತು ಮಾಡುವರು. ಇದರ ಗರಿಗಳು ಬಹಳ ಬೆಲೆ ಬಾಳುವುವು. ಗರಿಯನ್ನು ಕೀಳು ವುದು ಬಹು ಕಷ್ಟಕರವಾದ ಕೆಲಸವು. ಏಕೆಂದರೆ, ಈ ಪಕ್ಷಿಯು ಕಾಲಿನಿಂದ ಹೊಡೆದರೆ ಏಟನ್ನು ತಿಂದ ಮನುಷ್ಯನು ಜೀವಿಸಲಾರನು. ಕಡೇಪಕ್ಷ ಕೈಕಾಲಾ ದರೂ ಮುರಿಯಲು ಸಂದೇಹವಿಲ್ಲ. ಆದುದರಿಂದ ತಮ್ಮ ಕಾಲುಗಳನ್ನುಪಯೋ ಗಿಸಲಿಕ್ಕವಕಾಶವಿಲ್ಲದಿರುವಂತೆ ಸಣ್ಣ ಓಣಿಗಳಲ್ಲಿ ಇವು ಹೋಗುವಂತೆ ಮಾಡಿ ಅಲ್ಲಿ ಇವುಗಳ ಗರಿಗಳನ್ನು ಕೀಳುವರು. ಉಷ್ಟ್ರಪಕ್ಷಿಯು ಆಫ್ರಿಕಾಖಂಡದ ಮರುಭೂಮಿಗಳಲ್ಲೆಲ್ಲಾ ವಿಶೇಷವಾಗಿರುವುದು.

ದಕ್ಷಿಣ ಆಫ್ರಿಕದಲ್ಲಿ ಇನ್ನೂ ದಕ್ಷಿಣಕ್ಕೆ ಹೋದರೆ ಮಳೆಯು ಮತ್ತಷ್ಟು ಕಡಿಮೆಯಾಗುವುದು. ಪಶ್ಚಿಮದಲ್ಲಿ ಮಳೆಯ ಗಾಳಿಯು ಬೀಸುವುದಿಲ್ಲವಾದು ದರಿಂದ ಅಲ್ಲಿ ಬೆಂಗಾಡಾದ ಕಲಹರಿ ಎಂಬ ಮರುಭೂಮಿಯಿರುವುದು. ಪೂರ್ವ ದಲ್ಲಿರುವ ತಗ್ಗಾದ ಮೈದಾನದಲ್ಲಿ ಸೆಕೆಯೂ ಮಳೆಯೂ ಹೆಚ್ಚು. ಇಲ್ಲಿ ಕಬ್ಬನ್ನೂ, ಹೊಗೆಯಸೊಪ್ಪನ್ನೂ, ಬೆಟ್ಟದ ತಪ್ಪಲುಗಳಲ್ಲಿ ಕಾಫಿ ಮತ್ತು ಟೀ ಗಿಡಗಳನ್ನೂ ಬೆಳೆಯುವರು. ನದಿಗಳ ನೀರನ್ನು ಹಾಯಿಸಿಕೊಂಡು ಫಲವತ್ತಾದ ಭೂಮಿಯಲ್ಲಿ ಕಿತ್ತಿಲೆ ಮೊದಲಾದ ಹಣ್ಣುಗಳನ್ನು ಬೆಳೆಯುವರು. ಆಗ್ನೇಯದಲ್ಲಿ ಮಳೆಯು ಚೆನ್ನಾಗಿ ಬೀಳುವುದರಿಂದ ಹುಲ್ಲು ಉದ್ದವಾಗಿ ಬೆಳೆದು ದನಗಳ ಮೇವಿಗೆ ಅನುಕೂಲವಾಗಿರುವುದು. ನೈರುತ್ಯದಲ್ಲಿ ಅಂದರೆ ಕೇಪ್‌ಕಾಲೊನಿ ಯಲ್ಲಿ ಮೆಡಿಟರೇನಿಯನ್ ತೀರದ ವಾಯುಗುಣವಿರುವುದರಿಂದ ಗೋಧಿಯನ್ನೂ, ದ್ರಾಕ್ಷಿಯನ್ನೂ ಬೆಳೆಯುತ್ತಾರೆ.

ಈ ವಿವರಣೆಯನ್ನು ಒಟ್ಟಿನಲ್ಲಿ ನೋಡಿದರೆ, ಈ ಖಂಡವು ಮರುಭೂಮಿಗಳ ಖಂಡವಾದರೂ ಜನಸಂಖ್ಯೆಯೂ, ನಾಗರಿಕತೆಯೂ ಹೆಚ್ಚಿದಹಾಗೆ ಇಲ್ಲಿ ವ್ಯವಸಾಯವು ಹೆಚ್ಚಲು ವಿಶೇಷ ಅವಕಾಶವಿದೆಯೆಂಬುದು ಸ್ಪಷ್ಟವಾಗುವುದು.

**ಖನಿಜಗಳು.**—ಆಫ್ರಿಕಾ ಖಂಡದಲ್ಲಿ ಖನಿಜಗಳು ಪುಷ್ಕಳವಾಗಿವೆ. ಆದರೆ ಅವುಗಳನ್ನು ವಿಶೇಷವಾಗಿ ತೆಗೆಯುತ್ತಿಲ್ಲ. ಏಕೆಂದರೆ ಇಲ್ಲಿ ಪೂರ್ವನಿವಾಸಿಗಳು ಅನೇಕ ಭಾಗಗಳಲ್ಲಿ ನಾಗರಿಕರಾಗಿಲ್ಲ. ಯುರೋಪಿಯನ್ನರು ಇಲ್ಲಿ ನೆಲೆಗೊಳ್ಳಲಾರಂಭಿಸಿ ಇನ್ನೂ ಸ್ವಲ್ಪಕಾಲ ಮಾತ್ರವಾಗಿದೆ.

ಅಟ್ಲಾಸ್ ಪರ್ವತಪ್ರದೇಶಗಳಲ್ಲಿಯೂ, ಬ್ರಿಟಿಷ್ ದಕ್ಷಿಣ ಆಫ್ರಿಕದಲ್ಲಿಯೂ ಖನಿಜಗಳನ್ನು ಈಗ ವಿಶೇಷವಾಗಿ ತೆಗೆಯುತ್ತಿರುವರು. ಅಟ್ಲಾಸ್ ಪರ್ವತಗಳ ಬಳಿ ಕಬ್ಬಿಣ ತಾಮ್ರಗಳು ಸಿಕ್ಕುವುವು. ಬ್ರಿಟಿಷ್ ದಕ್ಷಿಣ ಆಫ್ರಿಕದಲ್ಲಿ ಚಿನ್ನ, ವಜ್ರ, ಕಲ್ಲಿದ್ದಲು, ತಾಮ್ರಗಳು ಸಿಕ್ಕುವುವು. ಟ್ರಾನ್ಸ್‌ವಾಲು ಚಿನ್ನಕ್ಕೂ, ಕೇಪ್ ಕಾಲೊನಿಯು ವಜ್ರಗಳಿಗೂ ಪ್ರಸಿದ್ಧವಾಗಿವೆ. ಕೇಪ್‌ಕಾಲೊನಿಯಲ್ಲಿರುವ ಕಿಂಬರ್ಲಿಯಲ್ಲಿ ಸಿಕ್ಕುವಷ್ಟು ವಜ್ರಗಳು ಪ್ರಪಂಚದಲ್ಲಿ ಇನ್ನೆಲ್ಲಿಯೂ ಸಿಕ್ಕುವುದಿಲ್ಲ. ಆಸ್ಟ್ರೇಲಿಯ ಮತ್ತು ಕಾಲಿಫೋರ್ನಿಯಗಳಂತೆ ಪ್ರಪಂಚದಲ್ಲಿ ಬಹು ಹೆಚ್ಚಾಗಿ ಚಿನ್ನ ಸಿಕ್ಕುವ ಪ್ರದೇಶಗಳಲ್ಲಿ ದಕ್ಷಿಣ ಆಫ್ರಿಕವು ಒಂದಾಗಿದೆ. ಅಟ್ಲಾಸ್ ಪರ್ವತಪ್ರದೇಶದ ಸರೋವರಗಳಲ್ಲಿಯೂ, ಸಹರಾ ಮರುಭೂಮಿಯ ಪಶ್ಚಿಮ ಭಾಗದಲ್ಲಿಯೂ, ಕಲಹರಿಯಲ್ಲಿ ಗಾಮಿ ಸರೋವರದ ಬಳಿಯಲ್ಲಿಯೂ ಉಪ್ಪು ತಯಾರಾಗುವುದು.

**ಜನಗಳು ; ಜನಸಾಂದ್ರತೆ.**—ಈ ಖಂಡದಲ್ಲಿ ಅತಿವೃಷ್ಟ್ಯನಾವೃಷ್ಟಿ ಪ್ರದೇಶಗಳು ಹೆಚ್ಚಾಗಿರುವುದರಿಂದ ಜನಸಂಖ್ಯೆಯು ಕಡಿಮೆ. ಈ ಖಂಡವು ಇಂಡಿಯಾದೇಶಕ್ಕಿಂತ 8ರಷ್ಟು ದೊಡ್ಡದಾಗಿದ್ದರೂ ಜನಸಂಖ್ಯೆಯು ಅಲ್ಲಿಗಿಂತ ಕಡಿಮೆಯಾಗಿದೆ. ಇಲ್ಲಿ 20 ಕೋಟಿ ಜನರು ವಾಸವಾಗಿರುವರು. ಬೆಂಗಾಡು ಪ್ರದೇಶಗಳಲ್ಲಿ ಆಹಾರವು ಹೆಚ್ಚಾಗಿ ದೊರಕಲಾರದಾದುದರಿಂದ ಜನಗಳು ಒತ್ತಾಗಿ ವಾಸಮಾಡಲು ಸಾಧ್ಯವಿಲ್ಲ. ಅತಿವೃಷ್ಟಿ ಇರುವ ಪ್ರದೇಶಗಳಲ್ಲಿ ಕಾಡುಗಳು ಹೆಚ್ಚಾಗಿ ಬೆಳೆದು ಅನಾರೋಗ್ಯಕರವಾಗಿರುವುದರಿಂದ ಜನಗಳು ವಿಶೇಷವಾಗಿ ವಾಸಮಾಡಲಾರರು. ಆದುದರಿಂದ ಸಹರಾ ಮರುಭೂಮಿಯಲ್ಲಿಯೂ, ಮಧ್ಯಭಾಗದ ಕಾಡುಗಳಲ್ಲಿಯೂ, ಕಲಹರಿ ಮರುಭೂಮಿಯಲ್ಲಿಯೂ ಜನಸಾಂದ್ರತೆಯು ಬಹು ಕಡಿಮೆ. ಪಶ್ಚಿಮ ತೀರದಲ್ಲಿ ಸೆನಿಗಾಲ್ ನದಿಯ ಮುಖದಿಂದ ನೈಜರ್ ಮುಖದವರೆಗಿರುವ ಪ್ರದೇಶದಲ್ಲಿಯೂ, ಉತ್ತರದಲ್ಲಿ ಟ್ಯೂನಿಸ್‌ನಲ್ಲಿಯೂ ಜನಸಾಂದ್ರತೆಯು ಹೆಚ್ಚಾಗಿರುವುದು. ಅಂದರೆ ಚದರ ಮೈಲಿಯೊಂದಕ್ಕೆ ಸುಮಾರು 50 ಜನರಿರುವರು. ಈಜಿಪ್ಟ್, ಕೇಪ್‌ಕಾಲೊನಿ ಮೊದಲಾದ ಪ್ರದೇಶಗಳಲ್ಲಿ ಜನಸಾಂದ್ರತೆಯು ಸಾಮಾನ್ಯವಾಗಿರುವುದು.

**ಜನಗಳ ಕುಲ ಮತ್ತು ನಾಗರಿಕತೆ.**—ವರ್ಡ್ ಭೂಶಿರದಿಂದ ಪೂರ್ವ ತೀರಕ್ಕೆ ನೇರವಾಗಿ ಒಂದು ಗೆರೆಯನ್ನು ಎಳೆದರೆ, ಆ ಗೆರೆಯ ದಕ್ಷಿಣ ಭಾಗದಲ್ಲಿ ನೀಗ್ರೋ ಅಥವಾ ಕಪ್ಪು ಜನರಿರುವರು. ಅದರ ಉತ್ತರಕ್ಕೆ ಕಪಿಲ ವರ್ಣದ ಅಥವಾ ಬಿಳಿಯ ಜನರಿರುವರು. ಇವರಲ್ಲಿ ಕಪ್ಪು ಜನರು ಈ ಖಂಡದ ಪುರಾತನ ನಿವಾಸಿಗಳು. ಇವರ ತುಟಿಯು ಜಬ್ಬಲು ಜಬ್ಬಲಾಗಿರುವುದು. ಕೂದಲು ಉಣ್ಣೆಯಂತಿರುವುದು. ಪಶುಪಾಲನೆಯೂ, ವ್ಯವಸಾಯವೂ, ಬಟ್ಟೆಯನ್ನು ನೇಯುವುದು ಮೊದಲಾದ ಸಣ್ಣ ಕೈಗಾರಿಕೆಗಳೂ ಇವರಿಗೆ ತಿಳಿದಿದ್ದರೂ, ಇವರನ್ನು ಅನಾಗರಿಕರೆಂದೇ ಎಣಿಸಬೇಕು. ಪೂರ್ವದಲ್ಲಿ ಗುಲಾಮರನ್ನು ಮಾರುವುದು, ನರಬಲಿ ಕೊಡುವುದು, ನರಮಾಂಸವನ್ನು ತಿನ್ನುವುದು ಮೊದಲಾದ ಕೆಟ್ಟ ಪದ್ಧತಿಗಳು ಇವರಲ್ಲಿ ಪ್ರಬಲವಾಗಿದ್ದುವು. ಈಚಿಗೆ ಯೂರೋಪಿಯನ್ನರ ಆಧಿಪತ್ಯವು ಹೆಚ್ಚಾಗಿ ಇವು ಅಡಗುತ್ತಲಿವೆ. ದಕ್ಷಿಣ ಆಫ್ರಿಕದಲ್ಲಿಯೂ, ಪೂರ್ವ ಆಫ್ರಿಕದಲ್ಲಿಯೂ 'ಬಂಟೂ' ಎಂಬ ಜನರು ವಿಶೇಷವಾಗಿದ್ದಾರೆ. ಇವರು ಅಷ್ಟು ಕಪ್ಪಾಗಿಲ್ಲ. ಸ್ವಲ್ಪ ಮಟ್ಟಿಗೆ ಎತ್ತರವಾಗಿಯೂ, ಸ್ಫುರದ್ರೂಪಿಗಳಾಗಿಯೂ ಇರುವರು. ದಕ್ಷಿಣ ಆಫ್ರಿಕದಲ್ಲಿ ವಿಶೇಷವಾಗಿರುವ ಕಾಫರರೂ, ಶೂರರಾದ ಜೂಲುಗಳೂ ಈ ಜಾತಿಗೆ ಸೇರಿದವರು. ಇವರ ಮುಖ್ಯೋದ್ಯೋಗವು ಕೃಷಿ. ಈಚೆಗೆ ಪಶುಪಾಲನೆಯನ್ನು ಮಾಡಲಾರಂಭಿಸಿದಾರೆ. ಗಣಿಗಳಲ್ಲಿಯೂ ಅನೇಕರು ಕೆಲಸಮಾಡುವರು. ಆದರೆ ಕೆಲವು ತಿಂಗಳು ಕೆಲಸಮಾಡಿ ಆಮೇಲೆ ಹೊರಟು ಹೋಗುವರು. ಕಳ್ಳತನದಲ್ಲಿ ನಿಪುಣರಾದುದರಿಂದ ಇವರನ್ನು ಬಹು ಜೋಪಾನವಾಗಿ ನೋಡಿಕೊಳ್ಳಬೇಕು. ದಕ್ಷಿಣ ಆಫ್ರಿಕದ ಪಶ್ಚಿಮ ಭಾಗದಲ್ಲಿ ಹಾಟೆಂಟಾಟರೆಂಬ ಜನಗಳು ವಿಶೇಷವಾಗಿದ್ದಾರೆ. ಇವರು ಮೈಗಳ್ಳರು ಮತ್ತು ಅನಾಗರಿಕರು.

ಉತ್ತರದಲ್ಲಿರುವ ಜನರಲ್ಲಿ ಈಜಿಪ್ಟ್ ದೇಶದಲ್ಲಿರುವ ಐಗುಪ್ತರೂ, ಅರಬರೂ ಎತ್ತರವಾಗಿಯೂ, ಬಿಳಿಯ ಅಥವಾ ಕಂದು ಬಣ್ಣದವರಾಗಿಯೂ, ನಾಗರಿಕರಾಗಿಯೂ ಇರುವರು. ವಾಯುವ್ಯದಲ್ಲಿರುವ ಬರ್ಬರರು ಸ್ವಲ್ಪ ಕಪ್ಪಾಗಿಯೂ, ನಾಗರಿಕರಾಗಿಯೂ ಇರುವರು. ಅಬಿಸೀನಿಯದಲ್ಲಿರುವ ಕಾಪ್ಟರೂ, ಸುಡಾನಿನಲ್ಲಿ ವ್ಯಾಪಾರದಿಂದ ಜೀವಿಸುವ 'ಹಾಸ' ಎಂಬ ಜನಗಳೂ, ಅರಬ್ ಮತ್ತು ನೀಗ್ರೋ ಜನಗಳ ಸಂಯೋಗದಿಂದುಂಟಾದವರೆಂದು ಹೇಳುತ್ತಾರೆ. ಇವರೂ ತಕ್ಕಮಟ್ಟಿಗೆ ನಾಗರಿಕರಾಗಿರುವರು.

ಟ್ರಾನ್ಸ್‌ವಾಲಿನಲ್ಲಿಯೂ, ಆರೆಂಜ್ ನದೀ ಕಾಲೊನಿಯಲ್ಲಿಯೂ, ಕೇಪ್ ಕಾಲೊನಿಯಲ್ಲಿಯೂ ಯೂರೋಪಿಯನ್ನರು ವಿಶೇಷವಾಗಿರುವರು. ಇವರಲ್ಲಿ ಅನೇಕರು ಡಚ್ ಜಾತಿಗೆ ಸೇರಿದ 'ಬೋಯರ್' ಎಂಬ ಜನಗಳು. ಉಳಿದವರಲ್ಲಿ ಇಂಗ್ಲಿಷರ ಸಂಖ್ಯೆಯು ಹೆಚ್ಚು. ವ್ಯವಸಾಯವೂ, ಕುರಿ, ದನ, ಉಷ್ಟ್ರಪಕ್ಷಿ

ಗಳನ್ನು ಸಾಕುವುದೂ, ಗಣಿಗಳಲ್ಲಿ ಕೆಲಸಮಾಡುವುದೂ ಇವರ ಮುಖ್ಯೋದ್ಯೋಗಗಳು. ಕೆಲವರು ಕೈಗಾರಿಕೆಗಳಿಂದಲೂ ವ್ಯಾಪಾರದಿಂದಲೂ ಜೀವಿಸುವರು. ನೆಟಾಲಿನಲ್ಲಿ ವಾಯುಗುಣವು ಬಹಳ ಉಷ್ಣವಾಗಿರುವುದರಿಂದ, ಯೂರೊಪಿಯನ್ನರು ಸೆಕೆಯಲ್ಲಿ ಕೆಲಸಮಾಡಲಾರದೆ ಇಂಡಿಯಾದೇಶದಿಂದ ಕೂಲಿಗಳನ್ನು ಕರೆಸಿ ಅವರಿಂದ ಕಬ್ಬು ಮೊದಲಾದುವುಗಳ ಸಾಗುವಳಿಯನ್ನು ಮಾಡಿಸುವರು. ಈ ಕೂಲಿ ಜನಗಳಲ್ಲಿ ಕೆಲವರು ಅಲ್ಲಿಯೇ ನೆಲೆಗೊಂಡು ಕೃಷಿಯಿಂದಲೂ, ಚಿಲ್ಲರೇ ವ್ಯಾಪಾರದಿಂದಲೂ ಜೀವನಮಾಡುತ್ತಿರುವರು.

ಪೂರ್ವದ ಪ್ರಸ್ಥಭೂಮಿಯಲ್ಲಿಯೂ ಯೂರೊಪಿಯನ್ನರು ನೆಲೆಗೊಳ್ಳಲಾರಂಭಿಸಿದಾರೆ. ಇವರಲ್ಲಿ ಬ್ರಿಟಿಷರೇ ಹೆಚ್ಚು. ವ್ಯವಸಾಯವೂ, ಪಶುಪಾಲನೆಯೂ, ಲೋಹಗಳನ್ನು ತೆಗೆಯುವುದೂ ಇವರ ಮುಖ್ಯೋದ್ಯೋಗಗಳು. ಉತ್ತರ ಆಫ್ರಿಕದ ತೀರಪ್ರದೇಶಗಳಲ್ಲಿಯೂ, ಪಶ್ಚಿಮ ಭಾಗದಲ್ಲಿಯೂ ಫ್ರೆಂಚರು ಹೆಚ್ಚಾಗಿರುವರು.

**ಮತಗಳು.**—ಆಫ್ರಿಕಾಖಂಡದ ಉತ್ತರಭಾಗದಲ್ಲೆಲ್ಲಾ ಮಹಮದೀಯ ಮತವು ನೆಲೆಗೊಂಡಿದೆ. ಈ ಮತವು ಅರಬರಿಂದ ಈಗ 1,000 ವರ್ಷಗಳ ಹಿಂದೆ ಇಲ್ಲಿ ಹರಡಲ್ಪಟ್ಟಿತು. ಅಬಿಸೀನಿಯದ ಕಾಪ್ಟ್ ಜನರು ಕ್ರೈಸ್ತ ಮತಕ್ಕೆ ಸೇರಿದವರು. ನೀಗ್ರೋ ಜನರು ಪೂರ್ವದಲ್ಲಿ ಕಲ್ಲು, ಮರಗಳನ್ನು ಪೂಜೆ ಮಾಡಿಕೊಂಡು ನರಬಲಿಗಳನ್ನು ಕೊಡುತ್ತಿದ್ದರು. ಈಚೆಗೆ ಮಹಮದೀಯ ಮತವು ಅವರಲ್ಲಿ ಹರಡುತ್ತಿದೆ. ದಕ್ಷಿಣ ಆಫ್ರಿಕದ ಪೂರ್ವ ನಿವಾಸಿಗಳು ಯೂರೊಪಿಯನ್ನರ ಸಂಬಂಧದಿಂದ ಕ್ರೈಸ್ತ ಮತಕ್ಕೆ ಸೇರುತ್ತಲಿದಾರೆ.

**ಭಾಷೆಗಳು.**—ಅರಬ್ಬೀ ಭಾಷೆಯು ಉತ್ತರದಲ್ಲಿ ಪ್ರಬಲವಾಗಿದೆ. ಈಜಿಪ್ಟಿನ ಜನರ ಭಾಷೆಯೂ, ಪಶ್ಚಿಮಭಾಗದ ಬರ್ಬರರ ಭಾಷೆಗಳೂ ಅರಬ್ಬೀ ಭಾಷೆಯ ಜಾತಿಗೆ ಸೇರಿದುವು. ಪಶ್ಚಿಮ ಆಫ್ರಿಕದಲ್ಲಿಯೂ, ಮಧ್ಯ ಆಫ್ರಿಕದಲ್ಲಿಯೂ ನೀಗ್ರೋ ಭಾಷೆಯ ಪ್ರಭೇದಗಳು ಪ್ರಬಲವಾಗಿವೆ. ಇವುಗಳಲ್ಲಿ ವ್ಯಾಪಾರದಿಂದ ಜೀವಿಸುವ 'ಹಾಸ' ಜನರ ಭಾಷೆಯೇ ಸ್ವಾಭಾವಿಕವಾಗಿ ಮುಖ್ಯವಾದುದಾಗಿದೆ. ಯೂರೊಪಿಯನ್ನರು ಇಂಗ್ಲಿಷ್, ಡಚ್, ಫ್ರೆಂಚ್ ಮೊದಲಾದ ಭಾಷೆಗಳನ್ನಾಡುವರು.

**ಮಾರ್ಗಗಳು ಮತ್ತು ವ್ಯಾಪಾರ.**—ಈ ಖಂಡದಲ್ಲಿ ಕಾಡುಗಳೂ, ಮರುಭೂಮಿಗಳೂ, ಪರ್ವತಪ್ರದೇಶಗಳೂ ವಿಶೇಷವಾಗಿರುವುದರಿಂದಲೂ, ಜನಸಾಂದ್ರತೆಯೂ, ಜನರ ನಾಗರಿಕತೆಯೂ ಬಹಳ ಕಡಿಮೆಯಾಗಿರುವುದರಿಂದಲೂ ಮಾರ್ಗಸೌಕರ್ಯಗಳು ಬಹಳ ಕಡಿಮೆಯಾಗಿವೆ. ಈ ಖಂಡದಲ್ಲಿ ಗಾಡಿಯ ರಸ್ತೆಗಳೂ ಬಹಳ ಕಡಿಮೆ. ನದಿಗಳು ಜಲಪಾತಗಳಿಂದ ಕೂಡಿಕೊಂಡು ಹಡಗುಗಳ ಸಂಚಾರಕ್ಕೆ ಅನುಕೂಲವಾಗಿಲ್ಲ. ಕಾಲುವೆಗಳು ಇಲ್ಲವೇ ಇಲ್ಲವೆಂದು ಹೇಳ

ಬಹುದು. ಆದರೆ ಈಗ 60 ವರ್ಷಗಳಿಂದೀಚೆಗೆ ಮಾರ್ಗ ಸೌಕರ್ಯಗಳು ಹೆಚ್ಚುತ್ತಲಿರುವುವು.

ಆಲ್ಜೀರಿಯದಲ್ಲಿ ಫ್ರೆಂಚರೂ, ಈಜಿಪ್ಟ್, ದಕ್ಷಿಣ ಆಫ್ರಿಕಗಳಲ್ಲಿ ಇಂಗ್ಲಿಷರೂ ಕೆಲವು ರೈಲುಮಾರ್ಗಗಳನ್ನು ಮಾಡಿರುವರು. ಪೂರ್ವ, ಪಶ್ಚಿಮ ತೀರಪ್ರದೇಶ ಗಳಲ್ಲಿ ಅಲ್ಲಲ್ಲಿ ಕೆಲವು ಚಿಕ್ಕ ಚಿಕ್ಕ ರೈಲುಮಾರ್ಗಗಳಿರುವುವು. ಈಜಿಪ್ಟಿನಲ್ಲಿ ಅಲೆಗ್ಝಾಂಡ್ರಿಯದಿಂದ ಖಾರ್ಟೂಂವರೆಗೆ ನೈಲ್ ನದಿಯ ಪಕ್ಕದಲ್ಲಿಯೇ ರೈಲು ಮಾರ್ಗವಿರುವುದು. ದಕ್ಷಿಣ ಆಫ್ರಿಕದಲ್ಲಿ ಕೇಪ್‌ಟೌನ್‌ನಿಂದ ಜಾಂಬೀಸಿ ನದಿಯ ವಿಕ್ಟೋರಿಯಾ ಜಲಪಾತದವರೆಗೆ ರೈಲುಮಾರ್ಗವಿರುವುದು. ವಿಕ್ಟೋರಿಯಾ ಜಲಪಾತದಿಂದ ಖಾರ್ಟೂಮಿಗೆ ರೈಲು ಹಾಕಬೇಕೆಂಬ ಆಲೋಚನೆಯು ಅನೇಕ ವರ್ಷಗಳಿಂದ ನಡೆಯುತ್ತಿರುವುದು. ಆದರೆ ಈ ಪ್ರದೇಶವು ಪರ್ವತಪ್ರದೇಶವಾಗಿ ರುವುದರಿಂದ ಈ ಆಲೋಚನೆಯು ಇನ್ನೂ ಫಲಿಸಲಿಲ್ಲ. ಈ ರೈಲುಮಾರ್ಗವನ್ನು ಕಲ್ಪಿಸಿದರೆ ಈ ಖಂಡದಲ್ಲಿ ಸಂಚಾರಮಾಡುವುದು ಸುಲಭವಾಗುವುದು; ವ್ಯಾಪಾರವೂ ಹೆಚ್ಚುವುದು.

ಜಲಪಾತಗಳೂ, ಹೆಚ್ಚು ಸೆಳವೂ ಇಲ್ಲದ ನದಿಗಳ ಭಾಗಗಳಲ್ಲಿ ಹಡಗುಗಳು ಈಗ ಸಂಚರಿಸುತ್ತಲಿರುವುವು. ನೈಲ್‌ನದಿಯಲ್ಲಿ ಅಲೆಗ್ಝಾಂಡ್ರಿಯದಿಂದ ಅಸ್ಸೂ ವನ್‌ವರೆಗೂ, ಖಾರ್ಟೂಮಿನಿಂದ ಗಾಂಡಕೋರೋವರೆಗೂ, ಕಾಂಗೋನದಿಯ ಮಧ್ಯಭಾಗದಲ್ಲಿಯೂ ಮುಖಭಾಗದಲ್ಲಿಯೂ ಹಡಗುಗಳು ಹೋಗುತ್ತಿರುವುವು. ಇದಲ್ಲದೆ ಜಲಪಾತಗಳಿರುವ ಕಡೆಗಳಲ್ಲಿ ಕಾಲುವೆಗಳನ್ನು ತೆಗೆದು ಹಡಗಿನ ಸಂಚಾರಕ್ಕೆ ಅನುಕೂಲಪಡಿಸುತ್ತಿರುವರು. ಬ್ರಿಟಿಷರ ವ್ಯಾಪಾರಕ್ಕೆ ಸೂಯಿಸ್ ಕಾಲುವೆಯ ಪ್ರಮುಖತೆಯನ್ನು ಹಿಂದೆಯೇ ತಿಳಿಸಿರುತ್ತದೆ. ಬ್ರಿಟಿಷರು ಈಜಿಪ್ಟ್ ದೇಶವನ್ನು ತಮ್ಮ ಸ್ವಾಧೀನಪಡಿಸಿಕೊಂಡಿರುವುದಕ್ಕೆ ಈ ಕಾಲುವೆಯ ಸಂರಕ್ಷ ಣೆಯು ಒಂದು ಮುಖ್ಯ ಕಾರಣವಾಗಿದೆ.

ಉತ್ತರ ಆಫ್ರಿಕದ ಮರುಭೂಮಿ ಪ್ರದೇಶದಲ್ಲಿ ಕಾರವಾನ್ ದಾರಿಗಳಿರುವುವು. ಈ ಕಾರವಾನ್ ದಾರಿಗಳು ಸಾಮಾನ್ಯವಾಗಿ ಓಯಸಿಸ್‌ಗಳನ್ನು ಅನುಸರಿಸಿ ಹೋಗಿರುವುವು. ಈ ದಾರಿಗಳ ಮೂಲಕ ಉತ್ತರ ಆಫ್ರಿಕದ ಉತ್ತರ ದಕ್ಷಿಣ ಪ್ರದೇಶಗಳಿಗೆ ವ್ಯಾಪಾರವು ನಡೆಯುವುದು. ಟಿಂಬಕ್ಟು, ಮುರ್ಝುಕ್, ಖಾರ್ಟೂಂ ಎಂಬ ಪಟ್ಟಣಗಳು ಕಾರವಾನ್ ದಾರಿಗಳು ಸಂಧಿಸುವ ಸ್ಥಳಗಳಲ್ಲಿರುವುದರಿಂದ ಕಾರವಾನ್ ವ್ಯಾಪಾರಕ್ಕೆ ಬಹು ಪ್ರಸಿದ್ಧವಾಗಿವೆ.

ಈ ಖಂಡದ ಪರದೇಶದ ವ್ಯಾಪಾರವು ಇತರ ಖಂಡಗಳದಕ್ಕಿಂತ ಬಹು ಕಡಿಮೆ ಯಾಗಿದೆ. ಈ ಖಂಡದ ಹೆಚ್ಚು ಪ್ರದೇಶವು ಮರುಭೂಮಿ ಅಥವಾ ಪರ್ವತ ಪ್ರದೇಶವಾಗಿರುವುದೂ, ಜನಗಳು ನಾಗರಿಕತೆಯಲ್ಲಿ ಬಹಳ ಹಿಂದಾಗಿರುವುದೂ,

ಯುರೋಪಿಯನ್ನರು ನೆಲಸುವುದಕ್ಕೆ ಮುಂಚೆ ಒಳ್ಳೆಯ ರಾಜ್ಯಭಾರವಿಲ್ಲದೆ ಇದ್ದುದೂ ಇದಕ್ಕೆ ಮುಖ್ಯ ಕಾರಣಗಳಾಗಿವೆ.

ಈಚೆಗೆ ಯುರೋಪಿಯನ್ನರ ರಾಜ್ಯಭಾರದಿಂದಲೂ, ಸಂಪದಭಿವೃದ್ಧಿಯ ಪ್ರಯತ್ನದಿಂದಲೂ ವ್ಯಾಪಾರವು ಹೆಚ್ಚುತ್ತಲಿದೆ. ಸಾಮಾನ್ಯವಾಗಿ ಕಾಡುಗಳಲ್ಲಿ ದೊರೆಯುವ ರಬ್ಬರು ಮೊದಲಾದ ಪದಾರ್ಥಗಳನ್ನೂ, ಕುರಿ, ಉಣ್ಣೆ, ಹತ್ತಿ ಮೊದಲಾದ ಪದಾರ್ಥಗಳನ್ನೂ ಈ ಖಂಡದಿಂದ ರಫ್ತುಮಾಡಿ, ಯಂತ್ರಗಳು, ಬಟ್ಟೆಗಳು ಮೊದಲಾದ ಕೈಗಾರಿಕೆಯ ಸಾಮಾನುಗಳನ್ನು ತರಿಸಿಕೊಳ್ಳುತ್ತಲಿರುವರು.

**ರಾಜಕೀಯ ವಿಭಾಗಗಳು.**—ಸ್ವತಂತ್ರರಾದ ರಾಜರಿಂದ ಆಳಲ್ಪಡುತ್ತಲಿರುವ ಮೊರಕ್ಕೊ, ಅಬಿಸೀನಿಯ ದೇಶಗಳು ವಿನಾ ಉಳಿದ ವಿಭಾಗಗಳೆಲ್ಲವೂ ಯುರೋಪಿಯನ್ ಜನರಿಗೆ ಸೇರಿವೆ. ಈಜಿಪ್ಟ್, ಈಜಿಪ್ಟಿನ ಸೂಡಾನ್, ಬ್ರಿಟಿಷ್ ಪೂರ್ವ ಆಫ್ರಿಕ, ಬ್ರಿಟಿಷ್ ಮಧ್ಯ ಆಫ್ರಿಕ, ಬ್ರಿಟಿಷ್ ದಕ್ಷಿಣ ಆಫ್ರಿಕಗಳೂ, ಪಶ್ಚಿಮದಲ್ಲಿ ನೈಜೀರಿಯ ಮೊದಲಾದ ಕೆಲವು ಸಣ್ಣ ಪ್ರದೇಶಗಳೂ ಬ್ರಿಟಿಷರಿಗೆ ಸೇರಿವೆ. ಆಲ್ಜೀರಿಯ, ಸಹರಾ, ಸೂಡಾನ್‌ಗಳೂ, ಫ್ರೆಂಚ್‌ಕಾಂಗೊ ಎಂಬ ಭಾಗವೂ, ಮಡಗಾಸ್ಕರ್ ದ್ವೀಪವೂ ಫ್ರೆಂಚರಿಗೆ ಸೇರಿವೆ. ಪೋರ್ಟುಗೀಸ್ ಪಶ್ಚಿಮ ಪೂರ್ವ ಆಫ್ರಿಕಗಳೂ, ಅಜೋರ್ಸ್, ಮೆಡೀರಾ ದ್ವೀಪಗಳೂ ಪೋರ್ಟುಗಲ್ ರಾಜ್ಯಕ್ಕೆ ಸೇರಿವೆ. ಕಾಂಗೋ ಸಂಸ್ಥಾನವು ಬೆಲ್ಜಿಯಂ ದೇಶದವರ ಪೋಷಣೆಯಲ್ಲಿದೆ. ಇಟಲಿ, ಸ್ಪೇನ್ ದೇಶಗಳಿಗೆ ಕೆಲವು ಚಿಕ್ಕ ಪ್ರದೇಶಗಳು ಸೇರಿವೆ. ಜರ್ಮನಿಯವರಿಗೆ ಸೇರಿದ್ದ ಜರ್ಮನ್ ಪೂರ್ವ ಮತ್ತು ನೈರುತ್ಯ ಆಫ್ರಿಕಗಳು ಈಗ ಬ್ರಿಟಿಷರಿಗೆ ಅಧೀನವಾಗಿವೆ.

---

## I. ಬ್ರಿಟಿಷರಿಗೆ ಸೇರಿದ ವಿಭಾಗಗಳು

### ಈಜಿಪ್ಟ್ ಮತ್ತು ಈಜಿಪ್ಟಿನ ಸೂಡಾನ್

**ಮೇಲ್ಮೈಯ ಲಕ್ಷಣ ಮತ್ತು ಬೆಳೆಗಳು.**—ಈಜಿಪ್ಟ್ ದೇಶವೆಲ್ಲವನ್ನೂ ಒಂದು ದೊಡ್ಡ ಮರುಭೂಮಿಯೆಂದೂ, ನೈಲ್ ನದಿಯ ಕಣಿವೆಯನ್ನು ದೊಡ್ಡ ಓಯಸಿಸ್ ಎಂದೂ ಕರೆಯಬಹುದು. ಈ ನದಿಯ ಎಡಭಾಗಕ್ಕೆ ಸ್ವಲ್ಪದೂರದಲ್ಲಿ ಉದ್ದಕ್ಕೂ ಬೆಟ್ಟದ ಸಾಲಿದೆ. ಬಲದ ದಡದಲ್ಲಿಯೂ ಹೀಗೆಯೆ. ಈಜಿಪ್ಟಿನಲ್ಲಿ ಮಳೆ ಬಹು ಅಪರೂಪ. ಸೂಡಾನಿನಲ್ಲಿ ದಕ್ಷಿಣಕ್ಕೆ ಹೋಗುತ್ತ ಹೋಗುತ್ತ ಮಳೆಯು ಹೆಚ್ಚುವುದು. ಭೂಮಿಯೂ ಎತ್ತರವಾಗುವುದು. ನದಿಯ ನೀರಿನ ಸಹಾಯದಿಂದ ಈಜಿಪ್ಟಿನಲ್ಲಿ ಉತ್ತಮವಾದ ಹತ್ತಿಯನ್ನು ಬೆಳೆಯುವರು. ಗೋಧಿ, ಮೆಕ್ಕೆ ಜೋಳ, ಕಬ್ಬು ಮೊದಲಾದುವೂ ಬೆಳೆಯುವುವು. ಸೂಡಾನಿನಿಂದ ಆನೆಯ ದಂತವೂ, ಗೋಂದೂ ವಿಶೇಷವಾಗಿ ರಫ್ತಾಗುತ್ತವೆ. ಅಲ್ಲಿ ಹತ್ತಿಯೂ,

ಗೋಧಿಯೂ, ಹೊಗೆಯಸೊಪ್ಪೂ ಚೆನ್ನಾಗಿ ಬೆಳೆಯುವುವು; ಕಬ್ಬಿಣವೂ ತಾಮ್ರವೂ ಸ್ವಲ್ಪಮಟ್ಟಿಗೆ ಸಿಕ್ಕುತ್ತವೆ.

**ಜನಗಳು.**—ಈಜಿಪ್ಟಿನ ಜನರು ಸೆಮಿಟಿಕ್ ಕುಲಕ್ಕೆ ಸೇರಿದವರು. ನೋಡುವುದಕ್ಕೆ ತಕ್ಕಮಟ್ಟಿಗೆ ಚೆನ್ನಾಗಿರುವರು. ಆದರೆ ಅವರಲ್ಲಿ ಚಟುವಟಿಕೆಯು ಕಡಿಮೆ. ಮಹಮ್ಮದೀಯ ಮತಕ್ಕೆ ಸೇರಿದಾರೆ. ಈಜಿಪ್ಟಿನ ಸೂಡಾನಿನಲ್ಲಿ ಅರಬರೂ, ನೀಗ್ರೋ ಜನರೂ ಇರುವರು. ಇವರೂ ಮುಸಲ್ಮಾನರು. ಇವರಲ್ಲಿ ಮತದ್ವೇಷವು ಹೆಚ್ಚು.

**ನಾಗರಿಕತೆ, ರಾಜ್ಯಭಾರ ಮುಂತಾದ ವಿಷಯಗಳು.**—ಈಜಿಪ್ಟ್ ದೇಶವು ಬಹು ಪುರಾತನಕಾಲದಲ್ಲಿ ನಾಗರಿಕತೆಗೆ ಪ್ರಸಿದ್ಧವಾಗಿತ್ತು. ಈಗ ಸುಮಾರು 5,000 ವರ್ಷಗಳ ಹಿಂದೆ ಇದ್ದ ಇಲ್ಲಿಯ ರಾಜರು ಅತ್ಯದ್ಭುತವಾದ ಅರಮನೆಗಳನ್ನೂ, ಪಿರಮಿಡ್‌ಗಳೆಂಬ ಎತ್ತರವಾದ ಗೋರಿಗಳನ್ನೂ ಕಟ್ಟಿದರು. ಈಗಲೂ ಈ ಪಿರಮಿಡ್‌ಗಳು ನೋಡುವುದಕ್ಕೆ ಅತ್ಯಾಶ್ಚರ್ಯಕರವಾಗಿವೆ. ಇವುಗಳ ಮೇಲೆ ಬರೆದಿರುವ ಚಿತ್ರ ಲಿಪಿಯು ಪ್ರಪಂಚದಲ್ಲಿರುವ ಲಿಪಿಗಳಿಗೆಲ್ಲಾ ಮೂಲ ಸ್ಥಾನವೆಂದು ಕೆಲವರು ಹೇಳುವರು. ಆದರೆ ಈ ದೇಶವು ಬಹುಕಾಲದಿಂದಲೂ ಪರದೇಶದವರಿಗೆ ಸೇರಿದೆ. ಪುರಾತನ ಗ್ರೀಕರೂ, ಪುರಾತನ ರೋಮನ್ನರೂ, ಆಮೇಲೆ ಅರಬರೂ, ಈಚೆಗೆ ತುರ್ಕಿಯವರೂ ಈ ದೇಶವನ್ನು ಗೆದ್ದು ಆಳಿದರು. ಈಗ ಇದು ಮಹಮ್ಮದೀಯ ಸುಲ್ತಾನನೊಬ್ಬನಿಗೆ ಸೇರಿ ಬ್ರಿಟಿಷರ ಪೋಷಣೆಯಲ್ಲಿದೆ. ಈಜಿಪ್ಟಿಗೆ ನೈಲು ನದಿಯು ಮಾತೃಸ್ಥಾನವಾದುದು. ಈ ನದಿಯ ಒಂಡು ಮಣ್ಣಿನಿಂದಲೇ ಇಲ್ಲಿಯ ಭೂಮಿಯು ಫಲವತ್ತಾಗಿರುವುದು. ಈ ನದಿಯಿಂದ ಪೂರ್ವದಲ್ಲಿ ಅನೇಕ ಕಾಲುವೆಗಳನ್ನು ತೆಗೆದು ವಿಶೇಷವಾಗಿ ಧಾನ್ಯವನ್ನು ಬೆಳೆಯುತ್ತಿದ್ದರು. ಆದರೆ ತುರ್ಕಿಯವರಿಗೆ ಈ ದೇಶವು ಸೇರಿದಮೇಲೆ ಅನ್ಯಾಯಕತ್ವವು ಹೆಚ್ಚಿ ಕಾಲುವೆಗಳೆಲ್ಲಾ ಮುಚ್ಚಿಹೋಗಿ ದೇಶವು ಹಾಳಾಯಿತು. ಈಗ ಸುಮಾರು 50 ವರ್ಷಗಳ ಹಿಂದೆ ಅಂದರೆ ಸೂಯಿಸ್ ಕಾಲುವೆಯು ತಯಾರಾದ ಮೇಲೆ, ಫ್ರೆಂಚರೂ, ಇಂಗ್ಲಿಷರೂ ಈ ದೇಶದ ಅಧಿಪತಿಗೆ ರಾಜ್ಯಭಾರದಲ್ಲಿ ಸಹಾಯಮಾಡಲಾರಂಭಿಸಿದರು. ಆದರೆ 1883 ರಿಂದೀಚೆಗೆ ಫ್ರೆಂಚರು ಈ ದೇಶದಲ್ಲಿ ಕೈಹಾಕುವುದು ತಪ್ಪಿ ಇಂಗ್ಲಿಷರೇ ಇಲ್ಲಿಯ ಅಧಿಪತಿಗೆ ದೇಶವನ್ನು ತಹಬಂದಿಗೆ ತರುವುದರಲ್ಲಿಯೂ, ಸುಂಕದ ವಸೂಲಿಯಲ್ಲಿಯೂ ಸಹಾಯಮಾಡಿ, ತಮ್ಮ ಕಡೆಯ 'ಸರದಾರ್' ಎಂಬ ಅಧಿಕಾರಿಯನ್ನು ರಾಜ್ಯಭಾರದಲ್ಲಿ ಸಲಹೆ ಕೊಡುವುದಕ್ಕೆ ನಿಯಮಿಸಿದರು. 1914 ರಲ್ಲಿ ತುರ್ಕೀ ಸುಲ್ತಾನನು ಇಂಗ್ಲಿಷರೊಂದಿಗೆ ಯುದ್ಧಮಾಡಿದುದರಿಂದ ಆತನ ನಾಮಮಾತ್ರವಾದ ಪ್ರಭುತ್ವವು ಈ ದೇಶದಿಂದ ತಪ್ಪಿಸಲ್ಪಟ್ಟು, ಇಲ್ಲಿಯ ದೊರೆಯು ಸಂಪೂರ್ಣವಾಗಿ ಬ್ರಿಟಿಷರ ಪೋಷಣೆಗೆ ಒಳಪಟ್ಟಿರುವನು. ಬ್ರಿಟಿಷರ ಪ್ರಾಬಲ್ಯವು ಹೆಚ್ಚಿದಮೇಲೆ ಈ

ದೇಶವು ಅಭಿವೃದ್ಧಿಗೆ ಬರುತ್ತಿರುವುದು. ಬಿಟ್ಟೀ ಕೆಲಸಮಾಡಿಸುವುದು, ಗುಲಾಮರನ್ನು ಮಾರುವುದು ಮೊದಲಾದ ಪದ್ಧತಿಗಳೆಲ್ಲವೂ ನಿಂತುಹೋಗಿ ದೇಶವು ತಹಬಂದಿಗೆ ಬಂದಿರುವುದು. ಅಸ್ಸೂನ್ ಎಂಬ ಕಡೆಯಲ್ಲಿ ದೊಡ್ಡ ಅಣೆಕಟ್ಟನ್ನು ಕಟ್ಟಿ ಕಾಲುವೆಗಳನ್ನು ಮಾಡಿ ವ್ಯವಸಾಯಕ್ಕೆ ಅನುಕೂಲಮಾಡಿರುವರು. ಅಸ್ಯೂಟ್ ಮೊದಲಾದ ಸ್ಥಳಗಳಲ್ಲಿಯೂ, ನೈಲ್ ನದಿಯಲ್ಲಿ ನೀರು ಹೆಚ್ಚಾಗಿರುವಾಗ ಅದನ್ನು ತಡೆದು ಕೆರೆಗಳಲ್ಲಿ ಸೇರಿಸಿ ಜಮೀನುಗಳಿಗೆ ನೀರನ್ನು ಹಾಯಿಸುತ್ತಿರುವರು. ನೈಲ್ ನದಿಯ ದಡದಲ್ಲಿಯೂ, ಕೆಂಪು ಸಮುದ್ರದ ತೀರದಲ್ಲಿಯೂ ರೈಲುಮಾರ್ಗಗಳನ್ನು ಮಾಡಿ ವ್ಯಾಪಾರವನ್ನು ಹೆಚ್ಚಿಸಿರುವರು.

**ಮುಖ್ಯ ಪಟ್ಟಣಗಳು; ಕೈರೊ.**—ನೈಲ್ ನದಿಯು ಶಾಖೆಗಳಾಗಿ ಒಡೆಯುವ ಸ್ಥಳದಲ್ಲಿರುವ ಈ ಪಟ್ಟಣವು ಈ ದೇಶದ ರಾಜಧಾನಿಯು. ಈ ಪಟ್ಟಣಕ್ಕೆ ಸ್ವಲ್ಪ ದೂರದಲ್ಲಿ ಗಿಜೆ ಎಂಬ ಸ್ಥಳದಲ್ಲಿ ಪಿರಮಿಡ್‌ಗಳು ಇರುವುವು. ಇವುಗಳಲ್ಲಿ ದೊಡ್ಡದರ ಎತ್ತರವು 480 ಅಡಿಗಳು, ಅದರ ಬುಡದ ಪ್ರತಿಯೊಂದು ಕಡೆಯೂ 765 ಅಡಿಗಳಷ್ಟು ಉದ್ದವಾಗಿರುವುದು.

**ಅಲೆಗ್ಝಾಂಡ್ರಿಯ.**—ನೈಲ್ ನದಿಯ ಮುಖದ ಸಮೀಪದಲ್ಲಿ ಮೆಡಿಟರೇನಿಯನ್ ಸಮುದ್ರತೀರದಲ್ಲಿದೆ. ಈ ದೇಶದ ಹೊರಗಣ ವ್ಯಾಪಾರವೆಲ್ಲವೂ ಈ ಬಂದರಿನ ಮೂಲಕವಾಗಿ ನಡೆಯುವುದು. ಪೂರ್ವದಿಂದಲೂ ಈ ಪಟ್ಟಣವು ವ್ಯಾಪಾರಕ್ಕೆ ಪ್ರಸಿದ್ಧಿಯಾಗಿದೆ.

**ಕಾರ್ಟೂಂ.**—ಬಿಳಿಯ ನೈಲೂ, ನೀಲಿಯ ನೈಲೂ ಸಂಗಮವಾಗುವ ಸ್ಥಳದಲ್ಲಿದೆ. ಅಬಿಸೀನಿಯದಿಂದಲೂ, ಸೂಡಾನಿನಿಂದಲೂ ಬರುವ ಕಾರವಾನ್ ಮಾರ್ಗಗಳೆಲ್ಲಾ ಇಲ್ಲಿ ಸಂಧಿಸುವುವು. ಇದು ಸೂಡಾನಿನಲ್ಲಿ ಮುಖ್ಯ ಪಟ್ಟಣ ಮತ್ತು ವ್ಯಾಪಾರಸ್ಥಳ.

**ಡಾಮಿಯಟ್ಟೆ ಮತ್ತು ರೊಜೆಟ್ಟೆ**ಗಳೆಂಬ ಎರಡು ಚಿಕ್ಕ ರೇವುಪಟ್ಟಣಗಳು ನೈಲ್ ನದಿಯ ಮುಖದಲ್ಲಿವೆ. ಸೂಯಿಸ್ ಕಾಲುವೆಯ ಮುಖದಲ್ಲಿರುವ **ಪೋರ್ಟ್‌ಸೆಡ್** ಪಟ್ಟಣವು ಕ್ರಮೇಣ ಅಭಿವೃದ್ಧಿಗೆ ಬರುತ್ತಲಿದೆ.

(2) **ಬ್ರಿಟಿಷ್ ದಕ್ಷಿಣ ಆಫ್ರಿಕ.**—ಸುಮಾರು 400 ವರ್ಷಗಳ ಕೆಳಗೆ ವಾಸ್ಕೋಡಿಗಾಮನು ಇಂಡಿಯಾದೇಶಕ್ಕೆ ಗುಡ್‌ಹೋಪ್ ಭೂಶಿರದ ಮಾರ್ಗವಾಗಿ ದಾರಿಯನ್ನು ಕಂಡುಹಿಡಿದಾಗಿನಿಂದಲೂ ಯೂರೊಪಿಯನ್ನರು ದಕ್ಷಿಣ ಆಫ್ರಿಕಕ್ಕೆ ಬಂದು ತಂಗಿ ಮುಂದಕ್ಕೆ ಹೋಗಲಾರಂಭಿಸಿದರು. ಮೊದಲು ಡಚ್ ಜನರು ಕೇಪ್‌ಕಾಲೊನಿಯಲ್ಲಿ ನೆಲಸಿದರು. ಇದು ಬ್ರಿಟಿಷರಿಗೆ ಸ್ವಾಧೀನವಾದ ಮೇಲೆ ಇವರು ಉತ್ತರಕ್ಕೆ ಹೋಗಿ ಆರೆಂಜ್ ಫ್ರೀಸ್ಟೇಟ್, ಟ್ರಾನ್ಸ್‌ವಾಲ್‌ಗಳಲ್ಲಿ ನಿಂತರು. ಈ ಡಚ್ಚರ ವಂಶೀಕರಿಗೆ ಬೋಯರರೆಂದು ಹೆಸರು. ಅದರಿಂದೀಚೆಗೆ

ಬ್ರಿಟಿಷರು ನೆಟಾಲನ್ನೂ, ರೋಡಿಷಿಯವನ್ನೂ ಸ್ವಾಧೀನಮಾಡಿಕೊಂಡರು. 1899ರಲ್ಲಿ ಬೋಯರರಿಗೂ ಬ್ರಿಟಿಷರಿಗೂ ಯುದ್ಧ ನಡೆದು ಕೊನೆಗೆ ಬ್ರಿಟಿಷರೇ ಗೆದ್ದರು. ಆದರೆ ಯುದ್ಧವು ನಿಂತು ಸಂಧಿಯು ನಡೆದ ಮೇಲೆ ಇಬ್ಬರೂ ಸ್ನೇಹವಾಗಿದಾರೆ. 1910ರಲ್ಲಿ ಟ್ರಾನ್ಸ್‌ವಾಲ್, ನೆಟಾಲ್, ಆರೆಂಜ್ ಫ್ರೀ ಸ್ಟೇಟ್, ಕೇಪ್‌ಕಾಲೊನಿ ಇವು ನಾಲ್ಕೂ ಸಮ್ಮಿಳಿತವಾಗಿ ದಕ್ಷಿಣ ಆಫ್ರಿಕ ಸಂಯುಕ್ತ ಪ್ರಭುತ್ವವಾಗಿರುವುದು. ಇದರ ರಾಜಧಾನಿ ಕೇಪ್‌ಟೌನ್. ಬ್ರಿಟಿಷ್ ರಾಜನಿಂದ ನಿಯಮಿಸಲ್ಪಟ್ಟ 'ಹೈ ಕಮಿಷನರ್' ಎಂಬ ಅಧಿಕಾರಿಯು ಈ ಪ್ರಭುತ್ವದ ಮೇಲ್ವಿಚಾರಣೆಯನ್ನು ನೋಡುವನು. ದಕ್ಷಿಣ ಆಫ್ರಿಕದಲ್ಲಿ ಬೋಯರರೂ, ಬ್ರಿಟಿಷರೂ ಅಲ್ಲದೆ ಹಾಟೆಂಟಾಟ್, ಜೂಲೂಗಳೆಂಬ ದೇಶೀಯರು ಅನೇಕರಿರುವರು.

**ಕೇಪ್‌ಕಾಲೊನಿ.**—ಇದು ಆಫ್ರಿಕಾ ಖಂಡದ ದಕ್ಷಿಣದ ಕೊನೆಯಲ್ಲಿದೆ. ಈ ದೇಶದಲ್ಲಿ ಬಹುಭಾಗವು ಪ್ರಸ್ಥಭೂಮಿಯಾಗಿದೆ. ನೈರುತ್ಯ ಮೂಲೆಯಲ್ಲಿ ಮಾತ್ರ ಫಲವತ್ತಾದ ತೀರದ ಮೈದಾನವಿರುವುದು. ಮೈದಾನದಲ್ಲಿ ಮಳೆಯು ಚಳಿಗಾಲದಲ್ಲಿ ಹೆಚ್ಚಾಗಿ ಬೀಳುವುದು; ವಾಯುಗುಣವು ಹಿತಕರವಾಗಿದೆ. ಪ್ರಸ್ಥಭೂಮಿಗಳಲ್ಲಿ ಮಳೆಯು ಬೀಳುವುದು ಬಹಳ ಕಡಿಮೆ; ಆದರೆ ಹುಲ್ಲುಗಾವಲುಗಳು ಯಥೇಚ್ಛವಾಗಿರುವುವು. ಆದುದರಿಂದ ಇಲ್ಲಿ ಸಾಮಾನ್ಯವಾಗಿ ಕುರಿಗಳೂ, ಮೇಕೆಗಳೂ ಅಸಂಖ್ಯಾಕವಾಗಿ ಮೇಯುವುವು. ಒಂದೊಂದು ಮಂದೆಯಲ್ಲಿ 15—20 ಸಾವಿರ ಕುರಿಗಳವರೆಗೂ ಇರುವುವು. ದಕ್ಷಿಣ ಆಫ್ರಿಕವು ಆಸ್ಟ್ರೇಲಿಯದಂತೆ ಇಂಗ್ಲೆಂಡಿಗೆ ಉಣ್ಣೆಯನ್ನು ರಫ್ತುಮಾಡುವ ದೇಶಗಳಲ್ಲಿ ಮುಖ್ಯವಾದುದಾಗಿದೆ. ಇಲ್ಲಿಯ ಉಣ್ಣೆಯು ಉತ್ತಮ ತೆರನಾದುದು. ಹುಲ್ಲು ಉದ್ದವಾಗಿ ಬೆಳೆಯುವ ಈಶಾನ್ಯ ಭಾಗದಲ್ಲಿ ಕುದುರೆಗಳನ್ನೂ, ದನಗಳನ್ನೂ ಸಾಕುವರು. ನೈರುತ್ಯದ ಮೈದಾನದಲ್ಲಿ ದ್ರಾಕ್ಷಿಯೂ, ಸೇಬೂ ಬೆಳೆಯುತ್ತವೆ. ನದಿಗಳಿಂದ ನೀರುಹಾಯಿಸಿ ಮೆಕ್ಕೆಯಜೋಳವನ್ನೂ, ಗೋಧಿಯನ್ನೂ ಹೊಗೆಯ ಸೊಪ್ಪನ್ನೂ ಸ್ವಲ್ಪಮಟ್ಟಿಗೆ ಬೆಳೆಯುವರು. ಈ ದೇಶದಲ್ಲಿ ವಜ್ರವೂ, ತಾಮ್ರವೂ ಸಿಕ್ಕುವುವು. ಇವುಗಳೂ, ಉಣ್ಣೆಯೂ, ಉಷ್ಟ್ರಪಕ್ಷಿಯ ಗರಿಗಳೂ ವಿಶೇಷವಾಗಿ ಇಲ್ಲಿಂದ ರಫ್ತಾಗುತ್ತವೆ. ಪೂರ್ವದಲ್ಲಿ ಉಷ್ಟ್ರಪಕ್ಷಿಯನ್ನು ಬೇಟೆಯಾಡಿ ಕೊಂದು ಗರಿಗಳನ್ನು ತೆಗೆದುಕೊಳ್ಳುತ್ತಿದ್ದರು. ಈಗಲಾದರೋ ಇದನ್ನು ಪಳಗಿಸಿ ಸಾಕುತ್ತಿರುವರು. ಈ ಪಕ್ಷಿಯು ತನ್ನ ಆಹಾರದೊಂದಿಗೆ ಕಲ್ಲು, ಗಾಜು, ಮೂಳೆಗಳ ಚೂರುಗಳನ್ನೂ ನುಂಗುವುದು. ಹೊಟ್ಟೆಯಲ್ಲಿ ಆಹಾರವು ಕಲಕಿ ಜೀರ್ಣವಾಗುವುದಕ್ಕೆ ಆ ಚೂರುಗಳು ಸಹಾಯಮಾಡುವುವಂತೆ. ಪಕ್ಷಿಗಳು ಒಂದು ವರ್ಷಕ್ಕಿಂತ ದೊಡ್ಡದಾದ ಮೇಲೆ 8–9 ತಿಂಗಳಿಗೊಂದಾವೃತ್ತಿ ಗರಿಗಳನ್ನು ತೆಗೆಯುವರು. ಈಚೆಗೆ ಈ ಕೆಲಸಕ್ಕೆ ಒಂದು ನಮೂನೆಯ ಪೆಟ್ಟಿಗೆಯನ್ನು ಉಪಯೋಗಿ

ಸುವರು. ಈ ಪೆಟ್ಟಿಗೆಯಲ್ಲಿ ಪಕ್ಷಿಯು ನಿಲ್ಲಲಿಕ್ಕೆ ಮಾತ್ರ ಸ್ಥಳವಿರುವುದು. ಕಾಲುಗಳನ್ನು ತಿರುಗಿಸಲಿಕ್ಕೂ ಝಾಡಿಸಲಿಕ್ಕೂ ಅವಕಾಶವಿಲ್ಲ. ಇವುಗಳಲ್ಲಿ ಕೂಡಿ ಕತ್ತರಿಯಿಂದ ರೆಕ್ಕೆಯನ್ನು ಕತ್ತರಿಸಿಕೊಳ್ಳುವರು. ಸೂಕ್ಷ್ಮವಾದ ಮತ್ತು ಹೆಚ್ಚು ಬೆಲೆಯುಳ್ಳ ಸಣ್ಣ ಗರಿಗಳನ್ನು ಕೈಯಿಂದಲೇ ಕೀಳುವರು. ಯುರೋಪಿನಲ್ಲಿ ಹೆಂಗಸರು ಈ ಗರಿಗಳನ್ನು ಅಲಂಕಾರಕ್ಕಾಗಿ ಉಪಯೋಗಿಸುವುದರಿಂದ ಇವು ಹೆಚ್ಚು ಬೆಲೆ ಬಾಳುವುವು.

**ಕೇಪ್‌ಟೌ.**—ಈ ಪಟ್ಟಣವು ನೈರುತ್ಯ ತೀರದಲ್ಲಿರುವ ಉತ್ತಮವಾದ ರೇವುಪಟ್ಟಣವು. ಯುರೋಪ್ ಖಂಡದಿಂದ ದಕ್ಷಿಣ ಅಟ್ಲಾಂಟಿಕ್ ಸಾಗರದ ಮಾರ್ಗವಾಗಿ ಇಂಡಿಯ, ಚೀಣ, ಆಸ್ಟ್ರೇಲಿಯಗಳಿಗೆ ಹೋಗುವ ಹಡಗುಗಳು ಇಲ್ಲಿ ತಂಗುವುವು. ಇಲ್ಲಿ ಬ್ರಿಟಿಷ್ ಸರಕಾರದ ನೌಕಾ ಸೈನ್ಯವು ಇರುವುದು. ಇಲ್ಲಿಂದ ಟ್ರಾನ್ಸ್‌ವಾಲ್, ಆರೆಂಜ್ ಫ್ರೀಸ್ಟೇಟ್ ಸಂಸ್ಥಾನಗಳಿಗೆ ರೈಲುಮಾರ್ಗಗಳು ಹೊರಡುವುವು. **ಕಿಂಬರ್ಲಿ** ಪಟ್ಟಣವು ಉತ್ತರಭಾಗದಲ್ಲಿದೆ. ಇಲ್ಲಿ ವಜ್ರಗಳು ಸಿಕ್ಕುವುವು. ಪೂರ್ವದಲ್ಲಿ ಈ ಪ್ರದೇಶದಲ್ಲಿ ವಜ್ರಗಳು ನೆಲದಮೇಲೆಯೇ ಸಿಕ್ಕುತ್ತಿದ್ದವು. ಈಗ ನೂರಾರು ಅಡಿಗಳಷ್ಟು ಆಳವಾದ ಗಣಿಗಳಲ್ಲಿ ಮಾತ್ರ ದೊರಕುವುವು. ಗಣಿಗಳಲ್ಲಿ ಕೆಲಸಗಾರರು ವಜ್ರವಿರುವ ಗಟ್ಟಿಯಾದ ಜೇಡಿಯಮಣ್ಣನ್ನು ಅಗೆದು ಕಬ್ಬಿಣದ ತೊಟ್ಟಿಲುಗಳಲ್ಲಿ ಮೇಲಕ್ಕೆ ಕಳುಹಿಸುವರು. ಈ ಮಣ್ಣನ್ನು ನೆಲದ ಮೇಲೆ ಹರಡಿ ಬಿಸಿಲೂ, ಗಾಳಿಯೂ ಸೋಕುವಂತೆ ಕೆಲವು ತಿಂಗಳಕಾಲ ಬಿಟ್ಟು ಆಮೇಲೆ ಯಂತ್ರದಲ್ಲಿ ಹಾಕಿ ಹರಿಯುವ ನೀರಿನ ಸಹಾಯದಿಂದ ವಜ್ರವನ್ನು ಬೇರೆಮಾಡುವರು. ಇಂತಹ ಗಣಿಗಳಲ್ಲಿ ಕೆಲಸಮಾಡುವ ಕೂಲಿ ಜನಗಳೆಲ್ಲರೂ ಹಾಟೆಂಟಾಟರು. ಇವರು ಹೆಚ್ಚುಕಾಲ ಒಂದೇ ಕಡೆಯಲ್ಲಿ ಉದ್ಯೋಗಮಾಡುವುದಿಲ್ಲ ಮತ್ತು ಕಳ್ಳತನದಲ್ಲಿ ನಿಪುಣರು. ಆದುದರಿಂದ ಗಣಿಗಳಲ್ಲಿ ಕೆಲಸಮಾಡುವ ಪರ್ಯಂತವೂ ಇವರನ್ನು ಜೋಕೆಯಾಗಿ ನೋಡಿಕೊಂಡು ಇರುತ್ತಾರೆ. ಆದರೂ ಕೆಲವು ವೇಳೆ ಇವರು ಬಾಯಿಯಲ್ಲಿಯೂ, ಕಂಕುಳ ಸಂದು ಮೊದಲಾದ ಸ್ಥಳಗಳಲ್ಲಿಯೂ ತಮಗೆ ಸಿಕ್ಕಿದ ವಜ್ರಗಳನ್ನು ಬಚ್ಚಿಟ್ಟುಕೊಂಡು ಎಷ್ಟು ಶೋಧಿಸಿದರೂ ಸಿಕ್ಕದಂತೆ ಕದ್ದುಕೊಂಡು ಹೋಗುವುದುಂಟು. **ಪೋರ್ಟ್ ಎಲಿಜಬೆತ್** ಎಂಬುದು ಪೂರ್ವಭಾಗದಲ್ಲಿ ಆಲ್ಗೋವಾ ಕೊಲ್ಲಿಯ ದಡದಲ್ಲಿದೆ. ಇದರ ಬಂದರು ಉತ್ಕೃಷ್ಟವಲ್ಲದುದಾದರೂ ಇಲ್ಲಿ ವ್ಯಾಪಾರವು ವಿಶೇಷವಾಗಿ ನಡೆಯುವುದು. ವಜ್ರ, ಉಣ್ಣೆ, ಉಷ್ಟ್ರಪಕ್ಷಿಯ ಗರಿಗಳು ಮತ್ತು ತೊಗಲು ಇಲ್ಲಿಂದ ರಫ್ತಾಗುತ್ತವೆ. ಇಲ್ಲಿಂದ ರೈಲುಮಾರ್ಗಗಳು ಎಲ್ಲಾ ಕಡೆಗೂ ಹೋಗುತ್ತವೆ.

ಕೇಪ್‌ಕಾಲೊನಿಯ ಉತ್ತರದಲ್ಲಿ ಬೆಕ್ವಾನಾಲ್ಯಾಂಡ್ ಎಂಬ ಸಂಸ್ಥಾನವಿದೆ. ಇದರಲ್ಲಿ ದಕ್ಷಿಣ ಭಾಗವನ್ನು ಕೇಪ್‌ಕಾಲೊನಿಗೆ ಈಚೆಗೆ ಸೇರಿಸಿದಾರೆ.

ಉತ್ತರಭಾಗದಲ್ಲಿ ದೇಶೀಯ ಸಂಸ್ಥಾನಗಳಿವೆ. ಇವುಗಳ ರಾಜರು ಬ್ರಿಟಿಷರ ಪೋಷಣೆಯಲ್ಲಿದ್ದಾರೆ. ಈ ಪ್ರದೇಶವೆಲ್ಲವೂ ಕಲಹರಿ ಮರುಭೂಮಿಯಿಂದ ತುಂಬಿದೆ. ಪೂರ್ವದಲ್ಲಿ ಮಾತ್ರ ಹುಲ್ಲುಗಾವಲುಗಳಿರುವುವು.

**ನೆಟಾಲ್.**—ಕೇಪ್ ಕಾಲೊನಿಗೆ ಈಶಾನ್ಯದಲ್ಲಿ 'ದಕ್ಷಿಣ ಆಫ್ರಿಕದ ತೋಟ' ವೆನ್ನಿಸಿಕೊಳ್ಳುವ ನೆಟಾಲ್ ದೇಶವಿರುವುದು. ಇದು ಕೇಪ್‌ಕಾಲೊನಿಯ ⅛ರಷ್ಟು ಮಾತ್ರ ವಿಸ್ತಾರವಾಗಿರುವುದು. ಈ ದೇಶದ ಪೂರ್ವಭಾಗದಲ್ಲಿ ಹಿಂದೂಸಾಗರ ತೀರದ ತಗ್ಗಾದ ಮೈದಾನವಿರುವುದು. ಈ ಮೈದಾನದಿಂದ ಪಶ್ಚಿಮಕ್ಕೆ ಹೋದ ಹಾಗೆಲ್ಲಾ ಎತ್ತರವಾದ ಬೆಟ್ಟಗಳೂ ಕಣಿವೆಗಳೂ ಇರುವುವು. ನೆಟಾಲಿನಲ್ಲಿ ಸಾಗರದ ಜಲಾಂಶಪೂರಿತವಾದ ಮಾರುತಗಳು ಬೀಸಿ ಮಳೆಯು ಹೆಚ್ಚಾಗಿ ಬರುವುದು. ಇದರಿಂದ ತೀರದ ಮೈದಾನದಲ್ಲಿ ಕಬ್ಬು, ತೇಯೆಲೆಯೂ, ಮೆಕ್ಕೆ ಜೋಳವೂ ಬೆಳೆಯುವುವು. ಇಲ್ಲಿ ಸೆಕೆ ಹೆಚ್ಚಾದುದರಿಂದ ಬ್ರಿಟಿಷ್ ಪ್ಲಾಂಟರು ಗಳು ಇಲ್ಲಿನ ಜೂಲೂ ಮೊದಲಾದ ಜನಗಳಿಂದಲೂ, ಸ್ವಲ್ಪಮಟ್ಟಿಗೆ ಇಂಡಿಯಾ ದೇಶದಿಂದ ಕರೆಸಲ್ಪಟ್ಟ ಕೂಲಿ ಜನಗಳಿಂದಲೂ ವ್ಯವಸಾಯವನ್ನು ಮಾಡಿಸಿ ತಾವು ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿರುವರು. ಆದರೆ ಪಶ್ಚಿಮ ಭಾಗದಲ್ಲಿ ಎತ್ತರವಾದ ತಪ್ಪಲುಗಳಲ್ಲಿಯೂ, ಕಣಿವೆಗಳಲ್ಲಿಯೂ ವಾಯುಗುಣವು ಹಿತಕರವಾಗಿರುವುದರಿಂದ ಗೋಧಿಯನ್ನೂ ಬೆಳೆಯಬಹುದು ಮತ್ತು ದನಕುರಿ ಗಳನ್ನೂ ಸಾಕಬಹುದು.

ಈ ದೇಶದ ಮಧ್ಯಭಾಗದಲ್ಲಿರುವ **ಪೀಟರ್‌ಮೆರಿಟ್ಸ್‌ಬರ್ಗ್** ಎಂಬ ಪಟ್ಟಣವು ರಾಜಧಾನಿಯು. ಪೂರ್ವತೀರದಲ್ಲಿರುವ **ಡರ್ಬಾನ್** ಎಂಬುದು ನೆಟಾಲಿನ ಮುಖ್ಯ ರೇವುಪಟ್ಟಣವು. ಈ ಪಟ್ಟಣದ ಅಗಲವಾದ ರಸ್ತೆಗಳೂ ಉದ್ಯಾನವನಗಳೂ ನೋಡಲಿಕ್ಕೆ ರಮ್ಯವಾಗಿವೆ. ಈ ಉದ್ಯಾನವನಗಳಲ್ಲಿ ಮಾವೂ, ಬಾಳೆಯೂ, ಬಿದಿರೂ ವಿಶೇಷವಾಗಿ ಬೆಳೆಯುತ್ತವೆ. ಇಲ್ಲಿಂದ ಟ್ರಾನ್ಸ್ ವಾಲಿಗೂ, ಆರೆಂಜ್ ಫ್ರೀಸ್ಟೇಟಿಗೂ ರೈಲುಮಾರ್ಗಗಳು ಹೋಗುತ್ತವೆ. ಆ ದೇಶಗಳ ಸಾಮಾನುಗಳು, ಅಂದರೆ ಚಿನ್ನವೂ, ಉಣ್ಣೆಯೂ ವಿಶೇಷವಾಗಿ ಈ ಪಟ್ಟಣದಿಂದಲೇ ರಫ್ತಾಗುವುದರಿಂದ ಇಲ್ಲಿನ ವ್ಯಾಪಾರವು ಹೆಚ್ಚುತ್ತಲಿದೆ. ಇದರ ಸಮೀಪದಲ್ಲಿ ಕಲ್ಲಿದ್ದಲಿನ ಗಣಿಗಳು ಇರುವುವು.

**ಆರೆಂಜ್ ಫ್ರೀಸ್ಟೇಟ್ ಅಥವಾ ಆರೆಂಜ್ ನದಿಯ ಪ್ರದೇಶದ ಸ್ವತಂತ್ರ ಸಂಸ್ಥಾನ.**—ಇದು ಆರೆಂಜ್ ನದಿಗೂ, ವಾಲ್ ನದಿಗೂ ನಡುವೆ ಇರುವುದು. ಪೂರ್ವಭಾಗದಲ್ಲಿ ವಿನಾ ಮಳೆ ಬಹಳ ಕಡಿಮೆ. ಎತ್ತರವಾದ ಗುಡ್ಡ ಗಳೂ ಮೈದಾನಗಳೂ ತುಂಬಿರುವುವು. ಆದುದರಿಂದ ದನ, ಕುರಿ, ಮೇಕೆಗಳನ್ನು ಮೇಯಿಸುವುದೇ ಜನರ ಮುಖ್ಯೋದ್ಯೋಗವಾಗಿದೆ. ಪಶ್ಚಿಮಭಾಗದಲ್ಲಿ

ಕಿಂಬರ್ಲಿಯ ಸಮೀಪದಲ್ಲಿ ವಜ್ರದ ಗಣಿಗಳು ಸಿಕ್ಕಿವೆ. ಇಲ್ಲಿಯ ವಜ್ರಗಳು ದೊಡ್ಡವು ಮತ್ತು ಉತ್ಕೃಷ್ಟವಾದುವು. **ಬ್ಲೂಮ್ ಫಾಂಟೇನ್** ಎಂಬುದು ರಾಜಧಾನಿ. ಬಹಳ ಆರೋಗ್ಯಕರವಾದ ಸ್ಥಳ. ಇಲ್ಲಿಂದ ಟ್ರಾನ್ಸ್‌ವಾಲಿಗೂ, ನೆಟಾಲಿಗೂ ರೈಲುಮಾರ್ಗಗಳಿವೆ.

**ಟ್ರಾನ್ಸ್‌ವಾಲ್.**—ಈ ದೇಶವು ಲಿಂಪೊಪೋ ನದಿಗೂ ವಾಲ್ ನದಿಗೂ ನಡುವೆ ಇರುವುದು. ಈ ದೇಶದಲ್ಲಿ ಬಹಳ ಭಾಗವು ಮಳೆಯಿಲ್ಲದ ಪ್ರಸ್ಥಭೂಮಿಯಾಗಿರುವುದು. ಕುರಿಗಳನ್ನೂ, ದನಗಳನ್ನೂ ಮೇಯಿಸುವುದೇ ಇಲ್ಲಿನ ಜನಗಳ ಮುಖ್ಯೋದ್ಯೋಗವು. ಉತ್ತರದಲ್ಲಿಯೂ ಪೂರ್ವದಲ್ಲಿಯೂ ಭೂಮಿಯು ಅಷ್ಟು ಎತ್ತರವಾಗಿಲ್ಲ; ಮಳೆಯು ತಕ್ಕಮಟ್ಟಿಗೆ ಬರುತ್ತದೆ. ಆದುದರಿಂದ ಗೋಧಿಯು ಚೆನ್ನಾಗಿ ಬೆಳೆಯುವುದು. ಆದರೆ ಈ ಭಾಗವು ಅನಾರೋಗ್ಯಕರವಾಗಿದೆ. ಈ ದೇಶದ ಮಧ್ಯಭಾಗದಲ್ಲಿ ಚಿನ್ನದ ಗಣಿಗಳು ವಿಶೇಷವಾಗಿ ಸಿಕ್ಕಿವೆ. **ಪ್ರಿಟೋರಿಯ** ಎಂಬುದು ರಾಜಧಾನಿ. ಇಲ್ಲಿನ ಬೀದಿಗಳು ಬಹು ಸುಂದರವಾಗಿವೆ. ಈ ದೇಶದ ಮಧ್ಯಭಾಗದಲ್ಲಿರುವ **ಜೋಹಾನ್ಸ್‌ಬರ್ಗ್** ಎಂಬುದು ದಕ್ಷಿಣ ಆಫ್ರಿಕದಲ್ಲೆಲ್ಲಾ ದೊಡ್ಡ ಪಟ್ಟಣವು. ರೈಲುಮಾರ್ಗಗಳು ಇಲ್ಲಿ ಸೇರುತ್ತವೆ. ಇದರ ಸುತ್ತಲೂ ಚಿನ್ನದ ಗಣಿಗಳಿವೆ.

(3) **ಬ್ರಿಟಿಷರಿಗೆ ಸೇರಿದ ಇತರ ಭಾಗಗಳು.**—ಬ್ರಿಟಿಷ್ ಸೋಮಾಲಿಲ್ಯಾಂಡ್. ಆಫ್ರಿಕದ ಪೂರ್ವಭಾಗದಲ್ಲಿರುವ ಸೋಮಾಲಿ ಲ್ಯಾಂಡಿನಲ್ಲಿ ಏಡನ್ ಸಮುದ್ರಶಾಖೆಯ ದಕ್ಷಿಣದಲ್ಲಿ ಸ್ವಲ್ಪ ಭಾಗವು ಬ್ರಿಟಿಷರಿಗೆ ಸೇರಿದೆ. **ಬರ್ಬರಾ** ಎಂಬುದು ಮುಖ್ಯ ಪಟ್ಟಣ ಮತ್ತು ಬಂದರು. ಗಾರ್ಡಾಫ್ಯೀ ಭೂಶಿರಕ್ಕೆ 150 ಮೈಲಿಗಳ ದೂರದಲ್ಲಿರುವ ಸೊಕೋತ್ರು ದ್ವೀಪವೂ ಬ್ರಿಟಿಷರಿಗೆ ಸೇರಿದೆ. ಪೆರಿಂ ದ್ವೀಪವೂ, ಏಡನ್ನೂ ಬ್ರಿಟಿಷರಿಗೆ ಸೇರಿರುವುದರಿಂದ ಬೇಬಲ್ಮಾಂಡೆಬ್ ಜಲಸಂಧಿಯ ಮೂಲಕ ಬ್ರಿಟಿಷರಿಗೆ ಸೇರಿದ ಹಡಗುಗಳು ಸುರಕ್ಷಿತವಾಗಿ ಸಂಚರಿಸಲು ಅನುಕೂಲವಾಗಿದೆ.

**ಬ್ರಿಟಿಷ್ ಪೂರ್ವ ಆಫ್ರಿಕ.**—ಅಬಿಸೀನಿಯ ಮತ್ತು ಈಜಿಪ್ಟಿನ ಸೂಡಾನುಗಳಿಗೆ ದಕ್ಷಿಣದಲ್ಲಿ ವಿಕ್ಟೋರಿಯಾನ್ಯಾಂಜ ಸರೋವರದವರೆಗೂ ಬ್ರಿಟಿಷ್ ಪೂರ್ವ ಆಫ್ರಿಕವು ಹಬ್ಬಿರುವುದು. ಇದರ ವಾಯುವ್ಯಭಾಗಕ್ಕೆ ಯುಗಾಂಡವೆಂದು ಹೆಸರು. ಹಿಂದೂಸಾಗರದ ತೀರದಲ್ಲಿ ತಗ್ಗಾದ ಮೈದಾನವಿರುವುದು. ಇಲ್ಲಿ ಸೆಕೆಯೂ, ಮಳೆಯೂ ಹೆಚ್ಚು. ಇದು ಅನಾರೋಗ್ಯಕರವಾಗಿರುವುದು. ಈ ಮೈದಾನಕ್ಕೆ ಪಶ್ಚಿಮಕ್ಕೆ ಹೋದ ಹಾಗೆ ಎತ್ತರವು ಹೆಚ್ಚುವುದು. ಒಳಭಾಗದಲ್ಲಿ ಎತ್ತರವಾದ ಪ್ರಸ್ಥಭೂಮಿಯಿರುವುದು. ಇದರಲ್ಲಿ 18,000 ಅಡಿಗಳಷ್ಟು ಎತ್ತರವಾದ ಕೆನಿಯವೆಂಬ ಶಿಖರವಿರುವುದು. ಇದು ಉನ್ನತವಾಗಿರು

ವುದರಿಂದ ಇದರ ಮೇಲ್ಭಾಗವು ಯಾವಾಗಲೂ ಹಿಮದಿಂದ ಮುಚ್ಚಲ್ಪಟ್ಟಿರುವುದು. ಯುಗಾಂಡದ ದಕ್ಷಿಣದಲ್ಲಿ ರುವಂಜೋರಿ ಎಂಬ ಉನ್ನತ ಶಿಖರವಿರುವುದು. ಯುಗಾಂಡದ ಕೆಲವು ಭಾಗಗಳಲ್ಲಿ ನೈಲ್ ನದಿಯೂ, ಅದರ ಉಪನದಿಗಳೂ ಹರಿಯುವುವು. ಯುಗಾಂಡದಲ್ಲಿ ಉಷ್ಣವಲಯದ ಕಾಡುಗಳಿರುವುವು; ಹುಲ್ಲುಗಾವಲುಗಳೂ ಹೆಚ್ಚಾಗಿವೆ. ಇಲ್ಲಿಯ ಪೂರ್ವನಿವಾಸಿಗಳಾದ 'ವಗಾಂಡರು' ಬಹು ಚತುರರು. ಇವರನ್ನು ಆಫ್ರಿಕಾಖಂಡದ ಜಪಾನರೆಂದು ಕರೆಯುವುದುಂಟು. ಇವರು ಮಣ್ಣಿನ ಪಾತ್ರೆಯನ್ನು ಬಹಳ ಅಂದವಾಗಿ ಮಾಡುವರು. ಉಕ್ಕಿನ ಬರ್ಜಿಗಳನ್ನು ಮಾಡುವರು. ದಂತದ ಸಾಮಾನುಗಳನ್ನು ಕುಶಲತೆಯಿಂದ ಮಾಡುವರು ಮತ್ತು ಸಾಬೂನನ್ನು ಮಾಡುವ ವಿಧವನ್ನು ಕಂಡುಹಿಡಿದಿರುವರು. ಇವರು ಗುಂಡಾದ ಗುಡಿಸಲುಗಳನ್ನು ಕಟ್ಟಿಕೊಂಡು ಅವುಗಳಲ್ಲಿ ವಾಸಮಾಡುವರು. ಈ ದೇಶದಲ್ಲಿ ಒಂದು ಬಗೆಯ ಮರವು ಬೆಳೆಯುವುದು. ಅದರ ತೊಗಟೆಯಿಂದ ಇವರು ಪೂರ್ವದಲ್ಲಿ ಬಟ್ಟೆಯನ್ನು ನೇಯುತ್ತಿದ್ದರು. ಈಚೆಗೆ ಯೂರೊಪ್ ಖಂಡದ ಬಟ್ಟೆಗಳನ್ನು ಕೊಂಡುಕೊಳ್ಳುತ್ತಲಿದ್ದಾರೆ. ದೋಣಿಗಳನ್ನು ಕಟ್ಟುವುದರಲ್ಲಿ ಈ ಜನರು ಬಹು ಕುಶಲರು. ನೂರಾರು ಜನರು ಕುಳಿತುಕೊಳ್ಳಬಹುದಾದ ದೋಣಿಗಳನ್ನು ಮೊಳೆಗಳನ್ನುಪಯೋಗಿಸದೆ ಕಟ್ಟುವರು. ಈಗ 40 ವರ್ಷಗಳಿಂದೀಚೆಗೆ ಬ್ರಿಟಿಷ್ ಪಾದ್ರಿಗಳು ತಮ್ಮ ಮತವನ್ನು ಬೋಧಿಸಿ ಇವರನ್ನು ಕ್ರೈಸ್ತರನ್ನಾಗಿ ಮಾಡಿರುವರು.

ಬ್ರಿಟಿಷ್ ಪೂರ್ವ ಆಫ್ರಿಕದ ಪ್ರಸ್ಥಭೂಮಿಯ ಭಾಗದಲ್ಲಿ ವಾಯುಗುಣವು ತಂಪಾಗಿರುವುದರಿಂದಲೂ, ಮಳೆಯು ವಿಶೇಷವಾಗಿಲ್ಲದುದರಿಂದಲೂ ಯೂರೊಪಿಯನ್ ಪ್ಲಾಂಟರುಗಳು ಕೆಲವರು ಈಚೆಗೆ ಅಲ್ಲಲ್ಲಿ ನೆಲಸಿರುವರು. ಇವರು ಕಾಫಿಯನ್ನೂ, ಹೊಗೆಯುಸೊಪ್ಪನ್ನೂ ಬೆಳೆಯುತ್ತಿರುವರು. ಹುಲ್ಲುಗಾವಲುಗಳಲ್ಲಿ ಕುರಿಗಳನ್ನೂ, ದನಗಳನ್ನೂ ಸಾಕುತ್ತಿರುವರು. ತೀರದ ಮೈದಾನ ಪ್ರದೇಶದಲ್ಲಿ ವಗಾಂಡರು ಕಬ್ಬನ್ನೂ, ಅಕ್ಕಿಯನ್ನೂ, ಗೆಣಸನ್ನೂ, ಬಾಳೆಯನ್ನೂ ಬೆಳೆಯುವರು.

ಈ ದೇಶದಿಂದ ಪೂರ್ವದಿಂದಲೂ ಆನೆಯ ದಂತವೂ, ರಬ್ಬರೂ ವಿಶೇಷವಾಗಿ ರಫ್ತಾಗುತ್ತಿವೆ.

**ಮೊಂಬಾಸ.**—ಈ ಪಟ್ಟಣವು ಪೂರ್ವತೀರದಲ್ಲಿದೆ. ಅತ್ಯುತ್ತಮವಾದ ಬಂದರನ್ನು ಹೊಂದಿದೆ. ಇಲ್ಲಿಂದ ಯುಗಾಂಡಕ್ಕೆ ರೈಲುಮಾರ್ಗವನ್ನು ಮಾಡಿದಾರೆ. ಇಲ್ಲಿಂದ ದಂತವೂ, ತೊಗಲೂ, ದನಗಳೂ ವಿಶೇಷವಾಗಿ ರಫ್ತಾಗುತ್ತವೆ.

ಮೊಂಬಾಸ ಪಟ್ಟಣದ ದಕ್ಷಿಣಕ್ಕೆ ಸ್ವಲ್ಪದೂರದಲ್ಲಿ ಜಾಂಜಿಬಾರ್ ಮತ್ತು ಪೆಂಬ ಎಂಬ ದ್ವೀಪಗಳಿರುವುವು. ಇವುಗಳನ್ನು ಬ್ರಿಟಿಷರ ಅಧೀನದಲ್ಲಿರುವ ಒಬ್ಬ

ಸುಲ್ತಾನನು ಆಳುತ್ತಿದ್ದಾನೆ. ಈ ದ್ವೀಪಗಳಿಂದ ಲವಂಗವು ವಿಶೇಷವಾಗಿ ರಫ್ತಾಗುತ್ತದೆ.

**ಬ್ರಿಟಿಷ್ ಮಧ್ಯ ಆಫ್ರಿಕ.**—ಇದು ನ್ಯಸಾಲ್ಯಾಂಡ್ ಮತ್ತು ರೊಡೀಷಿಯ ಎಂಬ ಎರಡು ರಾಷ್ಟ್ರಗಳನ್ನೊಳಗೊಂಡಿದೆ. ನ್ಯಸಾಲ್ಯಾಂಡಿನ ಬಹಳ ಭಾಗವು ಎತ್ತರವಾದ ಪ್ರಸ್ಥಭೂಮಿಯಾಗಿರುವುದು. ಈ ಪ್ರಸ್ಥಭೂಮಿಯಲ್ಲಿ ರಮಣೀಯವಾದ ಸರೋವರಗಳೂ, ವೇಗವಾಗಿ ಹರಿದು ಅನೇಕ ಕಡೆಗಳಲ್ಲಿ ಕೆಳಗೆ ಧುಮುಕುವ ನದಿಗಳೂ, ದಟ್ಟವಾದ ಕಾಡುಗಳೂ, ವಿಶಾಲವಾದ ಹುಲ್ಲಿನ ಮೈದಾನಗಳೂ ಇರುವುವು. ಇಲ್ಲಿನ ವಾಯುಗುಣವು ತಂಪಾಗಿಯೂ, ಹಿತಕರವಾಗಿಯೂ, ಗೋಧಿ ಮೊದಲಾದ ಧಾನ್ಯಗಳು ಬೆಳೆಯಲಿಕ್ಕೆ ಯೋಗ್ಯವಾಗಿಯೂ ಇದೆ. ಆದುದರಿಂದ ಯೂರೊಪಿಯನ್ನರು, ಮುಖ್ಯವಾಗಿ ಬ್ರಿಟಿಷರು ಇಲ್ಲಿಗೆ ಬಂದು ನೆಲೆಗೊಳ್ಳಲಾರಂಭಿಸಿದಾರೆ. ಹತ್ತಿ, ಹೊಗೆಸೊಪ್ಪು, ಮೆಕ್ಕೆಯಜೋಳ ಮತ್ತು ಭತ್ತ ಹುಲುಸಾಗಿ ಬೆಳೆಯುತ್ತವೆ. ಕಾಫಿಯನ್ನೂ ಈಚೆಗೆ ಬೆಳೆಯುತ್ತಿರುವರು.

ರೊಡೀಷಿಯದಲ್ಲಿ ಜಾಂಬೀಸಿ ನದಿಯು ಹರಿಯುವುದು. ವಿಕ್ಟೋರಿಯಾ ಎಂಬ ಕಡೆ ಈ ನದಿಯು ಬಹಳ ಕೆಳಕ್ಕೆ ಧುಮುಕುತ್ತದೆ. ಸಾವಿರ ಫಿರಂಗಿಗಳನ್ನು ಏಕಕಾಲದಲ್ಲಿ ಹಾರಿಸಿದರೆ ಎಷ್ಟು ಶಬ್ದವಾಗುವುದೋ ಅಷ್ಟು ಶಬ್ದವು ಈ ಜಲಪಾತದಲ್ಲಿ ಯಾವಾಗಲೂ ಆಗುತ್ತಲಿರುವುದು. ನೀರು ವೇಗದಿಂದ ಕೆಳಕ್ಕೆ ಬಿದ್ದು ಸಣ್ಣ ತುಂತುರಾಗಿ ಹೊಗೆಯ ಹಾಗೆ ಹಾರುವುದು. ರೊಡೀಷಿಯದ ಉತ್ತರ ಭಾಗದಲ್ಲಿ ಅಂದರೆ ಜಾಂಬೀಸಿ ನದಿಗೆ ಉತ್ತರದಲ್ಲಿರುವ ಪ್ರದೇಶದಲ್ಲಿ ಉಷ್ಣವು ಹೆಚ್ಚು; ಮಳೆ ಕಡಿಮೆ. ಆದುದರಿಂದ ಆ ಪ್ರದೇಶವು ಯೂರೊಪಿಯನ್ನರಿಗೆ ಅನುಕೂಲವಾಗಿಲ್ಲ. ಕಪ್ಪುನೆಲವು ಅಲ್ಲಲ್ಲಿರುವುದರಿಂದ ಹತ್ತಿಯನ್ನು ಬೆಳೆಯಬಹುದು. ಇಲ್ಲಿ ವಿಶಾಲವಾದ ಹುಲ್ಲುಗಾವಲುಗಳಿರುವುವು. ಸೀಸವೂ ಸತುವೂ ಸಿಕ್ಕುವುವು. ದಕ್ಷಿಣ ರೊಡೀಷಿಯವು ಜಾಂಬೀಸಿ ನದಿಗೂ ಲಿಂಪೊಪೋ ನದಿಗೂ ಮಧ್ಯೆ ಇರುವ ಪ್ರಸ್ಥಭೂಮಿಯಾಗಿದೆ. ಇಲ್ಲಿ ವಾಯುಗುಣವು ತಂಪಾಗಿಯೂ, ಹಿತಕರವಾಗಿಯೂ ಇದೆ. ಮಳೆಯು ತಕ್ಕಮಟ್ಟಿಗೆ ಬೀಳುವುದರಿಂದ ಗೋಧಿಯೂ, ಸಮಶೀತೋಷ್ಣವಲಯದ ಹಣ್ಣುಗಳೂ ಚೆನ್ನಾಗಿ ಬೆಳೆಯುವುವು. ಹುಲ್ಲುಗಾವಲುಗಳಲ್ಲಿ ದನಗಳೂ ಕುರಿಗಳೂ ಮೇಯುವುವು. ಚಿನ್ನವು ವಿಶೇಷವಾಗಿ ಸಿಕ್ಕುವುದು. **ಬ್ಲಾಂಟೈರ್** ಎಂಬುದು ನ್ಯಸಾಲ್ಯಾಂಡಿನ ಮುಖ್ಯ ಪಟ್ಟಣವು. **ಬುಲುವೇಯೊ** ಎಂಬುದು ರೊಡೀಷಿಯದಲ್ಲಿ ದೊಡ್ಡ ಪಟ್ಟಣವು. ಕೇಪ್‌ಟೌನಿನಿಂದ ಇಲ್ಲಿಗೆ ರೈಲುಮಾರ್ಗವಿರುವುದು.

ಜರ್ಮನಿ ದೇಶಕ್ಕೆ ಸೇರಿದ್ದ ಜರ್ಮನ್ ಪೂರ್ವಆಫ್ರಿಕ ಮತ್ತು ಜರ್ಮನ್ ನೈರುತ್ಯ ಆಫ್ರಿಕ, ಕಾಮರೂನ್‌ಗಳೆಂಬ ಭಾಗಗಳು ಈಚೆಗೆ ನಡೆದ ಮಹಾ

ಯುದ್ಧದ ಫಲವಾಗಿ ಬ್ರಿಟಿಷರಿಗೆ ಸೇರಿದುವು. ಗಿನೀ ತೀರಪ್ರದೇಶದಲ್ಲಿರುವ ನೈಜೀರಿಯ, ಗೋಲ್ಡ್‌ಕೋಸ್ಟ್, ಸಿರಾಲಿಯೋನಿ ಮೊದಲಾದ ಪ್ರದೇಶಗಳೂ, ಅಟ್ಲಾಂಟಿಕ್ ಸಾಗರದಲ್ಲಿರುವ ಸೆಂಟ್ ಹೆಲೀನಾ, ಅಸೆನ್ಷನ್ ದ್ವೀಪಗಳೂ ಬ್ರಿಟಿಷರಿಗೆ ಸೇರಿವೆ.

---

## II. ಫ್ರೆಂಚರಿಗೆ ಸೇರಿದ ವಿಭಾಗಗಳು

(1) **ಆಲ್ಜೀರಿಯ ಮತ್ತು ಟ್ಯೂನಿಸ್.**—ಈ ಖಂಡದ ವಾಯುವ್ಯದಲ್ಲಿ ಮೆಡಿಟರೇನಿಯನ್ ಸಮುದ್ರ ತೀರಪ್ರದೇಶದಲ್ಲಿ ಮೊರಕ್ಕೊ, ಆಲ್ಜೀರಿಯ, ಟ್ಯೂನಿಸ್, ಟ್ರಿಪೋಲಿಗಳೆಂಬ ದೇಶಗಳಿರುವುವು. ಇವುಗಳಲ್ಲಿ ವಾಸಮಾಡುವ ಜನಗಳಲ್ಲಿ ಬರ್ಬರರೆಂಬುವರು ಮುಖ್ಯರಾದುದರಿಂದ ಈ ದೇಶಗಳಿಗೆ ಬರ್ಬರರ ಸಂಸ್ಥಾನಗಳೆಂದು ಹೆಸರು.

1830ರಲ್ಲಿ ಫ್ರೆಂಚರು ಆಲ್ಜೀರಿಯವನ್ನು ಗೆದ್ದು ತಮ್ಮ ರಾಷ್ಟ್ರಕ್ಕೆ ಸೇರಿಸಿ ಕೊಂಡರು. 1881ರಲ್ಲಿ ಟ್ಯೂನಿಸ್ ದೇಶವೂ ಅವರ ಕೈಗೆ ಸೇರಿತು. ಫ್ರೆಂಚರು ಈ ದೇಶಗಳಲ್ಲಿ ರೈಲುಮಾರ್ಗಗಳನ್ನು ನಿರ್ಮಿಸಿ, ನದಿಗಳಿಂದ ಅಲ್ಲಲ್ಲಿ ಕಾಲುವೆಗಳನ್ನು ತೆಗೆದು, ಮರುಭೂಮಿಯಲ್ಲಿ ಆರ್ಟೀಸಿಯನ್ ಬಾವಿಗಳನ್ನು ತೋಡಿರುವರು. ಆದುದರಿಂದ ಇಲ್ಲಿ ವ್ಯವಸಾಯವೂ, ವ್ಯಾಪಾರವೂ ಈಚೆಗೆ ಹೆಚ್ಚಿ, ಸಂಪತ್ತೂ ನಾಗ ರಿಕತೆಯೂ ಅಭಿವೃದ್ಧಿಯಾಗುತ್ತಿರುವುವು.

ಈ ದೇಶಗಳಲ್ಲಿ ಫಲವತ್ತಾದ ಮತ್ತು ಹೆಚ್ಚಾದ ಜನಸಾಂದ್ರತೆಯುಳ್ಳ ಭಾಗವು ಮೆಡಿಟರೇನಿಯನ್ ತೀರದ ಸಮೀಪದಲ್ಲಿರುವ 'ಟೆಲ್' ಎಂಬ ಮೈದಾನವು. ಇಲ್ಲಿ ಮಳೆಯು ತಕ್ಕಮಟ್ಟಿಗೆ ಬೀಳುವುದು. ನದಿಗಳಿಂದ ಕಾಲುವೆಗಳನ್ನು ತೋಡಿ ವ್ಯವಸಾಯಕ್ಕೆ ನೀರನ್ನೊದಗಿಸಬಹುದು; ಭೂಮಿ ಯೂ ಫಲವತ್ತಾಗಿದೆ. ವಾಯುಗುಣವು ಹಿತಕರವಾಗಿದೆ. ಆದುದರಿಂದ ಗೋಧಿ, ಮೆಕ್ಕೆಜೋಳ ಮೊದಲಾದ ಧಾನ್ಯಗಳೂ, ದ್ರಾಕ್ಷಿ, ಅಂಜೂರ ಮೊದಲಾದ ಹಣ್ಣುಗಳೂ, ಆಲಿವ್‌ಮರವೂ ಹುಲುಸಾಗಿ ಬೆಳೆಯುವುವು. ಆಲ್ಜೀ ರಿಯದ ದ್ರಾಕ್ಷಾರಸವೂ, ಟ್ಯೂನಿಸ್ಸಿನ ಆಲಿವ್ ಎಣ್ಣೆಯೂ ಅತ್ಯುತ್ತಮವಾದುವು. ಅಟ್ಲಾಸ್ ಪರ್ವತದ ಮಧ್ಯಭಾಗದ ತಗ್ಗಾದ ಕಣಿವೆಗಳಲ್ಲಿ ಹುಲ್ಲುಗಾವಲುಗಳು ವಿಶೇಷವಾಗಿವೆ. ಇಲ್ಲಿ 'ಆಲ್ಫ' ಎಂಬ ಹುಲ್ಲು ಸ್ವಾಭಾವಿಕವಾಗಿ ಬೆಳೆಯುವುದು. ಇದನ್ನು ಕೊಯ್ದು ಒಣಗಿಸಿ ಪೆಂಡೆಗಳಾಗಿ ಕಟ್ಟಿ ಯೂರೋಪ್ ಖಂಡಕ್ಕೆ ರಫ್ತು ಮಾಡುವರು. ಇದರಿಂದ ಉತ್ಕೃಷ್ಟವಾದ ಕಾಗದವು ತಯಾರಾಗುತ್ತದೆ. ದನ, ಕುರಿ, ಮೇಕೆ, ಒಂಟೆ ಮೊದಲಾದ ಪ್ರಾಣಿಗಳನ್ನು ಈ ಹುಲ್ಲುಗಾವಲುಗಳಲ್ಲಿ ಸಾಕುವರು.

ಈ ದೇಶಗಳಲ್ಲಿ ಒಳಭಾಗದಲ್ಲಿ ಬರ್ಬರರೂ, ತೀರಪ್ರದೇಶದಲ್ಲಿ ಅರಬ್ಬೀಜನರೂ ವಾಸಮಾಡುತ್ತಾರೆ. ಅರಬ್ಬೀಜನರು ಕೈಗಾರಿಕೆಗಳಲ್ಲಿಯೂ, ರಾಜಕಾರ್ಯ ದಲ್ಲಿಯೂ ಮುಂದಾಳಾಗಿರುವರು. ಫ್ರೆಂಚರಿಗೆ ಈ ದೇಶಗಳು ಸೇರಿದಮೇಲೆ ಯೂರೋಪಿಯನ್ನರು ವಿಶೇಷವಾಗಿ ನೆಲೆಸುತ್ತಿರುವರು. ಈ ದೇಶಗಳ ವ್ಯಾಪಾರವು ತೀರಪ್ರದೇಶಗಳಲ್ಲಿ ರೈಲುಮಾರ್ಗವಾಗಿಯೂ, ಒಳಭಾಗದಲ್ಲಿ ಒಂಟೆಗಳ ಕಾರವಾನ್‌ಗಳ ಮೂಲಕವಾಗಿಯೂ ನಡೆಯುವುದು. ಈ ದೇಶಗಳಲ್ಲಿ ಬೆಳೆಯುವ ಹಣ್ಣುಗಳೂ, ಆಲ್ಫ ಹುಲ್ಲೂ ಅಲ್ಲದೆ, ಸಹರಾ ಮತ್ತು ಸೂಡಾನ್‌ಗಳಿಂದ ಬರುವ ಆನೆಯ ದಂತವೂ, ಉಷ್ಟ್ರಪಕ್ಷಿಯ ಗರಿಗಳೂ ಇಲ್ಲಿಂದ ವಿಶೇಷವಾಗಿ ರಫ್ತಾಗುವುವು.

**ಆಲ್ಜಿಯರ್ಸ್.**—ಇದು ಆಲ್ಜೀರಿಯದ ರಾಜಧಾನಿಯು. ಇದು ಉತ್ತರದಲ್ಲಿ ಮೆಡಿಟರೇನಿಯನ್ ತೀರದಲ್ಲಿದೆ. ಈ ಪಟ್ಟಣವು ಹೊಸದಾಗಿ ಕಟ್ಟಲ್ಪಟ್ಟು ಅಗಲವಾದ ರಸ್ತೆಗಳಿಂದಲೂ, ದೊಡ್ಡದಾದ ಅಂಗಡಿಗಳಿಂದಲೂ, ಸೌಧಗಳಿಂದಲೂ ನೋಡುವುದಕ್ಕೆ ಚೆನ್ನಾಗಿದೆ. ಸಮುದ್ರದ ಕಡೆಯಿಂದ ನೋಡಿದರೆ ಸುಣ್ಣದಿಂದ ಬೆಳ್ಳಗೆ ಕಾಣುವ ಇಲ್ಲಿಯ ಮನೆಗಳು ಬೆಳ್ಳಿಯಿಂದ ಕಟ್ಟಲ್ಪಟ್ಟಂತೆ ಥಳಥಳಿಸುವುವು. ರೈಲುಮಾರ್ಗಗಳನೇಕವು ಇಲ್ಲಿ ಸಂಧಿಸುವುವು. ವಿಶೇಷ ವ್ಯಾಪಾರವು ನಡೆಯುವುದು. ಇಲ್ಲಿಯ ಹವವು ಚಳಿಗಾಲದಲ್ಲಿ ಬಹಳ ಹಿತಕರವಾಗಿರುವುದರಿಂದ, ಯೂರೋಪ್ ಖಂಡದ ಕೆಲವು ರೋಗಿಗಳು ಇಲ್ಲಿಗೆ ಆ ಕಾಲದಲ್ಲಿ ಬಂದು ರೋಗಪರಿಹಾರಮಾಡಿಕೊಂಡು ಹೋಗುವರು.

**ಟ್ಯೂನಿಸ್.**—ಈ ಪಟ್ಟಣವು ಅದೇ ಹೆಸರಿನ ಕೊಲ್ಲಿಯ ತೀರದಲ್ಲಿದೆ. ಟ್ಯೂನಿಸ್ಸಿಗೆ ರಾಜಧಾನಿ. ಇಲ್ಲಿಂದ ದ್ರಾಕ್ಷೆ ಮೊದಲಾದ ಅನೇಕ ಹಣ್ಣುಗಳು ವಿಶೇಷವಾಗಿ ರಫ್ತಾಗುವುವು. **ಬಿಜರ್ಟ** ಎಂಬುದು ಆಫ್ರಿಕಾ ಖಂಡದಲ್ಲೆಲ್ಲಾ ಅತ್ಯಂತ ಉತ್ತರದಲ್ಲಿರುವ ರೇವುಪಟ್ಟಣ. ಇಲ್ಲಿಯ ಬಂದರು ಉತ್ಕೃಷ್ಟವಾದುದು. ಇಲ್ಲಿ ಫ್ರೆಂಚರು ನೌಕಾ ಸೈನ್ಯವನ್ನಿಟ್ಟಿರುವರು.

(2) **ಸಹರಾ ಮರುಭೂಮಿ.**—ಇದು ಅಟ್ಲಾಂಟಿಕ್ ಸಾಗರದಿಂದ ನೈಲ್ ನದಿಯ ಮೈದಾನದವರೆಗೂ ಪೂರ್ವ ಪಶ್ಚಿಮವಾಗಿ ಹಬ್ಬಿರುವುದು. ಈ ಮರುಭೂಮಿಯಲ್ಲಿ ನೀರಿಲ್ಲದಿರುವುದೇ ಮುಖ್ಯವಾದ ಅನಾನುಕೂಲವು. ನೀರು ಯಥೇಚ್ಛವಾಗಿರುವ ಓಯಸಿಸ್‌ಗಳಲ್ಲಿ ಭೂಮಿಯು ಫಲವತ್ತಾಗಿರುವುದು. ಈ ಮರುಭೂಮಿಯು ಏಷ್ಯಾಖಂಡದ ಮಂಗೋಲಿಯ, ತುರ್ಕಿಸ್ಥಾನ, ಪರ್ಷಿಯ ಮತ್ತು ಅರೇಬಿಯ ಮರುಭೂಮಿಗಳ ಸಾಲಿಗೆ ಸೇರಿದುದೆನ್ನಬಹುದು. ಆದರೆ ಮಧ್ಯದಲ್ಲಿ ಕೆಂಪುಸಮುದ್ರವೂ, ನೈಲ್‌ನದಿಯ ಮೈದಾನವೂ ಇರುವುವು. ಸಹರಾ ಮರುಭೂಮಿಯ ವಿಸ್ತೀರ್ಣವು 35 ಲಕ್ಷ ಚ. ಮೈ. ಗಳು. ಅಂದರೆ ಇದು ಸುಮಾರು ಯೂರೋಪ್ ಖಂಡದಷ್ಟು ದೊಡ್ಡದಾಗಿದೆ.

ಈ ಮರುಭೂಮಿಯ ಉದ್ದಕ್ಕೂ ಆಗ್ನೇಯದಿಂದ ವಾಯುವ್ಯಕ್ಕೆ ಒಂದು ಪರ್ವತ ಪಙ್ಕ್ತಿಯು ಹಬ್ಬಿದೆ. ಇದು 6–7 ಸಾವಿರ ಅಡಿಗಳಷ್ಟು ಎತ್ತರವಾಗಿರುವುದು.

ಚಳಿಗಾಲದಲ್ಲಿ ತೇವವಿಲ್ಲದ ಮಾರುತಗಳು ಸಹರಾ ಮರುಭೂಮಿಯಿಂದ ಹೊರಕ್ಕೆ ಬೀಸುವುವು. ಬೇಸಿಗೆಯಲ್ಲಿ ಗಾಳಿಯು ಈ ಮರುಭೂಮಿಯ ಕಡೆಗೆ ನುಗ್ಗುವುದು. ಆದರೆ ಬಿಸಿಯಾದ ಮೈದಾನದ ಮೇಲೆ ಬೀಸುವುದರಿಂದ ಈ ಗಾಳಿಯಿಂದ ಮಳೆ ಬೀಳಲವಕಾಶವಿಲ್ಲ. ವಾಯುವ್ಯದಿಂದ ಬೀಸುವ ಮಳೆಯ ಗಾಳಿಯು ಅಟ್ಲಾಸ್ ಪರ್ವತದಿಂದ ತಡೆಯಲ್ಪಟ್ಟು ಜಲಾಂಶ ರಹಿತವಾಗಿರುವುದು. ಒಂದೊಂದು ವೇಳೆ ಸಮುದ್ರದ ಕಡೆಯಿಂದ ಬಿರುಗಾಳಿಯು ಬೀಸಿ ಒಳಭಾಗದಲ್ಲಿ ಸ್ವಲ್ಪ ಮಳೆ ಬೀಳುವುದುಂಟು. ದಕ್ಷಿಣದಲ್ಲಿ ಸೂಡಾನ್ ಕಡೆಯಿಂದ ಹಿಂದೂ ಸಾಗರದ ಮಾರುತಗಳು ಬೀಸಿ ಸ್ವಲ್ಪಮಟ್ಟಿಗೆ ಮಳೆಯನ್ನು ತರುವುವು.

ಹೀಗೆ ಈ ಮರುಭೂಮಿಯಲ್ಲಿ ಮಳೆಯು ಬೀಳದಿರುವುದರಿಂದ ಹಗಲು ಹೊತ್ತು ಸೆಕೆಯು ಬಹು ಹೆಚ್ಚು. ಇದರಿಂದ ಕಲ್ಲುಗಳು ಒಡೆದು ಪುಡಿಯಾಗಿ ಎಲ್ಲೆಲ್ಲೂ ಮರಳು ತುಂಬುವುದು. ಗಾಳಿಯನ್ನು ತಡೆಯಲು ಮರಗಳಿಲ್ಲವಾದುದರಿಂದ ಚಂಡಮಾರುತಗಳು ಮರಳನ್ನು ತೂರಿಕೊಂಡು ಮರುಭೂಮಿಯ ಮೇಲೆ ಬೀಸುವುವು. ಇವು ಅತ್ಯುಷ್ಣವಾಗಿರುವುವು. ಮತ್ತು ಇವುಗಳೊಂದಿಗೆ ನಯವಾದ ಮರಳು ತೂರಿಕೊಂಡು ಬರುವುದರಿಂದ ಇವು ಬೀಸುವಾಗ ಮಧ್ಯಾಹ್ನವೂ ಕತ್ತಲೆಯಾಗಿ ಕಾಣುವುದುಂಟು. ಈ ಮರಳು ಕೂಡಿ ಅನೇಕ ಕಡೆಗಳಲ್ಲಿ ಮರಳುಗುಡ್ಡಗಳು ಉಂಟಾಗುವುವು. ಬಿರುಗಾಳಿಗಳಲ್ಲಿ ಈ ಮರಳುಗುಡ್ಡಗಳು ಸ್ಥಳದಿಂದ ಸ್ಥಳಕ್ಕೆ ತೂರಿಹೋಗುವುವು. ಸಮುದ್ರದಲ್ಲಿ ಅಲೆಗಳು ಹೇಗೆ ಕಾಣುವುವೋ ಹಾಗೆಯೇ ಮರುಭೂಮಿಯಲ್ಲಿ ಮರುಳು ಗುಡ್ಡಗಳು ಕಾಣುವುವು. ಆದುದರಿಂದ ಸಹರಾವನ್ನು ಮರಳಿನ ಸಮುದ್ರವೆಂದು ಕರೆಯುವುದುಂಟು.

ಈ ಮರುಭೂಮಿಯಲ್ಲಿ ಆಗಾಗ ಸ್ವಲ್ಪ ಮಳೆ ಬಿದ್ದಾಗ ನೀರು ವೇಗವಾಗಿ ಹರಿದು ಸ್ವಲ್ಪದೂರ ಹೋಗಿ ಮರಳಿನಲ್ಲಿ ಇಂಗುವುದು. ಇದು ಅಲ್ಲಲ್ಲಿ ಬಾವಿಗಳಲ್ಲಿ ಅಥವಾ ಚಿಲುಮೆಗಳಲ್ಲಿ ಮೇಲಕ್ಕೆ ಬರುವುದು. ಓಯಸಿಸ್ ಪ್ರದೇಶಗಳಲ್ಲಿ ಮರಗಿಡಗಳೂ ಬೆಳೆಯುವುವು.

ಮಳೆಯಿಲ್ಲದ ಬೆಂಗಾಡು ಪ್ರದೇಶದಲ್ಲಿ ಮರುಭೂಮಿಯ ಸ್ವಾಭಾವಿಕ ಸಸ್ಯವರ್ಗಕ್ಕೆ ಸೇರಿದ ಮುಳ್ಳುಗಿಡಗಳೂ, ಅಗಲವಾದ ಮತ್ತು ದಪ್ಪವಾದ ಎಲೆಗಳುಳ್ಳ ವೃಕ್ಷಜಾತಿಗಳೂ, ಆಳವಾಗಿ ಬೇರುಗಳನ್ನು ಬಿಡುವ ಕೆಲವು ಸಸ್ಯಗಳೂ ಬೆಳೆಯುವುವು. ಇವುಗಳಿಂದ ಗೋಂದೂ, ಸುಗಂಧದ್ರವ್ಯಗಳೂ ಸಿಕ್ಕುವುವು. ಓಯಸಿಸ್‌ಗಳಲ್ಲಿ ಖರ್ಜೂರವು ಯಥೇಚ್ಛವಾಗಿ ಬೆಳೆಯುವುದು. ನೀರು ಹೆಚ್ಚಾ

ಗಿರುವ ಭಾಗಗಳಲ್ಲಿ ಹತ್ತಿ, ಅಕ್ಕಿ, ಕಬ್ಬು ಮೊದಲಾದುವುಗಳನ್ನೂ ಬೆಳೆಯ ಬಹುದು. ಇಲ್ಲಿ ಜನಗಳ ಸಂಚಾರಕ್ಕೆ ಒಂಟೆಯೇ ಮುಖ್ಯ ಪ್ರಾಣಿಯು. ಆದರೆ ನೀರು ಹರಿದು ಹುಲ್ಲು ಬೆಳೆಯುವ ಪ್ರದೇಶಗಳಲ್ಲಿ ಕುದುರೆಯನ್ನೂ, ಕುರಿಯನ್ನೂ ಸಾಕುವರು. ಕಾಡುಮೃಗಗಳು ಕಡಿಮೆ; ಆದರೆ ಕೆಲವು ಭಾಗಗಳಲ್ಲಿ ಸಿಂಹವೂ, ಚಿರತೆಯೂ, ಕತ್ತೆಕಿರುಬವೂ, ದಕ್ಷಿಣಭಾಗದಲ್ಲಿ ಜಿರಾಫೂ ಇರುವುವು. ಉಷ್ಟ್ರ ಪಕ್ಷಿಯೂ ಹಲವೆಡೆಗಳಲ್ಲಿರುವುದು.

ಓಯಸಿಸ್‌ಗಳಲ್ಲಿ ಬರ್ಬರ್ ಅಥವಾ ನೀಗ್ರೋ ಕುಲಕ್ಕೆ ಸೇರಿದ ಕೆಲವು ಜನರು ವ್ಯವಸಾಯದಿಂದ ಜೀವಿಸುವರು. ಅರಬ್ಬೀಕುಲಕ್ಕೆ ಸೇರಿದ 'ಹಾಸ'ಎಂಬ ಜನಗಳು ವ್ಯಾಪಾರದಿಂದಲೂ, ಕೈಗಾರಿಕೆಯಿಂದಲೂ, ಪಶುಪಾಲನೆಯಿಂದಲೂ ಜೀವಿಸುತ್ತಾರೆ. ಈ ಜನರು ಯಾವಾಗಲೂ ಕುದುರೆಯ ಮೇಲೆಯೂ, ಒಂಟೆಯ ಮೇಲೆಯೂ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸಂಚರಿಸುತ್ತಲೇ ಇರುವರು. ಇವರಲ್ಲಿ ಕೆಲವರು ಕಳ್ಳತನದಿಂದಲೂ ಜೀವಿಸುವುದುಂಟು. ಸಹರಾ ಮರುಭೂಮಿಯಲ್ಲೆಲ್ಲಾ ಮಹಮ್ಮದೀಯ ಮತವೂ, ಅರಬ್ಬೀ ಜಾತಿಗೆ ಸೇರಿದ ಭಾಷೆಗಳೂ ಪ್ರಬಲವಾಗಿವೆ.

ಈ ಮರುಭೂಮಿಯಲ್ಲಿ ಓಯಸಿಸ್‌ಗಳಲ್ಲಿ ವಿನಾ ಜನಸಂಖ್ಯೆಯು ಬಹು ಕಡಿಮೆ. ಜನರು ದೃಢಾಂಗರಾಗಿಯೂ ಕಷ್ಟಸಹಿಷ್ಣುಗಳಾಗಿಯೂ ಇರುವರು. ಇವರು ಗುಂಪುಗುಂಪಾಗಿ ಸೇರಿ ಒಬ್ಬ ಮುಖಂಡನ ಅಧಿಕಾರಕ್ಕೊಳಪಟ್ಟು ವಾಸಮಾಡುವರು. ಈಚೆಗೆ ಈ ಮರುಭೂಮಿಯೆಲ್ಲಾ ಫ್ರೆಂಚರ ಪ್ರಭುತ್ವಕ್ಕೆ ಒಳಪಟ್ಟಂತೆ ಭಾವಿಸಲ್ಪಟ್ಟಿದೆ. ಆದರೆ ಒಳಭಾಗದ ಪಾಳೆಯಗಾರರೆಲ್ಲಾ ಸ್ವತಂತ್ರರಾಗಿಯೇ ಇರುವರು.

**ಸೂಡಾನ್.**—ಸಹರಾ ಮರುಭೂಮಿಯ ದಕ್ಷಿಣದಲ್ಲಿ ಸುಮಾರು ಉ. ಅ. 20° ರಿಂದ ಉ. ಅ. 10°ಯವರೆಗಿರುವ ಪ್ರದೇಶಕ್ಕೆ ಸೂಡಾನ್ ಎಂಬ ಹೆಸರನ್ನು ಕೊಟ್ಟಿದಾರೆ. ನೈಲ್‌ನದಿಯ ಜಲಾನಯನಭೂಮಿಯಾದ ಇದರ ಪೂರ್ವಭಾಗವನ್ನು ಅಥವಾ ಈಜಿಪ್ಟಿನ ಸೂಡಾನನ್ನು ಹಿಂದೆಯೇ ವರ್ಣಿಸಿದೆ. 'ಸೂಡಾನ್' ಎಂದರೆ ಕಪ್ಪುಜನಗಳ ಸೀಮೆಯೆಂದರ್ಥ. ಇಲ್ಲಿ ಕಪ್ಪುಬಣ್ಣವುಳ್ಳ ನೀಗ್ರೋ ಜನಗಳು ವಿಶೇಷವಾಗಿ ವಾಸಮಾಡುವುದರಿಂದ ಈ ಹೆಸರು ಬಂದಿದೆ. ಈ ಪ್ರದೇಶವು ಪ್ರಸ್ಥಭೂಮಿಯಾಗಿರುವುದು. ಅಲ್ಲಲ್ಲಿ ಎತ್ತರವಾದ ಬೆಟ್ಟಗಳಿರುವುವು. ಈ ಬೆಟ್ಟಗಳಲ್ಲಿ ಹುಟ್ಟಿದ ಸೆನಿಗಾಲ್ ಮತ್ತು ಗ್ಯಾಂಬಿಯಾ ನದಿಗಳು ಪಶ್ಚಿಮಕ್ಕೆ ಹರಿಯುವುವು. ನೈಜರ್ ನದಿಯು ಮಧ್ಯದಲ್ಲಿ ಹರಿದು ಗಿನೀ ಸಮುದ್ರಶಾಖೆಗೆ ಬೀಳುತ್ತದೆ. ಷಾರಿ ಮೊದಲಾದ ಚಿಕ್ಕ ನದಿಗಳು ಚಾಡ್ ಸರೋವರಕ್ಕೆ ಬೀಳುತ್ತವೆ.

ಗಿನೀ ತೀರದಲ್ಲಿರುವ ಮೈದಾನವು ತಗ್ಗಾಗಿರುವುದು. ಇಲ್ಲಿ ಸೆಕೆಯೂ ಹೆಚ್ಚು; ಮಳೆಯೂ ಹೆಚ್ಚು. ಎಲ್ಲೆಲ್ಲೂ ಜೌಗುಪ್ರದೇಶಗಳೂ, ಕಾಡುಗಳೂ ಇರುವುವು. ಈ ಕಾಡುಗಳಲ್ಲಿ ತೆಂಗು, ತಾಳೆ, ಚೌಬೀನಿಯ ಮರಗಳು ಮತ್ತು ರಬ್ಬರ್ ಮರಗಳು ಬೆಳೆಯುವುವು. ಆದರೆ ಈ ಪ್ರದೇಶದಲ್ಲಿ ಹವಾ ಬಹಳ ಅನಾರೋಗ್ಯಕರವಾಗಿರುವುದು. ಉತ್ತರಕ್ಕೆ ಹೋದಷ್ಟೂ ಎತ್ತರವೂ ಹೆಚ್ಚುವುದು. ಮಳೆಯೂ ಕಡಿಮೆಯಾಗುತ್ತಾ ಬರುವುದು. ಇದರಿಂದ ಕಾಡುಗಳು ಅಷ್ಟು ವಿಶೇಷವಾಗಿಲ್ಲ. ಅಲ್ಲಲ್ಲಿ ಹುಲ್ಲುಗಾವಲುಗಳಿರುವುವು. ಸಹರಾ ಮರುಭೂಮಿಯ ಅಂಚಿನಲ್ಲಿ ಮಳೆ ತುಂಬಾ ಕಡಿಮೆ. ಇಲ್ಲಿ ಗೋಂದುಳ್ಳ ಮುಳ್ಳುಗಿಡಗಳು ಮಾತ್ರ ಬೆಳೆಯುವುವು.

ಈ ಪ್ರದೇಶದ ನೀಗ್ರೋ ಜನರು ಅನಾಗರಿಕರು; ವ್ಯಾಪಾರವು ವಿಶೇಷವಾಗಿಲ್ಲ. ನದಿಗಳ ಮೇಲೂ ಒಂಟೆಗಳ ಮೇಲೂ ಸಾಮಾನು ಸಾಗಬೇಕಾಗಿದೆ. ಈಚೆಗೆ ತೀರದಲ್ಲಿ ರೈಲುಮಾರ್ಗಗಳನ್ನು ಮಾಡುತ್ತಲಿದ್ದಾರೆ. ಕೊಬ್ಬರಿ ಎಣ್ಣೆ, ಆನೆಯದಂತ, ರಬ್ಬರು, ಚೌಬೀನಿಯ ಮರಗಳು ಮತ್ತು ಗೋಂದು ರಫ್ತಾಗುವುವು. ತೀರದ ಸಮೀಪದಲ್ಲಿರುವ ಭಾಗಗಳು ಇಂಗ್ಲಿಷರಿಗೂ, ಫ್ರೆಂಚರಿಗೂ, ಪೋರ್ಚುಗೀಸರಿಗೂ ಸೇರಿವೆ. ಒಳಭಾಗದಲ್ಲಿ ನೀಗ್ರೋ ಸಂಸ್ಥಾನಗಳಿವೆ. ಸಾಮಾನ್ಯವಾಗಿ ನೈಜರ್ ನದಿಗೆ ಪಶ್ಚಿಮದಲ್ಲಿರುವ ಭಾಗಗಳೆಲ್ಲಾ ಫ್ರೆಂಚರ ಪೋಷಣೆಯಲ್ಲಿವೆ. ತೀರದ ಸಮೀಪದಲ್ಲಿರುವ ಲೈಬೀರಿಯ ಸಂಸ್ಥಾನವು ನೀಗ್ರೋ ಜನಗಳ ಸ್ವತಂತ್ರ ದೇಶವಾಗಿದೆ.

ಸೆನಿಗಾಲ್ ನದಿಯ ಮುಖದ ಸಮೀಪದಲ್ಲಿ **ಸೆಂಟ್‌ಲೂಯಿ** ಎಂಬುದು ನೆಲಗಡಲೆಕಾಯಿ, ಗೋಂದು, ರಬ್ಬರ್‌ಗಳು ವಿಶೇಷವಾಗಿ ರಫ್ತಾಗುವ ಸ್ಥಳ. ಇಲ್ಲಿಂದ ಒಳಭಾಗಕ್ಕೆ ಸ್ವಲ್ಪದೂರ ರೈಲುಮಾರ್ಗವಿದೆ. ನೈಜರ್ ನದಿಯ ತೀರದಲ್ಲಿರುವ **ಟಿಂಬಕ್ಟು** ಎಂಬುದು ವ್ಯಾಪಾರಕ್ಕೆ ಪ್ರಸಿದ್ಧವಾಗಿದೆ. ಈ ಪಟ್ಟಣದ ಸಮೀಪದಲ್ಲಿ ನೈಜರ್ ನದಿಯು ಅತ್ಯಂತ ಉತ್ತರಕ್ಕೆ ಪ್ರವಹಿಸಿರುವುದು. ಅನೇಕ ಕಾರವಾನ್ ಮಾರ್ಗಗಳು ಉತ್ತರದಿಂದಲೂ, ದಕ್ಷಿಣದಿಂದಲೂ ಬಂದು ಇಲ್ಲಿ ಸೇರುವುವು.

ಚಾಡ್ ಸರೋವರದ ಸಮೀಪದಲ್ಲಿ ಅನೇಕ ಸ್ವತಂತ್ರವಾದ ನೀಗ್ರೋ ಸಂಸ್ಥಾನಗಳಿರುವುವು. ಇವು ನಾಮಮಾತ್ರಕ್ಕೆ ಫ್ರೆಂಚರ ಆಧಿಪತ್ಯಕ್ಕೆ ಒಳಪಟ್ಟಿರುವುವು. ಆದರೆ ದೇಶೀಯರೆ ಸ್ವತಂತ್ರರಾಗಿರುವರು. ಈ ಸಂಸ್ಥಾನಗಳಲ್ಲಿ ಪರಸ್ಪರ ಯುದ್ಧಗಳು ಆಗಿಂದಾಗ ಆಗುತ್ತಲೇ ಇರುವುವು.

ಬ್ರಿಟಿಷರಿಗೆ ಸೇರಿರುವ ಗ್ಯಾಂಬಿಯ, ಸಿರ್ರಾಲಿಯೋನಿ, ಗೋಲ್ಡ್‌ಕೋಸ್ಟ್ ಮೊದಲಾದ ತೀರಪ್ರದೇಶಗಳನ್ನು ಹಿಂದೆಯೇ ಸೂಚಿಸಿದೆ.

## III. ಸ್ವತಂತ್ರ ಸಂಸ್ಥಾನಗಳು

(1) **ಮೊರಕ್ಕೊ.**—ಈ ದೇಶವು ಈ ಖಂಡದ ವಾಯುವ್ಯ ಮೂಲೆಯಲ್ಲಿದೆ. ಇದರ ಮೇಲ್ಮೈಯ್ಯ ಲಕ್ಷಣವೂ, ಸಸ್ಯಗಳೂ ಆಲ್ಜೀರಿಯದವುಗಳನ್ನೇ ಹೋಲುವುವು. ಈ ದೇಶವು ಒಬ್ಬ ಸ್ವತಂತ್ರನಾದ ಸುಲ್ತಾನನಿಂದ ಆಳಲ್ಪಡುತ್ತಲಿದೆ. ಆದರೆ ಇಲ್ಲಿಯೂ ಫ್ರೆಂಚರ ಪ್ರಾಬಲ್ಯವು ಹೆಚ್ಚುತ್ತಲಿದೆ.

ಈ ದೇಶದ ಮಧ್ಯಭಾಗಲ್ಲಿದಲ್ಲಿರುವ **ಮೊರಕ್ಕೋ** ಪಟ್ಟಣವು ರಾಜಧಾನಿಯು. ಇದರ ಉತ್ತರಕ್ಕೆ ಫೆಜ್ ಎಂಬ ಪಟ್ಟಣವಿದೆ. ಇದರ ಮಾರ್ಗವಾಗಿ ಖರ್ಜೂರವು ವಿಶೇಷವಾಗಿ ಬೆಳೆಯುವ ಓಯಸಿಸ್‌ಗಳಿಗೂ, ಟಾಂಜಿಯರ್ ರೇವು ಪಟ್ಟಣಕ್ಕೂ ಕಾರವಾನ್ ವ್ಯಾಪಾರವು ನಡೆಯುವುದು. ಇಲ್ಲಿ ಚರ್ಮವನ್ನು ಚೆನ್ನಾಗಿ ಹದಮಾಡಿ ಟೋಪಿಗಳನ್ನು ಮಾಡುತ್ತಾರೆ. ಫೆಜ್ ಟೋಪಿಗಳು ಪ್ರಸಿದ್ಧವಾದುವು. ಜಿಬ್ರಾಲ್ಟರ್ ಜಲಸಂಧಿಗೆ ದಕ್ಷಿಣದಲ್ಲಿರುವ **ಟಾಂಜಿಯರ್** ರೇವುಪಟ್ಟಣವು ಉತ್ತಮವಾದ ಬಂದರನ್ನು ಹೊಂದಿದೆ. ಮೊರಕ್ಕೋ ದೇಶದ ಹೊರಗಣ ವ್ಯಾಪಾರವೆಲ್ಲಾ ಈ ರೇವುಪಟ್ಟಣದ ಮೂಲಕ ನಡೆಯುವುದು.

(2) **ಅಬಿಸ್ಸೀನಿಯ.**—ಇದನ್ನು 'ಆಫ್ರಿಕದ ಸ್ವಿಡ್ಜರ್ಲೆಂಡ್' ಎಂದು ಕರೆಯಬಹುದು. ಇದು ಸ್ವಿಡ್ಜರ್ಲೆಂಡಿನಂತೆ ಎತ್ತರವಾದ ಬೆಟ್ಟಗಳಿಂದಲೂ, ಕಣಿವೆಗಳಿಂದಲೂ, ಸುಂದರವಾದ ಸರೋವರಗಳಿಂದಲೂ, ನದಿಗಳ ಮೂಲಸ್ಥಾನಗಳಿಂದಲೂ ತುಂಬಿರುವುದು. ಇದರ ಸರಾಸರಿ ಎತ್ತರವು 8,000 ಅಡಿಗಳು. ಆದರೆ, ಕೆಲವು ಶಿಖರಗಳು 15,000 ಅಡಿಗಳವರೆಗೂ ಎತ್ತರವಾಗಿರುವುವು. ಇವುಗಳ ಮೇಲೆ ಹಿಮವು ಯಾವಾಗಲೂ ಇರುವುದು. ಎತ್ತರವಾಗಿರುವ ಪರ್ವತದ ತಪ್ಪಲುಗಳಲ್ಲೆಲ್ಲಾ ಮಳೆಯು ವಿಶೇಷವಾಗಿ ಬೀಳುವುದು. ಚಳಿಯೂ ಹೆಚ್ಚು. ಸಮಶೀತೋಷ್ಣವಲಯದ ವೃಕ್ಷಗಳು ಚೆನ್ನಾಗಿ ಬೆಳೆಯುವುವು. ಸರೋವರಗಳಲ್ಲಿ ನೀಲ ನೈಲ್ ನದಿಯೂ, ಇನ್ನೂ ಅನೇಕ ಪರ್ವತದ ಝರಿಗಳೂ ಹುಟ್ಟಿ ಆಳವಾದ ಕಣಿವೆಗಳನ್ನು ಕೊರೆದುಕೊಂಡು ಅವುಗಳಲ್ಲಿ ಹರಿಯುವುವು. ಈ ಕಣಿವೆಗಳು ತಗ್ಗಾಗಿರುವುದರಿಂದ ಇಲ್ಲಿ ಸೆಕೆ ಹೆಚ್ಚು. ಪರ್ವತ ಪ್ರದೇಶಗಳಲ್ಲಿ ಎಲ್ಲೆಲ್ಲೂ ಹುಲ್ಲುಗಾವಲುಗಳಿರುವುವು. ಇವುಗಳಲ್ಲಿ ದನಗಳನ್ನೂ, ಕುರಿ, ಮೇಕೆಗಳನ್ನೂ ಮೇಯಿಸುವರು. ಅಲ್ಲಲ್ಲಿ ಉತ್ಕೃಷ್ಟವಾದ ಕಾಫಿಯು ಬೆಳೆಯುವುದು.

ಇಲ್ಲಿಯ ಜನಗಳು ಮಿಶ್ರಕುಲದವರು; ಕಪಿಲವರ್ಣದವರು. ಇವರ ಮೂಲಪುರುಷರು ಅರೇಬಿಯದಿಂದ ಬಹಳ ಹಿಂದಿನ ಕಾಲದಲ್ಲಿ ಇಲ್ಲಿಗೆ ಬಂದರು. ಉತ್ತರ ಭಾಗದಲ್ಲಿನ ಜನರು ಕ್ರೈಸ್ತರು; ದಕ್ಷಿಣದಲ್ಲಿರುವ ಗಲ್ಲರೆಂಬವರು ಈ ಖಂಡದ ಪೂರ್ವನಿವಾಸಿಗಳು. ಇವರು ಮಹಮದೀಯರು. ಅಬಿಸ್ಸೀನಿಯಕ್ಕೆ

ರಾಜಧಾನಿಯೇ ಇಲ್ಲ. ಇದರ ಸ್ವತಂತ್ರ ರಾಜನು ಒಂದು ಕಡೆಯಿಂದ ಇನ್ನೊಂದು ಕಡೆಗೆ ತಿರುಗುತ್ತ ತನಗೆ ಅನುಕೂಲವಾದ ಸ್ಥಳದಲ್ಲಿ ನಿಂತು ರಾಜ್ಯ ಭಾರವನ್ನು ಮಾಡುವನು. **ಆಡಿಸ್ ಅಬೇಬ** ಎಂಬುದು ಇಲ್ಲಿ ದೊಡ್ಡ ಪಟ್ಟಣವು. ಕೆಂಪುಸಮುದ್ರತೀರದಿಂದಲೂ, ನೈಲ್ ನದಿಯ ಕಣಿವೆಯಿಂದಲೂ ಈ ಪಟ್ಟಣದ ಮೂಲಕ ವ್ಯಾಪಾರವು ನಡೆಯುವುದು.

---

## ಉತ್ತರ ಅಮೆರಿಕ ಖಂಡ

### ಸಾಮಾನ್ಯ ವಿವರಣೆ

**ಅಮೆರಿಕ ಖಂಡ.**—ಪಶ್ಚಿಮಾರ್ಧಗೋಳದಲ್ಲಿರುವ ಭೂಭಾಗವನ್ನು ಅಮೆರಿಕ ಖಂಡವೆಂದು ಕರೆಯುವರು. ಈ ಭೂಭಾಗವು ಉ. ಅ. 85° ಗಳಿಂದ ದ. ಅ. 55°ಗಳವರೆಗೂ, ಎಂದರೆ ಸುಮಾರು 9,000 ಮೈಲಿಗಳಷ್ಟು ಉದ್ದವಾಗಿ ಪ್ರಸರಿಸಿರುವುದು. ಇದರಲ್ಲಿ ಮಧ್ಯಭಾಗದಲ್ಲಿರುವ ಪನಾಮ ಭೂಕಂಠವು 42 ಮೈಲಿಗಳಷ್ಟು ಮಾತ್ರ ಅಗಲವಾಗಿರುವುದರಿಂದಲೂ, ಇದಕ್ಕೆ ಉತ್ತರ ದಕ್ಷಿಣದಲ್ಲಿರುವ ಭೂಭಾಗಗಳು ಬಹು ವಿಸ್ತಾರವಾಗಿಯೂ, ಕೆಲವು ಕಡೆ 3,000 ಮೈಲಿಗಳಿಗಿಂತ ಹೆಚ್ಚು ಅಗಲವಾಗಿ ಇರುವುದರಿಂದಲೂ ಅಮೆರಿಕವನ್ನು ಉತ್ತರ ಅಮೆರಿಕ, ದಕ್ಷಿಣ ಅಮೆರಿಕಗಳೆಂದು ಎರಡು ಖಂಡಗಳಾಗಿ ಗಣಿಸುವುದು ವಾಡಿಕೆಯಾಗಿದೆ.

ಪೂರ್ವಾರ್ಧಗೋಳದಲ್ಲಿರುವ ಭೂಭಾಗಕ್ಕೂ, ಪಶ್ಚಿಮಾರ್ಧಗೋಳದ ಭೂಭಾಗಕ್ಕೂ ಸಾಮಾನ್ಯ ಲಕ್ಷಣಗಳಲ್ಲಿರುವ ಕೆಲವು ವ್ಯತ್ಯಾಸಗಳು ಭೂಪಟದಿಂದ ತಟ್ಟನೆ ತೋರುವುವು. ಪೂರ್ವಾರ್ಧಗೋಳದಲ್ಲಿ ಭೂಭಾಗವು ಪೂರ್ವ ಪಶ್ಚಿಮವಾಗಿ ಹಬ್ಬಿರುವುದು, ಬಹಳ ಹೆಚ್ಚು ಭಾಗವು ಉತ್ತರ ಸಮಶೀತೋಷ್ಣ ವಲಯದಲ್ಲಿರುವುದು; ಆದರೆ ಅಮೆರಿಕವು ಉತ್ತರ ದಕ್ಷಿಣವಾಗಿ ಹಬ್ಬಿರುವುದು, ದಕ್ಷಿಣ ಶೀತವಲಯ ವಿನಾ ಉಳಿದ ನಾಲ್ಕು ವಲಯಗಳಲ್ಲಿಯೂ ಹರಡಿರುವುದು. ಪರ್ವತಶ್ರೇಣಿಗಳೂ, ದೊಡ್ಡ ಮೈದಾನಗಳೂ ಪೂರ್ವಾರ್ಧಗೋಳದಲ್ಲಿ ಪೂರ್ವ ಪಶ್ಚಿಮವಾಗಿರುವುವು. ಆದರೆ ಅಮೆರಿಕದಲ್ಲಿ ದಕ್ಷಿಣೋತ್ತರವಾಗಿರುವುವು. ಪೂರ್ವಾರ್ಧಗೋಳದಲ್ಲಿ ಬಹಳ ವಿಶಾಲವಾದ ಮರುಭೂಮಿಗಳೂ ಮರಳು ಕಾಡುಗಳೂ ಇವೆ. ಅಮೆರಿಕದಲ್ಲಿ ಬಹು ವಿಶಾಲವಾದ ಮೈದಾನಗಳೂ, ದೊಡ್ಡ ನದೀವ್ಯೂಹಗಳೂ, ಅನೇಕ ಸಿಹಿನೀರಿನ ಸರೋವರಗಳೂ ಇವೆ.

**ವಿಸ್ತೀರ್ಣ, ಮೇರೆಗಳು ಮತ್ತು ಸನ್ನಿವೇಶ.**—ಉತ್ತರ ಅಮೆರಿಕ ಖಂಡವು ಬ್ರಿಟಿಷ್ ಉತ್ತರ ಅಮೆರಿಕ, ಸಂಯುಕ್ತ ಸಂಸ್ಥಾನಗಳು, ಮೆಕ್ಸಿಕೊ

ಈ ದೇಶಗಳನ್ನೂ, ಮಧ್ಯ ಅಮೆರಿಕ, ವೆಸ್ಟಿಂಡಿಯಾ ದ್ವೀಪಗಳನ್ನೂ ಒಳಗೊಂಡಿದೆ.

ಈ ಖಂಡವು ತ್ರಿಕೋಣಾಕಾರವಾಗಿದೆ. ಉತ್ತರದಲ್ಲಿ ಬಹಳ ಅಗಲವಾಗಿದೆ. ದಕ್ಷಿಣಕ್ಕೆ ಹೋದಹಾಗೆ ಚಿಕ್ಕದಾಗುವುದು. ಇದರ ವಿಸ್ತೀರ್ಣವು 95 ಲಕ್ಷ ಚದರ ಮೈಲಿಗಳು. ಎಂದರೆ ಈ ಖಂಡವು ಯೂರೊಪಿನ 2½ಯಷ್ಟು ಅಥವಾ ಇಂಡಿಯಾ ಚಕ್ರಾಧಿಪತ್ಯದ ಐದರಷ್ಟು ವಿಸ್ತಾರವಾಗಿರುವುದು.

ಈ ಖಂಡವು ಎಲ್ಲಾ ಕಡೆಗಳಲ್ಲಿಯೂ ನೀರಿನಿಂದ ಸುತ್ತಲ್ಪಟ್ಟಿರುವುದು. ದಕ್ಷಿಣದಲ್ಲಿ ಪನಾಮ ಭೂಕಂಠದಲ್ಲಿ ಹಡಗುಗಳ ಸಂಚಾರಕ್ಕೆ ಪನಾಮ ಕಾಲುವೆಯನ್ನು ಈಚೆಗೆ ಮಾಡಿರುವುದರಿಂದ, ಆಫ್ರಿಕ, ಏಷ್ಯಗಳು ಸೂಯಸ್ ಕಾಲುವೆಯಿಂದ ಪ್ರತ್ಯೇಕಿಸಲ್ಪಟ್ಟಿರುವಂತೆಯೇ ಈ ಕಾಲುವೆಯಿಂದ ಉತ್ತರ ದಕ್ಷಿಣ ಅಮೆರಿಕಗಳು ಪ್ರತ್ಯೇಕಿಸಲ್ಪಟ್ಟಿವೆ.

ಉತ್ತರ ದಕ್ಷಿಣ ಅಮೆರಿಕಗಳು ಪೂರ್ವಾರ್ಧಗೋಳದ ಖಂಡಗಳಿಂದ ಪ್ರತ್ಯೇಕಿಸಲ್ಪಟ್ಟು ದೂರವಾಗಿರುವುದರಿಂದ, ಅಲ್ಲಿನ ಸಸ್ಯಗಳೂ, ಪ್ರಾಣಿಗಳೂ ಈಗ ಸುಮಾರು 400 ವರ್ಷಗಳ ಹಿಂದಿನವರೆಗೆ ಬೇರೆ ಬಗೆಯವಾಗಿದ್ದುವು. ಈಚೆಗೆ ಯೂರೊಪಿನ ಜನರು ಈ ಖಂಡಗಳಲ್ಲಿ ನೆಲೆಗೊಂಡಿರುವುದರಿಂದ ಪೂರ್ವಾರ್ಧಗೋಳದ ಸಸ್ಯ ಪ್ರಾಣಿಗಳಲ್ಲಿ ಅನೇಕವು ಈಗ ಇಲ್ಲಿ ನೆಲೆಗೊಂಡಿರುವುವು. ಉತ್ತರ ಅಮೆರಿಕ ಖಂಡವು ಮೂರು ವಲಯಗಳಲ್ಲಿ ಹರಡಿರುವುದರಿಂದ ಮೂರು ವಲಯಗಳ ವಾಯುಗುಣವೂ, ಸಸ್ಯಗಳೂ ಅಲ್ಲಿ ಕಂಡುಬರುವುವು.

**ತೀರಲಕ್ಷಣ.**—ಈ ಖಂಡದಲ್ಲಿ ಸಮುದ್ರಶಾಖೆಗಳೂ, ದ್ವೀಪ, ಪರ್ಯಾಯ ದ್ವೀಪಗಳೂ ಹೆಚ್ಚಾಗಿರುವುದರಿಂದ, ಸಮುದ್ರತೀರವು ಬಹಳ ಡೊಂಕುಡೊಂಕಾಗಿದೆ. ಸರಾಸರಿ 350 ಚ. ಮೈ. ಗಳ ವಿಸ್ತೀರ್ಣಕ್ಕೆ 1 ಮೈಲಿಯಷ್ಟು ಉದ್ದ ತೀರವಿರುವುದು. ಯೂರೊಪ್ ಖಂಡದಲ್ಲಿಯಾದರೋ 200 ಚ. ಮೈ. ಗಳಿಗೇ 1 ಮೈಲಿ ತೀರವಿರುವುದು. ಉಳಿದ ಖಂಡಗಳಲ್ಲೆಲ್ಲಾ ತೀರದ ಅನುಕೂಲ್ಯವು ಈ ಖಂಡಕ್ಕಿಂತ ಕಡಿಮೆಯಾಗಿರುವುದು.

ಈ ಖಂಡದ ಉತ್ತರಭಾಗದಲ್ಲಿ ಅಲಾಸ್ಕ, ಲಾಬ್ರಡಾರ್ ಪರ್ಯಾಯದ್ವೀಪಗಳೂ, ಗ್ರೀನ್‌ಲೆಂಡ್, ಬಾಪಿನ್‌ಲೆಂಡ್ ಮೊದಲಾದ ದ್ವೀಪಗಳೂ, ಬಾರ್ನ್ಹಿಯ, ಬಾಪಿನ್, ಹಡ್ಸನ್ ಕೊಲ್ಲಿಗಳೂ ಇವೆ. ಬೆಹರಿಂಗ್ ಜಲಸಂಧಿಯು ಈ ಖಂಡವನ್ನು ಏಷ್ಯದಿಂದ ಪ್ರತ್ಯೇಕಿಸುವುದು. ಅಲಾಸ್ಕ ಪರ್ಯಾಯದ್ವೀಪದಲ್ಲಿರುವ ಬಾರೋ ಎಂಬುದು ಈ ಖಂಡದ ಅತ್ಯಂತ ಉತ್ತರದ ಭೂಶಿರವಾಗಿದೆ. ಡೇವಿಸ್ ಜಲಸಂಧಿಯು ಬಾಪಿನ್ ಕೊಲ್ಲಿಯನ್ನೂ, ಹಡ್ಸನ್ ಜಲಸಂಧಿಯು ಹಡ್ಸನ್ ಕೊಲ್ಲಿಯನ್ನೂ ಅಟ್ಲಾಂಟಿಕ್ ಸಾಗರದೊಡನೆ ಸೇರಿಸುವುವು. ಈ ಕೊಲ್ಲಿಗಳು ಉತ್ತರದಲ್ಲಿ ಉತ್ತರ ಸಾಗರದೊಡನೆ ಸೇರಿವೆ. ಉತ್ತರ ತೀರವು ಹೀಗೆ ಬಹಳ

ಡೊಂಕು ಡೊಂಕಾಗಿದ್ದರೂ ಅದರಿಂದ ಪ್ರಯೋಜನವು ಬಹಳ ಕಡಿಮೆ. ಅದು ಬಹಳ ಉತ್ತರ ಅಕ್ಷಾಂಶಗಳಲ್ಲಿರುವುದರಿಂದ ಶೀತವು ವಿಪರೀತವಾಗಿರುವುದು. ಏಷ್ಯಾಖಂಡದ ಉತ್ತರ ತೀರದಲ್ಲಿನಂತೆ ಇಲ್ಲಿಯೂ ಸಮುದ್ರದ ನೀರು ವರ್ಷದಲ್ಲಿ 8—9 ತಿಂಗಳುಗಳಿಗೆ ಹೆಚ್ಚಾಗಿ ಗಡ್ಡೆ ಕಟ್ಟಿರುವುದು.

ಪೂರ್ವಭಾಗದಲ್ಲಿ ಸೆಂಟ್‌ಲಾರೆನ್ಸ್ ಕೊಲ್ಲಿ, ಫಂಡಿ, ಚೆಸಫಿಕ್ ಖಾರಿಗಳು, ಮೆಕ್ಸಿಕೊ ಕೊಲ್ಲಿ, ಕೆರಿಬ್ಬಿಯನ್ ಸಮುದ್ರ, ನೋವಸ್ಕೋಷಿಯ, ಫ್ಲೋರಿಡ, ಯೂಕಟಾನ್ ಪರ್ಯಾಯದ್ವೀಪಗಳು, ಬೆಲ್ಲೈಲ್ ಜಲಸಂಧಿಯಿಂದ ಲಬ್ರಡಾರಿನಿಂದ ಪ್ರತ್ಯೇಕಿಸಲ್ಪಟ್ಟ ನ್ಯೂಫೌಂಡ್‌ಲೆಂಡ್ ದ್ವೀಪ ಮತ್ತು ಬರ್ಮುಡ ಬಹಮ, ವೆಸ್ಟಿಂಡಿಯಾ ದ್ವೀಪಸ್ತೋಮಗಳು ಇವೆ. ಈ ತೀರವು ಈ ಖಂಡದ ಇತರ ಕಡೆಗಳ ತೀರಕ್ಕಿಂತ ಯೂರೊಪಿಗೆ ಸಮೀಪದಲ್ಲಿರುವುದು. ಇಲ್ಲಿ ನೀರು ಗಡ್ಡೆಕಟ್ಟುವುದಿಲ್ಲ. ಸಣ್ಣ ಸಣ್ಣ ದ್ವೀಪಗಳೂ, ಕೊಲ್ಲಿಗಳೂ ವಿಶೇಷವಾಗಿರುವುದರಿಂದ ಉತ್ತಮವಾದ ಬಂದರುಗಳು ಹೇರಳವಾಗಿವೆ. ಆದುದರಿಂದ ಈ ತೀರದಲ್ಲಿ ವ್ಯಾಪಾರಕ್ಕೆ ಪ್ರಸಿದ್ಧವಾದ ಮಾಂಟ್ರಿಯಲ್, ಹಲಿಫಾಕ್ಸ್, ಬಾಸ್ಟನ್, ನ್ಯೂಯಾರ್ಕ್, ಫಿಲಡೆಲ್ಫಿಯ, ನ್ಯೂಆರ್ಲಿಯನ್ಸ್, ಪನಾಮ, ಹವನಾ, ಕಿಂಗ್‌ಸ್ಟನ್, ಮೊದಲಾದ ಅನೇಕ ರೇವುಪಟ್ಟಣಗಳಿವೆ. ಇವುಗಳ ಸನ್ನಿವೇಶವನ್ನು ಭೂಪಟದಲ್ಲಿ ನೋಡಿ ನೆನಪಿಡಿ.

ಪಶ್ಚಿಮ ತೀರದಲ್ಲಿ ವಾಂಕುವರ್ ದ್ವೀಪವೂ, ಕ್ಯಾಲಿಫೋರ್ನಿಯ ಪರ್ಯಾಯ ದ್ವೀಪವೂ, ಅದೇ ಹೆಸರಿನ ಕೊಲ್ಲಿಯೂ ಇರುವುವು. ಈ ತೀರದ ಉತ್ತರ ಭಾಗವು ಫೀಯರ್ಡ್ ತೀರವಾಗಿರುವುದು. ಈ ತೀರದ ಮಗ್ಗುಲಲ್ಲಿಯೇ ಎತ್ತರವಾದ ರಾಕಿ ಪರ್ವತಸ್ತೋಮವಿರುವುದರಿಂದ ದಡವು ಎತ್ತರವಾಗಿರುವುದು. ಆದುದರಿಂದ ಇಲ್ಲಿ ಬಂದರುಗಳು ಪೂರ್ವತೀರಕ್ಕಿಂತ ಕಡಿಮೆ. ವಾಂಕುವರ್ ದ್ವೀಪದಲ್ಲಿರುವ ಎಸ್ಕಿಮಾಲ್ಟ್. ಈ ದ್ವೀಪದ ಬಳಿಯ ಖಂಡಭಾಗದಲ್ಲಿರುವ ವಾಂಕುವರ್, ಇದಕ್ಕೆ ದಕ್ಷಿಣದಲ್ಲಿರುವ ಸಾನ್‌ಫ್ರಾನ್‌ಸಿಸ್ಕೋ ಎಂಬುವು ಬಹಳ ಉತ್ತಮವಾದ ಬಂದರುಗಳನ್ನು ಹೊಂದಿರುವ ಪ್ರಸಿದ್ಧವಾದ ರೇವುಪಟ್ಟಣಗಳಾಗಿವೆ.

ಪೂರ್ವತೀರದ ರೇವುಪಟ್ಟಣಗಳಿಂದ ಯೂರೊಪಿನೊಡನೆಯೂ, ಪಶ್ಚಿಮ ತೀರದ ರೇವುಪಟ್ಟಣಗಳಿಂದ ಆಸ್ಟ್ರೇಲಿಯ, ಚೀಣ, ಜಪಾನ್‌ಗಳೊಡನೆಯೂ ವಿಶೇಷವಾಗಿ ವ್ಯಾಪಾರವು ನಡೆಯುವುದು.

**ಮೇಲ್ಮೈಯ್ಯ ಲಕ್ಷಣ.**—ಈ ಖಂಡದ ಮೇಲ್ಮೈಯ್ಯ ಲಕ್ಷಣವನ್ನು ತಿಳಿಯುವುದು ಬಹು ಸುಲಭವು. ಪಶ್ಚಿಮ ಭಾಗದಲ್ಲಿ ಬಹಳ ಎತ್ತರವಾದ ಪ್ರಸ್ಥಭೂಮಿಯೂ, ಪೂರ್ವದಲ್ಲಿ ತಗ್ಗಾದ ಪ್ರಸ್ಥಭೂಮಿಯೂ, ಮಧ್ಯಭಾಗದಲ್ಲಿ ಬಹು ವಿಶಾಲವಾದ ಮೈದಾನವೂ ಉತ್ತರ ದಕ್ಷಿಣವಾಗಿ ಪ್ರಸರಿಸಿರುವುವೆಂದು ಸಾಮಾನ್ಯವಾಗಿ ಹೇಳಬಹುದು.

ಪಶ್ಚಿಮಭಾಗದ ಪ್ರಸ್ಥಭೂಮಿಯು ಅಲಾಸ್ಕ ಪರ್ಯಾಯದ್ವೀಪದಿಂದ ಪನಾಮ ಭೂಕಂಠದವರೆಗೂ ಹರಡಿದೆ. ಇದು ಸಾಮಾನ್ಯವಾಗಿ 400 ಮೈಲಿಗಳಷ್ಟು ಅಗಲವಾಗಿರುವುದು. ಮಧ್ಯಭಾಗದಲ್ಲಿ ಗ್ರೇಟ್ ಸಾಲ್ಟ್ ಸರೋವರದ ಅಥವಾ ದೊಡ್ಡ ಉಪ್ಪುನೀರಿನ ಸರೋವರದ ಬಳಿ 1,000 ಮೈಲಿಗಳಷ್ಟು ಅಗಲವಾಗಿರುವುದು. ಈ ಪ್ರಸ್ಥಭೂಮಿಯ ಪೂರ್ವದ ಅಂಚಿನಲ್ಲಿ ರಾಕಿ ಪರ್ವತ ಶ್ರೇಣಿಗಳಿರುವುವು. ಇವುಗಳಲ್ಲಿ ಮೆಕ್ಸಿಕೋದೇಶದಲ್ಲಿರುವ ಪೋಪಕಾಟ್ಪೆಟಿಲ್ ಮತ್ತು ಒರಿಜಾಬ ಎಂಬುವು (ಸುಮಾರು 18,000 ಅಡಿಗಳಷ್ಟು) ಎತ್ತರವಾದ ಅಗ್ನಿಪರ್ವತಗಳು. ಅಲಾಸ್ಕ ಪರ್ಯಾಯದ್ವೀಪದಲ್ಲಿರುವ ಸೆಂಟ್ಎಲಿಯಾಸ್ ಎಂಬ ಶಿಖರವು 19,500 ಅಡಿಗಳು ಎತ್ತರವಾಗಿರುವುದು. ಇದೇ ಈ ಖಂಡದಲ್ಲೆಲ್ಲಾ ಅತ್ಯಂತ ಎತ್ತರವಾದ ಶಿಖರವು. ಈ ಪ್ರಸ್ಥಭೂಮಿಯ ಪಶ್ಚಿಮಭಾಗದಲ್ಲಿ ಎರಡು ಪರ್ವತಪಙ್ಕ್ತಿಗಳು ಉತ್ತರ ದಕ್ಷಿಣವಾಗಿ ಹಬ್ಬಿವೆ. ಇವುಗಳಿಗೆ ಅಲ್ಲಲ್ಲಿ ಬೇರೆ ಬೇರೆ ಹೆಸರುಗಳನ್ನು ಕೊಟ್ಟಿರುವರು. ಗ್ರೇಟ್ ಸಾಲ್ಟ್ ಸರೋವರಕ್ಕೆ ಪಶ್ಚಿಮದಲ್ಲಿರುವ ಭಾಗಕ್ಕೆ ಸಿಯುರಾನಿವೇಡ ಎಂದು ಹೆಸರು. ಈ ಪಶ್ಚಿಮಭಾಗದ ಪ್ರಸ್ಥಭೂಮಿಗೂ, ಪಶ್ಚಿಮ ತೀರಕ್ಕೂ ಮಧ್ಯೆ ಅನೇಕ ಕಡೆ ಬಹಳ ಇಕ್ಕಟ್ಟಾದ ಮೈದಾನವಿರುವುದು. ಪಶ್ಚಿಮಭಾಗದ ಪ್ರಸ್ಥಭೂಮಿಯಲ್ಲಿ ಅಲಾಸ್ಕ ಪ್ರಸ್ಥಭೂಮಿ, ಪಶ್ಚಿಮಭಾಗದ ಮಹಾಪ್ರಸ್ಥಭೂಮಿ, ಮೆಕ್ಸಿಕೋ ಪ್ರಸ್ಥಭೂಮಿ ಎಂಬುವು ಪ್ರಸಿದ್ಧವಾದ ಭಾಗಗಳಾಗಿವೆ.

ಪೂರ್ವಭಾಗದ ಪ್ರಸ್ಥಭೂಮಿಯು ಮೆಕ್ಸಿಕೋ ಕೊಲ್ಲಿಯಿಂದ ಸೆಂಟ್ ಲಾರೆನ್ಸ್ ಜೈಲಿನವರೆಗೂ ಹಬ್ಬಿದೆ. ಲಬ್ರಡಾರ್ ಪರ್ಯಾಯದ್ವೀಪವೂ ಸ್ವಲ್ಪವೇ ಎತ್ತರವಾದ ಪ್ರಸ್ಥಭೂಮಿಯಾಗಿದೆ. ಈ ಪ್ರಸ್ಥಭೂಮಿಯ ಸರಾಸರಿ ಎತ್ತರವು 2,500 ಅಡಿಗಳು. ಉದ್ದ ಅಗಲ ಎತ್ತರಗಳಲ್ಲಿ ಈ ಪ್ರಸ್ಥಭೂಮಿಯು ಪಶ್ಚಿಮಭಾಗದ ಪ್ರಸ್ಥಭೂಮಿಯ ಅರ್ಧಕ್ಕಿಂತ ಕಡಿಮೆಯಾಗಿದೆ. ಈ ಪ್ರಸ್ಥಭೂಮಿಯಲ್ಲಿ ಅಲೆಗನಿ ಎಂಬುವು ಮುಖ್ಯವಾದ ಪರ್ವತಗಳು. ಇವುಗಳಲ್ಲಿ ಅತ್ಯಂತ ಎತ್ತರವುಳ್ಳ ಶಿಖರವಾದ ಮೌಂಟ್‌ಡೋಮ್ ಎಂಬುದು 7,000 ಅಡಿಗಳಷ್ಟು ಎತ್ತರವಾಗಿರುವುದು. ಈ ಪ್ರಸ್ಥಭೂಮಿಗೂ ಪೂರ್ವತೀರಕ್ಕೂ ಮಧ್ಯೆ ತಕ್ಕಮಟ್ಟಿಗೆ ಅಗಲವಾದ ಮೈದಾನವಿರುವುದು. ದಕ್ಷಿಣ ಇಂಡಿಯಾದಲ್ಲಿನಂತೆ ಈ ಖಂಡದಲ್ಲಿಯೂ ಪೂರ್ವತೀರದ ಮೈದಾನವು ಪಶ್ಚಿಮತೀರದ ಮೈದಾನಕ್ಕಿಂತ ಹೆಚ್ಚು ವಿಶಾಲವಾಗಿರುವುದು. ಪೂರ್ವಭಾಗದ ಬೆಟ್ಟಗಳು ಪಶ್ಚಿಮಭಾಗದ ಬೆಟ್ಟಗಳಿಗಿಂತ ತಗ್ಗಾಗಿರುವುವು.

ಈ ಖಂಡದ ಮಧ್ಯಭಾಗವು ಬಹಳ ದೊಡ್ಡ ಮೈದಾನವಾಗಿದೆ. ಈ ದೊಡ್ಡ ಮೈದಾನವು ಉತ್ತರಸಾಗರದಿಂದ ಮೆಕ್ಸಿಕೊ ಕೊಲ್ಲಿಯವರೆಗೂ, ರಾಕಿ ಪರ್ವತಗಳಿಂದ ಅಲೆಗನಿ ಪರ್ವತಗಳವರೆಗೂ ವಿಸ್ತರಿಸಿದೆ. ಈ ಮೈದಾನದ ಉತ್ತರಾರ್ಧವು

ಉತ್ತರಕ್ಕೂ, ದಕ್ಷಿಣಾರ್ಧವು ದಕ್ಷಿಣಕ್ಕೂ ಇಳಿಜಾರಾಗಿದೆ. ಇವೆರಡು ಭಾಗಗಳಿಗೂ ಮಧ್ಯೆ ಇರುವ ಜಲವಿಭಾಗಸ್ಥಾನದ ಎತ್ತರವು 1,000 ಅಡಿಗಳಿಗಿಂತ ಕಡಿಮೆಯಾಗಿರುವುದು. ಈ ದಿಣ್ಣೆಯನ್ನು 'ಎತ್ತರವಾದ ನೆಲ' ಹೈಟ್ ಆಫ್ ಲ್ಯಾಂಡ್ ಎಂದು ಕರೆಯುವರು. ಈ ದಿಣ್ಣೆಯು ಇಷ್ಟು ತಗ್ಗಾಗಿರುವುದರಿಂದ ಉತ್ತರಕ್ಕೂ, ದಕ್ಷಿಣಕ್ಕೂ ಹರಿಯುವ ನದಿಗಳ ಜಲಾಸಯನಭೂಮಿಗಳನ್ನು ಪ್ರತ್ಯೇಕಿಸುವುದೇ ಏನಾ, ಉತ್ತರ ದಿಕ್ಕಿನಿಂದ ಬೀಸುವ ಶೀತಮಾರುತಗಳನ್ನು ಇದು ತಡೆಯಲಾರದು.

ವೆಸ್ಟಿಂಡಿಯಾ ದ್ವೀಪಗಳು ಸಾಮಾನ್ಯವಾಗಿ ಪರ್ವತಗಳಿಂದ ಕೂಡಿವೆ. ದೊಡ್ಡ ದ್ವೀಪಗಳಲ್ಲ ಸಮುದ್ರತೀರಗಳಲ್ಲಿ ಚಿಕ್ಕ ಚಿಕ್ಕ ಮೈದಾನಗಳಿವೆ. ಈ ದ್ವೀಪಗಳು ಬಹಳ ಹಿಂದಿನ ಕಾಲದಲ್ಲಿ ಅಗ್ನಿಪರ್ವತಗಳಾಗಿದ್ದುವು. ಆದುದರಿಂದ ಇವುಗಳ ನೆಲವು ಫಲವತ್ತಾಗಿದೆ.

**ನದಿಗಳು.**—ಈ ಖಂಡದ ಮಧ್ಯಭಾಗವೆಲ್ಲವೂ ವಿಶಾಲವಾದ ಮೈದಾನವಾಗಿರುವುದರಿಂದ ಇಲ್ಲಿ ಉದ್ದವಾದ ಅನೇಕ ನದಿಗಳು ಹರಿಯುವುವು. ಆದುದರಿಂದ ಈ ಖಂಡವನ್ನು ನದಿಗಳ ಖಂಡವೆಂದು ಕರೆಯುವುದುಂಟು. ಪಶ್ಚಿಮಭಾಗದ ಪ್ರಸ್ಥಭೂಮಿ, ಪೂರ್ವಭಾಗದ ಪ್ರಸ್ಥಭೂಮಿ ಮತ್ತು ಎತ್ತರವಾದ ನೆಲ ಎಂಬ ದಿಣ್ಣೆ ಇವು ಈ ಖಂಡದ ಮುಖ್ಯವಾದ ಜಲವಿಭಾಗಸ್ಥಾನಗಳಾಗಿವೆ. ಇವುಗಳಲ್ಲಿ ಪಶ್ಚಿಮಭಾಗದ ಪ್ರಸ್ಥಭೂಮಿಯೇ ಮುಖ್ಯವಾದ ಜಲವಿಭಾಗಸ್ಥಾನವು. ಇದು ಪಶ್ಚಿಮತೀರಕ್ಕೆ ಸಮೀಪದಲ್ಲಿರುವುದರಿಂದ ಇದರ ಪಶ್ಚಿಮದ ತಪ್ಪಲುಗಳಲ್ಲಿ ಹರಿಯುವ ನದಿಗಳು ಬಹಳ ಚಿಕ್ಕವು. ಪೂರ್ವದ ತಪ್ಪಲುಗಳಿಂದ ಉತ್ತರ ದಕ್ಷಿಣ ದಿಕ್ಕುಗಳಿಗೆ ಹರಿಯುವ ನದಿಗಳು ಬಹಳ ದೊಡ್ಡವು. ಹೀಗೆಯೇ ಪೂರ್ವಭಾಗದ ಪ್ರಸ್ಥಭೂಮಿಯಿಂದ ಪೂರ್ವಕ್ಕೆ ಹರಿಯುವ ನದಿಗಳು ಚಿಕ್ಕವು. ಪಶ್ಚಿಮಕ್ಕೆ ಹರಿಯುವ ನದಿಗಳು ದೊಡ್ಡವು.

ಈ ಖಂಡದ ನದಿಗಳನ್ನು ಮಧ್ಯಭಾಗದ ನದಿಗಳು, ಪೂರ್ವಭಾಗದ ನದಿಗಳು, ಪಶ್ಚಿಮಭಾಗದ ನದಿಗಳು ಎಂದು ಮೂರು ಭಾಗ ಮಾಡಬಹುದು. ಪಶ್ಚಿಮಭಾಗದ ನದಿಗಳು ಪರ್ವತಗಳಿಂದ ವೇಗವಾಗಿ ಹರಿದು ಪೆಸಿಫಿಕ್ ಸಾಗರವನ್ನು ಸೇರುವುದರಿಂದ ಅವುಗಳಲ್ಲಿ ಅನೇಕವು ತಮ್ಮ ಪಾತ್ರವನ್ನು ಬಹಳ ತಗ್ಗಾಗಿ ಮಾಡಿಕೊಂಡು ಹರಿಯುವುವು. ಕೊಲರೇಡೊ ಎಂಬ ನದಿಯ ಪಾತ್ರವು ಸುಮಾರು 400 ಮೈಲಿಗಳ ದೂರದವರೆಗೂ ಅದರ ದಡಗಳಿಗಿಂತ 6,000 ಅಡಿಗಳಷ್ಟು ತಗ್ಗಾಗಿರುವುದು. ಈ ನದಿಗಳ ದಡಗಳು ಪರ್ವತಭಾಗದಲ್ಲಿ ಗಿಡಮರಗಳಿಂದ ತುಂಬಿ ನೋಡುವುದಕ್ಕೆ ಬಹು ರಮಣೀಯವಾಗಿರುವುವು. ಪಶ್ಚಿಮ ತೀರದ ಮೈದಾನದಲ್ಲಿ ಈ ನದಿಗಳು ನೀರಾವರಿಗೆ ಉಪಯೋಗವಾಗಿವೆ. ಈ ಮೈದಾನದ ಉತ್ತರ

ಭಾಗದಲ್ಲಿ ತೊಲೆಗಳನ್ನು ತೇಲಿಸಿ ಸಾಗಿಸುವುದಕ್ಕೂ, ನೀರಿನ ಶಕ್ತಿಯಿಂದ ಯಂತ್ರಗಳನ್ನು ನಡೆಸುವುದಕ್ಕೂ ನದಿಗಳು ಉಪಯೋಗವಾಗಿವೆ. ಈ ನದಿಗಳಲ್ಲಿ ಯೂಕಾನ್, ಕೊಲಂಬಿಯ, ಕೊಲರೇಡೊ ಎಂಬುವು ಮುಖ್ಯವಾದುವು. ಪೂರ್ವ ಭಾಗದ ನದಿಗಳು ತಗ್ಗಾದ ಪ್ರಸ್ಥಭೂಮಿಯಲ್ಲಿ ಹುಟ್ಟಿ ಸ್ವಲ್ಪಮಟ್ಟಿಗೆ ವಿಶಾಲ ವಾದ ಪೂರ್ವತೀರದ ಮೈದಾನದಲ್ಲಿ ಹರಿಯುವುವು. ಇವುಗಳ ಮುಖಗಳಲ್ಲಿ ಒಳ್ಳೆಯ ಬಂದರುಗಳಿರುವುವು. ಈ ಬಂದರುಗಳು ಈ ಖಂಡದ ಇತರ ಬಂದರು ಗಳಿಗಿಂತ ಯೂರೋಪಿಗೆ ಸಮೀಪವಾಗಿರುವುವು. ಬಾಸ್ಟನ್, ನ್ಯೂಯಾರ್ಕ್, ಫಿಲಡೆಲ್ಫಿಯ ಮೊದಲಾದ ರೇವುಪಟ್ಟಣಗಳು ಇಂತಹ ಬಂದರುಗಳನ್ನು ಹೊಂದಿವೆ.

ಮಧ್ಯಭಾಗದ ನದಿಗಳಲ್ಲಿ ಮಿಸ್ಸಿಸ್ಸಿಪಿ ಮತ್ತು ಸೆಂಟ್‌ಲಾರೆನ್ಸ್ ಎಂಬುವು ಬಹು ಮುಖ್ಯವಾದುವು. ಉತ್ತರಸಾಗರವನ್ನು ಸೇರುವ ಮೆಕೆನ್ಸಿ ನದಿಯು ಸೆಂಟ್‌ಲಾರೆನ್ಸ್‌ಗಿಂತ ಉದ್ದವಾಗಿರುವುದು. ಹಡ್ಸನ್ ಕೊಲ್ಲಿಯನ್ನು ಸೇರುವ ನೆಲ್ಸನ್ ನದಿಯು ಸ್ವಲ್ಪ ಕಡಿಮೆ ಸೆಂಟ್‌ಲಾರೆನ್ಸಿನಷ್ಟೇ ಉದ್ದವಾಗಿರುವುದು. ಆದರೆ ಇವೆರಡೂ ಬಹು ಶೀತವಾದ ಸಮುದ್ರಗಳನ್ನು ಸೇರುವುದರಿಂದ ಹೆಚ್ಚು ಉಪಯೋಗವಾಗಿಲ್ಲ. ಮೆಕ್ಸಿಕೊ ಕೊಲ್ಲಿಯನ್ನು ಸೇರುವ ಗ್ರಾಂಡೆ ಎಂಬ ನದಿಯು ಮೆಕ್ಸಿಕೊ ದೇಶಕ್ಕೂ, ಸಂಯುಕ್ತ ಸಂಸ್ಥಾನಗಳಿಗೂ ಮಧ್ಯೆ ಎಲ್ಲೆ ಯಾಗಿದೆ. ಇದು ಸ್ವಲ್ಪ ಕಡಿಮೆ ನೆಲ್ಸನ್ ನದಿಯಷ್ಟು ಅಥವಾ ಸಿಂಧು ನದಿಯಷ್ಟು ಉದ್ದವಾಗಿದ್ದರೂ, ಬಹಳ ದೂರ ಪ್ರಸ್ಥಭೂಮಿಯಲ್ಲಿಯೇ ವೇಗವಾಗಿ ತಗ್ಗಾದ ಪಾತ್ರದಲ್ಲಿ ಹರಿಯುವುದರಿಂದ ಇದರಿಂದ ಹೆಚ್ಚು ಪ್ರಯೋಜನವಿಲ್ಲ.

ಮಿಸ್ಸಿಸ್ಸಿಪಿ ನದಿಯ ಜಲಾನಯನಭೂಮಿಯು ಹೈಟ್ ಆಫ್ ಲ್ಯಾಂಡಿಗೆ ದಕ್ಷಿಣದಲ್ಲಿರುವ ಮಹಾಮೈದಾನದ ಭಾಗವನ್ನೆಲ್ಲಾ ಒಳಗೊಂಡು ವಿಸ್ತೀರ್ಣ ದಲ್ಲಿ ಇಂಡಿಯಾ ಚಕ್ರಾಧಿಪತ್ಯದಷ್ಟಿರುವುದು. ಈ ನದಿಗೆ ಮಿಸ್ಸೋರಿ, ಅರ್ಕಾನ್ಸಸ್, ಕೆಂಪುನದಿ, ಓಹಿಯೊ ಮೊದಲಾದ ಬಹು ಉದ್ದವಾದ ಉಪನದಿ ಗಳು ಬಂದು ಸೇರುವುವು. ಮಿಸ್ಸೋರಿ ನದಿಯು ಸುಮಾರು 3,000 ಮೈಲಿ ಗಳಷ್ಟು ಉದ್ದವಿರುವುದು. ಮಿಸ್ಸೋರಿ ನದಿಯು ಮೂಲದಿಂದ ಮಿಸ್ಸಿಸ್ಸಿಪಿಯ ಮುಖಕ್ಕೆ 4,200 ಮೈಲಿಗಳ ದೂರವಿರುವುದು. ಆದುದರಿಂದ ಮಿಸ್ಸೋರಿ–ಮಿಸ್ಸಿಸ್ಸಿಪಿ ನದಿಯು ಪ್ರಪಂಚದಲ್ಲೆಲ್ಲಾ ಅತ್ಯಂತ ಉದ್ದವಾದ ನದಿಯೆಂದು ಗಣಿಸಲ್ಪಟ್ಟಿದೆ. ಈ ನದಿಯು ನಯವಾದ ಮಣ್ಣನ್ನು ತಂದುಹಾಕಿ ನೆಲವನ್ನು ಬಹು ಫಲವತ್ತಾಗಿ ಮಾಡಿರುವುದು. ಈ ಮಣ್ಣಿನಿಂದ ಇದರ ಪಾತ್ರವು ಎತ್ತರ ವಾಗುತ್ತಲೇ ಇರುವುದು. ಆದುದರಿಂದ ಪಾತ್ರವು ಬದಲಾಯಿಸದಿರಲು ದಡ ಗಳಲ್ಲಿ ಅನೇಕ ಕಡೆ ಭಾರಿ ಏರಿಗಳನ್ನು ಕಟ್ಟಿರುವರು. ಈ ನದಿಯೂ ಮತ್ತು ಇದರ ಉಪನದಿಗಳೂ ನೀರಾವರಿಗೆ ಬಹಳ ಉಪಯೋಗವಾಗಿರುವುವು. ಇದಲ್ಲದೆ

ಇವುಗಳಮೇಲೆ ಒಟ್ಟು 35,000 ಮೈಲಿಗಳಷ್ಟು ದೂರ ಹಡಗುಗಳು ಸಂಚರಿಸಬಹುದು. ದಕ್ಷಿಣ ಅಮೆರಿಕದ ಅಮೆಜಾನ್ ನದಿಯು ಮತ್ತು ಅದರ ಉಪನದಿಗಳ ಮೇಲೆ 50,000 ಮೈಲಿಗಳಷ್ಟು ದೂರ ಹಡಗುಗಳು ಸಂಚರಿಸಬಹುದು. ಹಡಗುಗಳ ಸಂಚಾರಕ್ಕೆ ಅನುಕೂಲ್ಯದಲ್ಲಿ ಪ್ರಪಂಚದಲ್ಲಿ ಇನ್ನಾವ ನದಿಯೂ ಇವೆರಡಕ್ಕೆ ಸಮಾನವಾಗಲಾರದು.

ಸೆಂಟ್‌ಲಾರೆನ್ಸ್ ನದಿಯ ಉದ್ದವು ಮಿಸ್ಸಿಸ್ಸಿಪಿ, ಮೆಕೆನ್ಸಿ ನದಿಗಳಿಗಿಂತ ಕಡಿಮೆ. ಉದ್ದದಲ್ಲಿ ಈ ನದಿಯು ಈ ಖಂಡದಲ್ಲಿ ಮೂರನೆಯದಾದರೂ, ಪಾತ್ರದಲ್ಲಿ ಹರಿಯುವ ನೀರಿನ ಪರಿಮಾಣವನ್ನು ಗಮನಿಸಿದರೆ ಇದೇ ಮೊದಲನೆಯದಾಗಿದೆ. ಇದು ಪಂಚ ಮಹಾಸರೋವರಗಳ ಮೂಲಕ ಹರಿದು, ಅನೇಕ ಉಪನದಿಗಳನ್ನು ಸ್ವೀಕರಿಸಿ, ಮುಖಭಾಗದಲ್ಲಿ ವಿಶಾಲವಾದ ಅಳಿವೆಯನ್ನು ಮಾಡಿಕೊಂಡು, ಸೆಂಟ್‌ಲಾರೆನ್ಸ್ ಕೊಲ್ಲಿಯನ್ನು ಸೇರುವುದು. ಇದರ ಮುಖವು 20 ಮೈಲಿಗಳಷ್ಟು ಅಗಲವಾಗಿರುವುದು. ಇದರ ಮುಖದಿಂದ 1,000 ಮೈಲಿಗಳ ಮೇಲಿರುವ ಮಾಂಟ್ರಿಯಲ್ ಪಟ್ಟಣದವರೆಗೂ ದೊಡ್ಡ ಜಹಜುಗಳು ಸಂಚರಿಸುವುವು. ಪ್ರಪಂಚದ ಭೂಭಾಗದಲ್ಲಿರುವ ಒಟ್ಟು ಸೀನೀರಿನಲ್ಲಿ ಅರ್ಧಭಾಗವು ಈ ನದಿಯು ಮತ್ತು ಇದಕ್ಕೆ ಸೇರಿದ ಪಂಚ ಮಹಾಸರೋವರಗಳ ಪಾತ್ರಗಳಲ್ಲಿ ಅಡಕವಾಗಿರುವುದು. ಈ ನದಿಯ ಮುಖದಲ್ಲಿ 4 ತಿಂಗಳು ಸಮುದ್ರವು ಶೀತದಿಂದ ಗಡ್ಡೆಕಟ್ಟಿರುವುದು. ಈರಿ ಮತ್ತು ಆಂಟೇರಿಯೋ ಸರೋವರಗಳಿಗೆ ಮಧ್ಯೆ ಈ ನದಿಯನ್ನು ನಯಾಗರ ಎಂಬ ಹೆಸರಿನಿಂದ ಕರೆಯುವರು. ಈ ನಯಾಗರ ನದಿಯು ಎರಡು ಕವಲಾಗಿ ಒಡೆದು ಧುಮುಕುವುದು. ಉತ್ತರಭಾಗದ ಕವಲು 160 ಅಡಿಗಳಷ್ಟು ಎತ್ತರದಿಂದಲೂ, ಸುಮಾರು ಅರ್ಧಮೈಲಿಯಷ್ಟು ಅಗಲವಾಗಿಯೂ ಧುಮುಕುವುದು. ನಮ್ಮ ಸೀಮೆಯಲ್ಲಿ ಶಿವನಸಮುದ್ರದಲ್ಲಿ ಮಾಡಿರುವಂತೆ ಈ ಜಲಪಾತದಲ್ಲಿ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡಿ ಉಪಯೋಗಿಸುತ್ತಿರುವರು.

**ಸರೋವರಗಳು.**—ಈ ಖಂಡದಲ್ಲಿರುವಷ್ಟು ದೊಡ್ಡ ಸರೋವರಗಳು ಇನ್ನಾವ ಖಂಡದಲ್ಲಿಯೂ ಇಲ್ಲ; ಆದುದರಿಂದ ಇದು 'ನದಿಗಳ ಖಂಡ'ವಾಗಿರುವುದಲ್ಲದೆ ಸರೋವರಗಳ ಖಂಡವಾಗಿಯೂ ಇರುವುದು. ಈ ಖಂಡದ ಸರೋವರಗಳು ಮುಖ್ಯವಾಗಿ ಹಡ್ಸನ್ ಕೊಲ್ಲಿಯ ಸುತ್ತಲೂ ಅರ್ಧಚಂದ್ರಾಕೃತಿಯಲ್ಲಿ ಹರಡಿವೆ. ಈ ಸರೋವರಗಳ ಪಙ್ಕ್ತಿಯಲ್ಲಿ ವಾಯುವ್ಯದ ಭಾಗದವು ಮೆಕೆನ್ಸಿ ನದಿಗೂ, ಮಧ್ಯಭಾಗದವು ನೆಲ್ಸನ್ ನದಿಗೂ ಸಂಬಂಧಿಸಿವೆ. ವಾಯುವ್ಯ ಮತ್ತು ಮಧ್ಯಭಾಗಗಳ ಸರೋವರಗಳು ಮೆಕೆನ್ಸಿ, ನೆಲ್ಸನ್ ನದಿಗಳಂತೆಯೇ ಬಹು ಶೀತ ಪ್ರದೇಶದಲ್ಲಿರುವುದರಿಂದ ಹೆಚ್ಚು ಉಪಯೋಗವಾಗಿಲ್ಲ. ಆದರೆ ಆಗ್ನೇಯಭಾಗದ ಸರೋವರಗಳು ಹಡಗುಗಳ ಸಂಚಾರಕ್ಕೆ ಅತ್ಯಂತ ಉಪಯೋಗವಾಗಿವೆ. ಈ

ಸರೋವರಗಳನ್ನು ಪಂಚ ಮಹಾಸರೋವರಗಳೆಂದು ಕರೆಯುವರು. ಇವು ಯಾವುವೆಂದರೆ—ಸುಪೀರಿಯರ್, ಮಿಚಿಗನ್, ಹ್ಯೂರನ್, ಈರಿ ಮತ್ತು ಆಂಟೇರಿಯೋ. ಸುಪೀರಿಯರ್ ಸರೋವರವು ವಿಸ್ತೀರ್ಣದಲ್ಲಿ ಸುಮಾರು ಸಮ್ಮ ಮೈಸೂರು ಸೀಮೆಯಷ್ಟಿದೆ. ಇದೇ ಪ್ರಪಂಚದಲ್ಲೆಲ್ಲಾ ಅತ್ಯಂತ ದೊಡ್ಡದಾದ ಸಿಹಿನೀರಿನ ಸರೋವರವು. ಈ ಐದು ಸರೋವರಗಳೂ ಸೆಂಟ್‌ಲಾರೆನ್ಸ್ ನದಿಯಿಂದ ಒಂದಕ್ಕೊಂದು ಸೇರಿಸಲ್ಪಟ್ಟಿವೆ. ಆದುದರಿಂದ ಈ ಸರೋವರಗಳ ತೀರದಲ್ಲಿ ಚಿಕಾಗೊ, ಬಫೆಲೊ, ಟರಾಂಟೊ ಮೊದಲಾದ ಪ್ರಸಿದ್ಧವಾದ ರೇವುಪಟ್ಟಣಗಳಿವೆ.

ಈ ಸರೋವರ ಪಙ್ಕ್ತಿಯಲ್ಲದೆ ಅಲ್ಲಲ್ಲಿ ಅನೇಕ ಚಿಕ್ಕಚಿಕ್ಕ ಸರೋವರಗಳಿರುವುವು. ಇವುಗಳಲ್ಲಿ ಗ್ರೇಟ್ ಸಾಲ್ಟ್ ಲೇಕ್ ಎಂಬುದು ಮುಖ್ಯವಾದುದು. ಇದು ಪಶ್ಚಿಮ ಪ್ರಸ್ಥಭೂಮಿಯ ಮಧ್ಯಭಾಗದಲ್ಲಿ ದೇಶದೊಳಕ್ಕೆ ಇಳಿಜಾರಾಗಿರುವ ಪ್ರದೇಶದಲ್ಲಿರುವ ಉಪ್ಪುನೀರಿನ ಸರೋವರವು.

**ವಾಯುಗುಣ ಮತ್ತು ಮಳೆ.**—ಈ ಖಂಡವು ಉತ್ತರ ಅಕ್ಷಾಂಶಗಳು 85°ಗಳಿಂದ 10°ವರೆಗೂ ವಿಸ್ತರಿಸಿರುವುದರಿಂದ, ಈ ಖಂಡದಲ್ಲಿ ಎಲ್ಲಾ ವಲಯಗಳ ವಾಯುಗುಣವೂ ತೋರಿಬರುವುದು. ಪೂರ್ವ ಪಶ್ಚಿಮಗಳಲ್ಲಿ ಪ್ರಸ್ಥಭೂಮಿಗಳಿರುವುದರಿಂದ ಸಮುದ್ರತೀರವು ಹೆಚ್ಚಾಗಿ ಒಡೆದಿದ್ದರೂ ಕೂಡ ಮಧ್ಯಭಾಗದ ಮೈದಾನದಲ್ಲಿ ವಾಯುಗುಣವು ಸಮಧಾತುವಾಗಿಲ್ಲ. ಎಂದರೆ ಬೇಸಿಗೆ ಚಳಿಗಾಲಗಳ ಶೀತೋಷ್ಣಗಳಲ್ಲಿ ವ್ಯತ್ಯಾಸವು ಹೆಚ್ಚಾಗಿರುವುದು. ಇದಲ್ಲದೆ ಮಧ್ಯಭಾಗದ ದೊಡ್ಡ ಮೈದಾನದಲ್ಲಿ ಪೂರ್ವಪಶ್ಚಿಮವಾಗಿ ಹಬ್ಬಿರುವ ಪರ್ವತಗಳಿಲ್ಲದಿರುವುದರಿಂದ, ಉತ್ತರದಿಂದ ಅತ್ಯಂತ ಶೀತಮಾರುತವು ಬೀಸುವುದು. ಈ ಮಾರುತದಿಂದ ಚಳಿಗಾಲದಲ್ಲಿ ಈ ಮೈದಾನದಲ್ಲಿ ಚಳಿಯು ವಿಪರೀತವಾಗಿರುವುದು. ವಾಯುಗುಣವು ದಿನೇದಿನೇ ತಟ್ಟನೆ ಬದಲಾಯಿಸುವುದೂ ಹೆಚ್ಚು. ಮಧ್ಯಭಾಗದ ಮೈದಾನದಲ್ಲಿ ಉತ್ತರದಿಂದ ದಕ್ಷಿಣಕ್ಕೆ ಹೋದಹಾಗೆ ಶೀತವಲಯ, ಸಮಶೀತೋಷ್ಣವಲಯ, ಉಷ್ಣವಲಯಗಳ ವಾಯುಗುಣವು ತೋರಿಬರುವುದು. ಈ ಪ್ರದೇಶದ ಎಲ್ಲಾ ಭಾಗಗಳಲ್ಲಿಯೂ ಸಾಮಾನ್ಯವಾಗಿ ಬೇಸಗೆಯಲ್ಲಿ ಸೆಕೆ ಹೆಚ್ಚು; ಚಳಿಗಾಲದಲ್ಲಿ ಚಳಿ ಹೆಚ್ಚು. ಆದರೆ ಒಂದೊಂದು ವೇಳೆ ವಾಯುಗುಣವು ಬಹಳ ಬೇಗ ಬದಲಾಯಿಸುವುದುಂಟು ಎಂದು ಸಾಮಾನ್ಯವಾಗಿ ಹೇಳಬಹುದು.

ಬಹಳ ಉತ್ತರ ಪ್ರದೇಶದಲ್ಲಿಯೂ, ಪ್ರಸ್ಥಭೂಮಿಗಳಲ್ಲಿಯೂ ಚಳಿಯು ಹೆಚ್ಚು. ಪೂರ್ವ ಪಶ್ಚಿಮ ತೀರಪ್ರದೇಶಗಳಲ್ಲಿ ವಾಯುಗುಣವು ಹೆಚ್ಚು ಸಮಧಾತುವಾಗಿರುವುದು.

ಈ ಖಂಡದ ಉಷ್ಣವಲಯದ ಭಾಗದಲ್ಲಿ ವಾಣಿಜ್ಯಸಹಾಯಕ ಮಾರುತಗಳು ಈಶಾನ್ಯ ದಿಕ್ಕಿನಿಂದ ಬೀಸುವುವು. ಇವುಗಳಿಂದ ಮಧ್ಯ ಅಮೆರಿಕಕ್ಕೂ,

ವೆಸ್ಟಿಂಡಿಯಾ ದ್ವೀಪಗಳಿಗೂ ವಿಶೇಷವಾಗಿ (40 ಅಂಗುಲಗಳಿಗಿಂತ ಹೆಚ್ಚಾಗಿ) ಮಳೆಯು ಬೀಳುವುದು. ಸಮಶೀತೋಷ್ಣವಲಯ ಪ್ರದೇಶದಲ್ಲಿ ವಾಣಿಜ್ಯ ಸಹಾಯಕ ಪ್ರತಿಮಾರುತಗಳು ನೈಋತ್ಯ ದಿಕ್ಕಿನಿಂದ ಬೀಸುವುವು. ಇವುಗಳಿಂದ ಪಶ್ಚಿಮತೀರದ ಪ್ರದೇಶದಲ್ಲಿ ವಿಶೇಷವಾಗಿ ಮಳೆಯು ಬೀಳುವುದು. ಈ ಮಾರುತಗಳು ಪಶ್ಚಿಮಭಾಗದ ಪ್ರಸ್ಥಭೂಮಿಯನ್ನು ಹಾದು ಅದರ ಪೂರ್ವ ದಿಕ್ಕಿನಲ್ಲಿರುವ ಮೈದಾನ ಪ್ರದೇಶಕ್ಕೆ ಬರುವಾಗ ಅವುಗಳಲ್ಲಿ ಜಲಾಂಶವು ಕಡಿಮೆ ಯಾಗಿರುವುದರಿಂದ ಅಲ್ಲಿ ಮಳೆಯಾಗುವುದು ಬಹು ಕಡಿಮೆ. ಈ ಖಂಡದ ಪೂರ್ವಾರ್ಧಭಾಗದಲ್ಲಿ ತಕ್ಕಮಟ್ಟಿಗೆ ಮಳೆಯು ಬೀಳುವುದು. ಸಮುದ್ರತೀರದಲ್ಲಿ ಹೆಚ್ಚಾಗಿಯೂ, ಒಳಭಾಗದಲ್ಲಿ ಕಡಿಮೆಯಾಗಿಯೂ ಬೀಳುವುದು. ಈ ಮಳೆಯು ಅಟ್ಲಾಂಟಿಕ್ ಸಾಗರದಿಂದ ಬೀಸುವ ತಾತ್ಕಾಲಿಕ ಮಾರುತಗಳಿಂದ ಬೀಳುವುದು.

ಈ ಖಂಡದಲ್ಲಿ ಪೂರ್ವ ಪಶ್ಚಿಮ ತೀರಪ್ರದೇಶಗಳಲ್ಲಿಯೂ, ಮಧ್ಯ ಅಮೆರಿಕ ದಲ್ಲಿಯೂ ಮಳೆಯು ವಿಶೇಷವಾಗಿ ಬೀಳುವುದು. ದೊಡ್ಡ ಮೈದಾನದ ಪೂರ್ವ ಭಾಗದಲ್ಲಿ ತಕ್ಕಮಟ್ಟಿಗೆ ಬೀಳುವುದು. ಈ ಮೈದಾನದ ಪಶ್ಚಿಮಭಾಗದಲ್ಲಿಯೂ, ಪಶ್ಚಿಮ ಪ್ರಸ್ಥಭೂಮಿಯ ಮೇಲೂ ಮಳೆ ಬೀಳುವುದು ಬಹಳ ಕಡಿಮೆ ಎಂದು ಒಟ್ಟಿನಲ್ಲಿ ಹೇಳಬಹುದು.

**ಸಸ್ಯಗಳು.**—ಈ ಖಂಡವು ಎಲ್ಲಾ ವಲಯಗಳಲ್ಲಿಯೂ ಪ್ರಸರಿಸಿ ಒಂದೊಂದು ಪ್ರದೇಶದಲ್ಲಿ ಒಂದೊಂದು ಬಗೆಯ ವಾಯುಗುಣವನ್ನು ಹೊಂದಿರುವುದಷ್ಟೆ. ಈ ವಾಯುಗುಣಗಳ ವ್ಯತ್ಯಾಸಗಳಿಗನುಸಾರವಾಗಿ ಈ ಖಂಡದಲ್ಲಿ ಬೆಳೆಯುವ ಸಸ್ಯಗಳಲ್ಲಿಯೂ ವಿಶೇಷ ವ್ಯತ್ಯಾಸಗಳಿವೆ.

ಗ್ರೀನ್‌ಲೆಂಡ್ ಮತ್ತು ಅದರ ಬಳಿಯ ದ್ವೀಪಗಳಲ್ಲಿ ನೆಲದಮೇಲೆ ನೂರಾರು ಅಡಿಗಳ ಎತ್ತರವಾಗಿ ಹಿಮದ ಗಡ್ಡೆಗಳು ಕವಿದಿರುವುವು. ಕನಡಾ, ಅಲಾಸ್ಕಗಳಲ್ಲಿ ಅತ್ಯಂತ ಉತ್ತರಭಾಗವು ಟಂಡ್ರಾ ಪ್ರದೇಶವಾಗಿರುವುದು.

ಪಶ್ಚಿಮತೀರದ ಮೈದಾನದಲ್ಲಿಯೂ, ಮಧ್ಯ ಅಮೆರಿಕದ ಕೆಲವು ತೀರ ಪ್ರದೇಶಗಳಲ್ಲಿಯೂ ಮಳೆಯು ಬಹಳ ಹೆಚ್ಚಾಗಿ ಬೀಳುವುದರಿಂದ ದೊಡ್ಡ ಕಾಡು ಗಳಿರುವುವು. ಈ ಕಾಡುಗಳಲ್ಲಿ ಕರೀಮರ, ಮಹಾಗನಿ ಮೊದಲಾದ ದೊಡ್ಡ ದೊಡ್ಡ ಮರಗಳು ಸಾಂದ್ರವಾಗಿ ಬೆಳೆಯುವುವು. ಕಾಲಿಫೋರ್ನಿಯಾ ಸಂಸ್ಥಾನ ದಲ್ಲಿ ಕೆಲವು ಮರಗಳು 300 ಅಡಿಗಳಷ್ಟು ಎತ್ತರವಾಗಿಯೂ, ಬುಡದಲ್ಲಿ 30–40 ಅಡಿಗಳಷ್ಟು ಸುತ್ತಳತೆಯುಳ್ಳವುಗಳಾಗಿಯೂ ಇರುವುವು.

ಪಶ್ಚಿಮಭಾಗದ ಪ್ರಸ್ಥಭೂಮಿಯ ಮೇಲ್ಭಾಗದಲ್ಲಿ ಮಳೆಯು ಬೀಳುವುದಿಲ್ಲ ವಾದುದರಿಂದ ಅದು ಮರುಭೂಮಿಯಾಗಿರುವುದು.

ಮಹಾಮೈದಾನದ ಮತ್ತು ಪೂರ್ವತೀರದ ಮೈದಾನದ ಸಸ್ಯಗಳನ್ನು ತಿಳಿಯಲು ಮೊದಲು ಪಶ್ಚಿಮರೇಖಾಂಶ 100 ಡಿಗ್ರಿಗಳ ರೇಖೆಯನ್ನು ನೋಡಿ. ಈ ರೇಖೆಗೆ ಪೂರ್ವದಲ್ಲಿರುವ ಭಾಗದಲ್ಲಿ ಮಳೆ ಬೀಳುವುದು ಹೆಚ್ಚು. ಆದುದರಿಂದ ಈ ಪ್ರದೇಶದ ಉತ್ತರಭಾಗದಲ್ಲಿಯೂ, ಫ್ಲೋರಿಡಾ ಪರ್ಯಾಯದ್ವೀಪದಲ್ಲಿಯೂ ಕಾಡುಗಳು ಹೆಚ್ಚು. ಉಳಿದ ಭಾಗಗಳಲ್ಲಿ ವ್ಯವಸಾಯವು ಚೆನ್ನಾಗಿ ನಡೆಯುವುದು. ಈ ರೇಖೆಗೆ ಪಶ್ಚಿಮದಲ್ಲಿರುವ ಭಾಗದಲ್ಲಿ ಅತ್ಯಂತ ಉತ್ತರ ಪ್ರದೇಶವು ದೊಡ್ಡ ವೃಕ್ಷಗಳನ್ನುಳ್ಳ ಕಾಡಾಗಿದೆ. ಉಳಿದ ಪ್ರದೇಶವೆಲ್ಲವೂ ಹುಲುಸಾದ ಹುಲ್ಲು ಗಾವಲುಗಳಿಂದ ತುಂಬಿದೆ. ಈ ಹುಲ್ಲುಗಾವಲುಗಳನ್ನು ಇಲ್ಲಿ ಸಾಮಾನ್ಯವಾಗಿ 'ಪ್ರಯರಿ' ಎಂಬ ಹೆಸರಿನಿಂದ ಕರೆಯುವರು. ಕಾಡುಗಳಲ್ಲಿ ಮರಗಳನ್ನು ಕಡಿದು ತೊಲೆಗಳನ್ನು ಗಡ್ಡೆಕಟ್ಟಿದ ನದಿಗಳ ಮೇಲೆ ಸಾಗಿಸುವುದೂ, ಮರದ ಪುಡಿ ಯನ್ನು ಕಾರ್ಖಾನೆಗಳಲ್ಲಿ ತಯಾರುಮಾಡುವುದೂ ಕನಡಾ ದೇಶದ ಮುಖ್ಯವಾದ ಕಸಬುಗಳಾಗಿವೆ.

ವ್ಯವಸಾಯ ಮಾಡುವ ಪ್ರದೇಶದಲ್ಲಿ ಉತ್ತರಭಾಗದಲ್ಲಿ ಮಳೆಯು ಕಡಿಮೆ ಯಾಗಿಯೂ, ಶೀತೋಷ್ಣಗಳ ವ್ಯತ್ಯಾಸಗಳು ಹೆಚ್ಚಾಗಿಯೂ ಇರುವುದರಿಂದ ಗೋಧಿಯು ಬೆಳೆಯುವುದು ಹೆಚ್ಚು. ಮಧ್ಯಭಾಗದಲ್ಲಿ ಚಳಿ ಕಡಿಮೆಯಾಗಿಯೂ, ನೀರಾವರಿಯು ಹೆಚ್ಚಾಗಿಯೂ ಇರುವುದರಿಂದ ಮುಸುಕಿನ ಜೋಳವು ಬೆಳೆಯುವುದು ಹೆಚ್ಚು. ದಕ್ಷಿಣಭಾಗದಲ್ಲಿ ಶಖೆಯೂ, ನೀರಾವರಿಯೂ ಸಮೃದ್ಧಿ ಯಾಗಿರುವುದರಿಂದ ಬತ್ತವನ್ನು ಬೆಳೆಯುವುದು ಹೆಚ್ಚು.

ಪ್ರಪಂಚದಲ್ಲಿ ಬೆಳೆಯುತ್ತಿರುವ ಗೋಧಿಯಲ್ಲಿ $\frac{1}{4}$ ಭಾಗವು ಈ ಖಂಡದಲ್ಲಿ ಬೆಳೆಯುವುದು. ಮುಸುಕಿನ ಜೋಳವು ಈ ಖಂಡದಲ್ಲಿ ಬೆಳೆಯುವ ಆಹಾರ ಧಾನ್ಯಗಳಲ್ಲಿ ಬಹು ಮುಖ್ಯವಾದುದು. ಮುಸುಕಿನ ಜೋಳ, ಆಲೂಗೆಡ್ಡೆ, ಹೊಗೇಸೊಪ್ಪುಗಳು 500 ವರ್ಷಗಳ ಹಿಂದೆ ಈ ಖಂಡದಲ್ಲಿ ಮಾತ್ರ ಬೆಳೆಯು ತ್ತಿದ್ದುವು. ಈಚೆಗೆ ಇತರ ಖಂಡಗಳಲ್ಲಿಯೂ ಬೆಳೆಯುತ್ತಿರುವುವು.

ಮಧ್ಯ ಅಮೆರಿಕ ಮತ್ತು ವೆಸ್ಟಿಂಡಿಯಾದ್ವೀಪಗಳಲ್ಲಿ ಮಳೆಯು ವಿಶೇಷವಾಗಿ ಬೀಳುವುದರಿಂದ ಕಬ್ಬು, ಹೊಗೇಸೊಪ್ಪು ಚೆನ್ನಾಗಿ ಬೆಳೆಯುವುವು. ಸಂಯುಕ್ತ ಸಂಸ್ಥಾನಗಳ ದಕ್ಷಿಣಭಾಗದಲ್ಲಿ ಹತ್ತಿಯು ವಿಶೇಷವಾಗಿ ಬೆಳೆಯುವುದು. ಇಲ್ಲಿನ ಹತ್ತಿಯು ಉತ್ತಮವಾದುದು. ಸಂಯುಕ್ತ ಸಂಸ್ಥಾನಗಳಿಂದ ರಫ್ತಾಗುವಷ್ಟು ಹತ್ತಿಯು ಇನ್ನಾವ ದೇಶದಿಂದಲೂ ರಫ್ತಾಗುವುದಿಲ್ಲ.

ಸೇಬು, ಕಿತ್ತಿಳೆ, ದ್ರಾಕ್ಷೆ ಮೊದಲಾದ ಹಣ್ಣುಗಳು ದಕ್ಷಿಣಭಾಗದಲ್ಲಿಯೂ, ಮಧ್ಯಭಾಗದಲ್ಲಿಯೂ ಬೆಳೆಯುವುವು.

**ಪ್ರಾಣಿಗಳು.**—ಉತ್ತರಭಾಗದ ಶೀತಪ್ರದೇಶದಲ್ಲಿ ಚಳಿಯನ್ನು ತಡೆಯುವುದಕ್ಕೆ ತಕ್ಕಂತೆ ಒತ್ತಾದ ಕೂದಲಿನಿಂದ ಕೂಡಿದ ತುಪ್ಪಟಗಳನ್ನುಳ್ಳ ಸೀಲ್ ಮೊದಲಾದ ಪ್ರಾಣಿಗಳು ಅಸಂಖ್ಯಾಕವಾಗಿ ವಾಸಮಾಡುವುವು. ಅವುಗಳನ್ನು ಬೇಟೆಯಾಡಿ ತುಪ್ಪಟಗಳನ್ನು ರಫ್ತುಮಾಡುವುದರಿಂದ ಅನೇಕ ಜನರು ಜೀವನ ಮಾಡುವರು.

ಈ ಖಂಡದ ಪೂರ್ವತೀರ, ಪಶ್ಚಿಮತೀರಗಳಲ್ಲಿ ಆಹಾರಕ್ಕೆ ಯೋಗ್ಯವಾದ ಅನೇಕ ಜಗೆಯ ಮೀನುಗಳು ದೊರೆಯುವುವು. ನ್ಯೂಫೌಂಡ್ಲೆಂಡಿಗೆ ಪೂರ್ವದ ಸಮುದ್ರದಲ್ಲಿ ವಿಶಾಲವಾದ ಒಂದು ದಿಣ್ಣೆ ಇರುವುದು. ಗ್ರೀನ್‌ಲೆಂಡ್ ಕಡೆಯಿಂದ ಶೀತೋಷ್ಣ ಪ್ರವಾಹದಲ್ಲಿ ತೇಲಿಬಂದ ನೀರ್ಗಲ್ಲಿನ ಗುಡ್ಡಗಳು ಇಲ್ಲಿ ಗಲ್ಫ್‌ಸ್ಟ್ರೀಮಿನ ಉಷ್ಣೋದಕವನ್ನು ಸಂಧಿಸುವುದರಿಂದ, ಅವು ಕರಗಿ ಅವು ತಂದ ಕಲ್ಲು ಮಣ್ಣುಗಳು ಸಮುದ್ರದ ತಳಕ್ಕೆ ಹೋಗಿ ಈ ದಿಬ್ಬೆಯಾಗಿರುವುದು. ಈ ದಿಣ್ಣೆಯ ಮೇಲಿನ (ಆಳ ಕಡಿಮೆಯಾದ) ಸಮುದ್ರದಲ್ಲಿ ಕಾರ್ ಎಂಬ ಜಾತಿಯ ಮೀನುಗಳು ಅಪರಿಮಿತವಾಗಿ ದೊರೆಯುವುವು. ಇಲ್ಲಿ ಮುಖ್ಯವಾಗಿ ಸಂಯುಕ್ತ ಸಂಸ್ಥಾನಗಳ ಜನರೂ, ಕನಡಾ ರಾಜ್ಯದ ಜನರೂ ಮೀನುಗಳನ್ನು ಹಿಡಿಯುವರು. ನ್ಯೂಫೌಂಡ್ಲೆಂಡಿಗೆ ಮುಖ್ಯ ಪಟ್ಟಣವಾದ ಸೆಂಟ್‌ಜಾನ್ಸ್‌ನಲ್ಲಿರುವ ಜನರೆಲ್ಲರೂ ಸಾಮಾನ್ಯವಾಗಿ ಮೀನು ಹಿಡಿಯುವುದರಿಂದಲೇ ಜೀವಿಸುವರು. ಕನಡಾ ದೇಶದ ಪಶ್ಚಿಮ ತೀರದಲ್ಲಿ ಸಾಲ್ಮನ್ ಎಂಬ ಬಗೆಯ ಮೀನುಗಳು ಬಹಳ ಹೇರಳವಾಗಿ ದೊರೆಯುವುವು. ಅಮೆರಿಕ ಖಂಡದ ಈಶಾನ್ಯ ವಾಯುವ್ಯ ಸಮುದ್ರಗಳೂ, ಯೂರೋಪಿಯದ ಈಶಾನ್ಯ ವಾಯುವ್ಯ ಸಮುದ್ರಗಳೂ ಮೀನುಗಳಿಗೆ ಬಹಳ ಪ್ರಸಿದ್ಧವಾದ ಪ್ರದೇಶಗಳೆಂದು ಸಾಮಾನ್ಯ ವಿವರಣೆಯಲ್ಲಿ ಸೂಚಿಸಿರುವುದನ್ನು ಜ್ಞಾಪಿಸಿಕೊಳ್ಳಬಹುದು. ಸಂಯುಕ್ತ ಸಂಸ್ಥಾನಗಳ ಪೂರ್ವ ತೀರದಲ್ಲಿಯೂ ಮೀನುಗಳು ಹೇರಳವಾಗಿವೆ.

ಈ ಖಂಡದ ಪ್ರಯರಿಗಳಲ್ಲಿ ಪೂರ್ವಭಾಗದಲ್ಲಿ ದನಗಳನ್ನೂ, ಪಶ್ಚಿಮಭಾಗದಲ್ಲಿ, ಅಂದರೆ ಪರ್ವತದ ತಪ್ಪಲುಗಳಲ್ಲಿ ಕುರಿಗಳನ್ನೂ ಸಾಕುವರು. ಈ ಪ್ರದೇಶದಲ್ಲಿ ಕುದುರೆಗಳನ್ನೂ ಹಂದಿಗಳನ್ನೂ ಸಹ ವಿಶೇಷವಾಗಿ ಸಾಕುವರು. ಈ ಖಂಡದಲ್ಲಿ ಕುರಿಗಳಿಗಿಂತಲೂ ದನಗಳನ್ನು ಸಾಕುವುದು ಹೆಚ್ಚು. ಬ್ರಿಟಿಷ್ ದ್ವೀಪಗಳಲ್ಲಿಯಾದರೋ ದನಗಳಿಗೆ ನಾಲ್ಕರಷ್ಟು ಕುರಿಗಳನ್ನು ಸಾಕುವರು. ಮಿಚಿಗನ್ ಸರೋವರದ ತೀರದಲ್ಲಿರುವ ಚಿಕಾಗೊ ರೇವುಪಟ್ಟಣದ ಬಳಿಯಲ್ಲಿ ದನಗಳೂ, ಹಂದಿಗಳೂ ವಿಶೇಷವಾಗಿರುವುದರಿಂದ ಕುರಿ, ದನ, ಹಂದಿಗಳ ಮಾಂಸವನ್ನು ಆ ಪಟ್ಟಣದಿಂದ ರಫ್ತುಮಾಡುವಷ್ಟು ಈ ಖಂಡದ ಇನ್ನಾವ ಪಟ್ಟಣದಿಂದಲೂ ರಫ್ತುಮಾಡುವುದಿಲ್ಲ.

ಅಮೆರಿಕ ಖಂಡದಲ್ಲಿ ಆನೆ, ಹುಲಿ, ಚಿರತೆ ಮೊದಲಾದ ಪೂರ್ವಾರ್ಧಗೋಳದ ಕಾಡುಮೃಗಗಳಿಲ್ಲ. ಶೀತದೇಶದ ಕರಡಿ, ಕಸ್ತೂರಿಮೃಗ ಮೊದಲಾದ ಕಾಡು ಮೃಗಗಳು ಮಾತ್ರ ಅಲ್ಲಲ್ಲಿ ಇರುವುವು.

**ಖನಿಜಗಳು.**—ಈ ಖಂಡದಲ್ಲಿ ಖನಿಜ ಸಂಪತ್ತು ಬಹು ವಿಶೇಷವಾಗಿದೆ. ಕಲ್ಲಿದ್ದಲು, ಬೆಳ್ಳಿ, ಸೀಮೆಯೆಣ್ಣೆ, ತಾಮ್ರ ಈ ಖನಿಜಗಳು ಈ ಖಂಡ ದಲ್ಲಿ ಸಿಕ್ಕುವಷ್ಟು ಇತರ ಯಾವ ಖಂಡದಲ್ಲಿಯೂ ಸಿಕ್ಕುವುದಿಲ್ಲ. ಪೂರ್ವ ಭಾಗದ ಪ್ರಸ್ಥಭೂಮಿಯಲ್ಲಿ ಕಬ್ಬಿಣ, ಕಲ್ಲಿದ್ದಲು, ಸೀಮೆಯೆಣ್ಣೆಗಳೂ, ಪಶ್ಚಿಮ ಭಾಗದ ಪ್ರಸ್ಥಭೂಮಿಯಲ್ಲಿ ಚಿನ್ನ, ಬೆಳ್ಳಿಗಳೂ, ಮಧ್ಯಭಾಗದ ದಿಣ್ಣೆಯಲ್ಲಿ ಕಬ್ಬಿಣ, ತಾಮ್ರಗಳೂ ಬಹು ವಿಶೇಷವಾಗಿ ದೊರೆಯುವುವು.

ಈ ಖಂಡದಲ್ಲಿ ಯುರೋಪ್ ಖಂಡಕ್ಕಿಂತ 20 ಪಾಲು ಹೆಚ್ಚು ಕಲ್ಲಿದ್ದಲು ಇರುವುದು. ಕಬ್ಬಿಣ, ಕಲ್ಲಿದ್ದಲುಗಳು ಒಂದಕ್ಕೊಂದು ಸಮೀಪದಲ್ಲಿಯೂ, ಸಮೀಪದಲ್ಲೇ ಸುಣ್ಣಕಲ್ಲೂ ದೊರೆಯುವುವು. ಜಲಮಾರ್ಗಗಳೂ ಹೇರಳವಾಗಿರು ವುವು. ಆದುದರಿಂದ ಇಲ್ಲಿ ಕೈಗಾರಿಕೆಗಳ ಅಭಿವೃದ್ಧಿಗೆ ವಿಶೇಷ ಅನುಕೂಲ್ಯ ವಿರುವುದು. ಕಬ್ಬಿಣ, ಕಲ್ಲಿದ್ದಲಿನ ಗಣಿಗಳು ಪೂರ್ವಭಾಗದಲ್ಲಿ ಸೆಂಟ್‌ಲಾರೆನ್ಸ್ ನದಿಯ ಬಲದಡದಿಂದ ಫ್ಲೋರಿಡ ಪರ್ಯಾಯದ್ವೀಪದವರೆಗೂ, ಪಶ್ಚಿಮಭಾಗದ ಪ್ರಸ್ಥಭೂಮಿಯಲ್ಲಿ ಬ್ರಿಟಿಷ್ ಕೊಲಂಬಿಯದಿಂದ ಕಾಲಿಫೋರ್ನಿಯದವರೆಗೂ ವಿಶೇಷವಾಗಿವೆ. ಪೂರ್ವಭಾಗದ ಪ್ರದೇಶದಲ್ಲಿರುವ ಪೆನ್‌ಸಿಲ್ವೇನಿಯ ಸಂಸ್ಥಾನವು ಈ ಖನಿಜಗಳಿಗೆ ಬಹು ಪ್ರಸಿದ್ಧವಾದುದು. ಸಂಯುಕ್ತ ಸಂಸ್ಥಾನಗಳಲ್ಲಿ ಅತ್ಯಧಿಕ ವಾಗಿ ದೊರೆಯುವ ಕಬ್ಬಿಣದಲ್ಲಿ ಅರ್ಧಭಾಗವೂ, ಕಲ್ಲಿದ್ದಲಿನಲ್ಲಿ ಮುಕ್ಕಾಲು ಭಾಗವೂ, ಸೀಮೆಯೆಣ್ಣೆಯಲ್ಲಿ ಸುಮಾರು ಎಲ್ಲವೂ ಈ ಸಂಸ್ಥಾನವೊಂದರಲ್ಲಿಯೇ ಉತ್ಪತ್ತಿಯಾಗುವುದು. ಈ ಪ್ರದೇಶದಲ್ಲಿರುವ ಪಿಟ್ಸ್‌ಬರ್ಗ್ ಎಂಬ ಪಟ್ಟಣದಲ್ಲಿ ನಡೆಯುವಷ್ಟು ಕಬ್ಬಿಣ, ಕಲ್ಲಿದ್ದಲು, ಸೀಮೆಯೆಣ್ಣೆಗಳ ವ್ಯಾಪಾರವೂ, ಅಲ್ಲಿರು ವಷ್ಟು ಕಬ್ಬಿಣ, ಉಕ್ಕುಗಳ ದೊಡ್ಡ ಕಾರ್ಖಾನೆಗಳೂ ಈ ಖಂಡದ ಇನ್ನಾವ ಪಟ್ಟಣದಲ್ಲಿಯೂ ಇಲ್ಲ.

ಚಿನ್ನ, ಬೆಳ್ಳಿಗಳು ಪಶ್ಚಿಮಭಾಗದ ಪ್ರಸ್ಥಭೂಮಿಯಲ್ಲಿ ವಿಶೇಷವಾಗಿ ದೊರೆಯುವುವು. ಕಾಲಿಫೋರ್ನಿಯ, ಬ್ರಿಟಿಷ್ ಕೊಲಂಬಿಯ, ಅಲಾಸ್ಕಗಳಲ್ಲಿ ಚಿನ್ನವು ವಿಶೇಷವಾಗಿ ದೊರೆಯುವುದು. ಬ್ರಿಟಿಷ್ ಕೊಲಂಬಿಯ, ಕಾಲಿಫೋರ್ನಿ ಯಗಳಿಗೆ ಮಧ್ಯದಲ್ಲಿರುವ ಪ್ರದೇಶದಲ್ಲಿಯೂ, ಸುಪೀರಿಯರ್ ಸರೋವರದ ಬಳಿಯಲ್ಲಿಯೂ ಬೆಳ್ಳಿಯು ಹೆಚ್ಚಾಗಿ ದೊರೆಯುವುದು.

ಮೆಕ್ಸಿಕೋ ದೇಶದಲ್ಲಿ ಚಿನ್ನ, ಬೆಳ್ಳಿ, ಕಬ್ಬಿಣ ದೊರೆಯುವುವು. ಆದರೆ ಕಲ್ಲಿದ್ದಲು ದೊರೆಯುವುದು ಕಡಿಮೆ. ಈ ದೇಶದಲ್ಲಿ ಅಗ್ನಿಪರ್ವತಗಳ ಪ್ರದೇಶ ದಲ್ಲಿ ಗಂಧಕವು ದೊರೆಯುವುದು.

ಈರಿ ಸರೋವರದ ಉತ್ತರ ದಕ್ಷಿಣ ತೀರಗಳಲ್ಲೂ, ಪೆನ್‌ಸಿಲ್ವೇನಿಯಾ ಸಂಸ್ಥಾನದಲ್ಲೂ ಸೀಮೆಯೆಣ್ಣೆಯ ಬಾವಿಗಳಿರುವುವು. ರಫ್ತಿಗಾಗಿ ರೇವು ಪಟ್ಟಣಗಳಿಗೆ ಎಣ್ಣೆಯನ್ನು ಸಾಗಿಸಲು ನೆಲದಲ್ಲಿ ಕೊಳವಿಗಳನ್ನು ಹಾಕಿರುವರು. ಈ ಕೊಳವಿಗಳ ಒಟ್ಟು ಉದ್ದವು ಸುಮಾರು 25,000 ಮೈಲಿಗಳಷ್ಟು ಅಥವಾ ಭೂಮಂಡಲವನ್ನು ಒಂದು ಸುತ್ತುಹಾಕಿದಷ್ಟು ಇರುವುದು. ಸಂಯುಕ್ತ ಸಂಸ್ಥಾನಗಳಿಂದ ರಫ್ತಾಗುವಷ್ಟು ಎಣ್ಣೆಯು ಇನ್ನಾವ ದೇಶದಿಂದಲೂ ರಫ್ತಾಗುವುದಿಲ್ಲ. ಈ ವ್ಯಾಪಾರದಲ್ಲಿ ಇದಕ್ಕೆ ಎರಡನೆಯ ದೇಶವಾದ ರಷ್ಯವು ಈ ದೇಶದಿಂದ ರಫ್ತಾಗುವ ಎಣ್ಣೆಯ ಅರ್ಧಭಾಗದಷ್ಟನ್ನು ಮಾತ್ರ ರಫ್ತು ಮಾಡುವುದು.

ಮಹಾಸರೋವರಗಳ ಬಳಿ ತಾಮ್ರ, ನಿಕ್ಕಲ್‌ಗಳೂ, ಪಶ್ಚಿಮಭಾಗದ ಪ್ರಸ್ಥಭೂಮಿಯಲ್ಲಿ ತಾಮ್ರ, ಸೀಸಗಳೂ ದೊರೆಯುವುವು.

**ಮಾರ್ಗಗಳು.**—ಈ ಖಂಡದಲ್ಲಿ ಜಲಮಾರ್ಗಗಳ ಸೌಕರ್ಯವು ಎಷ್ಟು ಹೆಚ್ಚಾಗಿರುವುದೆಂಬುದನ್ನು ಹಿಂದೆ ತೀರಲಕ್ಷಣವನ್ನೂ, ನದಿಗಳನ್ನೂ ವಿವರಿಸುವಾಗ ಸೂಚಿಸಿದೆ. ಹಡಗುಗಳ ಸಂಚಾರಕ್ಕೆ ಉಪಯೋಗವಾದ ಒಳಭಾಗದ ಸಮುದ್ರಗಳೂ, ಉತ್ತಮವಾದ ಬಂದರುಗಳೂ, ನದಿಗಳೂ, ನದಿಗಳ ಕಾಲುವೆಗಳೂ ಅಸಂಖ್ಯಾಕವಾಗಿವೆ. ಈ ಖಂಡದ ಮೈದಾನ ಭಾಗದಲ್ಲಿ ಸೆಂಟ್‌ಲಾರೆನ್ಸ್ ಮುಖದಿಂದ ಮಿಸ್ಸಿಸ್ಸಿಪಿ ನದಿಯ ಮುಖದವರೆಗೂ ನೀರಿನ ಮೇಲೆಯೇ ಸಂಚರಿಸಬಹುದು. ಉಪನದಿಗಳೂ, ನದಿಗಳ ಕಾಲುವೆಗಳೂ ಈ ಪ್ರದೇಶದ ಅನೇಕ ಮುಖ್ಯ ಪಟ್ಟಣಗಳನ್ನು ಸಂಬಂಧಿಸಿರುವುವು.

ಈಚೆಗೆ ಪೆನಾಮ ಭೂಸಂಧಿಯಲ್ಲಿ ಹಡಗುಗಳ ಸಂಚಾರಕ್ಕೆ ಅನುಕೂಲವಾದ ಸಮುದ್ರದ ಕಾಲುವೆಯನ್ನು ಸಂಯುಕ್ತ ಸಂಸ್ಥಾನದವರು ಮಾಡಿರುವರು. ಈ ಕಾಲುವೆಯ ಕೊನೆಗಳಲ್ಲಿ ಪೆನಾಮ, ಅಸ್ಪಿನ್‌ವಾಲ್ ಪಟ್ಟಣಗಳಿರುವುವು. ಇದರ ಉದ್ದವು 49 ಮೈಲಿಗಳು. ಈ ಕಾಲುವೆಯನ್ನು ಮಾಡಲು ಸುಮಾರು 120 ಕೋಟಿ ರೂಪಾಯಿಗಳು ಖರ್ಚಾಯಿತು. ಯೂರೋಪಿನಿಂದ ಉತ್ತರ ದಕ್ಷಿಣ ಅಮೆರಿಕ ಖಂಡಗಳ ಪಶ್ಚಿಮತೀರದ ರೇವುಪಟ್ಟಣಗಳಿಗೂ, ಆಸ್ಟ್ರೇಲಿಯ, ಚೀನಾ, ಜಪಾನ್‌ಗಳಿಗೂ ಹೋಗುವ ಹಡಗುಗಳು ಈ ಕಾಲುವೆಯನ್ನು ತೋಡುವುದಕ್ಕೆ ಮೊದಲು ದಕ್ಷಿಣ ಅಮೆರಿಕವನ್ನು ಸುತ್ತಿಕೊಂಡು ಹಾರನ್ ಭೂಶಿರದ ಮಾರ್ಗವಾಗಿ ಹೋಗಬೇಕಾಗಿತ್ತು. ಈಗ ಈ ಪ್ರಯಾಣದಲ್ಲಿ ಸುಮಾರು 6,000 ಮೈಲಿಗಳ ದೂರವು ಕಡಿಮೆಯಾಗಿದೆ. ಆದುದರಿಂದ ಈ ಕಾಲುವೆಯ ಮಾರ್ಗವಾಗಿ ಸಂಚರಿಸುವ ವ್ಯಾಪಾರದ ಹಡಗುಗಳ ಸಂಖ್ಯೆಯು ವರ್ಷೇ ವರ್ಷೇ ಹೆಚ್ಚುತ್ತಲಿರುವುದು.

ರೈಲುಮಾರ್ಗಗಳೂ ಈ ಖಂಡದಲ್ಲಿ ವಿಶೇಷವಾಗಿರುವುವು. ಪೂರ್ವ ಪಶ್ಚಿಮ ರೇವುಪಟ್ಟಣಗಳನ್ನು ಸಂಬಂಧಿಸುವ ಬಹಳ ಉದ್ದವಾದ ಮಾರ್ಗಗಳು ಇವುಗಳಲ್ಲಿ ಮುಖ್ಯವಾದುವು. ಒಂದು ಮಾರ್ಗವು (ಕೆನೆಡಿಯನ್ ಪೆಸಿಫಿಕ್ ರೈಲ್ವೆ) ಮಾಂಟ್ರಿಯಲ್ ಪಟ್ಟಣದಿಂದ ಹೊರಟು ವಾನ್‌ಕುವರ್ ಪಟ್ಟಣಕ್ಕೆ ಹೋಗುವುದು. ಇದರ ಉದ್ದವು 3,000 ಮೈಲಿಗಳು. ಈ ರೈಲುಗಾಡಿಗಳಲ್ಲಿ ಸೈಬೀರಿಯಾ ರೈಲುಗಾಡಿಗಳಲ್ಲಿನಂತೆಯೇ ಊಟಕ್ಕೂ ನಿದ್ದೆಗೂ ಎಲ್ಲಾ ತರಗತಿಗಳ ಪ್ರಯಾಣಿಕರಿಗೂ ಅನುಕೂಲವಿರುವುದು. ಇಂಗ್ಲೆಂಡಿನಿಂದ ನ್ಯೂಜೀಲೆಂಡಿಗೂ, ಚೀಣಾಕ್ಕೂ ಹೋಗುವ ಪ್ರಯಾಣಿಕರು ಈ ಮಾರ್ಗದಲ್ಲಿ ಹೋಗುವುದು ಹೆಚ್ಚು. ಹೀಗೆಯೇ ಪೋರ್ಟ್ಲೆಂಡಿನಿಂದ ಚಿಕಾಗೊ ಪಟ್ಟಣಕ್ಕೂ, ಅಲ್ಲಿಂದ ಪಶ್ಚಿಮ ತೀರದಲ್ಲಿರುವ ಸಾನ್‌ಫ್ರಾನ್‌ಸಿಸ್ಕೊ ಪಟ್ಟಣಕ್ಕೂ ಮಾರ್ಗವಿರುವುದು. ದಕ್ಷಿಣದಲ್ಲಿ ನ್ಯೂಆರ್ಲಿಯನ್‌ಸಿನಿಂದ ಸಾನ್‌ಫ್ರಾನ್‌ಸಿಸ್ಕೊವಿಗೆ ಮಾರ್ಗವಿರುವುದು. ನ್ಯೂಯಾರ್ಕ್, ನ್ಯೂಆರ್ಲಿಯನ್ಸ್, ಚಿಕಾಗೊ, ಸಾನ್‌ಫ್ರಾನ್‌ಸಿಸ್ಕೊ ಪಟ್ಟಣಗಳು ಅನೇಕ ರೈಲು ಮಾರ್ಗಗಳು ಸಂಧಿಸುವ ಪಟ್ಟಣಗಳಾಗಿವೆ.

ಕ್ವಿಬೆಕ್, ನ್ಯೂಯಾರ್ಕ್, ಅಸ್ಪಿನ್‌ವಾಲ್ ಮೊದಲಾದ ಪೂರ್ವತೀರದ ರೇವುಪಟ್ಟಣಗಳಿಂದ ಇಂಗ್ಲೆಂಡಿಗೆ ಜಹಜುಗಳು ಸಂಚರಿಸುತ್ತಲೇ ಇರುವುವು. ಪಶ್ಚಿಮತೀರದಲ್ಲಿರುವ ಸಾನ್‌ಫ್ರಾನ್‌ಸಿಸ್ಕೊ, ವಾನ್‌ಕುವರ್ ರೇವುಪಟ್ಟಣಗಳಿಂದ ನ್ಯೂಜೀಲೆಂಡ್, ಆಸ್ಟ್ರೇಲಿಯ, ಚೀಣಾ, ಜಪಾನ್‌ಗಳಿಗೆ ಹಡಗುಗಳು ಹೋಗುವುವು. ನ್ಯೂಯಾರ್ಕ್‌ನಿಂದ ಲಿವರ್‌ಪೂಲಿಗೆ 3,500 ಮೈಲಿಗಳು, ವಾನ್‌ಕುವರಿನಿಂದ ಆಕ್ಲೆಂಡಿಗೆ ಸುಮಾರು 6,000 ಮೈಲಿಗಳು.

**ಜನಗಳು.**—ಜನಸಾಂದ್ರತೆಯ ಭೂಪಟವನ್ನು ನೋಡಿ. ಕೈಗಾರಿಕೆ, ವ್ಯಾಪಾರಗಳು ಹೆಚ್ಚಾಗಿ ನಡೆಯುವ ಅತ್ಯಂತ ಪೂರ್ವಭಾಗದ ಪ್ರದೇಶಗಳಲ್ಲಿಯೂ, ಸೆಂಟ್‌ಜಾನ್ಸ್, ಚಿಕಾಗೊ, ಸಾನ್‌ಫ್ರಾನ್‌ಸಿಸ್ಕೊ; ಮೆಕ್ಸಿಕೊ ಪಟ್ಟಣಗಳ ಬಳಿಯಲ್ಲಿಯೂ, ಜಮೇಕ ದ್ವೀಪದಲ್ಲಿಯೂ ಜನಸಾಂದ್ರತೆಯು 1 ಚದರ ಮೈಲಿಗೆ 64ಕ್ಕೆ ಹೆಚ್ಚಾಗಿರುವುದು. ವ್ಯವಸಾಯವೇ ಮುಖ್ಯ ಉದ್ಯೋಗವಾಗಿರುವ ಸಂಯುಕ್ತ ಸಂಸ್ಥಾನಗಳ ಪೂರ್ವಾರ್ಧ ಭಾಗದಲ್ಲಿ ಜನಸಾಂದ್ರತೆಯು ಸುಮಾರಾಗಿರುವುದು. ಬೇಟೆ, ಮರಕಡಿಯುವುದು ಅಥವಾ ಪಶುಪಾಲನೆಯೇ ಜನರಿಗೆ ಮುಖ್ಯವಾದ ಉದ್ಯೋಗವಾಗಿರುವ ಈ ಖಂಡದ ಉತ್ತರ ಪಶ್ಚಿಮ ಭಾಗಗಳಲ್ಲಿ ಜನಸಾಂದ್ರತೆಯು ಬಹಳ ಕಡಿಮೆಯಾಗಿರುವುದು.

ಈ ಖಂಡದಲ್ಲಿ 11 ಕೋಟಿ ಜನರು ವಾಸವಾಗಿರುವರು. ಇವರ ಪೈಕಿ 6 ಕೋಟಿ ಜನರು ಯೂರೊಪ್ ಖಂಡದಿಂದ ಇಲ್ಲಿಗೆ ಬಂದು ನೆಲೆಸಿರುವ ಬಿಳಿಯ

ಜನರು. ಕನಡಾ, ಸಂಯುಕ್ತ ಸಂಸ್ಥಾನಗಳಲ್ಲಿ ಬ್ರಿಟಿಷರೂ, ಜರ್ಮನರೂ, ಫ್ರೆಂಚರೂ ಹೆಚ್ಚಾಗಿರುವರು. ಮೆಕ್ಸಿಕೋ, ಮಧ್ಯ ಅಮೆರಿಕಗಳಲ್ಲಿ ಸ್ಪಾನಿಷ್ ಜನರೇ ಬಹಳ ಹೆಚ್ಚಾಗಿರುವರು. ಈ ಖಂಡದ ಪೂರ್ವನಿವಾಸಿಗಳಾದ ರೆಡ್ ಇಂಡಿಯನ್ ಜನರೂ, ಆಫ್ರಿಕದಿಂದ ಹಿಂದಿನ ಕಾಲದಲ್ಲಿ ಗುಲಾಮರಾಗಿ ತರಲ್ಪಟ್ಟ ನೀಗ್ರೋ ಜನರೂ, ಇವರ ಮತ್ತು ಬಿಳಿಯ ಜನರ ಸಂಕರದಿಂದ ಉತ್ಪತ್ತಿಯಾದ ಮಿಶ್ರಜಾತಿಯ ಜನರೂ ಉಳಿದ 5 ಕೋಟಿ ಜನರಾಗಿರುವರು. ಸಂಯುಕ್ತ ಸಂಸ್ಥಾನಗಳಲ್ಲಿ ನೀಗ್ರೋ ಜನರು ಹೆಚ್ಚು. ಮೆಕ್ಸಿಕೊ, ಮಧ್ಯ ಅಮೆರಿಕಗಳಲ್ಲಿ ರೆಡ್ ಇಂಡಿಯನ್ನರೂ ಮಿಶ್ರಜಾತಿಯುವರೂ ಹೆಚ್ಚು.

ರೆಡ್ ಇಂಡಿಯನ್ನರು ಅನೇಕ ದೇವರುಗಳನ್ನು ಪೂಜಿಸುವ ಚೈತನ್ಯ ಪೂಜಕರಾಗಿರುವರು. ಉಳಿದವರೆಲ್ಲರೂ ಕ್ರೈಸ್ತರಾಗಿರುವರು.

**ರಾಜಕೀಯ ವಿಭಾಗಗಳು.**—ಈ ಖಂಡವನ್ನು ಐದು ವಿಭಾಗಗಳಾಗಿ ವಿಂಗಡಿಸಬಹುದು. ಅವು ಯಾವುವೆಂದರೆ:—

(1) ಬ್ರಿಟಿಷರಿಗೆ ಸೇರಿರುವ ಉತ್ತರ ಅಮೆರಿಕ (ಅಥವಾ ಕನಡಾ ರಾಜ್ಯ ಮತ್ತು ನ್ಯೂಫೌಂಡ್ಲೆಂಡ್).

(2) ಸಂಯುಕ್ತ ಸಂಸ್ಥಾನಗಳು.

(3) ಮೆಕ್ಸಿಕೊ.

(4) ಮಧ್ಯ ಅಮೆರಿಕದಲ್ಲಿರುವ ಗ್ವಾಟಿಮಾಲ ಮೊದಲಾದ ಸಣ್ಣ ಸಣ್ಣ ಸಂಸ್ಥಾನಗಳು.

[ಷರಾ.—2, 3, 4 ಇವು ಪ್ರಜಾಪ್ರತಿನಿಧಿ ಪ್ರಭುತ್ವವನ್ನು ಹೊಂದಿರುವ ಸ್ವತಂತ್ರ ರಾಜ್ಯಗಳಾಗಿವೆ.]

(5) ವೆಸ್ಟ್ಇಂಡಿಯಾ ದ್ವೀಪಗಳು. ಇವುಗಳು ಗ್ರೇಟ್ ಬ್ರಿಟನ್, ಫ್ರಾನ್ಸ್, ಸಂಯುಕ್ತ ಸಂಸ್ಥಾನಗಳು ಮೊದಲಾದ ಇತರ ದೇಶಗಳಿಗೆ ಅಧೀನವಾಗಿವೆ.

ಈ ರಾಜಕೀಯ ವಿಭಾಗಗಳ ತೀರಲಕ್ಷಣ ಮೊದಲಾದ ವಿಷಯಗಳು ಈ ಖಂಡದ ಸಾಮಾನ್ಯ ವಿವರಣೆಯಿಂದಲೇ ತಿಳಿಯಬರುವುವು. ಕೆಲವು ವಿಶೇಷ ವಿಷಯಗಳನ್ನೂ, ಮುಖ್ಯ ಪಟ್ಟಣಗಳನ್ನೂ ಕೆಳಗೆ ವಿವರಿಸಿದೆ.

## ಬ್ರಿಟಿಷ್ ಉತ್ತರ ಅಮೆರಿಕ

ಆಂಟೇರಿಯೋ, ನೋವಸ್ಕೋಷಿಯ, ಬ್ರಿಟಿಷ್ ಕೊಲಂಬಿಯ ಮೊದಲಾದ ಎಂಟು ಸಂಸ್ಥಾನಗಳು ಒಟ್ಟುಗೂಡಿ ಬ್ರಿಟಿಷ್ ಉತ್ತರ ಅಮೆರಿಕ ಅಥವಾ ಕನಡಾ ರಾಜ್ಯ ಮತ್ತು ನ್ಯೂಫೌಂಡ್ಲೆಂಡ್ ಎನ್ನಿಸಿಕೊಂಡಿವೆ. ಈ ಪ್ರತಿಯೊಂದು

ಸಂಸ್ಥಾನವೂ ಪ್ರಜಾಪ್ರತಿನಿಧಿ ಪ್ರಭುತ್ವವನ್ನು ಹೊಂದಿದೆ. ಈ ಸಂಸ್ಥಾನಗಳೆಲ್ಲವೂ ಒಟ್ಟುಗೂಡಿ ಒಂದು ಸಂಯುಕ್ತ ಪ್ರಭುತ್ವವಾಗಿರುವುದು. ಬ್ರಿಟಿಷ್ ಉತ್ತರ ಅಮೆರಿಕವು ಬ್ರಿಟಿಷ್ ಚಕ್ರಾಧಿಪತ್ಯದ ಒಂದು ಭಾಗವಾಗಿ ಬ್ರಿಟಿಷರಿಗೆ ಅಧೀನವಾಗಿರುವ ಒಂದು ರಾಷ್ಟ್ರವಾಗಿದೆ.

ಈ ದೇಶದ ವಿಸ್ತೀರ್ಣವು ಇಂಡಿಯಾದೇಶದ ಎರಡರಷ್ಟು ಇದ್ದರೂ ಜನಸಂಖ್ಯೆಯು ಮೈಸೂರು ಸೀಮೆಯಷ್ಟು ಮಾತ್ರವಿರುವುದು. ಇದಕ್ಕೆ ಈ ದೇಶದ ವಾಯುಗುಣವು ಹೇಗೆ ಮುಖ್ಯ ಕಾರಣವಾಗಿರುವುದೆಂಬುದನ್ನು ಯೋಚಿಸಿ ನೋಡಿ. ಆದರೆ ತೀರಲಕ್ಷಣ, ಕಾಡುಗಳು, ಖನಿಜಗಳು, ನದಿಗಳು ಮತ್ತು ಸರೋವರಗಳು ಈ ದೇಶದ ಅಭಿವೃದ್ಧಿಗೆ ಬಹುಮಟ್ಟಿಗೆ ಸಹಾಯಕವಾಗಿರುವುವು. ಆದುದರಿಂದ ಕಾಲಕ್ರಮೇಣ ಜನಸಂಖ್ಯೆಯೂ, ಐಶ್ವರ್ಯವೂ ತಕ್ಕ ಮಟ್ಟಿಗೆ ಹೆಚ್ಚುವುದು.

ಈ ದೇಶದಿಂದ ತೊಲೆಗಳು, ದನಗಳು, ಗೋಧಿ, ಗಿಣ್ಣು, ಪಿಾಸುಗಳು ಮತ್ತು ಚಿನ್ನ ರಫ್ತಾಗುತ್ತಿರುವುವು. ಈ ದೇಶಕ್ಕೆ ಕಬ್ಬಿಣದ ಸಾಮಾನುಗಳು, ಹತ್ತಿಯ ಮತ್ತು ಉಣ್ಣೆಯ ಬಟ್ಟೆಗಳು, ಕಲ್ಲಿದ್ದಲು, ಸಕ್ಕರೆ ಮತ್ತು ಟೀಯೆಲೆ ಆಮದಾಗುವುವು. ಈ ದೇಶದ ಲಕ್ಷಣವನ್ನೂ, ಸಸ್ಯ, ಪ್ರಾಣಿ, ಖನಿಜಗಳನ್ನೂ ನೆನೆಸಿಕೊಂಡರೆ ರಫ್ತುಗಳಾವುವೆಂಬುದು ನಮಗೆ ತೋರಿಬರುವುದು. ಕೈಗಾರಿಕೆಯ ಸಾಮಾನುಗಳೂ, ಈ ದೇಶದಲ್ಲಿ ದೊರೆಯದ ಆಹಾರ ಸಾಮಗ್ರಿಗಳೂ ಆಮದಾಗುವುವು. ಈ ದೇಶದ ವ್ಯಾಪಾರವು ಮುಖ್ಯವಾಗಿ ಮಾಂಟ್ರಿಯಲ್, ಟೊರಾಂಟೊ, ಹಾಲಿಫಾಕ್ಸ್, ವಾನ್‌ಕುವರ್ ಎಂಬ ರೇವುಪಟ್ಟಣಗಳ ಮೂಲಕ ನಡೆಯುವುದು.

ಸೆಂಟ್‌ಲಾರೆನ್ಸ್ ಮುಖದಿಂದ **ಮಾಂಟ್ರಿಯಲ್**‌ವರೆಗೂ, ಎಂದರೆ ಸುಮಾರು 1,000 ಮೈಲಿಗಳಷ್ಟು ದೂರ ಭಾರಿ ಹಡಗುಗಳು ಬರುವುವು. ಆದರೆ ಇದರ ಬಂದರು ವರ್ಷದಲ್ಲಿ ನಾಲ್ಕೈದು ತಿಂಗಳು ಗಡ್ಡೆಕಟ್ಟಿರುವುದರಿಂದ ಆ ಕಾಲದಲ್ಲಿ ಹಡಗುಗಳು ನೋವಸ್ಕೋಷಿಯದಲ್ಲಿರುವ ಹಾಲಿಫಾಕ್ಸಿನಲ್ಲಿ ನಿಲ್ಲುವುವು. ಮಾಂಟ್ರಿಯಲ್ ಪಟ್ಟಣವು ಸೆಂಟ್‌ಲಾರೆನ್ಸ್ ನದಿಯ ಮಧ್ಯೆ ಇರುವ ಒಂದು ದ್ವೀಪದ ಮೇಲೆ ಕಟ್ಟಲ್ಪಟ್ಟಿದೆ. ಇಲ್ಲಿ ಸುಮಾರು 3 ಲಕ್ಷ ಜನರು ವಾಸಮಾಡುವರು. ಇದೇ ಈ ದೇಶದಲ್ಲೆಲ್ಲಾ ದೊಡ್ಡ ಪಟ್ಟಣವು. **ವಾನ್‌ಕುವರ್** ರೇವುಪಟ್ಟಣದಿಂದ ಚೀಣಾ, ಜಪಾನ್‌ಗಳೊಡನೆ ವ್ಯಾಪಾರವು ನಡೆಯುವುದು. ಒಳಭಾಗದಲ್ಲಿ ಮಾಂಟ್ರಿಯಲ್‌ನಿಂದ ಇಲ್ಲಿಗೆ ರೈಲುಮಾರ್ಗವಿರುವುದು.

ವಾನ್‌ಕುವರ್ ಬಳಿ ಇರುವ **ಎಸ್ಕ್ವಿಮಾಲ್ಟ್** ರೇವುಪಟ್ಟಣವೂ, **ಹಾಲಿಫಾಕ್ಸ್** ರೇವುಪಟ್ಟಣವೂ ಬ್ರಿಟಿಷರ ನೌಕಾಸ್ಥಳಗಳಾಗಿಯೂ ಪ್ರಸಿದ್ಧಿಹೊಂದಿವೆ.

**ಒಟ್ಟೇವ** ಎಂಬ ನದಿಯು ದಡದಲ್ಲಿರುವ **ಒಟ್ಟೇವ** ಎಂಬ ಸಣ್ಣ ಪಟ್ಟಣವು ಈ ದೇಶಕ್ಕೆ ರಾಜಧಾನಿಯಾಗಿದೆ. ಇಲ್ಲಿ ಗೌರ್ನರ್ ಜನರಲ್‌ರವರು ವಾಸಮಾಡು. ವರು. ಪಾರ್ಲಿಮೆಂಟೆಂಬ ಮಂತ್ರಾಲೋಚನಾಸಭೆಯು ಇಲ್ಲಿ ಸೇರುವುದು. ಈ ಪಟ್ಟಣವು ತೊಲೆಗಳ ವ್ಯಾಪಾರಕ್ಕೆ ಪ್ರಸಿದ್ಧವಾಗಿದೆ. ಇದರ ಸನ್ನಿವೇಶವನ್ನೂ, ಜಲಮಾರ್ಗಗಳನ್ನೂ ಭೂಪಟದಲ್ಲಿ ನೋಡಿ.

**ಸೆಂಟ್ ಜಾರ್ಜಸ್.**—ಈ ರೇವುಪಟ್ಟಣವು ನ್ಯೂಫೌಂಡ್ಲೆಂಡಿಗೆ ರಾಜಧಾನಿ ಯಾಗಿದೆ. ಇದು ಮೀನುಗಳ ವ್ಯಾಪಾರಕ್ಕೆ ಬಹು ಪ್ರಸಿದ್ಧಿಯಾಗಿದೆ. ತೊಲೆಗಳ ವ್ಯಾಪಾರವೂ ನಡೆಯುವುದು.

ಬರ್ಮುಡಾ ದ್ವೀಪಗಳು ಬ್ರಿಟಿಷ್ ಉತ್ತರ ಅಮೆರಿಕಕ್ಕೆ ಸೇರಿವೆ. ಇಲ್ಲಿ ಸುಮಾರು 360 ಬಹು ಸಣ್ಣಸಣ್ಣ ದ್ವೀಪಗಳಿವೆ. ಇವುಗಳಲ್ಲಿ 20ರಲ್ಲಿ ಮಾತ್ರ ಒಟ್ಟು ಸುಮಾರು 20,000 ಜನರು ವಾಸಿಸುತ್ತಿರುವರು. ಇಲ್ಲಿನ ಹವ ಬೇಸಗೆ ಯಲ್ಲಿ ಹಿತಕರವಾಗಿರುವುದರಿಂದಲೂ, ಪ್ರಕೃತಿಯು ನೋಟಕ್ಕೆ ರಮಣೀಯ. ವಾಗಿರುವುದರಿಂದಲೂ ಬೇಸಗೆಯಲ್ಲಿ ಇಲ್ಲಿಗೆ ಅಮೆರಿಕ ಖಂಡದ ಭಾಗದಿಂದ ಸಾವಿರಾರು ಜನರು ಬಂದು ಹೋಗುವರು. ಉತ್ತರದಲ್ಲಿ ಗ್ರೀನ್‌ಲೆಂಡ್ ದ್ವೀಪ ವಿನಾ ಉಳಿದ ದ್ವೀಪಗಳು ಈ ದೇಶಕ್ಕೆ ಸೇರಿವೆ. ಈ ದ್ವೀಪಗಳೆಲ್ಲವೂ ಬಹು ಶೀತ ವಾಗಿರುವುದರಿಂದ ಸಾಮಾನ್ಯವಾಗಿ ಜನರಹಿತವಾಗಿವೆ. ಗ್ರೀನ್ಲೆಂಡ್ ದ್ವೀಪವು ವಿಸ್ತೀರ್ಣದಲ್ಲಿ ಆಸ್ಟ್ರೇಲಿಯಾಕ್ಕೆ ಎರಡನೆಯದಾದರೂ ಅಲ್ಲಿ ಕೆಲವು ಸಾವಿರ ಜನರು ಮಾತ್ರ ವಾಸಮಾಡುವರು. ಅಲ್ಲಿನ ಪೂರ್ವನಿವಾಸಿಗಳಿಗೆ ಯೆಸ್ಕಿಮೊ ಗಳೆಂದು ಹೆಸರು. ಅವರು ಮುಖ್ಯವಾಗಿ ಮೀನು ಹಿಡಿಯುವುದರಿಂದ ಜೀವಿಸು. ವರು. ಈ ದ್ವೀಪವು ಡೇನರಿಗೆ ಸೇರಿದೆ. ಆದುದರಿಂದ ಕೆಲವು ಡೇನರೂ ವಾಸ ವಾಗಿರುವರು. ಪಶ್ಚಿಮತೀರದಲ್ಲಿರುವ **ಅಪ್ಪರ್ ನಾವಿಕ್** ಎಂಬ ಸಣ್ಣ ಪಟ್ಟಣವು ಪ್ರಪಂಚದಲ್ಲಿರುವ ಪಟ್ಟಣಗಳಲ್ಲೆಲ್ಲಾ ಅತ್ಯಂತ ಉತ್ತರದಲ್ಲಿರುವುದು.

## ಸಂಯುಕ್ತ ಸಂಸ್ಥಾನಗಳು

ಈ ದೇಶವು ಮೆಕ್ಸಿಕೊ ದೇಶಕ್ಕೂ ಬ್ರಿಟಿಷ್ ಉತ್ತರ ಅಮೆರಿಕಕ್ಕೂ ಮಧ್ಯದಲ್ಲಿರುವ ಭಾಗವನ್ನೆಲ್ಲವನ್ನೂ ಒಳಗೊಂಡಿದೆ. ಈ ದೇಶವು ಇದರ ಹೆಸರು ಸೂಚಿಸುವಂತೆ ಅನೇಕ ಸಂಸ್ಥಾನಗಳನ್ನೊಳಗೊಂಡಿರುವ ಸಂಯುಕ್ತ ಪ್ರಭುತ್ವ ವಾಗಿರುವುದು. ಒಟ್ಟಿನಲ್ಲಿ ಕಾಂಗ್ರೆಸ್ ಎಂದು ಕರೆಯಲ್ಪಡುವ ಎರಡು ಪ್ರಜಾ ಪ್ರತಿನಿಧಿ ಸಭೆಗಳೂ, ನಾಲ್ಕು ವರ್ಷಗಳಿಗೊಂದಾವೃತ್ತಿ ಚುನಾಯಿಸಲ್ಪಡುವ ಪ್ರೆಸಿಡೆಂಟ್ ಎಂಬ ಅಧಿಕಾರಿಯೂ ರಾಜ್ಯಭಾರವನ್ನು ನಡೆಸುವರು. ಅಂದರೆ,

ಇಲ್ಲಿ ಪ್ರಜಾಪ್ರತಿನಿಧಿ ಪ್ರಭುತ್ವವು ನೆಲೆಗೊಂಡಿರುವುದು. ಈ ದೇಶಕ್ಕೆ ಸೇರಿದ 45 ಸಂಸ್ಥಾನಗಳಲ್ಲಿಯೂ ಪ್ರಜಾಪ್ರತಿನಿಧಿ ಪ್ರಭುತ್ವಗಳಿರುವುವು.

ಅಲಾಸ್ಕ ಪರ್ಯಾಯದ್ವೀಪವು ಈ ದೇಶಕ್ಕೆ ಅಧೀನವಾಗಿರುವುದು. ಅಲಾಸ್ಕವನ್ನು ಸೇರಿಸಿದರೆ ಈ ದೇಶದ ವಿಸ್ತಾರವು ಬ್ರಿಟಿಷ್ ಉತ್ತರ ಅಮೆರಿಕದಷ್ಟು, ಎಂದರೆ 35 ಲಕ್ಷ ಚದರಮೈಲಿಗಳಷ್ಟು ಇರುವುದು. ಆದರೆ ಈ ದೇಶದ ಮಧ್ಯಭಾಗವೆಲ್ಲವೂ ಮೈದಾನವಾಗಿರುವುದರಿಂದಲೂ, ಪೂರ್ವಭಾಗದ ತಗ್ಗಾದ ಪ್ರಸ್ಥಭೂಮಿಯು ವಿಶೇಷ ಖನಿಜ ಸಂಪತ್ತಿಯುಳ್ಳುದಾಗಿರುವುದರಿಂದಲೂ, ಮೈದಾನ ಪ್ರದೇಶದಲ್ಲಿ ನದಿಗಳು ಹೇರಳವಾಗಿರುವುದರಿಂದಲೂ, ವಾಯುಗುಣವು ಕನಡಾದಲ್ಲಿನಷ್ಟು ಶೀತವಾಗಿಲ್ಲವಾದುದರಿಂದಲೂ, ಸಂಯುಕ್ತ ಸಂಸ್ಥಾನಗಳು ಬ್ರಿಟಿಷ್ ಉತ್ತರ ಅಮೆರಿಕವನ್ನು ಬೆಳೆ, ಕೈಗಾರಿಕೆ, ವ್ಯಾಪಾರ, ಜನಸಂಖ್ಯೆ, ಐಶ್ವರ್ಯಗಳಲ್ಲಿ ಸಂಪೂರ್ಣವಾಗಿ ಮೀರಿಸಿರುವುವು. ಈ ದೇಶದ ನದಿಗಳು, ಬೆಳೆಗಳು, ಖನಿಜಗಳು ಮೊದಲಾದುವನ್ನು ಈ ಖಂಡದ ಸಾಮಾನ್ಯ ವಿವರಣೆಯಿಂದ ಜ್ಞಾಪಿಸಿಕೊಳ್ಳಬೇಕು.

ಈ ದೇಶದ ಈಶಾನ್ಯಭಾಗದಲ್ಲಿ ಕೈಗಾರಿಕೆಗಳು ವಿಶೇಷವಾಗಿ ನಡೆಯುವುವು. ಅಲ್ಲಿ ಕಬ್ಬಿಣ ಕಲ್ಲಿದ್ದಲುಗಳು ಸಿಕ್ಕುವುದಲ್ಲದೆ, ನದಿಗಳಿಂದ ನೀರಿನ ಶಕ್ತಿ ವಿದ್ಯುಚ್ಛಕ್ತಿಗಳೂ ದೊರೆಯುವುವು. ಗೋಧಿಯ ಹಿಟ್ಟನ್ನು ತಯಾರುಮಾಡುವುದೂ ಮಾಂಸವನ್ನು ಹದಮಾಡಿ ಪ್ಯಾಕ್‌ಮಾಡುವುದೂ, ಕಬ್ಬಿಣದ ಸಾಮಾನುಗಳು, ಯಂತ್ರಗಳು, ಹತ್ತಿಯ ಮತ್ತು ಉಣ್ಣೆಯ ಬಟ್ಟೆಗಳು, ತೊಗಲಿನ ಸಾಮಾನು, ಮರದ ಸಾಮಾನು ಇವುಗಳನ್ನು ಮಾಡುವುದೂ ಮುಖ್ಯವಾದ ಕೈಗಾರಿಕೆಗಳಾಗಿವೆ.

ಈ ದೇಶದಿಂದ ಹತ್ತಿ, ಆಹಾರ ಸಾಮಗ್ರಿಗಳು, ಕಬ್ಬಿಣದ ಸಾಮಾನುಗಳು, ಯಂತ್ರಗಳು, ಸೀಮೆಯೆಣ್ಣೆ, ಮರದ ಸಾಮಾನು ಮತ್ತು ಹೊಗೆಯ ಸೊಪ್ಪು ರಫ್ತಾಗುವುವು. ಇಲ್ಲಿಗೆ ಇತರ ದೇಶಗಳಿಂದ ಸಕ್ಕರೆ, ಕಾಫಿ, ದ್ರಾವಕಗಳು, ಚಕ್ಕಳ ಮೊದಲಾದುವು ಆಮದಾಗುವುವು. ಈ ದೇಶದ ವ್ಯಾಪಾರವು ಮುಖ್ಯವಾಗಿ ಬ್ರಿಟಿಷ್ ದ್ವೀಪಗಳೊಡನೆ ನಡೆಯುವುದು; ಆದರೆ ಪ್ರಪಂಚದ ಇತರ ಎಲ್ಲಾ ದೇಶಗಳೊಡನೆಯೂ ತಕ್ಕಮಟ್ಟಿಗೆ ವ್ಯಾಪಾರವು ನಡೆಯುತ್ತಿರುವುದು.

ಈ ದೇಶವು ಒಟ್ಟು ವ್ಯಾಪಾರದಲ್ಲಿಯೂ ವ್ಯಾಪಾರದ ಹಡಗುಗಳ ಸಂಖ್ಯೆಯಲ್ಲಿಯೂ ನೌಕಾ ಬಲದಲ್ಲಿಯೂ ಐಶ್ವರ್ಯದಲ್ಲಿಯೂ ಪ್ರಪಂಚದಲ್ಲಿ ಬ್ರಿಟಿಷ್ ದ್ವೀಪಗಳಿಗೆ ಎರಡನೆಯದಾಗಿದೆ.

ನ್ಯೂಯಾರ್ಕ್, ಬಾಸ್ಟನ್, ಫಿಲಡೆಲ್ಫಿಯ, ಬಾಲ್ಟಿಮೋರ್, ನ್ಯೂಆರ್ಲಿಯನ್ಸ್, ಸಾನ್‌ಫ್ರಾನ್‌ಸಿಸ್ಕೊ ಇವು ವ್ಯಾಪಾರಕ್ಕೆ ಬಹಳ ಪ್ರಸಿದ್ಧವಾದ ರೇವುಪಟ್ಟಣಗಳಾಗಿವೆ; ಒಳಭಾಗದಲ್ಲಿರುವ ಚಿಕಾಗೊ ಮತ್ತು ಸೆಂಟ್‌ಲೂಯಿ ಎಂಬುವು ಅತ್ಯಂತ ಮುಖ್ಯವಾದ ವ್ಯಾಪಾರಸ್ಥಳಗಳು.

**ನ್ಯೂಯಾರ್ಕ್.**—ಈ ಪಟ್ಟಣವು ಒಂದು ದ್ವೀಪದ ಮೇಲಿರುವುದು. ಇದರ ಬಳಿಯಲ್ಲಿರುವ ಬ್ರೂಕ್ಲಿನ್ ಮೊದಲಾದ ಇತರ ಪಟ್ಟಣಗಳು ಇದರ ಶಾಖಾ ನಗರಗಳಾಗಿವೆ. ಈ ಪಟ್ಟಣದ ಒಟ್ಟು ಜನಸಂಖ್ಯೆಯು ಸುಮಾರು 40 ಲಕ್ಷ. ಜನಸಂಖ್ಯೆ, ವ್ಯಾಪಾರ, ಐಶ್ವರ್ಯಗಳಲ್ಲಿ ಈ ಪಟ್ಟಣವು ಅಮೆರಿಕ ಖಂಡದಲ್ಲಿ ಮೊದಲನೆಯದಾಗಿಯೂ, ಪ್ರಪಂಚದಲ್ಲಿ ಲಂಡನ್‌ಗೆ ಎರಡನೆಯದಾಗಿಯೂ ಇರುವುದು. ಈ ಪಟ್ಟಣದಲ್ಲಿರುವಷ್ಟು ಕಾರ್ಖಾನೆಗಳು ಈ ಖಂಡದ ಇನ್ನಾವ ಪಟ್ಟಣದಲ್ಲಿಯೂ ಇಲ್ಲ. ಸಂಯುಕ್ತ ಸಂಸ್ಥಾನಗಳ ಒಟ್ಟು ಪರದೇಶದ ವ್ಯಾಪಾರದಲ್ಲಿ ಅರ್ಧಭಾಗವು ಈ ಪಟ್ಟಣ ಒಂದರ ಮೂಲಕವಾಗಿಯೇ ನಡೆಯುವುದು. ಈ ಪಟ್ಟಣದಲ್ಲಿ 25 ಅಂತಸ್ತುಗಳುಳ್ಳ ಸೌಧಗಳೂ, ಕಬ್ಬಿಣದ ಕಂಬಗಳ ಮೇಲೆ 2-3ನೆಯ ಅಂತಸ್ತಿನ ಎತ್ತರದಲ್ಲಿ ಹೋಗುವ ರೈಲುಗಾಡಿಗಳೂ ಸಾಧಾರಣವಾಗಿರುವುವು. ಇಲ್ಲಿಂದ ದೇಶದ ಒಳಭಾಗಕ್ಕೆ ರೈಲುಮಾರ್ಗಗಳೂ ಜಲಮಾರ್ಗಗಳೂ ಅಸಂಖ್ಯಾಕವಾಗಿರುವುವು. ಸಂಯುಕ್ತ ಸಂಸ್ಥಾನಗಳ ಜನರು ತಾವು ಸಂಪಾದಿಸಿದ ಸ್ವಾತಂತ್ರ್ಯದ ಜ್ಞಾಪಕಾರ್ಥವಾಗಿ ಚಂದಾ ಹಣವನ್ನು ಹಾಕಿ ಕಟ್ಟಿಸಿರುವ ಅಗಾಧವಾದ ಸ್ವಾತಂತ್ರ್ಯದ ಪ್ರತಿಮೆಯೊಂದು ಈ ಪಟ್ಟಣದ ಮಧ್ಯಭಾಗದಲ್ಲಿರುವುದು. ಈ ಪ್ರತಿಮೆಯು 150 ಅಡಿ ಎತ್ತರವುಳ್ಳ ಪೀಠದ ಮೇಲೆ ನಿಲ್ಲಿಸಲ್ಪಟ್ಟಿದೆ; ಈ ಪ್ರತಿಮೆಯ ಎತ್ತರವೂ 150 ಅಡಿಗಳು; ಇದರ ಒಂದು ಬೆರಳು ಸುಮಾರು 7 ಅಡಿಗಳಿರುವುದು; ಈ ಪ್ರತಿಮೆಯ ತಲೆಯಮೇಲೆ 40 ಜನರು ಕುಳಿತುಕೊಳ್ಳಬಹುದು.

**ಫಿಲಡೆಲ್ಫಿಯ.**—ಈ ಪಟ್ಟಣವು ಡಿಲಾವೇರ್ ನದಿಯ ಮುಖದಲ್ಲಿರುವುದು. ಪರದೇಶದ ವ್ಯಾಪಾರದಲ್ಲಿ ಇದು ನ್ಯೂಯಾರ್ಕಿಗೆ ಎರಡನೆಯದಾಗಿದೆ. ಇಲ್ಲಿ ಯಂತ್ರಗಳೂ ತೊಗಲಿನ ಸಾಮಾನೂ ತಯಾರಾಗುವುವು. ಹೊಗೆಯ ಜಹಜುಗಳನ್ನು ಕಟ್ಟುವುದಕ್ಕೆ ಈ ದೇಶದಲ್ಲಿ ಇದು ಮುಖ್ಯಸ್ಥಳವಾಗಿದೆ. ಇದರ ಜನಸಂಖ್ಯೆಯು 13 ಲಕ್ಷ, ಎಂದರೆ ಲಿವರ್‌ಪೂಲಿಗೆ ಸುಮಾರು ಎರಡರಷ್ಟಿರುವುದು.

**ವಾಷಿಂಗ್ಟನ್.**—ಇದು 3 ಲಕ್ಷ ಜನಗಳುಳ್ಳ ಪಟ್ಟಣವು. ಈ ಸಂಸ್ಥಾನಗಳಿಗೆ ಮುಖ್ಯ ಪಟ್ಟಣವಾಗಿದೆ. ಇಲ್ಲಿ ಪ್ರೆಸಿಡೆಂಟರು ವಾಸಮಾಡುವರು; ಕಾಂಗ್ರೆಸ್ ಸಭೆಯು ಕೂಡುವುದು.

ಮಿಚಿಗನ್ ಸರೋವರದ ತೀರದಲ್ಲಿರುವ **ಚಿಕಾಗೊ** ಪಟ್ಟಣವು ಬೆಳೆದಷ್ಟು ಜಾಗ್ರತೆಯಾಗಿ ಪ್ರಪಂಚದಲ್ಲಿ ಇನ್ಯಾವ ಪಟ್ಟಣವೂ ಬೆಳೆಯಲಿಲ್ಲವೆಂದು ಹೇಳಬಹುದು. ಇದು 1830ರಲ್ಲಿ 70 ಜನರುಳ್ಳ ಒಂದು ಸಣ್ಣ ಹಳ್ಳಿಯಾಗಿತ್ತು; ಈಗ 17 ಲಕ್ಷ ಜನರಿರುವರು. ಜನಸಂಖ್ಯೆಯಲ್ಲಿ ನ್ಯೂಯಾರ್ಕಿಗೆ ಎರಡನೆಯ ಪಟ್ಟಣವಾಗಿದೆ. ಧಾನ್ಯಗಳ ಮತ್ತು ದನಗಳ ವ್ಯಾಪಾರಕ್ಕೂ ಮಾಂಸವನ್ನು ಹದಮಾಡಿ ಪ್ಯಾಕ್‌ಮಾಡುವ ಕೈಗಾರಿಕೆಗೂ ಇದು ಈ ದೇಶದಲ್ಲಿ ಮೊದಲನೆಯ ಪಟ್ಟಣವಾಗಿದೆ. ಸೆಂಟ್‌ಲಾರೆನ್ಸ್ ಮತ್ತು ಪಂಚ ಮಹಾಸರೋವರಗಳ ಮೂಲಕ ಬಹಳ ದೊಡ್ಡ ಹಡಗುಗಳು ಇದರ ಬಂದರಿಗೆ ಬರುವುವು. ಅನೇಕ ರೈಲುಮಾರ್ಗಗಳು ಇಲ್ಲಿ ಸಂಧಿಸುವುವು. ಇಲ್ಲಿ ಮರದ ಸಾಮಾನು, ರೈಲು ಕಂಬಿಗಳು, ಯಂತ್ರಗಳು, ತೊಗಲಿನ ಸಾಮಾನು, ಮೊದಲಾದ ಅನೇಕ ಕೈಗಾರಿಕೆಯ ಸಾಮಾನುಗಳೂ ತಯಾರಾಗುವುವು. ಈ ಪ್ರಮುಖತೆಗೆ ಈ ಪಟ್ಟಣದ ಸನ್ನಿವೇಶವು ಹೇಗೆ ಸಹಾಯವಾಗಿದೆ ಎಂಬುದನ್ನು ಆಲೋಚಿಸಿ ನೋಡಬಹುದಾಗಿದೆ. ಬಂದರಿನ ಮತ್ತು ಮಾರ್ಗಗಳ ಅನುಕೂಲ್ಯವಿರುವುದು; ಸಮೀಪದಲ್ಲಿಯೇ ಖನಿಜಗಳು ವಿಶೇಷವಾಗಿ ದೊರೆಯುವುದು; ಇದಲ್ಲದೆ ವ್ಯವಸಾಯ ಪಶುಪಾಲನೆಗಳು ನಡೆಯುವ ವಿಸ್ತಾರವಾದ ಮೈದಾನದ ಮಧ್ಯ ಭಾಗದಲ್ಲಿರುವುದು. ಮೇಲೆ ಸೂಚಿಸಿರುವ ಇತರ ವ್ಯಾಪಾರಸ್ಥಳಗಳ ಸನ್ನಿವೇಶವನ್ನೂ ಅವುಗಳ ಅನುಕೂಲ್ಯಗಳನ್ನೂ ಭೂಪಟದಲ್ಲಿ ನೋಡಿ ಹೇಳಿ.

ವೆಸ್ಟಿಂಡಿಯಾ ದ್ವೀಪಗಳಲ್ಲಿ ಕ್ಯೂಬ, ಪೋರ್ಟರೀಕೋ ದ್ವೀಪಗಳೂ, ಪೆಸಿಫಿಕ್ ಸಾಗರದಲ್ಲಿರುವ ದ್ವೀಪಗಳಲ್ಲಿ ಫಿಲಿಪೈನ್ ದ್ವೀಪಗಳೂ ಲಡ್ರೋನ್‌ಹರ ಈ ಮೊದಲಾದ ಸಣ್ಣ ದ್ವೀಪಗಳೂ ಈ ದೇಶಕ್ಕೆ ಸೇರಿವೆ. ವಿಸ್ತಾರದಲ್ಲಿ ಈ ದೇಶವು ಪ್ರಪಂಚದಲ್ಲಿ ನಾಲ್ಕನೆಯದಾಗಿರುವುದು; ಬ್ರಿಟಿಷ್, ರಷ್ಯ, ಚೀಣಾ ಚಕ್ರಾಧಿಪತ್ಯಗಳಿಗೆ ಚಿಕ್ಕದಾಗಿದೆ. ಆದರೆ ಐಶ್ವರ್ಯದಲ್ಲಿಯೂ ನೌಕಾಬಲದಲ್ಲಿಯೂ ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಇದು ಎರಡನೆಯದಾಗಿದೆ. ಈಗಿನ ಮಹಾಯುದ್ಧದಲ್ಲಿ ಈ ದೇಶದವರು ಸ್ವಪ್ರಯೋಜನಾಪೇಕ್ಷೆಯಿಲ್ಲದೆ ಪ್ರಪಂಚದ ಸ್ವಾತಂತ್ರ್ಯಕ್ಕಾಗಿಯೂ ಸಮಾಧಾನಕ್ಕಾಗಿಯೂ ಹೋರಾಡಿ ಬಹು ಪ್ರಸಿದ್ಧರಾಗಿರುವರು. ನೆಲವು ಫಲವತ್ತಾಗಿರುವಿಕೆ, ಖನಿಜ ಸಂಪತ್ತಿ, ಮಾರ್ಗಗಳ ಸೌಕರ್ಯ, ಮೊದಲಾದ ಸ್ವಾಭಾವಿಕವಾದ ಅನುಕೂಲ್ಯಗಳಿಗೆ ತಕ್ಕಂತೆ ಇಲ್ಲಿನ ಜನರು ಬಹು ಸಾಹಸಪರರಾಗಿಯೂ ಕುಶಲತೆಯುಳ್ಳವರಾಗಿಯೂ ಇರುವರು. ಈ ದೇಶವು ಇನ್ನು ಮುಂದೆ ಮತ್ತಷ್ಟು ಪ್ರಮುಖತೆಯನ್ನು ಪಡೆಯುವುದರಲ್ಲಿ ಸಂಶಯವಿಲ್ಲ. ಪ್ರಪಂಚದ ಎಲ್ಲಾ ಜನಾಂಗಗಳೂ ಅಭಿವೃದ್ಧಿಗೆ ಬರಲು ಸಾಹಸಪಡುತ್ತಿರುವುದರಲ್ಲಿ ಬ್ರಿಟಿಷರೂ, ಅಮೆರಿಕದವರೂ, (ಸಂಯುಕ್ತ ಸಂಸ್ಥಾನಗಳ

ಜನರನ್ನು ವಾಡಿಕೆಯಾಗಿ ಹೀಗೆ ಕರೆಯುವರು.) ಮುಂದಾಳುಗಳಾಗಿ ನಿಂತಿರುವರು. ಪ್ರಪಂಚದ ಮುಂದಿನ ನಾಗರಿಕತೆಯು ಈ ಎರಡು ಜನಾಂಗದವರ ಕೈಯಲ್ಲಿರುವುದೆಂದು ಸಾಮಾನ್ಯವಾಗಿ ಹೇಳಬಹುದು.

## ಮೆಕ್ಸಿಕೊ

ಈ ದೇಶವು ತ್ರಿಕೋಣಾಕಾರವಾಗಿ ಸಂಯುಕ್ತ ಸಂಸ್ಥಾನಗಳಿಂದ ಮಧ್ಯ ಅಮೆರಿಕದವರೆಗೆ ಹರಡಿದೆ. ಕಾಲಿಫೋರ್ನಿಯ, ಯೂಕಟಾನ್ ಪರ್ಯಾಯದ್ವೀಪಗಳೂ ಈ ದೇಶಕ್ಕೆ ಸೇರಿವೆ. ಈ ದೇಶದ ವಿಸ್ತೀರ್ಣವು ಸುಮಾರು 8 ಲಕ್ಷ ಚದರ ಮೈಲಿಗಳು, ಎಂದರೆ ಸಂಯುಕ್ತ ಸಂಸ್ಥಾನಗಳ ¼ ಭಾಗಕ್ಕೆ ಸ್ವಲ್ಪ ಕಡಿಮೆಯಿರುವುದು.

ಈ ದೇಶದಲ್ಲಿ ಮಧ್ಯಭಾಗದಲ್ಲಿ ಸರಾಸರಿ 7,000 ಅಡಿ ಎತ್ತರವುಳ್ಳ ಪ್ರಸ್ಥಭೂಮಿಯೂ, ಇದಕ್ಕೆ ಪೂರ್ವಪಶ್ಚಿಮ ಭಾಗಗಳಲ್ಲಿ ಇಕ್ಕಟ್ಟಾದ ಮೈದಾನಗಳೂ ಇವೆ. ಸಮುದ್ರತೀರದಲ್ಲಿ ಬಂದರುಗಳು ಬಹಳ ಕಡಿಮೆ. ಮೈದಾನಗಳಲ್ಲಿ ಸೆಕೆ ಹೆಚ್ಚು; ಪ್ರಸ್ಥಭೂಮಿಯಲ್ಲಿ ಚಳಿ ಹೆಚ್ಚು. ಮೈದಾನಗಳಲ್ಲಿ ವ್ಯವಸಾಯವು ಚೆನ್ನಾಗಿ ನಡೆಯುವುದು; ಅಲ್ಲಿ ತಕ್ಕಷ್ಟು ಮಳೆಯು ಬೀಳುವುದು, ನೀರಾವರಿಯ ಕಾಲುವೆಗಳನ್ನು ಮಾಡಿರುವರು. ಹಣ್ಣುಗಳು, ಹತ್ತಿ, ಮುಸುಕಿನ ಜೋಳ ಮತ್ತು ಗೋಧಿ ಚೆನ್ನಾಗಿ ಬೆಳೆಯುವುವು. ಪ್ರಸ್ಥಭೂಮಿಯಲ್ಲಿ ಬೆಳ್ಳಿ ವಿಶೇಷವಾಗಿ ಸಿಕ್ಕುವುದು. ಸೀಸ, ತಾಮ್ರ, ಚಿನ್ನಗಳೂ ಸ್ವಲ್ಪ ಮಟ್ಟಿಗೆ ದೊರೆಯುವುವು.

ಇಲ್ಲಿ ಮಾರ್ಗಗಳೂ ಕೈಗಾರಿಕೆಗಳೂ ಬಹು ಕಡಿಮೆ. ಮುಖ್ಯವಾಗಿ ಬೆಳ್ಳಿಯು ರಫ್ತಾಗುವುದು. ಬಟ್ಟೆಗಳು ಮತ್ತು ಯಂತ್ರಗಳು ಆಮದಾಗುವುವು. **ವಿರಾಕ್ರೂಸ್** ಎಂಬುದು ಮುಖ್ಯವಾದ ರೇವುಪಟ್ಟಣವು. **ಮೆಕ್ಸಿಕೊ** ಎಂಬುದು ಮುಖ್ಯ ಪಟ್ಟಣವು. ಇಲ್ಲಿ 3 ಲಕ್ಷ ಜನರು ವಾಸಮಾಡುವರು.

ಈ ದೇಶದ ಜನಸಂಖ್ಯೆಯು 1¼ ಕೋಟಿ. ಇದರಲ್ಲಿ ⅙ ಭಾಗ ಜನರು ಸ್ಪೇನ್ ದೇಶದವರು. ಉಳಿದವರಲ್ಲಿ ½ ಪಾಲು ಜನರು ರೆಡ್ ಇಂಡಿಯನ್ನರು, ಇನ್ನು ½ ಪಾಲು ಜನರು ಈ ಎರಡು ಜನರ ಸಂಕರದಿಂದ ಹುಟ್ಟಿದ ಮಿಶ್ರ ಕುಲದವರು. ವಿದ್ಯಾಭ್ಯಾಸ ಕುಶಲವಿದ್ಯೆಗಳಲ್ಲಿ ಜನರು ಅಷ್ಟು ಮುಂದಾಗಿಲ್ಲ.

## ಮಧ್ಯ ಅಮೆರಿಕ

ಈ ಪ್ರದೇಶವು ಮೇಲ್ಮೈಯ್ಯ ಲಕ್ಷಣಗಳಲ್ಲಿ ಮೆಕ್ಸಿಕೋ ದೇಶವನ್ನೇ ಸಾಮಾನ್ಯವಾಗಿ ಹೋಲುವುದು; ಆದರೆ ಇಲ್ಲಿ ಮಳೆಯೂ ಸೆಕೆಯೂ ಮೆಕ್ಸಿಕೊಗಿಂತ ಸ್ವಲ್ಪ ಹೆಚ್ಚು. ಈ ಪ್ರದೇಶದಲ್ಲಿ ಗ್ವಾಟಿಮಾಲ, ಸಾಲ್ವೆಡಾರ್, ಹಾಂಡು

ರಾಸ್, ನಿಕರಾಗುವ, ಕೋಸ್ಟರಿಕ, ಪನಾಮ ಎಂಬ ಆರು ಸ್ವತಂತ್ರ ಸಂಸ್ಥಾನಗಳಿರುವುವು. ಪ್ರತಿಯೊಂದರಲ್ಲಿಯೂ ಪ್ರಜಾಪ್ರತಿನಿಧಿ ಪ್ರಭುತ್ವವಿರುವುದು. ಇವುಗಳ ಒಟ್ಟು ವಿಸ್ತೀರ್ಣವು ಮೆಕ್ಸಿಕೋವಿನ ⅕ ಭಾಗದಷ್ಟು; ಜನಸಂಖ್ಯೆಯು ¼ ಭಾಗದಷ್ಟು ಇರುವುದು. **ಗ್ವಾಟಿಮಾಲ** ಎಂಬುದು ಮಧ್ಯದ ಅಮೆರಿಕದಲ್ಲಿ ದೊಡ್ಡಪಟ್ಟಣವು; ಇದು ಜನಸಂಖ್ಯೆಯಲ್ಲಿ ಮೈಸೂರು ಪಟ್ಟಣದಷ್ಟು ಮಾತ್ರ ದೊಡ್ಡದಾಗಿರುವುದು.

ಯುಕಟಾನ್ ಪರ್ಯಾಯದ್ವೀಪದ ದಕ್ಷಿಣಭಾಗದಲ್ಲಿರುವ ಬ್ರಿಟಿಷ್ ಹಾಂಡುರಾಸ್ ಎಂಬುದು ಬ್ರಿಟಿಷರಿಗೆ ಸೇರಿದೆ. ಇಲ್ಲಿನ ಹವ ಆರೋಗ್ಯಕರವಾಗಿಲ್ಲ; ಆದುದರಿಂದ ಇದರ ವಿಸ್ತಾರವು ಸುಮಾರು 7,500 ಚ. ಮೈಲಿಗಳಾದರೂ ಇಲ್ಲಿ 37,000 ಜನರು ಮಾತ್ರ ವಾಸವಾಗಿರುವರು. ಮಹಾಗನಿ ಮೊದಲಾದ ಉತ್ತಮ ತರದ ತೊಲೆಗಳು ಇಲ್ಲಿಂದ ರಫ್ತಾಗುವುವು. **ಬೆಲಿಸ್** ಎಂಬುದು ಇದರ ಮುಖ್ಯ ಪಟ್ಟಣವು; ಇದರ ಬಂದರು ಮಧ್ಯ ಅಮೆರಿಕದಲ್ಲಿ ಅತ್ಯುತ್ತಮವಾದುದು.

## ವೆಸ್ಟಿಂಡಿಯಾ ದ್ವೀಪಗಳು

ಏಷ್ಯಾಖಂಡಕ್ಕೆ ಆಗ್ನೇಯ ಭಾಗದಲ್ಲಿ ಈಸ್ಟಿಂಡಿಯನ್ ದ್ವೀಪಸಮುದಾಯವು ಪ್ರಸರಿಸಿರುವಂತೆಯೇ ಉತ್ತರ ಅಮೆರಿಕದ ಆಗ್ನೇಯದಲ್ಲಿ ಈ ದ್ವೀಪಗಳು ಪ್ರಸರಿಸಿರುವುವು. ಇವು ಫ್ಲೋರಿಡಾ ಪರ್ಯಾಯದ್ವೀಪದಿಂದ ಓರಿನೋಕೋ ನದಿಯ ಮುಖದವರೆಗೂ ಅರ್ಧಚಂದ್ರಾಕೃತಿಯಾಗಿ ಪ್ರಸರಿಸಿರುವುವು. ಮೆಕ್ಸಿಕೊ, ಕೆರಬ್ಬಿಯನ್ ಸಮುದ್ರಗಳು ಈ ದ್ವೀಪಗಳಿಂದ ಅಟ್ಲಾಂಟಿಕ್ ಸಾಗರದಿಂದ ಪ್ರತ್ಯೇಕಿಸಲ್ಪಟ್ಟು ಒಳ ಸಮುದ್ರಗಳಾಗಿರುವುವು; ಆದುದರಿಂದ ಅವುಗಳಲ್ಲಿ ಸಮುದ್ರದ ಉಬ್ಬರವಿಳಿತಗಳು ಅತ್ಯಲ್ಪವಾಗಿರುವುವು. ಈ ದ್ವೀಪಗಳ ಒಟ್ಟು ವಿಸ್ತೀರ್ಣವು 95,000 ಚ. ಮೈಲಿಗಳು ಎಂದರೆ ಗ್ರೇಟ್ ಬ್ರಿಟನ್ ದ್ವೀಪಕ್ಕಿಂತ ಸ್ವಲ್ಪ ಹೆಚ್ಚು. ಕ್ಯೂಬ ದ್ವೀಪವು ಒಟ್ಟಿನಲ್ಲಿ ಅರ್ಧ ವಿಸ್ತಾರವನ್ನು ಒಳಗೊಂಡಿದೆ; ವಿಸ್ತಾರದಲ್ಲಿ ಹಯಿಟಿ ಇದಕ್ಕೆ ಎರಡನೆಯದು; ಪೋರ್ಟರೀಕೋ, ಜಮೇಕ, ಟ್ರಿನಿಡಾಡ್ ಎಂಬುವು ಇನ್ನು ಸಣ್ಣ ದ್ವೀಪಗಳು; ಇವುಗಳಲ್ಲದೆ ನೂರಾರು ಬಹಳ ಸಣ್ಣಸಣ್ಣ ದ್ವೀಪಗಳಿರುವುವು. ಈ ವೆಸ್ಟಿಂಡಿಯಾ ದ್ವೀಪಗಳಲ್ಲಿ ಸ್ವತಂತ್ರವಾದ ಹಯಿಟ ದ್ವೀಪ ವಿನಾ ಉಳಿದ ದ್ವೀಪಗಳೆಲ್ಲವೂ ಪರದೇಶದವರಿಗೆ ಅಧೀನವಾಗಿವೆ. ಕ್ಯೂಬ ಪೋರ್ಟರೀಕೊ ದ್ವೀಪಗಳು ಸಂಯುಕ್ತ ಸಂಸ್ಥಾನಗಳ ಪೋಷಣೆಗೆ ಒಳಪಟ್ಟಿವೆ; ಜಮೇಕ ಟ್ರಿನಿಡಾಡ್ ದ್ವೀಪಗಳೂ, ಉತ್ತರ ಭಾಗದಲ್ಲಿರುವ ಬಹಾಮ ದ್ವೀಪಸಮುದಾಯವೂ ಪೂರ್ವಭಾಗದಲ್ಲಿರುವ ಲೀವರ್ಡ್ ಮತ್ತು ವಿಂಡ್‌ವರ್ಡ್ ಎಂಬ ಸಣ್ಣಸಣ್ಣ ದ್ವೀಪಗಳ ಸಮುದಾಯಗಳೂ ಬ್ರಿಟಿಷರಿಗೆ ಸೇರಿವೆ; ಕೆಲವು ಸಣ್ಣ ದ್ವೀಪಗಳು ಫ್ರೆಂಚರಿಗೆ ಸೇರಿವೆ.

ಈ ದ್ವೀಪಗಳಲ್ಲಿ ಅನೇಕವು ಪರ್ವತಮಯವಾಗಿವೆ. ಇವು ಉ. ಅ. 10°ರಿಂದ 20°ರ ವರೆಗೆ ಪ್ರಸರಿಸಿ ಬಹುಮಟ್ಟಿಗೆ ಉಷ್ಣವಲಯದಲ್ಲಿಯೇ ಇರುವುದರಿಂದಲೂ ಸುತ್ತುಮುತ್ತಲೂ ಸಮುದ್ರಗಳಿರುವುದರಿಂದಲೂ ಮಳೆಯು ಯಥೇಚ್ಛವಾಗಿ ಸುರಿಯುವುದು. ನೆಲದಲ್ಲಿ ಅಗ್ನಿಪರ್ವತಗಳ ಮಣ್ಣಿರುವುದರಿಂದ ಬಹು ಫಲವತ್ತಾಗಿರುವುದು. ಆದುದರಿಂದ ಪರ್ವತಗಳಲ್ಲಿ ಮಹಾಗನಿ ಮೊದಲಾದ ಮರಗಳು ಬೆಳೆಯುವುವು; ಪರ್ವತದ ತಪ್ಪಲುಗಳಲ್ಲಿ ಕಾಫಿ, ಟೀ, ಕೋಕೊಗಳೂ, ಮೆಣಸು, ಶುಂಠಿ ಮೊದಲಾದ ಸಂಬಾರದ ಜಿನಸುಗಳೂ ಬೆಳೆಯುವುವು; ಮೈದಾನ ಪ್ರದೇಶಗಳಲ್ಲಿ ಕಬ್ಬು, ಕಿತ್ತಳೆ, ನಿಂಬೆ, ತೆಂಗು ಮೊದಲಾದ ಹಣ್ಣುಗಳೂ ವಿಶೇಷವಾಗಿ ಬೆಳೆಯುವುವು.

ಈ ದ್ವೀಪಗಳಲ್ಲಿ ಖನಿಜಗಳು ಕಡಿಮೆ. ಟ್ರಿನಿಡಾಡ್ ದ್ವೀಪದಿಂದ 'ಪಿಚ್' ಅಥವಾ ರಾಳವು ವಿಶೇಷವಾಗಿ ರಫ್ತಾಗುವುದು. ಯಂತ್ರಗಳು ಮೊದಲಾದ ಕೈಗಾರಿಕೆಯ ಸಾಮಾನುಗಳು ಈ ದ್ವೀಪಗಳಿಗೆ ಆಮದಾಗುವುವು. ಸಕ್ಕರೆ ಮೊದಲಾದ ವ್ಯವಸಾಯದ ಸರಕುಗಳು ಇಲ್ಲಿಂದ ರಫ್ತಾಗುವುವು.

ಈ ದ್ವೀಪಗಳ ಒಟ್ಟು ಜನಸಂಖ್ಯೆಯು 50 ಲಕ್ಷ; ಇವರಲ್ಲಿ ಅನೇಕರು ನೀಗ್ರೋಜನರು, ಇಲ್ಲವೇ ಮಿಶ್ರಜಾತಿಯವರು, ಕಾಲುಪಾಲು ಜನರು ಮಾತ್ರ ಯೂರೋಪಿಯನ್ನರು; ಇವರಲ್ಲಿ ಸ್ಪೇನ್ ದೇಶದ ಜನರ ಸಂಖ್ಯೆಯು ಬಹಳ ಹೆಚ್ಚು.

ಕ್ಯೂಬ ದ್ವೀಪದಲ್ಲಿರುವ **ಹವನಾ** ಎಂಬ ರೇವುಪಟ್ಟಣವು ಈ ದ್ವೀಪಗಳಲ್ಲಿ ಅತ್ಯಂತ ದೊಡ್ಡ ಪಟ್ಟಣವು. ಇಲ್ಲಿ ಸುಮಾರು 12 ಸಾವಿರ ಜನರು ವಾಸ ಮಾಡುವರು. ಇದರ ಬಂದರು ಉತ್ತಮವಾದುದು. ವ್ಯಾಪಾರವು ವಿಶೇಷವಾಗಿ ನಡೆಯುವುದು. ಜಮೇಕದಲ್ಲಿರುವ **ಕಿಂಗ್ಸ್ ಟನ್** ಎಂಬುದೂ ವಿಂಡ್‌ವರ್ಡ್ ದ್ವೀಪಗಳಲ್ಲಿರುವ **ಪೋರ್ಟ್ ಕಾಸ್ಟ್ರೀಸ್** ಎಂಬುದೂ ಬ್ರಿಟಿಷರಿಗೆ ಸೇರಿದ ದ್ವೀಪಗಳಲ್ಲಿ ಅತ್ಯುತ್ತಮವಾದ ಬಂದರುಗಳನ್ನುಳ್ಳ ರೇವುಪಟ್ಟಣಗಳಾಗಿವೆ.

---

## ದಕ್ಷಿಣ ಅಮೆರಿಕ ಖಂಡ

**ವಿಸ್ತೀರ್ಣ, ನೇರೆಗಳು ಮತ್ತು ಸನ್ನಿವೇಶ.**—ಈ ಖಂಡವು ಆಫ್ರಿಕಾ ಖಂಡದಂತೆ ಉತ್ತರಭಾಗದಲ್ಲಿ ಅಗಲವಾಗಿರುವುದು; ಆ ಖಂಡದಂತೆಯೇ ಹೆಚ್ಚು ಭಾಗವು ಉಷ್ಣವಲಯದಲ್ಲಿರುವುದು. ಇವೆರಡರ ಅಕ್ಷಾಂಶಗಳನ್ನು ಭೂಪಟದಲ್ಲಿ ನೋಡಿ. ಈ ಖಂಡದ ವಿಸ್ತೀರ್ಣವು ಸುಮಾರು 70 ಲಕ್ಷ ಚ. ಮೈಲಿಗಳು, ಎಂದರೆ ಈ ಖಂಡವು ಯೂರೋಪಿನ ಎರಡರಷ್ಟು ಅಥವಾ ಉತ್ತರ ಅಮೆರಿಕ

ಖಂಡಕ್ಕಿಂತ ಸ್ವಲ್ಪ ಚಿಕ್ಕದಾಗಿ ಇರುವುದು. ಈ ಖಂಡವು ಎಲ್ಲಾ ಕಡೆಗಳಲ್ಲಿಯೂ ಸಮುದ್ರದಿಂದ ಸುತ್ತಲ್ಪಟ್ಟಿದೆ. ಪನಾಮ ಭೂಕಂಠವು ಇದನ್ನು ಉತ್ತರ ಅಮೆರಿಕಕ್ಕೆ ಸೇರಿಸುವುದು. ಈಗ ಪನಾಮಕಾಲುವೆಯನ್ನು ಮಾಡಿರುವುದರಿಂದ ಇದು ಪ್ರತ್ಯೇಕಿಸಲ್ಪಟ್ಟಿರುವುದು. ಸುಯಿಸ್ ಕಾಲುವೆಯು ಆಫ್ರಿಕವನ್ನು ಏಷ್ಯ ದಿಂದ ಪ್ರತ್ಯೇಕಿಸುವುದನ್ನು ಜ್ಞಾಪಿಸಿಕೊಳ್ಳಿ. ಈ ಖಂಡದ ಹೆಚ್ಚು ಭಾಗವು ದಕ್ಷಿಣಾರ್ಧಗೋಳದಲ್ಲಿರುವುದು, ಉಳಿದ ಖಂಡಗಳು ಸಾಮಾನ್ಯವಾಗಿ ಉತ್ತ ರಾರ್ಧಗೋಳದಲ್ಲಿಯೇ ಇರುವುವು.

**ತೀರಲಕ್ಷಣ.**—ಈ ಖಂಡದಲ್ಲಿ ಆಫ್ರಿಕ ಖಂಡದ ಹಾಗೆ ಪರ್ಯಾಯ ದ್ವೀಪಗಳೂ ಸಮುದ್ರ ಶಾಖೆಗಳೂ ಬಹಳ ಕಡಿಮೆ. ಪಶ್ಚಿಮ ತೀರವು ಸಾಮಾನ್ಯವಾಗಿ ನೇರವಾಗಿರುವುದು, ಆದರೆ ಇದರ ದಕ್ಷಿಣಭಾಗದಲ್ಲಿ ಚಿಲೋ ದ್ವೀಪದಿಂದ ಹಾರನ್ ಭೂಶಿರದವರೆಗೆ ತೀರವು ಒಡೆದು ಸ್ಕಾಟ್ಲೆಂಡ್, ನಾರ್ವೆ, ಕನಡಾ ದೇಶಗಳ ಪಶ್ಚಿಮತೀರದಂತೆ ಫೀಯರ್ಡ್ ತೀರವಾಗಿರುವುದು. ಉತ್ತರ ಪೂರ್ವತೀರಗಳಲ್ಲಿ ಆಳವು ಕಡಿಮೆ. ಆದರೆ ಒರಿನೋಕೊ, ಅಮೆಜಾನ್, ಲಪ್ಲಾಟ ಮೊದಲಾದ ನದಿಗಳ ಮುಖಗಳೂ ಕೆಲವು ಖಾರಿಗಳೂ ಇವೆ. ದಕ್ಷಿಣದಲ್ಲಿ ಮೆಗಿಲನ್ ಜಲಸಂಧಿಯು ಟೆರಾಡಲ್, ಫ್ಯೂಗೋ ದ್ವೀಪಗಳನ್ನು ಪ್ರತ್ಯೇಕಿಸುವುದು. ಈ ಜಲಸಂಧಿಗೆ ಪೂರ್ವದಲ್ಲಿ ಬ್ರಿಟಿಷರಿಗೆ ಸೇರಿದ ಫಾಕ್ಲೆಂಡ್ ದ್ವೀಪಗಳಿವೆ. ಸೆಂಟ್‌ರೋನ್ ಎಂಬುದು ಈ ಖಂಡದ ಅತ್ಯಂತ ಪೂರ್ವ ಭೂಶಿರವು. ಹಾರನ್ ಎಂಬುದು ಅತ್ಯಂತ ದಕ್ಷಿಣ ಭೂಶಿರವು. ಪೂರ್ವತೀರದಲ್ಲಿ ಸಮುದ್ರ ಶಾಖೆಗಳು ಸ್ವಲ್ಪ ಹೆಚ್ಚಾಗಿರುವುದರಿಂದ ಪಾರ, ರಯೋಡಿಜನೈರೊ, ಬೋನಸ್, ಐರಿಸ್ ಮೊದಲಾದ ಉತ್ತಮವಾದ ರೇವುಪಟ್ಟಣಗಳಿರುವುವು.

ಈ ಖಂಡದ ತೀರವು ದಕ್ಷಿಣಭಾಗದಲ್ಲಿ ಒಡೆದಿರುವುದರಿಂದ ಒಟ್ಟಿನಲ್ಲಿ ಸರಾಸರಿ 435 ಚ. ಮೈಲಿಗಳ ವಿಸ್ತಾರಕ್ಕೆ 1 ಮೈಲಿ ತೀರವಿರುವುದು. ಎಂದರೆ ಆಫ್ರಿಕ ಏಷ್ಯಾ ಖಂಡಗಳಿಗಿಂತ ಹೆಚ್ಚಾಗಿರುವುದು. ಈ ಖಂಡದ ತೀರದ ಉದ್ದವು ಯೂರೋಪ್, ಉತ್ತರ ಅಮೆರಿಕಗಳಿಗಿಂತ ಕಡಿಮೆಯಾಗಿದ್ದರೂ, ಉತ್ತರ ಅಮೆರಿಕದಲ್ಲಿನಂತೆ ಒಳದೇಶದಲ್ಲಿ ಜಲಮಾರ್ಗಗಳು ವಿಶೇಷವಾಗಿರುವುದು ಒಂದು ದೊಡ್ಡ ಸೌಕರ್ಯವಾಗಿದೆ.

**ಮೇಲ್ಮೈಯ್ಯ ಲಕ್ಷಣ.**—ಈ ಖಂಡದ ಮೇಲ್ಮೈಯ್ಯ ಲಕ್ಷಣವನ್ನು ತಿಳಿಯುವುದು ಬಹು ಸುಲಭ. ಉತ್ತರ ಅಮೆರಿಕ ಖಂಡದಲ್ಲಿನಂತೆಯೇ ಇಲ್ಲಿಯೂ ಪಶ್ಚಿಮದಲ್ಲಿ ಉದ್ದವಾದ ಎತ್ತರವಾದ ಪರ್ವತಸ್ತೋಮಗಳೂ, ಪೂರ್ವ ಉತ್ತರಗಳಲ್ಲಿ ತಗ್ಗಾದ ಪರ್ವತಗಳೂ, ಮಧ್ಯಭಾಗದಲ್ಲಿ ಒರಿನೋಕೊ ನದಿಯ

ಮುಖದಿಂದ ಲಪ್ಲಾಟ ನದಿಯ ಮುಖದವರೆಗೆ ವಿಸ್ತರಿಸಿರುವ ಬಹುದೊಡ್ಡ ಮೈದಾನವೂ ಇವೆ.

ಪಶ್ಚಿಮದಲ್ಲಿ ಪನಾಮ ಭೂಕಂಠದಿಂದ ಹಾರನ್ ಭೂಶಿರದವರೆಗೂ ಆಂಡೀಸ್ ಪರ್ವತಸ್ತೋಮವು ಹಬ್ಬಿರುವುದು. ಇದರ ಉದ್ದವು 5,000 ಮೈಲಿಗಳು. ಎಂದರೆ ಇವು ಹಿಮಾಲಯ ಪರ್ವತಗಳ ಮೂರರಷ್ಟು ಉದ್ದವಾಗಿರುವುವು. ಇವುಗಳ ಸರಾಸರಿ ಎತ್ತರವು 12,000 ಅಡಿಗಳು. ಎಂದರೆ ರಾಕಿ ಪರ್ವತಗಳಿಗಿಂತಲೂ ಎತ್ತರವಾಗಿವೆ. ಆದರೆ ಹಿಮಾಲಯ ಪರ್ವತಗಳಷ್ಟು ಎತ್ತರವಾಗಿಲ್ಲ. ಈ ಪರ್ವತಗಳಲ್ಲಿ ಅಕನ್‌ಕಾಗುವ ಎಂಬುದು ಬಹಳ ಎತ್ತರವಾದ ಶಿಖರವು. 23,000 ಅಡಿಗಳಷ್ಟು ಎತ್ತರವಿರುವುದು. ಈ ಪರ್ವತಗಳಲ್ಲಿ ಸುಮಾರು 130 ಅಗ್ನಿಪರ್ವತಗಳಿರುವುವು. ಇವುಗಳಲ್ಲಿ ಕೊಟೊಪಾಕ್ಸಿ ಎಂಬುದು ಮುಖ್ಯವಾದುದು. ಇದು ಪ್ರಪಂಚದಲ್ಲೆಲ್ಲಾ ಅತ್ಯಂತ ಎತ್ತರವಾದ ಅಗ್ನಿಪರ್ವತವು. ನೇರವಾಗಿ ಗೋಪುರದಂತೆ ಕಾಣುವುದು. ನೋಡುವುದಕ್ಕೆ ಅತಿಭಯಂಕರವಾಗಿರುವುದು.

ಈ ಪರ್ವತಗಳು ಸಮುದ್ರತೀರಕ್ಕೆ ಸಮೀಪವಾಗಿರುವುವು. ಪಶ್ಚಿಮಭಾಗವು ಕಡಿದಾಗಿರುವುದು. ಪೂರ್ವಭಾಗವು ಇಳಿಜಾರಾಗಿರುವುದು. ಈ ಪರ್ವತ ಪಙ್ಕ್ತಿಯ ಮಧ್ಯಭಾಗದಲ್ಲಿ ಬೊಲೀವಿಯ, ಟಿಟಿಕಾಕ ಪ್ರಸ್ಥಭೂಮಿಗಳಿರುವುವು. ಟಿಟಕಾಕ ಪ್ರಸ್ಥಭೂಮಿಯು ಈ ಖಂಡದಲ್ಲಿ ಅತ್ಯಂತ ಎತ್ತರವಾದ ಪ್ರಸ್ಥಭೂಮಿಯು.

ಪೂರ್ವಭಾಗದಲ್ಲಿ ಬ್ರೆಜಿಲ್ ಪ್ರಸ್ಥಭೂಮಿಯೂ, ಎತ್ತರದಲ್ಲಿ ವೆನಿಜುಲ, ಗಿಯನಾ ಪ್ರಸ್ಥಭೂಮಿಗಳೂ ಇರುವುವು. ಇವುಗಳ ಎತ್ತರವು ಕಡಿಮೆ. ಇವೂ ಆಂಡೀಸ್ ಪರ್ವತಗಳಂತೆ ಸಮುದ್ರದ ಕಡೆಗೆ ಕಡಿದಾಗಿಯೂ, ಒಳಭಾಗಕ್ಕೆ ಇಳಿಜಾರಾಗಿಯೂ ಇರುವುವು.

**ನದಿಗಳು.**—ಈ ಖಂಡದ ಮಧ್ಯಭಾಗವೆಲ್ಲವೂ ಅಗಾಧವಾದ ಮೈದಾನವಾಗಿದೆ. ಪರ್ವತಗಳು ಸಮುದ್ರ ತೀರದಲ್ಲಿರುವುವು. ಒಳಭಾಗಕ್ಕೆ ಇಳಿಜಾರಾಗಿರುವುವು. ಆದುದರಿಂದ ಈ ಪರ್ವತಗಳಲ್ಲಿ ಹುಟ್ಟುವ ಅನೇಕ ಉದ್ದವಾದ ನದಿಗಳು ಒಳಭಾಗಕ್ಕೆ ಹರಿಯುವುವು. ಈ ಮೈದಾನದಲ್ಲಿ ವರ್ಷಕ್ಕೆ 10 ತಿಂಗಳು ಮಳೆಯು ಬೀಳುವುದು. ಈ ಕಾರಣಗಳಿಂದ ಈ ಮೈದಾನದಲ್ಲಿ ತುಂಬಿ ನಿಧಾನವಾಗಿ ಹರಿಯುವ ನದಿಗಳು ಅನೇಕವಿರುವುವು. ಇವುಗಳಲ್ಲಿ ಒರಿನೋಕೋ, ಅಮಜಾನ್, ಲಪ್ಲಾಟ ನದಿವ್ಯೂಹಗಳೂ ಮುಖ್ಯವಾದುವು.

ಅಮಜಾನ್ ನದಿಯು ಆಂಡೀಸ್ ಪರ್ವತಗಳಲ್ಲಿ ಹುಟ್ಟಿ, 4,000 ಮೈಲಿಗಳ ದೂರ ಹರಿದು ಅಟ್ಲಾಂಟಿಕ್ ಸಾಗರವನ್ನು ಸೇರುವುದು. ಇದು ಸದಾ ತುಂಬಿ

ಹರಿಯುವುದು. ಇದರ ಅಗಲವು ಮಳೆಗಾಲದಲ್ಲಿ ಕೆಲವು ಕಡೆಗಳಲ್ಲಿ 100 ಮೈಲಿಗಳಷ್ಟು ಇರುವುದು. ಇದಕ್ಕೆ ಬಂದುಸೇರುವ ಉಪನದಿಗಳು ಅಸಂಖ್ಯಾಕವಾಗಿರುವುವು. ಇವುಗಳಲ್ಲಿ ಇಪ್ಪತ್ತು ನದಿಗಳು 1,000 ಮೈಲಿಗಳಿಗಿಂತ ಹೆಚ್ಚು ಉದ್ದವಾಗಿರುವುವು. ಈ ಉದ್ದವಾದ ಉಪನದಿಗಳಲ್ಲಿ ಮೆಡೀರ, ರೈಯೋನೀಗ್ರೊ ಬಹು ಮುಖ್ಯವಾದುವು. ಅಮಜಾನ್ ನದಿಯ ಮುಖದಲ್ಲಿ ಮುಖಜಭೂಮಿಯೂ ಇರುವುದು. ಆದರೆ ಈ ನದಿಯಮುಖದ ಶಾಖೆಯಲ್ಲೊಂದು 180 ಮೈಲಿಗಳಷ್ಟು, ಅಥೂಟೆಮ್ಸ್ ನದಿಯ ಉದ್ದದಷ್ಟು ಅಗಲವಾಗಿರುವುದು. ಈ ಅಳಿವೆಯಲ್ಲಿ ಮರಾಜೋ ಎಂಬ ದ್ವೀಪವಿರುವುದು. ಈ ನದಿಯ ಜಲಾನಯನ ಭೂಮಿಯು ಯೂರೋಪ್ ಖಂಡದಷ್ಟು ವಿಸ್ತಾರವಾಗಿರುವುದು. ಇದರ ಮತ್ತು ಇದರ ಉಪನದಿಗಳ ಮೇಲೆ ಒಟ್ಟು 50,000 ಮೈಲಿಗಳಷ್ಟು ದೂರ ಹೊಗೆಯ ಜಹಜುಗಳು ಸಂಚರಿಸಬಹುದು. ಜಲಾನಯನಭೂಮಿಯ ವಿಸ್ತಾರದಲ್ಲಿಯೂ, ಪಾತ್ರದಲ್ಲಿ ಹರಿಯುವ ನೀರಿನ ಪರಿಮಾಣದಲ್ಲಿಯೂ, ಜಲಮಾರ್ಗಗಳ ಉದ್ದದಲ್ಲಿಯೂ ಈ ನದಿಯವ್ಯೂಹವನ್ನು ಪ್ರಪಂಚದಲ್ಲಿ ಇನ್ಯಾವ ನದಿಯವ್ಯೂಹವೂ ಮೀರಿಸಿಲ್ಲ.

ಪರಗ್ವೆ, ಪರನ, ಉರುಗ್ವೆ ಎಂಬ ಮೂರು ನದಿಗಳು ಒಟ್ಟುಗೂಡಿ ಲಪ್ಲಾಟ ಎಂಬ ಹೆಸರಿನ ದೊಡ್ಡ ಅಳಿವೆಯಾಗಿ ಸಾಗರವನ್ನು ಸೇರುವುವು. ಈ ಅಳಿವೆಯು ಪ್ರಪಂಚದಲ್ಲಿರುವ ನದಿಗಳ ಅಳಿವೆಗಳಲ್ಲೆಲ್ಲಾ ಅಗಲವಾದುದು.

ಒರಿನೋಕೊ ಮುಖದಿಂದ ಲಪ್ಲಾಟ ನದಿಯ ಮುಖದವರೆಗೂ ಒಂದೇ ಜಲಮಾರ್ಗವಿದೆ ಎಂದು ಹೇಳಬಹುದು. ಒರಿನೋಕೊ ಉಪನದಿಯಾದ ಕಾಸಿಕ್ವೇರಿನ ಮೂಲವೂ, ಅಮಜಾನ್ ನದಿಯ ಉಪನದಿಯಾದ ರೈಯೋನೀಗ್ರೋ ನದಿಯ ಮೂಲವೂ ಒಟ್ಟುಗೂಡಿವೆ. ಮೆಡಿರ, ಪರಗ್ವೆಗಳ ಮೂಲಗಳಿಗೆ 4 ಮೈಲಿಗಳಷ್ಟು ಮಾತ್ರ ದೂರವಿರುವುದು.

ಈ ಖಂಡದಲ್ಲಿರುವಷ್ಟು ಜಲಮಾರ್ಗಗಳ ಸೌಕರ್ಯವು ಇನ್ನಾವ ಖಂಡದಲ್ಲಿಯೂ ಇಲ್ಲ. ಇದು ಉತ್ತರ ಅಮೆರಿಕವನ್ನು ಮೀರಿಸಿರುವುದು. ಇಲ್ಲಿ ಜನಸಂಖ್ಯೆಯು ಹೆಚ್ಚಿದಹಾಗೆ ಇವುಗಳ ಉಪಯೋಗವು ಹೆಚ್ಚುವುದು.

ಉತ್ತರಕ್ಕೂ ಪೂರ್ವಕ್ಕೂ ಸ್ವಲ್ಪ ಉದ್ದವಾದ ಇನ್ನು ಕೆಲವು ನದಿಗಳು ಹರಿಯುವುವು. ಪಶ್ಚಿಮದಲ್ಲಿ ಪರ್ವತಗಳು ಬಹು ಸಮೀಪದಲ್ಲಿರುವುದರಿಂದ ಪಶ್ಚಿಮಕ್ಕೆ ಹರಿಯುವ ನದಿಗಳು ಬಹಳ ಚಿಕ್ಕವು.

**ಸರೋವರಗಳು.**—ಈ ಖಂಡದ ಬಹಳ ಹೆಚ್ಚು ಭಾಗವು ತಟ್ಟೆಯಾದ ಮೈದಾನವಾಗಿರುವುದರಿಂದ ಇಲ್ಲಿ ಸರೋವರಗಳು ಬಹಳ ಕಡಿಮೆ. ಉತ್ತರ

ತೀರವಲ್ಲಿ ಮರಕೀಬೋ ಸರೋವರವು ಸಮುದ್ರಕ್ಕೆ ಸೇರಿರುವ ಉಪ್ಪುನೀರಿನ ಸರೋವರವಾಗಿದೆ. ಟಿಟಿಕಾಕ ಪ್ರಸ್ಥಭೂಮಿಯಲ್ಲಿರುವ ಟಿಟಿಕಾಕ ಸರೋವರವು ಸಮುದ್ರ ಮಟ್ಟಕ್ಕೆ 12,000 ಅಡಿಗಳಷ್ಟು ಎತ್ತರವಾಗಿರುವುದು.

**ವಾಯುಗುಣ.**—ಈ ಖಂಡದ ಅಗಲವಾದ ಉತ್ತರಭಾಗವೆಲ್ಲವೂ, ಎಂದರೆ ಸುಮಾರು ⅘ ಭಾಗವು ಉಷ್ಣವಲಯದಲ್ಲಿರುವುದು. ಇಕ್ಕಟ್ಟಾದ ದಕ್ಷಿಣಭಾಗವು ಮಾತ್ರ ದಕ್ಷಿಣ ಸಮಶೀತೋಷ್ಣವಲಯದಲ್ಲಿರುವುದು. ಉತ್ತರದಲ್ಲಿ ಹೆಚ್ಚು ಭಾಗವು ಮೈದಾನವಾಗಿರುವುದು. ದಕ್ಷಿಣಭಾಗವು ಹೆಚ್ಚು ಎತ್ತರವಾಗಿರುವುದು. ಆದುದರಿಂದ ಉತ್ತರಭಾಗದಲ್ಲಿ ಉಷ್ಣವು ಬಹಳ ಹೆಚ್ಚು; ದಕ್ಷಿಣಭಾಗದಲ್ಲಿ ಬಹಳ ಕಡಿಮೆ.

30° ಉ. ಅ. ಕ್ಕೂ 30° ದ. ಅ. ಕ್ಕೂ ಮಧ್ಯೆ ಈಶಾನ್ಯ ಆಗ್ನೇಯ ದಿಕ್ಕುಗಳಿಂದ ವಾಣಿಜ್ಯಸಹಾಯ ಮಾರುತಗಳು ಬೀಸುವುವು. ಈ ಮಾರುತಗಳು ಅಟ್ಲಾಂಟಿಕ್ ಸಾಗರದ ಮೇಲೆ ಬೀಸಿಕೊಂಡು ಈ ಖಂಡದ ಮುಕ್ಕಾಲು ಭಾಗದ ಮೇಲೆ ಬೀಸುವುವು. ಇವು ಹೆಚ್ಚಾಗಿ ಉಷ್ಣವಲಯದಲ್ಲಿಯೇ ಬೀಸುವುದರಿಂದ ಸಾಗರದ ಕಡೆಯಿಂದ ಜಲಾಂಶವನ್ನು ಬಹಳ ಹೇರಳವಾಗಿ ತರುವುವು. ಈ ಮಾರುತಗಳು ಈ ಖಂಡದ ಮೇಲೆ ಬೀಸಿಕೊಂಡು ಬಂದು ಪಶ್ಚಿಮದಲ್ಲಿ ವಿಷುವದ್ರೇಖೆಯ ಬಳಿ ಆಂಡೀಸ್ ತಪ್ಪಲುಗಳಲ್ಲಿ ಸಂಧಿಸುವುವು.

ಈ ಮಾರುತಗಳನ್ನು ಈ ಖಂಡದ ಉತ್ತರ ಪೂರ್ವಭಾಗದ ಪರ್ವತಗಳು ಸ್ವಲ್ಪ ಮಟ್ಟಿಗೆ ತಡೆಯುವುವು. ಇವು ಹೆಚ್ಚು ಎತ್ತರವಾಗಿಯೂ ಇಲ್ಲ; ಒತ್ತಾಗಿಯೂ ಇಲ್ಲ. ಆದುದರಿಂದ ಇವುಗಳ ತಪ್ಪಲುಗಳಲ್ಲಿ ಈ ಮಾರುತಗಳಲ್ಲಿರುವ ಮೋಡಗಳಲ್ಲಿ ಬಹು ಸ್ವಲ್ಪ ಭಾಗವು ಮಾತ್ರ ಮಳೆಯಾಗಿ ಬೀಳುವುದು. ಮೋಡಗಳೆಲ್ಲಾ ಪಶ್ಚಿಮಕ್ಕೆ ತೂರಿಕೊಂಡು ಹೋಗಿ ಆಂಡಿಸ್ ಪರ್ವತಗಳಿಂದ ತಡೆಯಲ್ಪಡುವುವು; ಅವು ಒಂದೇ ಪಙ್ಕ್ತಿಯಾಗಿಯೂ, ಬಹು ಎತ್ತರವಾಗಿಯೂ ಇರುವುದರಿಂದ ಮೋಡಗಳೆಲ್ಲವನ್ನೂ ತಡೆದುಬಿಡುವುವು. ಆಂಡೀಸ್ ಪರ್ವತಗಳ ಬಳಿ, ಅಂದರೆ ಈ ಖಂಡದ ಪಶ್ಚಿಮಭಾಗದಲ್ಲಿ 80 ಅಂಗುಲಗಳಿಗೆ ಹೆಚ್ಚಾಗಿಯೂ, ಉಳಿದ ಭಾಗಗಳಲ್ಲಿ 40 ಅಂಗುಲಗಳಿಗೆ ಹೆಚ್ಚಾಗಿಯೂ ಮಳೆ ಬೀಳುವುದು. ಈ ಮಾರುತಗಳು ಆಂಡೀಸ್ ಪರ್ವತಗಳನ್ನು ದಾಟಿ ಹೋಗುವಾಗ ಜಲರಹಿತವಾಗಿರುವುದರಿಂದ ಪಶ್ಚಿಮ ತೀರಪ್ರದೇಶದಲ್ಲಿ ಈ ಮಾರುತಗಳಿಂದ ಮಳೆಯಾಗುವುದಿಲ್ಲ.

ಇಂಡಿಯಾದೇಶದಲ್ಲಿ ಮುಂಗಾರು ಗಾಳಿಯ ಬಂಗಾಳ ಕೊಲ್ಲಿಯ ಶಾಖೆಯಿಂದ ಹಿಮಾಲಯ ಪರ್ವತಗಳಿಗೆ ದಕ್ಷಿಣದಲ್ಲಿ ವಿಶೇಷವಾಗಿ ಮಳೆಯಾಗು

ವುದನ್ನೂ, ಹಿಮಾಲಯಗಳಿಗೆ ಉತ್ತರದಲ್ಲಿರುವ ಟಿಬೆಟ್ಟಿನಲ್ಲಿ ಸ್ವಲ್ಪವೂ ಮಳೆಯಾಗದಿರುವುದನ್ನೂ ಹೋಲಿಸಿನೋಡಿ.

ಆಫ್ರಿಕಾ ಖಂಡದ ಮಧ್ಯಭಾಗ ಮೊದಲಾದ ಇತರ ವಿಷುವದ್ರೇಖೆಯ ಸಮೀಪದ ಪ್ರದೇಶಗಳಲ್ಲಿನಂತೆ ಇಲ್ಲಿಯೂ ವರ್ಷಕ್ಕೆ 10 ತಿಂಗಳು ಮಳೆಗಾಲವಾಗಿರುವುದು.

ಪಶ್ಚಿಮತೀರದಲ್ಲಿ ಉತ್ತರ ದಕ್ಷಿಣಭಾಗಗಳಲ್ಲಿ ವಾಯುವ್ಯ, ನೈರುತ್ಯಗಳಿಂದ ಬೀಸುವ ಮಾರುತಗಳಿಂದ ಮಳೆಯು ಅಧಿಕವಾಗಿ ಬೀಳುವುದು. ಆದರೆ ಮಧ್ಯಭಾಗದಲ್ಲಿ ಇವು ಬೀಸುವುದಿಲ್ಲವಾದುದರಿಂದ ಅಲ್ಲಿನ ಪ್ರದೇಶವು ಅಟಕಾಮ ಎಂಬ ಮರುಭೂಮಿಯಾಗಿರುವುದು.

ಈ ಖಂಡದ ದಕ್ಷಿಣಭಾಗದಲ್ಲಿ ಎಂದರೆ 30° ದ. ಅ. ಕ್ಕೆ ದಕ್ಷಿಣದಲ್ಲಿ ಮಳೆಯಾಗುವುದು ಬಹು ಕಡಿಮೆ.

ಒಟ್ಟಿನಲ್ಲಿ ಈ ಖಂಡವನ್ನು ಅತಿವೃಷ್ಟಿ ಖಂಡವೆಂದು ಕರೆಯಬಹುದು. ಸಾಮಾನ್ಯವಾಗಿ ಸೆಕೆಯೂ, ಮಳೆಯೂ ಬಹಳ ಹೆಚ್ಚಾಗಿರುವುವು.

**ಸಸ್ಯಗಳು.**—ಈ ಖಂಡದ ನದಿಯ ಬೈಲುಗಳಲ್ಲಿ ಸೆಕೆಯೂ ಮಳೆಯೂ ವಿಶೇಷವಾಗಿರುವುದಲ್ಲದೆ ಬಹಳ ಫಲವತ್ತಾದ ನೆಲವೂ ಇರುವುದು; ಆದುದರಿಂದ ಈ ಖಂಡದಲ್ಲಿ ತಾವಾಗಿಯೇ ಬೆಳೆಯುವಷ್ಟು ಸಸ್ಯಗಳು ಇನ್ನಾವ ಖಂಡದಲ್ಲಿಯೂ ಬೆಳೆಯುವುದಿಲ್ಲ. ಅಮೆಜಾನ್ ನದಿಯ ಬೈಲೆಲ್ಲವೂ ಅಗಾಧವಾದ ಕಾಡಾಗಿರುವುದು. ಮಹಾಗನಿ, ಕರೀಮರ, ರೋಸ್ ಮರ, ರಬ್ಬರ್ ಗಿಡ ಮೊದಲಾದ ಅನೇಕ ಬಗೆಯ ಮರಗಳು ಒತ್ತೊತ್ತಾಗಿ ಬೆಳೆದಿರುವುವು; ಅನೇಕ ಬಗೆಯ ಲತೆಗಳಿಂದ ಇವು ಒಂದಕ್ಕೊಂದು ಸೇರಿಸಲ್ಪಟ್ಟಿರುವುವು. ಆದುದರಿಂದ ಈ ಕಾಡುಗಳಲ್ಲಿ ಮನುಷ್ಯರು ಸಂಚರಿಸುವುದು ಅಸಾಧ್ಯವು. ವಿಧ ವಿಧವಾದ ಪಕ್ಷಿಗಳೂ ಕೋತಿಗಳೂ ಈ ಕಾಡಿನಲ್ಲಿ ಅಸಂಖ್ಯಾಕವಾಗಿ ಮರಗಳ ಮೇಲೆಯೇ ಹುಟ್ಟಿ ಅಲ್ಲಿಯೇ ಬೆಳೆದು ಅಲ್ಲಿಯೇ ಸಾಯುವುವು. ಈ ಕಾಡನ್ನು **ಸೆಲ್ವಾಸ್** ಎಂದು ಕರೆಯುವರು. ಈ ಕಾಡಿನಷ್ಟು ದೊಡ್ಡದಾದ ಕಾಡು ಪ್ರಪಂಚದಲ್ಲಿ ಇನ್ನೆಲ್ಲಿಯೂ ಇಲ್ಲ. ಮಧ್ಯ ಆಫ್ರಿಕದ ಕಾಡು ಇದಕ್ಕೆ ಎರಡನೆಯದಾಗಿರುವುದು. ರಬ್ಬರ್ ಗಿಡಗಳಲ್ಲಿ ಕಚ್ಚುಗಳನ್ನು ಮಾಡಿ ರಸವನ್ನು ಹಿಡಿದು ಅದನ್ನು ಒಣಗಿಸಿ ರಬ್ಬರನ್ನು ಮಾಡುವರು. ಅಮೆಜಾನ್ ನದಿಯ ಮುಖದಲ್ಲಿರುವ ಪಾರಾ ಎಂಬ ಪಟ್ಟಣದ ಮೂಲಕ ಈ ಕಾಡಿನ ರಬ್ಬರ್ ಮೊದಲಾದ ಉತ್ಪನ್ನಗಳು ರಫ್ತಾಗುವುವು.

ಒರಿನೋಕೋ ನದಿಯ ಬೈಲಿನಲ್ಲೆಲ್ಲಾ ಹುಲ್ಲುಗಾವಲುಗಳಿರುವುವು. ಬೇಸಿಗೆಯಲ್ಲಿ ಈ ಪ್ರದೇಶವು ಒಣಗಿ ಬೆಂಡಾಗಿರುವುದು; ಮಳೆಗಾಲದಲ್ಲಿ ಹುಲ್ಲು

ಸೊಂಪಾಗಿ ಬೆಳೆದು ರಮಣೀಯವಾಗಿರುವುದು. ಇಲ್ಲಿ ಅಸಂಖ್ಯಾಕವಾಗಿ ಕುದುರೆಗಳೂ ದನಗಳೂ ವಾಸಿಸುವುವು. ಈ ಹುಲ್ಲುಗಾವಲುಗಳನ್ನು **ಲಾನೋಸ್** ಎಂದು ಕರೆಯುವರು.

ಪರನಾ ನದಿಯ ಆದಿಭಾಗದಿಂದ ಬೋನಸ್ ಐರಿಸ್‌ವರೆಗಿರುವ ಪ್ರದೇಶದಲ್ಲಿ ಎತ್ತರವಾಗಿ ಹುಲ್ಲು ಬೆಳೆಯುವುದು; ಇಲ್ಲಿಯೂ ಕುದುರೆಗಳೂ ಕಾಡುದನಗಳೂ ವಿಶೇಷವಾಗಿರುವುವು. ಈ ಹುಲ್ಲುಗಾವಲುಗಳನ್ನು **ಕಂಪಾಸ್** ಎಂದು ಕರೆಯುವರು.

ಟಪಿಯೋಕ ಎಂಬ ಗಡ್ಡೆ, ಮುಸುಕಿನ ಜೋಳ, ಕೋಕೋ, ಸಿಂಕೋನ, ಹೊಗೆಸೊಪ್ಪು, ಗೋಧಿ, ಕಾಫಿ, ಕಬ್ಬು, ಹತ್ತಿ ಈ ಬೆಳೆಗಳೂ ಜನರು ತಕ್ಕ ಮಟ್ಟಿಗೆ ಒತ್ತಾಗಿ ವಾಸಮಾಡುವ ತೀರಪ್ರದೇಶಗಳಲ್ಲಿ ಬೆಳೆಯುತ್ತವೆ. ಜನ ಸಂಖ್ಯೆಯು ಹೆಚ್ಚಿದ ಹಾಗೆ ವ್ಯವಸಾಯವು ಹೆಚ್ಚಲು ಈ ಖಂಡದಲ್ಲಿರುವಷ್ಟು ಸೌಕರ್ಯವು ಇನ್ಯಾವ ಖಂಡದಲ್ಲಿಯೂ ಇಲ್ಲ. ಯೂರೋಪ್ ಖಂಡದಷ್ಟು ವಿಸ್ತಾರವುಳ್ಳ ಅಮೆಜಾನ್ ನದಿಯ ಮೈದಾನವು ಫಲವತ್ತಾದ ಕ್ಷೇತ್ರ ಶಾಖ ಮಳೆಗಳಲ್ಲಿ ಅತ್ಯಂತ ಹೆಚ್ಚಾದ ಸೌಕರ್ಯವನ್ನು ಹೊಂದಿದೆ.

**ಪ್ರಾಣಿಗಳು.**—ಸೆಕೆ ಹೆಚ್ಚಾಗಿಯೂ ಮಳೆ ಕಡಿಮೆಯಾಗಿಯೂ ಇರುವ ಆಫ್ರಿಕ ಖಂಡದಲ್ಲಿ ಆನೆ, ಒಂಟೆ ಮೊದಲಾದ ದೊಡ್ಡ ಪ್ರಾಣಿಗಳೂ, ಸಿಂಹ, ಹುಲಿ ಮೊದಲಾದ ಭಯಂಕರವಾದ ಪ್ರಾಣಿಗಳೂ ವಿಶೇಷವಾಗಿರುವುವು; ಆದರೆ ಸೆಕೆ ಹೆಚ್ಚಾಗಿದ್ದರೂ ಮಳೆ ಹೆಚ್ಚಾಗಿರುವ ಈ ಖಂಡದಲ್ಲಿರುವ ದುಷ್ಟಮೃಗಗಳಲ್ಲಿ ಬಹಳ ಚಿಕ್ಕದಾಗಿರುವ ಪುಮಜಾಗುವರ್ ಎಂಬವು ಮುಖ್ಯವಾದುವಾಗಿವೆ. ಈ ಖಂಡದಲ್ಲಿ ಇತರ ಖಂಡಗಳಿಗಿಂತ ಹೆಚ್ಚಾಗಿ ದೊಡ್ಡ ಹಾವುಗಳೂ ನಾನಾ ವರ್ಣದ ಪಕ್ಷಿಗಳೂ ನಾನಾಬಗೆಯ ಕ್ರಿಮಿ ಕೀಟಗಳೂ ಕೋತಿಗಳೂ ವಾಸಿಸುವುವು.

ಲಾಮ ಅಲ್ಪಾಕ ಎಂಬುವು ಈ ಖಂಡದ ಮುಖ್ಯವಾದ ಸಾಧು ಪ್ರಾಣಿಗಳು. ಬೆಟ್ಟಸೀಮೆಗಳಲ್ಲಿ ಹೇರುಗಳನ್ನು ಹೊರಲು ಲಾಮವನ್ನು ಉಪಯೋಗಿಸುವರು; ಅಲ್ಪಾಕದ ಕೂದಲು ಉದ್ದವಾಗಿಯೂ ನುಣುಪಾಗಿಯೂ ಇರುವುದು. ಯೂರೊಪ್ ಖಂಡದವರು ಇದರ ಕೂದಲನ್ನು ತರಿಸಿಕೊಂಡು ನುಣುಪಾದ ಅಲ್ಪಾಕ ಬಟ್ಟೆಯನ್ನು ನೇಯುವರು.

ಯೂರೊಪಿಯನ್ನರು ಈ ಖಂಡದಲ್ಲಿ ವಾಸಮಾಡುವುದಕ್ಕೆ ಮೊದಲು ಮಾಡಿದಂದಿನಿಂದ ಈಚೆಗೆ ದನ, ಕುರಿ, ಕುದುರೆಗಳು ಬಹು ವೃದ್ಧಿಹೊಂದಿವೆ. ಒರಿನೋಕೊ ಲಪ್ಲಾಟ ನದಿಗಳ ಬೈಲುಗಳ ಹುಲ್ಲುಗಾವಲುಗಳಲ್ಲಿ ದನಗಳೂ ಕುದುರೆಗಳೂ ವಿಶೇಷವಾಗಿವೆ; ಮಳೆಯು ಕಡಿಮೆಯಾಗಿ ಬೀಳುವ ಬೆಟ್ಟಸೀಮೆ

ಗಳಲ್ಲಿ ಕುರಿಗಳು ವಿಶೇಷವಾಗಿವೆ. ಅರ್ಜೆಂಟೈನಾದೇಶದಲ್ಲಿ ಕುದುರೆಗಳು ಅಸಂಖ್ಯಾಕವಾಗಿರುವುದರಿಂದ, ಅಲ್ಲಿ ಭಿಕ್ಷುಕರೂ ಕೂಡ ಕುದುರೆಯ ಮೇಲೆ ಸಂಚರಿಸುವರು. ಅಲ್ಲಿ ಸುಮಾರು 25 ರೂಪಾಯಿಗಳಿಗೆ ಒಂದು ಒಳ್ಳೆಯ ಕುದುರೆಯು ಸಿಕ್ಕುವುದು.

ಪೆರೂ ದೇಶಕ್ಕೆ ಪಶ್ಚಿಮದಲ್ಲಿರುವ ಗ್ಯಾನೋಫ್ ದ್ವೀಪಗಳಲ್ಲಿ ಹಿಂದಿನ ಕಾಲದಲ್ಲಿ ಗ್ಯಾನೋ ಎಂಬ ಪಕ್ಷಿಗಳು ವಿಶೇಷವಾಗಿದ್ದವು. ಈಗ ಆ ದ್ವೀಪಗಳಲ್ಲಿ ಅವುಗಳ ಹಿಕ್ಕೆಗಳು ವಿಶೇಷವಾಗಿ ಸಿಕ್ಕುವುವು; ಕೆಲವುಕಡೆ ನೆಲದಲ್ಲಿ 60 ಅಡಿಗಳ ಆಳದವರೆಗೂ ದೊರೆಯುವುವು. ಇದು ಉತ್ತಮವಾದ ಗೊಬ್ಬರವು. ಇದನ್ನು ಪೆರೂ ದೇಶದಲ್ಲಿ ವ್ಯವಸಾಯಕ್ಕೆ ಉಪಯೋಗಿಸುವರು.

**ಖನಿಜಗಳು.**—ಈ ಖಂಡದಲ್ಲಿ ಖನಿಜಗಳು ವಿಶೇಷವಾಗಿವೆ; ಆದರೆ ಇವುಗಳನ್ನು ಹೆಚ್ಚಾಗಿ ತೆಗೆಯುತ್ತಿಲ್ಲ. ಉತ್ತರ ಪೂರ್ವಭಾಗಗಳ ಪರ್ವತ ಪ್ರದೇಶಗಳಲ್ಲಿ ಚಿನ್ನವೂ ವಜ್ರಗಳೂ ವಿಶೇಷವಾಗಿ ದೊರೆಯುವುವು; ಬ್ರೆಸಿಲ್ ದೇಶದ ವಜ್ರಗಳು ಬಹು ಪ್ರಸಿದ್ಧವಾಗಿವೆ. ಆಂಡೀಸ್ ಪರ್ವತ ಪ್ರದೇಶದಲ್ಲಿ ಮುಖ್ಯವಾಗಿ ಬೊಲೀವಿಯ ಪೆರೂ ದೇಶಗಳಲ್ಲಿ, ಚಿನ್ನ ತಾಮ್ರಗಳೂ ಬಹು ಹೆಚ್ಚಾಗಿ ಬೆಳ್ಳಿಯೂ ದೊರೆಯುವುವು. ಪೊಟೋಸಿ ಪಟ್ಟಣದ ಬಳಿಯ ಗಣಿಗಳಲ್ಲಿ 400 ವರ್ಷಗಳಿಂದ ಸುಮಾರು 1,000 ಕೋಟಿ ರೂಪಾಯಿಗಳ ಬೆಲೆ ಬಾಳು ವಷ್ಟು ಬೆಳ್ಳಿಯನ್ನು ತೆಗೆದಿರುವರು; ಎಂದರೆ ಪ್ರಪಂಚದಲ್ಲಿರುವ ಪ್ರತಿಯೊಬ್ಬ ನಿಗೂ ಎರಡೆರಡು ಬೆಳ್ಳಿಯ ಉದ್ಧರಣೆಗಳನ್ನು ಮಾಡಿಕೊಡಬೇಕಾದರೆ ಎಷ್ಟು ಬೆಳ್ಳಿಯು ಬೇಕಾಗುವುದೋ ಅಷ್ಟನ್ನು ತೆಗೆದಿರುವರು; ಇಷ್ಟು ಬೆಳ್ಳಿಯನ್ನು ತೆಗೆದರೂ ಅಲ್ಲಿ ಇನ್ನೂ ಬೇಕಾದಷ್ಟು ಬೆಳ್ಳಿಯು ಇರುವುದು. ಮದ್ದು ಮಾಡು ವುದಕ್ಕೆ ಉಪಯೋಗವಾಗುವ ಪೆಟ್ಲುಪ್ಪು ಕಲ್ಲಿದ್ದಲೂ ಚಿಲೀ ದೇಶದಲ್ಲಿ ಹೆಚ್ಚಾಗಿ ದೊರೆಯುವುವು.

**ಮಾರ್ಗಗಳು.**—ಈ ಖಂಡದ ನದಿಗಳು ಹಡಗುಗಳ ಸಂಚಾರಕ್ಕೆ ಎಷ್ಟು ಅನುಕೂಲವಾಗಿವೆ ಎಂಬುದನ್ನು ಹಿಂದೆಯೇ ವಿವರಿಸಿದೆ; ಈ ಖಂಡದಲ್ಲಿರುವಷ್ಟು ನದೀಮಾರ್ಗಗಳ ಸೌಕರ್ಯವು ಇನ್ನಾವ ಖಂಡದಲ್ಲಿಯೂ ಇಲ್ಲ.

ಈ ಖಂಡದಲ್ಲಿ ಮಳೆಯು ಬಹಳ ಹೆಚ್ಚಾಗಿ ಬೀಳುವುದರಿಂದ ರಸ್ತೆಗಳನ್ನು ಮಾಡಿದರೆ ಬಹಳ ಬೇಗ ಕೊಚ್ಚೆಯಾಗಿ ಕೆಟ್ಟುಹೋಗುವುವು, ರಸ್ತೆಗಳು ಲಾಭ ಕರವಾಗಿರಲು ಜನ ಸಾಂದ್ರತೆಯೂ ಕಡಿಮೆಯಾಗಿರುವುದು; ಆದುದರಿಂದ ಇಲ್ಲಿ ಗಾಡಿಯ ರಸ್ತೆಗಳು ಬಹು ಅಪರೂಪವಾಗಿರುವುವು. ಕಾಲುದಾರಿಗಳಲ್ಲಿ ಪಶುಗಳ ಮೇಲೆ ಸಾಮಾನುಗಳನ್ನು ಸಾಗಿಸುವರು; ಸಾಮಾನುಗಳನ್ನು

ಹೊರಲು ಮೈದಾನಗಳಲ್ಲಿ ಹೇಸರಕತ್ತೆಗಳನ್ನೂ ಆಂಡೀಸ್ ಪರ್ವತಗಳ ತಪ್ಪಲುಗಳಲ್ಲಿ ಲಾಮುಗಳನ್ನೂ ವಿಶೇಷವಾಗಿ ಉಪಯೋಗಿಸುವರು.

ಈ ಖಂಡದಲ್ಲಿ ಉತ್ತರ ಅಮೆರಿಕ ಖಂಡದ ಹಾಗೆ ದೊಡ್ಡ ರೈಲುಮಾರ್ಗಗಳಿಲ್ಲ; ಅಲ್ಲಲ್ಲಿ ಚಿಕ್ಕ ಮಾರ್ಗಗಳಿರುವುವು. ಇವುಗಳಲ್ಲಿ ಎರಡು ಮುಖ್ಯವಾದುವು. ಒಂದು ಪನಾಮ ಭೂಕಂಠದಲ್ಲಿ, ಪನಾಮ, ಕೋಲನ್ ಪಟ್ಟಣಗಳ ಮಧ್ಯೆ ಇರುವುದು. ಇದರ ಉದ್ದವು 47 ಮೈಲಿಗಳಾದರೂ, ಇದರ ಸನ್ನಿವೇಶವು ವ್ಯಾಪಾರ ಪ್ರಯಾಣಗಳಿಗೆ ಬಹಳ ಅನುಕೂಲವಾಗಿದೆ. ಪನಾಮ ಕಾಲುವೆಯನ್ನು ಮಾಡಿದನಂತರ ಇದರ ಪ್ರಮುಖತೆಯು ಕಡಿಮೆಯಾಗಿದೆ. ಇನ್ನೊಂದು ಬೋನಸ್ ಐರಿಸ್ಸಿಗೂ ವಾಲ್ಪರೈಸೊವಿಗೂ ಮಧ್ಯೆ ಇರುವುದು; ಇದು ಒಂದು ಭಾರಿ ಸುರಂಗದ ಮೂಲಕ ಆಂಡೀಸ್ ಪರ್ವತವನ್ನು ಹಾದು ಹೋಗುವುದು. ಈ ರೈಲುಮಾರ್ಗವು ಸಾಮಾನುಗಳೂ ಜನರೂ ಹಾರನ್ ಭೂಶಿರವನ್ನು ಸುತ್ತಿಕೊಂಡು ಹೋಗಬೇಕಾದುದನ್ನು ಬಹಳ ಮಟ್ಟಿಗೆ ಕಡಿಮೆ ಮಾಡಿರುವುದು.

ಪಾರಾ, ರೈಯೊಡಿಜನೈರೋ ಮೊದಲಾದ ರೇವುಪಟ್ಟಣಗಳಿಂದ ಯೂರೊಪ್ ಖಂಡದೊಡನೆಯೂ ಉತ್ತರ ಅಮೆರಿಕದ ಪೂರ್ವಭಾಗದೊಡನೆಯೂ ವ್ಯಾಪಾರ ನಡೆಯುವುದು. ಪನಾಮ ಕಾಲುವೆಯನ್ನು ಈಚೆಗೆ ಮಾಡಿರುವುದರಿಂದ ಯೂರೊಪ್ ಖಂಡದಿಂದಲೂ ಉತ್ತರ ಅಮೆರಿಕದ ಪೂರ್ವತೀರದ ಬಂದರುಗಳಿಂದಲೂ ಉತ್ತರ ಅಮೆರಿಕದ ಪಶ್ಚಿಮ ತೀರದ ಬಂದರುಗಳಿಗೆ ಹೋಗುವ ಹಡಗುಗಳು ಈ ಕಾಲುವೆ ಮಾರ್ಗವಾಗಿ ಸಂಚರಿಸುವುವು; ಹಿಂದಿನಂತೆ ಈ ಖಂಡವನ್ನು ಸುತ್ತಿಕೊಂಡು ಹೋಗುತ್ತಿಲ್ಲ.

**ಜನಗಳು.**—ಈ ಖಂಡದಲ್ಲಿ ಸುಮಾರು 4 ಕೋಟಿ ಜನರು ವಾಸಮಾಡುವರು. ಆಸ್ಟ್ರೇಲಿಯ ವಿನಾ ಇನ್ನಾವ ಖಂಡದಲ್ಲಿಯೂ ಜನ ಸಾಂದ್ರತೆಯು ಇಲ್ಲಿನಷ್ಟು ಕಡಿಮೆಯಾಗಿಲ್ಲ. ಈ ಖಂಡದಲ್ಲಿ ಸರಾಸರಿ 1 ಚ. ಮೈ. ಗೆ 6 ಜನರು ವಾಸಮಾಡುವರು; ಆಸ್ಟ್ರೇಲಿಯಾದಲ್ಲಿ ಈ ಸರಾಸರಿಯು 1 : 1½; ಯೂರೊಪಿನಲ್ಲಾದರೋ 1 : 106.

ಈ ಖಂಡದ ಜನರಲ್ಲಿ ಅರ್ಧಪಾಲು ಜನರು ಈ ಖಂಡದ ಪೂರ್ವನಿವಾಸಿಗಳಾದ ರೆಡ್ ಇಂಡಿಯನ್ನರಾಗಿರುವರು. ಇವರು ಈಗ ಬಹು ಅನಾಗರಿಕರಾಗಿರುವರು; ಇವರಲ್ಲಿ ಕೆಲವರಿಗೆ 4—5ಕ್ಕಿಂತ ಹೆಚ್ಚಾಗಿ ಲೆಕ್ಕ ಮಾಡುವುದಕ್ಕೂ ತಿಳಿಯದು. ಈ ಖಂಡದ ಜನರಲ್ಲಿ ಕಾಲುಪಾಲು ಜನರು ನೀಗ್ರೋ ಜನರು. ಇವರು ಹಿಂದಿನ ಕಾಲದಲ್ಲಿ ಆಫ್ರಿಕದಿಂದ ಇಲ್ಲಿಗೆ ಗುಲಾಮರಾಗಿ ತರಲ್ಪಟ್ಟರು. ಉಳಿದವರು ಯೂರೊಪಿಯನ್ನರು, ಇಲ್ಲವೇ ಮಿಶ್ರಕುಲದವರು.

ಈ ಖಂಡದಲ್ಲಿರುವ ಯುರೊಪಿಯನ್ನರಲ್ಲಿ ಸ್ಪೇನ್, ಪೋರ್ಚುಗಲ್ ದೇಶದವರ ಸಂಖ್ಯೆಯೇ ಹೆಚ್ಚು.

ಒಳಭಾಗದಲ್ಲೆಲ್ಲಾ ದಟ್ಟವಾದ ಕಾಡುಗಳಿರುವುದರಿಂದಲೂ ಈ ದೇಶಕ್ಕೆ ಮೊದಲು ಬಂದ ಯುರೊಪಿಯನ್ನರೂ ಅವರಿಂದ ತರಲ್ಪಟ್ಟ ಸೀಗ್ರೋಜನರೂ ಸಮುದ್ರ ತೀರದಲ್ಲಿಯೇ ನೆಲೆಸಿದ್ದರಿಂದಲೂ, ಈ ಖಂಡದಲ್ಲಿ ಜನರು ಸಾಮಾನ್ಯ ವಾಗಿ ತೀರಪ್ರದೇಶದಲ್ಲಿಯೇ ವಾಸಮಾಡುತ್ತಿರುವರು, ಒಳಭಾಗದ ಕಾಡು ಗಳೂ ಹುಲ್ಲುಗಾವಲುಗಳೂ ಸಾಮಾನ್ಯವಾಗಿ ನಿರ್ಜನ ಪ್ರದೇಶಗಳಾಗಿವೆ.

**ಕೈಗಾರಿಕೆಗಳು ಮತ್ತು ವ್ಯಾಪಾರ.**—ಈ ಖಂಡದಲ್ಲಿ ಕೈಗಾರಿಕೆಗಳು ಸಾಮಾನ್ಯವಾಗಿ ಇಲ್ಲವೆಂದೇ ಹೇಳಬಹುದು. ಜನರೆಲ್ಲರೂ ಸಾಮಾನ್ಯವಾಗಿ ವ್ಯವಸಾಯದಿಂದಲೂ, ಕಾಡುಗಳಲ್ಲಿ ದೊರೆಯುವ ರಬ್ಬರ್ ಮೊದಲಾದುವನ್ನು ಶೇಖರಿಸುವುದರಿಂದಲೂ, ಗಣಿಗಳಿಂದ ಖನಿಜಗಳನ್ನು ತೆಗೆಯುವುದರಿಂದಲೂ ಜೀವಿಸುವರು. ಹತ್ತಿ ಬಟ್ಟೆ, ಸಾರಾಯಿಗಳನ್ನು ಮಾತ್ರ ಅಲ್ಪ ಸ್ವಲ್ಪ ಮಟ್ಟಿಗೆ ತಯಾರುಮಾಡುವರು. ಈ ಖಂಡದಿಂದ ಗೋಧಿ, ರಬ್ಬರ್, ಬೆಳ್ಳಿ ಮೊದ ಲಾದ ಪದಾರ್ಥಗಳನ್ನು ಉತ್ತರ ಅಮೆರಿಕ, ಯುರೊಪ್ ಖಂಡಗಳಿಗೆ ರಫ್ತು ಮಾಡಿ ಅಲ್ಲಿಂದ ಕೈಗಾರಿಕೆಯ ಸಾಮಾನುಗಳನ್ನು ತರಿಸಿಕೊಳ್ಳುವರು. ಕೈಗಾರಿಕೆಗಳು ಈ ಖಂಡದಲ್ಲಿ ಅತ್ಯಂತ ಶೈಶವಾವಸ್ಥೆಯಲ್ಲಿರುವುದಕ್ಕೆ ಇಲ್ಲಿ ಬಹಳ ಕೊಂಚ ಜನರು ವಾಸಮಾಡುತ್ತಿರುವುದೇ ಮುಖ್ಯ ಕಾರಣವು. ಜನ ಸಂಖ್ಯೆಯು ಹೆಚ್ಚಿದರೆ, ಕೈಗಾರಿಕೆಗಳು ಹೆಚ್ಚಲು ಸೌಕರ್ಯಗಳು ಇಲ್ಲಿ ಬೇಕಾದ ಷ್ಟಿರುವುವು.

**ರಾಜಕೀಯ ವಿಭಾಗಗಳು ಮತ್ತು ಮುಖ್ಯ ಪಟ್ಟಣಗಳು.**—ಈ ಖಂಡ ದಲ್ಲಿರುವ ದೇಶಗಳನ್ನು ಭೂಪಟದಲ್ಲಿ ನೋಡಿ. ಇವು ಯಾವುವೆಂದರೆ:—ವೆನಿಜೂಲ, ಗಿಯುನ, ಬ್ರೆಜಿಲ್, ಪರಗ್ವೆ, ಉರುಗ್ವೆ, ಅರ್ಜೆಂಟೈನ, ಚಿಲಿ, ಬೊಲೀವಿಯ, ಪೇರು, ಈಕ್ವೇಡರ್ ಮತ್ತು ಕೊಲಂಬಿಯ. ಈ ಹನ್ನೊಂದು ದೇಶಗಳಲ್ಲಿ ಗಿಯುನೆನದೇಶವು ಮೂರು ಭಾಗವಾಗಿ ಬ್ರಿಟಿಷರಿಗೂ, ಫ್ರೆಂಚರಿಗೂ ಸೇರಿದೆ. ಉಳಿದ ದೇಶಗಳೆಲ್ಲವೂ ಸ್ವತಂತ್ರ ರಾಜ್ಯಗಳಾಗಿವೆ. ಇವುಗಳಲ್ಲಿ ಪ್ರತಿಯೊಂದೂ ಪ್ರಜಾಪ್ರತಿನಿಧಿಪ್ರಭುತ್ವ ವನ್ನು ಹೊಂದಿದೆ. ಪ್ರತಿಯೊಂದು ರಾಜ್ಯದಲ್ಲಿಯೂ ಪ್ರತಿನಿಧಿಗಳ ಎರಡು ಸಭೆ ಗಳನ್ನು ಒಳಗೊಂಡಿರುವ ಕಾಂಗ್ರೆಸ್ ಎಂಬ ಸಭೆಯೂ, ಪ್ರಜೆಗಳಿಂದ ಚುನಾಯಿ ಸಲ್ಪಟ್ಟ ಪ್ರೆಸಿಡೆಂಟ್ ಎಂಬ ಅಧಿಕಾರಿಯೂ ಇರುವರು.

ಈ ಖಂಡದಲ್ಲಿ ಬ್ರಿಟಿಷರಿಗೆ ಬ್ರಿಟಿಷ್ ಗಿಯುನಾ ಮತ್ತು ಫಾಕ್ಲೆಂಡ್ ದ್ವೀಪ ಗಳು ಸೇರಿವೆ. ಬ್ರಿಟಿಷ್ ಗಿಯುನಾದಲ್ಲಿ ಹೆಚ್ಚು ಪ್ರದೇಶವು ಕಾಡಾಗಿದೆ. ಡಮರ ಎಂಬ ಸಣ್ಣ ನದಿಯ ತೀರದಲ್ಲಿರುವ **ಜಾರ್ಜ್‌ಟೌನ್** ಎಂಬುದು ಈ ದೇಶದ ರಾಜ

ಧಾನಿಯೂ, ಮುಖ್ಯ ರೇವುಪಟ್ಟಣವೂ ಆಗಿದೆ. ಇಲ್ಲಿಂದ ವಿಶೇಷ ಸಕ್ಕರೆಯು ರಫ್ತಾಗುವುದು. ಈ ದೇಶದ ಪಶ್ಚಿಮಭಾಗದಲ್ಲಿ ಚಿನ್ನವೂ, ವಜ್ರಗಳೂ ಸಿಕ್ಕುವುವು. ಈ ದೇಶಕ್ಕೆ ನಮ್ಮ ಇಂಡಿಯಾದೇಶದಿಂದ ಕೆಲವು ಕೂಲಿಯವರು ಕೆಲಸಕ್ಕೆ ಹೋಗಿ ಸೇರಿಕೊಂಡಿರುವರು. ಫಾಕ್ಲೆಂಡ್ ದ್ವೀಪಗಳಲ್ಲಿ **ಪೋರ್ಟ್ಸ್ಟಾನ್ಲಿ** ಎಂಬುದು ಮುಖ್ಯ ಪಟ್ಟಣವಾಗಿದೆ. ಇಲ್ಲಿಂದ ಉಣ್ಣೆಯೂ, ಮಾಂಸವೂ ಇಂಗ್ಲೆಂಡಿಗೆ ರಫ್ತಾಗುವುವು.

ಸ್ವತಂತ್ರ ರಾಜ್ಯಗಳಲ್ಲಿ ಬ್ರೆಜಿಲ್ ಮುಖ್ಯವಾದುದು. ಇದರ ವಿಸ್ತೀರ್ಣವೂ, ಜನಸಂಖ್ಯೆಯೂ ಈ ಖಂಡದುದರಲ್ಲಿ ಅರ್ಧವಾಗಿರುವುದು. ವಿಸ್ತಾರದಲ್ಲಿ ಇದು ಪ್ರಪಂಚದಲ್ಲಿ ಐದನೆಯ ರಾಜ್ಯವಾಗಿರುವುದು. ಬ್ರಿಟಿಷ್, ರಷ್ಯಾ, ಚೀಣಾ ಚಕ್ರಾಧಿಪತ್ಯಗಳೂ, ಅಮೆರಿಕದ ಸಂಯುಕ್ತ ಸಂಸ್ಥಾನಗಳೂ ಮಾತ್ರ ವಿಸ್ತಾರ ದಲ್ಲಿ ಇದಕ್ಕಿಂತ ದೊಡ್ಡದಾಗಿವೆ. **ರೈಯೊಡಿಜಿನೈರೋ** ಎಂಬುದು ಈ ದೇಶದ ರಾಜಧಾನಿಯು ಮತ್ತು ಮುಖ್ಯವಾದ ರೇವುಪಟ್ಟಣವು. ಇದರ ಬಂದರು ದಕ್ಷಿಣದಲ್ಲಿ ವಿನಾ ಸುತ್ತಲೂ ಗುಡ್ಡಗಳಿಂದ ಸುತ್ತಲ್ಪಟ್ಟಿದೆ. ಒಳಭಾಗದಲ್ಲಿ ನೀರು ಆಳವಾಗಿದೆ. ಸಾಗರದ ಗಾಳಿಗಳಿಗೆ ಮರೆಯಾಗಿ ಬಂದರಿನಲ್ಲಿ ನೀರು ಶಾಂತವಾಗಿ ರುವುದು. ಭಾರಿ ಹಡುಗುಗಳು ತೀರದ ಅಂಚಿಗೆ ಬರಬಹುದು. ಆದುದರಿಂದ ಈ ಬಂದರು ಪ್ರಪಂಚದಲ್ಲಿರುವ ಅತ್ಯುತ್ತಮವಾದ ಬಂದರುಗಳಲ್ಲಿ ಒಂದಾಗಿದೆ. ಪ್ರಪಂಚದಲ್ಲಿ ಬೆಳೆಯುವ ಕಾಫಿಯಲ್ಲಿ ಅರ್ಧಭಾಗವು ಬ್ರೆಜಿಲ್ ದೇಶದಲ್ಲಿ ಬೆಳೆಯು ವುದು. ಈ ದೇಶದಲ್ಲಿ ಬೆಳೆಯುವ ಕಾಫಿಯಲ್ಲಿ ಅರ್ಧಭಾಗವು ಈ ರೇವುಪಟ್ಟಣದ ಮೂಲಕ ರಫ್ತಾಗುವುದು. ಈ ಪಟ್ಟಣದಲ್ಲಿ ಸುಮಾರು 8 ಲಕ್ಷ ಜನರು ವಾಸ ಮಾಡುವರು. ಈ ಖಂಡದಲ್ಲಿ ಇದೇ ಅತ್ಯಂತ ದೊಡ್ಡ ಪಟ್ಟಣವು.

ಈ ಖಂಡದ ಇತರ ಮುಖ್ಯವಾದ ಪಟ್ಟಣಗಳು ಯಾವುವೆಂದರೆ :—ಮಾಂಟ ವಿಡಿಯೋ ಎಂಬ ರೇವುಪಟ್ಟಣವು ಲಪ್ಲಾಟ ನದಿಯ ಅಳಿವೆಯ ಉತ್ತರ ಭಾಗದಲ್ಲಿದೆ. ಇದು ರುಗ್ವೆ ದೇಶಕ್ಕೆ ರಾಜಧಾನಿಯಾಗಿದೆ. ಈ ಪಟ್ಟಣದ ವಾಯುಗುಣವು ಈ ಖಂಡದಲ್ಲೆಲ್ಲಾ ಅತ್ಯಂತ ಹಿತಕರವಾದುದು. ಪಟ್ಟಣವು ಬಹು ಸುಂದರವಾಗಿದೆ. ಇದರ ಸಮೀಪದಲ್ಲಿ ಹುಲ್ಲುಗಾವಲುಗಳಿರುವುದರಿಂದ ಇಲ್ಲಿಂದ ದನಗಳೂ, ಅವುಗಳ ಚರ್ಮ, ಮಾಂಸಗಳೂ, ಉಣ್ಣೆಯೂ ರಫ್ತಾಗುವುವು.

**ಬೋನಸ್ ಐರಿಸ್.**—ಇದು ಲಪ್ಲಾಟ ಅಳಿವೆಯ ದಕ್ಷಿಣ ಭಾಗದಲ್ಲಿ ರುವ ರೇವುಪಟ್ಟಣವು ಮತ್ತು ಅರ್ಜೆಂಟೈನಾ ದೇಶದ ರಾಜಧಾನಿಯು. ಲಪ್ಲಾಟ ಅಳಿವೆಯು ನದಿಗಳು ತರುವ ಮಣ್ಣಿನಿಂದ ಹೂಳಲ್ಪಡುತ್ತಿರುವುದರಿಂದ ಲಕ್ಷಾಂತರ ರೂಪಾಯಿಗಳನ್ನು ವೆಚ್ಚಮಾಡಿ ಈ ಹೂಳನ್ನು ತೆಗೆಸುತ್ತಿರುವರು. ಗೋಧಿ, ಮಾಂಸಗಳು ಇಲ್ಲಿಂದ ಇಂಗ್ಲೆಂಡು ದೇಶಕ್ಕೆ ವಿಶೇಷವಾಗಿ ರಫ್ತಾಗುವುವು.

**ವಾಲ್ಪರೈಸೊ.**—ಇದು ಚಿಲೀ ದೇಶದಲ್ಲಿರುವ ರೇವುಪಟ್ಟಣವು. ಇದು ಈ ಖಂಡದ ಪಶ್ಚಿಮ ತೀರದಲ್ಲಿರುವ ರೇವುಪಟ್ಟಣಗಳಲ್ಲಿ ಬಹಳ ಪ್ರಸಿದ್ಧವಾದುದು. ಇದರ ಬಂದರು ಚೆನ್ನಾಗಿದೆ. ಆಂಡೀಸ್ ಪರ್ವತಗಳಲ್ಲಿ ಅಕಂಕಾಗುವ ಶಿಖರದ ಬಳಿ ಮಾಡಿರುವ ಸುರಂಗಮಾರ್ಗದ ಮೂಲಕ ಇಲ್ಲಿಂದ ಬೋನಸ್ಐರಿಸ್ಸಿಗೆ ರೈಲು ಮಾರ್ಗವಿರುವುದು. ಈ ಪಟ್ಟಣದಲ್ಲಿ ಆಗಾಗ ಭೂಕಂಪವಾಗುವುದುಂಟು. 1906ನೇ ಇಸವಿಯಲ್ಲಿ ಆದ ಭೂಕಂಪದಲ್ಲಿ 3,000 ಜನರು ಸತ್ತುಹೋದರು; ಒಂದು ಲಕ್ಷ ಜನರ ಮನೆಗಳೂ ಬಿದ್ದುಹೋದುವು. ಈ ಊರಿನಿಂದ ನೂರಾರು ಮೈಲಿಗಳ ದೂರದವರೆಗೂ ಜನರಿಗೆ ನಷ್ಟವುಂಟಾಯಿತು.

**ಗಿಯಾಕಿಲ್.**—ಈ ರೇವುಪಟ್ಟಣವು ಈಕ್ವೇಡರ್ ದೇಶದಲ್ಲಿ ಗಿಯಾಕಿಲ್ ನದೀಮುಖಕ್ಕೆ 60 ಮೈಲಿಗಳ ದೂರದಲ್ಲಿದೆ. ದೊಡ್ಡ ಹಡಗುಗಳು ನದೀಮುಖದಿಂದ ಈ ಪಟ್ಟಣದವರೆಗೂ ಬರುವುವು. ಆದರೆ ಈ ಪಟ್ಟಣದ ಸುತ್ತುಮುತ್ತಿನ ಪ್ರದೇಶವು ಜೌಗು ನೆಲವಾದುದರಿಂದ ಬಹು ಅನಾರೋಗ್ಯಕರವಾಗಿದೆ. ಈ ಪಟ್ಟಣಕ್ಕೆ 30 ಮೈಲಿಗಳಷ್ಟು ದೂರದಲ್ಲಿ ಈ ದೇಶದ ರಾಜಧಾನಿಯಾದ ಕ್ವಿಟೊ ಪಟ್ಟಣವಿರುವುದು. ಮಳೆಗಾಲದಲ್ಲಿ ರಸ್ತೆಯೆಲ್ಲಾ ಕೊಚ್ಚೆಯ ಗುಂಡಿಯಾಗಿರುವುದು. ಆದುದರಿಂದ ಮುನ್ನೂರು ಮೈಲಿಗಳ ದೂರ ಪ್ರಯಾಣಮಾಡಲು 5 ತಿಂಗಳು ಹಿಡಿಯುವುದು. ಗಿಯಾಕಿಲ್ ಪಟ್ಟಣದಿಂದ ಅದರ ಸುತ್ತಮುತ್ತಲೂ ಬೆಳೆಯುವ ಕೋಕೋ ರಫ್ತಾಗುವುದು. ಕ್ವಿಟೋಪಟ್ಟಣವು ಸಮುದ್ರಮಟ್ಟಕ್ಕೆ 10,000 ಅಡಿಗಳಷ್ಟು ಎತ್ತರದಲ್ಲಿರುವುದು. ಇದನ್ನು ಮೇಘಮಂಡಲದ ಮೇಲಿರುವ ಪಟ್ಟಣವೆಂದು ಕರೆಯಬಹುದು.

---

## ಓಷಿಯೇನಿಯ

ಪೆಸಿಫಿಕ್ ಸಾಗರದಲ್ಲಿ ಸಾವಿರಾರು ದ್ವೀಪಗಳು ಅಲ್ಲಲ್ಲಿ ಚದರಿರುವುವು. ಇವುಗಳಲ್ಲಿ ಏಷ್ಯಾಖಂಡಕ್ಕೆ ಸಮೀಪದಲ್ಲಿರುವ ಈಸ್ಟಿಂಡಿಯನ್ ಅಥವಾ ಮಲೇ ದ್ವೀಪಸ್ತೋಮವು ಆ ಖಂಡಕ್ಕೆ ಸಂಬಂಧಿಸಿದೆ. ಉಳಿದ ದ್ವೀಪಗಳನ್ನು ಓಷಿಯೇನಿಯ ಅಥವಾ 'ಸಾಗರದಲ್ಲಿರುವ ದ್ವೀಪಗಳು' ಎಂದು ಕರೆಯುವರು. ಓಷಿಯೇನಿಯವನ್ನು ಆಸ್ಟ್ರೇಲೇಷಿಯ ಮತ್ತು ಪಾಲಿನೇಷಿಯಗಳೆಂದು ಎರಡು ಭಾಗಗಳಾಗಿ ವಿಂಗಡಿಸುವುದು ವಾಡಿಕೆಯಾಗಿದೆ. ಆಸ್ಟ್ರೇಲಿಯ, ಟಾಸ್ಮೇನಿಯ, ನ್ಯೂಗಿನಿ, ನ್ಯೂಜೀಲೆಂಡ್ ದ್ವೀಪಗಳನ್ನು ಆಸ್ಟ್ರೇಲೇಷಿಯವೆಂದೂ ಉಳಿದ ದ್ವೀಪಗಳನ್ನು ಪಾಲಿನೇಷಿಯವೆಂದೂ ಕರೆಯುವರು.

### ಆಸ್ಟ್ರೇಲೇಷಿಯ

ಈ ವಿಭಾಗದಲ್ಲಿರುವ ದ್ವೀಪಗಳಲ್ಲಿ ಆಸ್ಟ್ರೇಲಿಯವು ಇಂಡಿಯಾದೇಶಕ್ಕೆ ಸುಮಾರು ಎರಡರಷ್ಟು ಅಥವಾ ಯೂರೊಪಿಗೆ 3ರಷ್ಟು ವಿಸ್ತಾರವಾಗಿದೆ.

ಪ್ರಪಂಚದಲ್ಲಿರುವ ದ್ವೀಪಗಳಲ್ಲೆಲ್ಲಾ ಇದೇ ದೊಡ್ಡದು. ಇದನ್ನೇ ಒಂದು ಖಂಡ ವಾಗಿ ಭಾವಿಸುವುದೂ ಉಂಟು. ಈ ಖಂಡವು ಖಂಡಗಳಲ್ಲೆಲ್ಲಾ ಅತ್ಯಂತ ಚಿಕ್ಕದು. ಟಾಸ್ಮೇನಿಯವು ಇದಕ್ಕೆ ದಕ್ಷಿಣದಲ್ಲಿರುವ ಸಣ್ಣ ದ್ವೀಪವು, ನ್ಯೂಗಿನಿ ಇದಕ್ಕೆ ಉತ್ತರದಲ್ಲಿರುವುದು. ಆಸ್ಟ್ರೇಲಿಯಕ್ಕೆ ಪೂರ್ವದಲ್ಲಿ ನ್ಯೂಜೀಲೆಂಡ್ ದ್ವೀಪಗಳಿರುವುವು.

## ಆಸ್ಟ್ರೇಲಿಯ

**ಮೇರೆಗಳು ಮತ್ತು ಸನ್ನಿವೇಶ.**—ಆಸ್ಟ್ರೇಲಿಯ ದ್ವೀಪವು ದಕ್ಷಿಣ ಅಕ್ಷಾಂಶ 10°ಗಳಿಂದ 39°ಗಳವರೆಗೆ, ಅಂದರೆ ಸಂಪೂರ್ಣವಾಗಿ ದಕ್ಷಿಣಾರ್ಧ ಗೋಳದಲ್ಲಿ ವಿಸ್ತರಿಸುವುದು. ಆಫ್ರಿಕ, ದಕ್ಷಿಣ ಅಮೆರಿಕ ಖಂಡಗಳಲ್ಲಿ ಒಂದು ಭಾಗವು ಮಾತ್ರ ಸಮಭಾಜಕವೃತ್ತಕ್ಕೆ ದಕ್ಷಿಣದಲ್ಲಿರುವುದು.

ಉತ್ತರದಲ್ಲಿ ವಿನಾ ಈ ದ್ವೀಪಕ್ಕೆ ಸಮೀಪದಲ್ಲಿ ಯಾವ ಭೂಭಾಗವೂ ಇಲ್ಲ. ಹಿಂದೂಸಾಗರ, ದಕ್ಷಿಣಸಾಗರ, ಪೆಸಿಫಿಕ್ ಸಾಗರಗಳು ಈ ಖಂಡವನ್ನು ಸುತ್ತಿರುವುವು. ಪೆಸಿಫಿಕ್ ಸಾಗರದಲ್ಲಿ ಅನೇಕ ದ್ವೀಪಸ್ತೋಮಗಳಿದ್ದರೂ, ಅವು ಈ ದ್ವೀಪಕ್ಕೆ ದೂರವಾಗಿರುವುವು. ನ್ಯೂಜೀಲೆಂಡ್ ದ್ವೀಪಗಳು 1,000 ಮೈಲಿಗಳ ಆಚೆ ಇರುವುವು. ಉತ್ತರದಲ್ಲಿ ಮಾತ್ರ ಹಿಂದೂಸಾಗರದಲ್ಲಿ ನ್ಯೂ ಗಿನಿಯೂ ಈಸ್ಟಿಂಡಿಯಾ ದ್ವೀಪಸ್ತೋಮವೂ ಇದಕ್ಕೆ ಸಮೀಪವಾಗಿರುವುವು. ಆದರೆ ಈಸ್ಟಿಂಡಿಯಾ ದ್ವೀಪಗಳಿಗೂ ಆಸ್ಟ್ರೇಲಿಯಕ್ಕೂ ಮಧ್ಯೆ ಆಳವಾದ ಸಮುದ್ರಗಳಿರುವುದರಿಂದ ಇವೆರಡಕ್ಕೂ ಸಸ್ಯವರ್ಗಗಳಲ್ಲಿಯೂ ಪ್ರಾಣಿವರ್ಗ ಗಳಲ್ಲಿಯೂ ಜನಗಳ ನಾಗರಿಕತೆಯಲ್ಲಿಯೂ ಅತ್ಯಧಿಕವಾದ ವ್ಯತ್ಯಾಸಗಳಿರುವುವು. ಸಮೀಪದಲ್ಲಿ ಇತರ ದೇಶಗಳು ಇಲ್ಲದಿರುವುದರಿಂದ ಶತ್ರುಭಯವಿಲ್ಲದೆ ಉದ್ಯೋಗ ಗಳೂ ಸಂಪತ್ತಿಯೂ ಹೆಚ್ಚಲು ಈ ದ್ವೀಪಕ್ಕೆ ಅನುಕೂಲ್ಯವು ಹೆಚ್ಚಾಗಿದೆ.

**ತೀರಲಕ್ಷಣ.**—ಈ ದ್ವೀಪದ ಸುತ್ತಲೂ ಸಾಗರಗಳಿದ್ದರೂ ಇದರ ಬಹಳ ಸ್ವಲ್ಪ ಭಾಗವು ಮಾತ್ರ ಸಾಗರದ ಸಾಮೀಪ್ಯದಿಂದುಂಟಾಗುವ ಪ್ರಯೋಜನ ಗಳನ್ನು ಪಡೆಯುತ್ತಿರುವುದು. ಇದಕ್ಕೆ ಕಾರಣವೇನೆಂದರೆ: ಇದರ ತೀರದಳತೆಯು ವಿಸ್ತೀರ್ಣಕ್ಕೆ ತಕ್ಕಷ್ಟಿಲ್ಲ. ತೀರವು ಡೊಂಕಾಗಿರದೆ ನೇರವಾಗಿರುವುದು. ಒಳ ಸಮುದ್ರಗಳೂ, ಕೊಲ್ಲಿಗಳೂ, ಸಮುದ್ರಶಾಖೆಗಳೂ, ದ್ವೀಪಗಳೂ ಬಹಳ ಕಡಿಮೆ ಯಾಗಿರುವುವು. ಸರಾಸರಿ ತೀರದಳತೆಯಲ್ಲಿ ಏಷ್ಯವು ಇದಕ್ಕೆ ಮೇಲಾಗಿರುವುದು, ಆಫ್ರಿಕವು ಮಾತ್ರ ಕೀಳಾಗಿರುವುದು.

ಉತ್ತರದಲ್ಲಿ ಕಾರ್ಪೆಂಟೇರಿಯಾ ಕೊಲ್ಲಿಯು ಸ್ವಲ್ಪಮಟ್ಟಿಗೆ ದೊಡ್ಡದಾಗಿರು ವುದು. ಆದರೆ ಇದರ ತೀರದಲ್ಲಿ ಉತ್ತಮವಾದ ಬಂದರುಗಳಿಲ್ಲ. ಮತ್ತು ತೀರ

ಪ್ರದೇಶವು ಜನರಹಿತವಾದುದಾಗಿದೆ. ಇದಕ್ಕೆ ಪೂರ್ವದಲ್ಲಿ ಯಾರ್ಕ್ ಪರ್ಯಾಯ ದ್ವೀಪವಿರುವುದು ; ಅದರ ಉತ್ತರದಲ್ಲಿ ಯಾರ್ಕ್ ಎಂಬ ಭೂಶಿರವಿರುವುದು.

ಪೂರ್ವತೀರದಲ್ಲಿ ದೊಡ್ಡ ಸಮುದ್ರಶಾಖೆಗಳಾವುವೂ ಇಲ್ಲ; ಆದರೆ ಅತ್ಯುತ್ತಮವಾದ ಕೆಲವು ಬಂದರುಗಳಿರುವುವು. ಇವುಗಳಲ್ಲಿ ಸಿಡ್ನಿ ರೇವುಪಟ್ಟಣದ ಬಂದರು ಅತ್ಯುತ್ತಮವಾದುದು. ಇದಕ್ಕೆ ಉತ್ತರದಲ್ಲಿರುವ ಬ್ರಿಸ್ಬೇನ್, ರಾಕ್ ಹಾಂಪ್ಟನ್ ಎಂಬುವು ಉತ್ತಮವಾದ ರೇವುಪಟ್ಟಣಗಳು. ಈಶಾನ್ಯದಲ್ಲಿ ಯಾರ್ಕ್ ಭೂಶಿರದಿಂದ ರಾಕ್‌ಹಾಂಪ್ಟನ್‌ವರೆಗೆ ತೀರಕ್ಕೆ ಸ್ವಲ್ಪ ದೂರದಲ್ಲಿ 1,200 ಮೈಲಿಗಳಷ್ಟು ಉದ್ದವಾಗಿರುವ ಗ್ರೇಟ್‌ಬ್ಯಾರಿಯರ್‌ರೀಫ್ ಎಂಬ ದಿಣ್ಣೆಯು ಸಮುದ್ರದಲ್ಲಿ ಹಬ್ಬಿರುವುದು ; ಇದು ಕಾರಲ್ ಹುಳುಗಳಿಂದ ನಿರ್ಮಿತವಾಗಿರುವುದು. ಈ ದಿಣ್ಣೆಯು ಪೆಸಿಫಿಕ್‌ಸಾಗರದಿಂದ ಬರುವ ಬಿರುಗಾಳಿಗಳನ್ನೂ ಸಾಗರ ಪ್ರವಾಹಗಳನ್ನೂ ಬಹಳ ಮಟ್ಟಿಗೆ ತಡೆಯುವುದರಿಂದ, ಈ ದಿಣ್ಣೆಗೂ ಖಂಡಕ್ಕೂ ಮಧ್ಯದಲ್ಲಿರುವ ಕಡಲ್ಗಾಲುವೆಯಲ್ಲಿ ಅಲೆಗಳೂ ಬಿರುಗಾಳಿಗಳೂ ಕಡಿಮೆಯಾಗಿವೆ. ಆದುದರಿಂದ ಈಶಾನ್ಯದಲ್ಲಿ ಉತ್ತಮವಾದ ಅನೇಕ ಸಣ್ಣ ಸಣ್ಣ ಬಂದರುಗಳಿರುವುವು.

ದಕ್ಷಿಣದಲ್ಲಿ ಬಾಸ್ ಜಲಸಂಧಿಯು ಟಾಸ್ಮೇನಿಯ ದ್ವೀಪವನ್ನು ಪ್ರತ್ಯೇಕಿಸುವುದು. ಮೆಲ್ಬೋರನ್ ಪಟ್ಟಣದ ಬಂದರಿಗೆ ಪಿಲಿಪ್ ಬಂದರೆಂದು ಹೆಸರು. ಇದು 40 ಮೈಲಿಗಳ ಉದ್ದವೂ ಅಗಲವೂ ಉಳ್ಳುದಾಗಿಯೂ ಮುಕ್ಕಾಲು ಮೂರುವೀಸಪಾಲು ನೆಲದಿಂದ ಸುತ್ತಲ್ಪಟ್ಟದ್ದಾಗಿಯೂ ಇರುವುದು. ಆದುದರಿಂದ ಈ ಬಂದರು ಬಹು ವಿಶಾಲವಾದುದಾಗಿಯೂ ಸುರಕ್ಷಿತವಾಗಿಯೂ ಇರುವುದು. ಈ ತೀರದಲ್ಲಿ ಎನ್‌ಕೌಂಟರ್, ಸೆಂಟ್‌ವಿನ್ಸೆಂಟ್ ಮತ್ತು ಸ್ಪೆನ್ಸರ್ ಎಂಬ ಸಣ್ಣ ಖಾರಿಗಳು ಇವೆ; ಆದರೆ ಇವುಗಳಲ್ಲಿ ನೀರು ಆಳವಾಗಿಲ್ಲದೆ, ಮರಳಿನ ದಿಬ್ಬಗಳಿರುವುದರಿಂದ ಹಡಗುಗಳ ಪ್ರಯಾಣಕ್ಕೆ ಇವು ಅನುಕೂಲವಾಗಿಲ್ಲ. ಆಸ್ಟ್ರೇಲಿಯನ್ ಬೈಟ್ ಎಂಬ ಅಗಲವಾದ ಕೊಲ್ಲಿಯ ತೀರದಲ್ಲಿ ಉತ್ತಮವಾದ ಬಂದರುಗಳು ಬಹು ಕಡಿಮೆಯಾಗಿವೆ.

ಪಶ್ಚಿಮತೀರದಲ್ಲಿಯೂ ಒಳ್ಳೆಯ ಬಂದರುಗಳು ಬಹಳ ಕಡಿಮೆ; ಪರ್ತ್, ಪಾಲ್ಮರ್‌ಸ್ಟನ್ ರೇವುಪಟ್ಟಣಗಳ ಬಂದರುಗಳು ಸ್ವಲ್ಪಮಟ್ಟಿಗೆ ಅನುಕೂಲವಾಗಿವೆ. ಈಶಾನ್ಯಭೂಶಿರವೆಂಬುದು ಈ ಖಂಡದ ಅತ್ಯಂತ ಪಶ್ಚಿಮ ಭೂಶಿರವಾಗಿದೆ.

**ಮೇಲ್ಮೈಯ ಲಕ್ಷಣ.**—ಈ ಖಂಡವು ಸಾಮಾನ್ಯವಾಗಿ ತಟ್ಟೆಯಂತಹ ಪ್ರಸ್ಥಭೂಮಿಯಾಗಿದೆ. ದಕ್ಷಿಣತೀರದಲ್ಲಿ ವಿನಾ ಉಳಿದ ತೀರಗಳಲ್ಲಿ ಇಕ್ಕಟ್ಟಾದ ಮೈದಾನಗಳಿರುವುವು. ಮಧ್ಯಭಾಗದ ಪ್ರಸ್ಥಭೂಮಿಯು ಎಲ್ಲಾ ಕಡೆಗಳಲ್ಲಿಯೂ

ಸಮುದ್ರದ ಕಡೆಗೆ ಕಡಿದಾಗಿಯೂ ಒಳಭಾಗಕ್ಕೆ ಇಳಿಜಾರಾಗಿಯೂ ಇರುವುದು. ಅಲ್ಲಲ್ಲಿ ಸಣ್ಣಸಣ್ಣ ಗುಡ್ಡಗಳಿರುವುವು. ಈ ಪ್ರಸ್ಥಭೂಮಿಯ ಎತ್ತರವು 500 ಅಡಿಗಳಿಂದ 3,000 ಅಡಿಗಳವರೆಗೂ ಇರುವುದು. ಆಫ್ರಿಕಾ ಖಂಡವೂ ಹೀಗೆಯೇ ಪ್ರಸ್ಥಭೂಮಿಯಾಗಿರುವುದು; ಆದರೆ ಅದರ ಸರಾಸರಿ ಎತ್ತರವು ಇದಕ್ಕಿಂತ ಹೆಚ್ಚಾಗಿರುವುದು.

ಪಶ್ಚಿಮಭಾಗದ ಪ್ರಸ್ಥಭೂಮಿಯು 1,500 ಅಡಿಗಳಷ್ಟು ಎತ್ತರವಾಗಿದೆ. ಈ ಪ್ರಸ್ಥಭೂಮಿಯ ಉತ್ತರಭಾಗದಲ್ಲಿ 'ದೊಡ್ಡ ಮರಳಿನ ಮರುಭೂಮಿ' ಎಂಬ ಮರುಭೂಮಿಯೂ ದಕ್ಷಿಣದಲ್ಲಿ 'ದೊಡ್ಡ ವಿಕ್ಟೋರಿಯ ಮರುಭೂಮಿ' ಎಂಬ ಮರುಭೂಮಿಯೂ ಇರುವುವು. ಈ ಪ್ರಸ್ಥಭೂಮಿಗೆ ಪೂರ್ವದಲ್ಲಿ ಉತ್ತರ ದಕ್ಷಿಣವಾಗಿ ವಿಸ್ತರಿಸಿರುವ ಪ್ರದೇಶವನ್ನು ಮಧ್ಯಭಾಗದ ಮೈದಾನವೆನ್ನ ಬಹುದು; ಇದು ಸಾಮಾನ್ಯವಾಗಿ 500–1,000 ಅಡಿಗಳಷ್ಟು ಮಾತ್ರ ಎತ್ತರ ವಾಗಿರುವುದು. ಅಲ್ಲದೆ ಕೆಲವು ಕಡೆ ಜೇಡಿಮಣ್ಣು ಬಹಳ ಆಳದವರೆಗೂ ತುಂಬಿರು ವುದು. ಈ ಪ್ರದೇಶದಲ್ಲಿ ಅನೇಕ ಸಣ್ಣ ನದಿಗಳು ಹರಿಯುವುವು; ಆದರೆ ಇವು ಬೇಸಗೆಯಲ್ಲಿ ಬತ್ತಿಹೋಗಿ ನೆಲದಡಿಯಲ್ಲಿ ಅಂತರ್ಜಲವಾಗಿ ಹರಿಯುವುವು. ಹುಲ್ಲುಗಾವಲುಗಳು ಈ ಮೈದಾನದಲ್ಲಿ ವಿಶೇಷವಾಗಿರುವುವು. ಈ ಮೈದಾನ ದಲ್ಲಿ ಎಲ್ಲೆಲ್ಲೂ ಉಪ್ಪುನೀರಿನ ಸರೋವರಗಳಿರುವುವು; ಮಳೆಯು ಕಡಿಮೆ ಯಾದುದರಿಂದಲೂ ನೀರು ಹೆಚ್ಚಾಗಿ ಆವಿಯಾಗಿ ಹೋಗುವುದರಿಂದಲೂ ಈ ಸರೋವರಗಳಿಂದ ನೀರು ಹೊರಗೆ ಹರಿಯುವುದಿಲ್ಲ. ಈ ಉಪ್ಪುನೀರಿನ ಸರೋ ವರಗಳಲ್ಲಿ ಐರ್, ಟಾರೆನ್ಸ್ ಎಂಬುವು ಮುಖ್ಯವಾದುವು. ಟಾರೆನ್ಸ್ ಎಂಬುದು 100 ಮೈಲಿಗಳಷ್ಟು ಉದ್ದವಾದ ಕೊಚ್ಚೆಗುಂಡಿಯಂತೆ ತೋರುವುದು.

ಈ ದ್ವೀಪದ ಪೂರ್ವದಲ್ಲಿ 60ರಿಂದ 100 ಮೈಲಿಗಳವರೆಗೆ ಅಗಲವಾಗಿರುವ ಪ್ರಸ್ಥಭೂಮಿಯಿರುವುದು. ಇದು ಪೂರ್ವತೀರಕ್ಕೆ ಇದಿರಾಗಿ ಕರ್ಪೆಂ ಟೇರಿಯ ಕೊಲ್ಲಿಯ ಬಳಿಯಿಂದ ವಿಕ್ಟೋರಿಯ ಕಾಲೊನಿಯ ಪಶ್ಚಿಮದ ಕೊನೆಯ ವರೆಗೂ ಹಬ್ಬಿದೆ. ಇದರ ಸರಾಸರಿ ಎತ್ತರವು 2,000 ಅಡಿಗಳು. ಆದರೆ ಅಲ್ಲಲ್ಲಿ ಉನ್ನತವಾದ ಬೆಟ್ಟಗಳಿವೆ. ಇವುಗಳಲ್ಲಿ ಮುಖ್ಯವಾದುದು 'ಗ್ರೇಟ್‌ಡಿವೈಡಿಂಗ್ ರೇಂಜ್'ಎಂಬ ಬೆಟ್ಟದ ಪಙ್ಕ್ತಿಯು. ಇದು ಯಾರ್ಕ್ ಭೂಶಿರದಿಂದ ತಾಸ್ಮೇ ನಿಯಾ ದ್ವೀಪದವರೆಗೂ ಸುಮಾರು 2,000 ಮೈಲಿಗಳಷ್ಟು ಉದ್ದವಾಗಿ ಹಬ್ಬಿರು ವುದು. ಇದಕ್ಕೆ ಬೇರೆಬೇರೆ ಭಾಗಗಳಲ್ಲಿ ಬೇರೆ ಬೇರೆ ಹೆಸರುಗಳಿರುವುವು. ಇವು ಗಳಲ್ಲಿ ನೀಲಪರ್ವತವೆಂಬುದು ಬಹಳ ಎತ್ತರವಾಗಿ ಸಿಡ್ನಿ ರೇವುಪಟ್ಟಣಕ್ಕೆ ಪಶ್ಚಿಮ ದಲ್ಲಿ ಹಬ್ಬಿರುವುದು. ಆಸ್ಟ್ರೇಲಿಯನ್ ಆಲ್ಪ್ಸ ಎಂಬುದು ನ್ಯೂಸೌತ್ ವೇಲ್ಸ್, ವಿಕ್ಟೋರಿಯಾಗಳಲ್ಲಿ ಹಬ್ಬಿರುವುದು. ಇವೆರಡೂ ಸಂಧಿಸುವ ಕಡೆ ಇರುವ 'ಕೋಸಿಯುಸ್ಕೊ' ಎಂಬ ಶಿಖರವು ಆಸ್ಟ್ರೇಲಿಯದಲ್ಲಿ ಅತ್ಯುನ್ನತ

ಶಿಖರವು. ಇದು 7,000 ಅಡಿಗಳಷ್ಟು ಅಥವಾ ಸುಮಾರು ನೀಲಗಿರಿಯ ದೊಡ್ಡ ಬೆಟ್ಟದಷ್ಟು ಎತ್ತರವಾಗಿದೆ. ಸಮಭಾಜಕವೃತ್ತಕ್ಕೆ ಬಹಳ ದೂರದಲ್ಲಿರುವುದರಿಂದ ಈ ಬೆಟ್ಟದ ಮೇಲೆ ಚಳಿಗಾಲದಲ್ಲಿ ಮಂಜು ಬಿದ್ದು ಹೆಪ್ಪುಕಟ್ಟುವುದು.

**ವಾಯುಗುಣ ಮತ್ತು ಮಳೆ.**—ಮಕರಸಂಕ್ರಾಂತಿ ವೃತ್ತವು ಸುಮಾರಾಗಿ ಈ ದ್ವೀಪದ ಮಧ್ಯಭಾಗದಲ್ಲಿ ಹಾದುಹೋಗಿರುವುದರಿಂದ ಈ ದ್ವೀಪದ ಉತ್ತರಭಾಗವು ಉಷ್ಣವಲಯದಲ್ಲಿದೆ, ದಕ್ಷಿಣಭಾಗವು ಸಮಶೀತೋಷ್ಣವಲಯದಲ್ಲಿದೆ. ಆದರೆ ಯಾವ ಭಾಗವೂ (ದಕ್ಷಿಣದ ಕೊನೆಯಲ್ಲಿ ವಿನಾ) ಮಕರ ಸಂಕ್ರಾಂತಿ ವೃತ್ತಕ್ಕೆ ಬಹಳ ದೂರದಲ್ಲಿಲ್ಲದಿರುವುದರಿಂದಲೂ, ಬಹಳ ಎತ್ತರವಾದ ಪರ್ವತಗಳೂ ಪ್ರಸ್ಥಭೂಮಿಗಳೂ ಇಲ್ಲದಿರುವುದರಿಂದಲೂ, ಸಮುದ್ರವು ಖಂಡದೊಳಕ್ಕೆ ವಿಶೇಷವಾಗಿ ನುಗ್ಗದಿರುವುದರಿಂದಲೂ, ಖಂಡದ ಮಧ್ಯದಲ್ಲಿ ವಿಶಾಲವಾದ ಮರುಭೂಮಿಗಳಿರುವುದರಿಂದಲೂ ಈ ಖಂಡದ ಎಲ್ಲಾ ಭಾಗಗಳಲ್ಲಿಯೂ ಸೆಕೆಯು ಹೆಚ್ಚಾಗಿರುವುದು. ಆಗ್ನೇಯದ ಕೊನೆಯಲ್ಲಿ ಮಾತ್ರ, ಅಂದರೆ ವಿಕ್ಟೋರಿಯದಲ್ಲಿ ಎತ್ತರವಾದ ಬೆಟ್ಟಗಳು ಹೆಚ್ಚಾಗಿರುವುದರಿಂದಲೂ ಮಕರ ಸಂಕ್ರಾಂತಿವೃತ್ತಕ್ಕೆ ಹೆಚ್ಚು ದೂರವಾಗಿರುವುದರಿಂದಲೂ ವಾಯುಗುಣವು ತಂಪಾಗಿರುವುದು. ಚಳಿಗಾಲದಲ್ಲಿ ಹಿಮವು ಬೀಳುವುದು. ಸಾಮಾನ್ಯವಾಗಿ ಸಮುದ್ರತೀರದ ಮೈದಾನದಲ್ಲಿ ಸೆಕೆಯು ಸ್ವಲ್ಪ ಕಡಿಮೆಯಾಗಿರುವುದು.

ವಾಯುಗುಣದಲ್ಲಿ ಆಸ್ಟ್ರೇಲಿಯವು ಇಂಡಿಯಾದೇಶವನ್ನು ಸ್ವಲ್ಪ ಮಟ್ಟಿಗೆ ಹೋಲುವುದು. ಇಂಡಿಯಾದೇಶದ ಮಧ್ಯದಲ್ಲಿಯೂ ಸಂಕ್ರಾಂತಿವೃತ್ತವು (ಕರ್ಕಾಟಕ ಸಂಕ್ರಾಂತಿ ವೃತ್ತ) ಹಾದುಹೋಗಿರುವುದು ; ಅರ್ಧ ಭಾಗವು ಉಷ್ಣವಲಯದಲ್ಲಿಯೂ ಮಿಕ್ಕ ಅರ್ಧಭಾಗವು ಸಮಶೀತೋಷ್ಣವಲಯದಲ್ಲಿಯೂ ಇರುವುವು. ಆದರೆ ಇಂಡಿಯಾದೇಶದಲ್ಲಿ ಉಷ್ಣವಲಯದ ಭಾಗವು ಸಮಶೀತೋಷ್ಣವಲಯದ ಭಾಗಕ್ಕಿಂತಲೂ ಸ್ವಲ್ಪ ಹೆಚ್ಚಾಗಿದೆ. ಸಮಶೀತೋಷ್ಣವಲಯದ ಭಾಗದ ಉತ್ತರದಲ್ಲಿ ಅತ್ಯುನ್ನತವಾದ ಪರ್ವತಶ್ರೇಣಿಯಿರುವುದರಿಂದಲೂ ಶೀತವಾದ ಗಾಳಿಯು ಉತ್ತರದಿಂದ ಬೀಸಿ ಬರುವುದರಿಂದಲೂ ಚಳಿಯು ಹೆಚ್ಚು; ಅದರಲ್ಲೂ ಹಿಮಂತಋತುವಿನಲ್ಲಿ ಸಹಿಸಲಶಕ್ಯವಾದಷ್ಟು ಚಳಿಯಾಗುವುದು. ಆಸ್ಟ್ರೇಲಿಯದ ದಕ್ಷಿಣದಲ್ಲಿ ಚಳಿಯು ಇಷ್ಟಿಲ್ಲವೆನ್ನಬಹುದು. ಈ ದ್ವೀಪದ ಪೂರ್ವಭಾಗದಲ್ಲಿ ಆಗ್ನೇಯ ದಿಕ್ಕಿನಿಂದ ವಾಣಿಜ್ಯಮಾರುತಗಳು ಬೀಸುವುವು. ಇವು ತಕ್ಕಮಟ್ಟಿಗೆ ಮೋಡಗಳನ್ನು ತರುವುವು. ಇವು ಪೂರ್ವತೀರಕ್ಕೆ ಇದಿರಾಗಿರುವ ಬೆಟ್ಟಗಳಿಂದ ತಡೆಯಲ್ಪಟ್ಟು ಪೂರ್ವತೀರದ ಮೈದಾನದಲ್ಲಿ ವಿಶೇಷವಾಗಿ ಮಳೆಯನ್ನು ಸುರಿಯುವುವು; ಆದರೆ ಒಳಭಾಗಕ್ಕೆ ಈ ಗಾಳಿಯು ಹೋದಾಗ ಜಲಾಂಶವು ಕಡಿಮೆಯಾಗಿರುವುದರಿಂದ ಅಲ್ಲಿ ಮಳೆಯು ಸ್ವಲ್ಪ ಮಾತ್ರ ಬೀಳುವುದು. ಪಶ್ಚಿಮತೀರಕ್ಕೆ ಸಮೀಪದಲ್ಲಿ ಶೀತೋದಕಪ್ರವಾಹವೊಂದಿರುವುದು.

ಕ್ಲಪ್ತವಾದ ಮಾರುತಗಳು ಬೀಸುವುದಿಲ್ಲ, ಆದುದರಿಂದ ಅಲ್ಲಿ ಮಳೆ ಕಡಿಮೆ. ನೈರುತ್ಯಮೂಲೆಯು ತೀರಪ್ರದೇಶದಲ್ಲಿ ಮಾತ್ರ ಹೆಚ್ಚಾಗಿ ಮಳೆಯಾಗುವುದು.

ಒಟ್ಟಿನಲ್ಲಿ ಉತ್ತರ ಪೂರ್ವ ತೀರಪ್ರದೇಶಗಳಲ್ಲಿಯೂ ನೈರುತ್ಯಮೂಲೆಯಲ್ಲಿಯೂ ಮಳೆಯು ವರ್ಷಕ್ಕೆ 40 ಅಂಗುಲಗಳಿಗಿಂತ ಹೆಚ್ಚಾಗಿ ಬೀಳುವುದು; ಉತ್ತರದಿಂದ ದಕ್ಷಿಣಕ್ಕೂ, ಪೂರ್ವದಿಂದ ಪಶ್ಚಿಮಕ್ಕೂ ಹೋದಹಾಗೆ ಮಳೆಯು ಕಡಿಮೆಯಾಗುವುದು. ಅಂತಹ ಮಧ್ಯಭಾಗದಲ್ಲಿಯೂ ದಕ್ಷಿಣಭಾಗದಲ್ಲಿಯೂ ಮಳೆಯು ಬೀಳುವುದು ಬಹಳ ಕಡಿಮೆ.

ಮಧ್ಯಭಾಗದಲ್ಲಿ ಮಳೆಯು ಬಹಳ ಕಡಿಮೆಯಾದುದರಿಂದ ವಿಸ್ತಾರವಾದ ಮರಳುಕಾಡುಗಳಿವೆ; ಅಲ್ಲಿ ಸೆಕೆಯು ಆಫ್ರಿಕದ ಮರುಭೂಮಿಗಳಿಗಿಂತ ಹೆಚ್ಚಾಗಿರುವುದು.

**ನದಿಗಳು.**—ಈ ಖಂಡದಲ್ಲಿ ಮಳೆಯು ಕಡಿಮೆಯಾದುದರಿಂದಲೂ ಬೆಟ್ಟದ ಸಾಲುಗಳು ಸಮೀಪದಲ್ಲಿರುವುದರಿಂದಲೂ ದೊಡ್ಡ ನದಿಗಳು ಬಹಳ ಕಡಿಮೆ.

ಪಶ್ಚಿಮ ಪ್ರಸ್ಥಭೂಮಿಯಲ್ಲಿ ಕೆಲವು ನದಿಗಳು ಹುಟ್ಟಿ, ಹಿಂದೂಸಾಗರಕ್ಕೆ ಬೀಳುವುವು. ಈ ಪ್ರಸ್ಥಭೂಮಿಯಲ್ಲಿ ನೈರುತ್ಯಭಾಗದಲ್ಲಿ ವಿನಾ ಮಳೆಯು ಕಡಿಮೆಯಾದುದರಿಂದಲೂ ಜಲವಿಭಾಗಸ್ಥಾನವು ಸಮುದ್ರಕ್ಕೆ ಸಮೀಪವಾಗಿರುವುದರಿಂದಲೂ ಈ ನದಿಗಳಲ್ಲಿ ನೀರು ಕಡಿಮೆ. ಇವುಗಳು ಉದ್ದವಾಗಿಯೂ ಇಲ್ಲ. ಸ್ವಾನ್ ನದಿಯು ಇವುಗಳಲ್ಲೆಲ್ಲಾ ದೊಡ್ಡದು; ಇದರ ಮುಖದ ಸಮೀಪದಲ್ಲಿ ಫರ್ತ್ ಪಟ್ಟಣವಿರುವುದು.

ಪೂರ್ವದ ಪ್ರಸ್ಥಭೂಮಿಯಲ್ಲಿ ಹುಟ್ಟುವ ಕೆಲವು ನದಿಗಳು ಪೂರ್ವತೀರದ ಮೈದಾನಗಳ ಮೇಲೆ ಹರಿದು ಪೆಸಿಫಿಕ್ ಸಾಗರಕ್ಕೆ ಬೀಳುವುವು. ಈ ನದಿಗಳು ಹರಿಯುವ ಪ್ರದೇಶದಲ್ಲಿ ಮಳೆಯು ಚೆನ್ನಾಗಿ ಬೀಳುವುದರಿಂದ ಇವುಗಳಲ್ಲಿ ನೀರು ಹೆಚ್ಚಾಗಿರುವುದು; ಆದರೆ ಪ್ರಸ್ಥಭೂಮಿಯು ಸಾಗರಕ್ಕೆ ಸ್ವಲ್ಪ ದೂರದಲ್ಲಿಯೇ ಇರುವುದರಿಂದ ನದಿಗಳು ಉದ್ದವಾಗಿರಲು ಅವಕಾಶವಿಲ್ಲ. ಬರ್ಡ್‌ಕಿನ್, ಫಿಟ್ಸ್‌ರಾಯ್ ಎಂಬುವು ಇವುಗಳಲ್ಲಿ ಮುಖ್ಯವಾದುವು.

ಈ ನದಿಗಳೆಲ್ಲವೂ ಪರ್ವತಪ್ರದೇಶದಿಂದ ಮೈದಾನಕ್ಕಿಳಿದು ವೇಗವಾಗಿ ಹರಿಯುವುದರಿಂದ ಹಡಗುಗಳ ಸಂಚಾರಕ್ಕೆ ಯೋಗ್ಯವಾಗಿಲ್ಲ. ಆದರೆ ಅವುಗಳ ಮುಖಗಳು ಅಳಿವೆಗಳಾಗಿರುವುವು. ಕೆಲವು ಮುಖಗಳಲ್ಲಿ ಉತ್ತಮವಾದ ಬಂದರುಗಳಿವೆ.

ಪೂರ್ವದಿಕ್ಕಿನ ಪರ್ವತಶ್ರೇಣಿಯಿಂದ ಪಶ್ಚಿಮಕ್ಕೂ ದಕ್ಷಿಣಕ್ಕೂ ಮಧ್ಯಭಾಗದ ಮೈದಾನಗಳ ಮೇಲೆ ಹರಿಯುವ ನದಿಗಳು ಉದ್ದವಾಗಿರುವುವು. ಆದರೆ ಅಲ್ಪವೃಷ್ಟಿಯುಳ್ಳ ಪ್ರದೇಶಗಳಲ್ಲಿ ಹರಿಯುವುದರಿಂದ ಸಮುದ್ರದ ಕಡೆಗೆ ಹೋದಹಾಗೆ ಇವುಗಳಲ್ಲಿ ನೀರು ಕಡಿಮೆಯಾಗುತ್ತಾ ಹೋಗುವುದು. ಬೇಸಗೆಯಲ್ಲಂತೂ

ದಾರದಹಾಗೆ ಹರಿಯುವುವು; ಇಲ್ಲದಿದ್ದರೆ ಸಂಪೂರ್ಣವಾಗಿ ಬತ್ತಿಹೋಗುವುವು. ಮಳೆಗಾಲದಲ್ಲಿ ಮಾತ್ರ ಪ್ರವಾಹವು ಹೆಚ್ಚಿ ಭೋರ್ಗರೆಯುವುವು. ಮಕರ ಸಂಕ್ರಾಂತಿವೃತ್ತಕ್ಕೆ ಉತ್ತರದಲ್ಲಿ ಹುಟ್ಟಿ ಐರ್ ಸರೋವರಕ್ಕೆ ಹರಿಯುವ ಕೂಪರ್ ನದಿಯು 11 ತಿಂಗಳು ದೊಡ್ಡ ಕೊಚ್ಚೆಯ ಗುಂಡಿಯಂತಿರುವುದು; ನೀರು ನಿಂತೇ ಇದ್ದಹಾಗಿರುವುದು, ಹರಿಯುವುದೇ ಕಾಣುವುದಿಲ್ಲ. ಆದರೆ ಮಳೆಗಾಲದಲ್ಲಿ 1 ತಿಂಗಳು ಮಾತ್ರ ಈ ನದಿಯು 7 ಮೈಲಿಗಳಷ್ಟು ಅಗಲವಾಗಿ ತುಂಬಿ ಹರಿಯುವುದು. ಆ ಕಾಲದಲ್ಲಿ ಇದರ ನೀರಿನಿಂದ ಐರ್ ಸರೋವರವು 7,000 ಚ. ಮೈಲಿಗಳಷ್ಟು, ಅಂದರೆ ಸುಮಾರಾಗಿ ಮೈಸೂರು ದೇಶದ ¼ ಪಾಲಿನಷ್ಟು ದೊಡ್ಡದಾಗಿ ಕಾಣುವುದು. ಬೇಸಗೆಯಲ್ಲಿ ಈ ಸರೋವರವು ಒಣಗಿ ಉಪ್ಪು ಮಣ್ಣಾಗಿಯೂ ಕೆಲವುಕಡೆ ಮಾತ್ರ ಕೆಸರಾಗಿಯೂ ಕಾಣುವುದು.

ಈ ದ್ವೀಪದ ನದಿಗಳಲ್ಲಿ ಡಾರ್ಲಿಂಗ್ ಮರ್ರೆ ನದೀವ್ಯೂಹವು ಮುಖ್ಯವಾದುದು. ಡಾರ್ಲಿಂಗ್ ನದಿಯು ಕ್ವೀನ್ಸ್‌ಲೆಂಡಿನಲ್ಲಿ ಹುಟ್ಟಿ ಪೂರ್ವಭಾಗದ ಬೆಟ್ಟಗಳಿಂದ ಅನೇಕ ಉಪನದಿಗಳನ್ನು ಸ್ವೀಕರಿಸಿ ನೈರುತ್ಯದಿಕ್ಕಿಗೆ ಹರಿಯುವುದು. ಮರ್ರೆ ನದಿಯು ವಿಕ್ಟೋರಿಯದಲ್ಲಿ ಹುಟ್ಟಿ ಅನೇಕ ಉಪನದಿಗಳನ್ನು ಸ್ವೀಕರಿಸಿ ಪಶ್ಚಿಮಕ್ಕೆ ಹರಿದು ಡಾರ್ಲಿಂಗ್ ನದಿಯನ್ನು ಸ್ವೀಕರಿಸಿ ದಕ್ಷಿಣಕ್ಕೆ ತಿರುಗಿ ಅಲೆಕ್ಸಾಂಡ್ರ ಸರೋವರವನ್ನು ಮಾಡಿಕೊಂಡು ಸಮುದ್ರವನ್ನು ಸೇರುವುದು. ಡಾರ್ಲಿಂಗ್ ನದಿಯು ಪ್ರವಾಹ ಕಾಲದಲ್ಲಿ 10 ಮೈಲಿಗಳಷ್ಟು ಅಗಲವಾಗಿರುವುದು; ಆದರೆ ಬೇಸಿಗೆಯಲ್ಲಿ ಇದರಲ್ಲಿ ನೀರಿರುವುದು ಅಪೂರ್ವ. ಮರ್ರೆ ಮತ್ತು ಅದರ ಇತರ ಉಪನದಿಗಳು ವಿಕ್ಟೋರಿಯದಲ್ಲಿರುವ ಬೆಟ್ಟಗಳಲ್ಲಿ ಹುಟ್ಟುವುದರಿಂದಲೂ ಅಲ್ಲಿ ಮಳೆಯು ಹೆಚ್ಚಾಗಿ ಬೀಳುವುದಲ್ಲದೆ ಬೇಸಗೆಯಲ್ಲಿ ಹಿಮವು ಕರಗುವುದರಿಂದಲೂ, ಇವುಗಳಲ್ಲಿ ಬೇಸಗೆಯಲ್ಲಿಯೂ ನೀರು ಹೆಚ್ಚಾಗಿರುವುದು.

ಹೀಗೆ ನದಿಗಳಲ್ಲಿ ನೀರು ಸ್ವಲ್ಪವಾಗಿದ್ದರೂ ಈಚೆಗೆ ಜನರು ಇವುಗಳಿಗೆ ಅಣೆಕಟ್ಟುಗಳನ್ನು ಕಟ್ಟಿ ಕಾಲುವೆಗಳನ್ನು ತೆಗೆದು ಜಮೀನಿಗೆ ನೀರನ್ನು ಒದಗಿಸುತ್ತಿರುವರು. ಅನೇಕ ಭಾಗಗಳಲ್ಲಿ ನದಿಯ ಪಾತ್ರವು ಒಣಗಿದ್ದರೂ ಸ್ವಲ್ಪ ತೋಡಿದರೆ ನೀರು ಕಾಣಬರುವುದು; ಹೀಗೆ ಗುಂಡಿಗಳನ್ನು ತೋಡಿ ಅವುಗಳ ಸಹಾಯದಿಂದಲೂ ನೀರನ್ನು ಒದಗಿಸಿಕೊಳ್ಳುವರು.

ಆಸ್ಟ್ರೇಲಿಯದ ನದಿಗಳನ್ನು ದಖನ್ನಿನ ಪ್ರಸ್ಥಭೂಮಿಯ ನದಿಗಳಿಗೆ ಹೋಲಿಸಬಹುದು. ಎರಡು ಪ್ರದೇಶಗಳ ನದಿಗಳಲ್ಲೂ ನೀರಿನ ಸೆಳವು ಹೆಚ್ಚು; ಬೇಸಗೆಯಲ್ಲಿ ನೀರು ಬತ್ತಿಹೋಗುವುದು; ಮಳೆಗಾಲದಲ್ಲಿ ಕೆಂಪಾದ ಮಣ್ಣಿನಿಂದ ಕೂಡಿದ ಪ್ರವಾಹವು ಜೋರಾಗಿ ಬಂದು ನದಿಗಳು ತುಂಬಿ ಹರಿಯುವುವು. ಇವು ಹಡಗುಗಳ ಸಂಚಾರಕ್ಕೆ ಅನುಕೂಲವಾಗಿಲ್ಲ; ವ್ಯವಸಾಯಕ್ಕೆ ಉಪಯೋಗವಾಗಿವೆ. ಆಸ್ಟ್ರೇಲಿಯದ ಮಧ್ಯಭಾಗದ ನದಿಗಳ ಉದ್ದವು ಹೆಚ್ಚು, ಆದರೆ

ಬೇಸಿಗೆಯಲ್ಲಿ ನೀರು ಇನ್ನೂ ಕಡಿಮೆ. ನಿರ್ಜನವಾದ ಪ್ರದೇಶಗಳಲ್ಲಿ ಹರಿಯು ವುದರಿಂದ ಅಷ್ಟು ಪ್ರಯೋಜನಕಾರಿಗಳಾಗಿಲ್ಲ.

**ಸಸ್ಯಗಳು.**—ಈ ಖಂಡವು ಇತರ ಖಂಡಗಳಿಗೆ ದೂರದಲ್ಲಿರುವುದು; ಇದನ್ನು ಈಸ್ಟಿಂಡಿಯ ದ್ವೀಪಗಳಿಂದ ಆಳವಾದ ಸಮುದ್ರಗಳು ಪ್ರತ್ಯೇಕಿಸುವುವು. ಆದುದ ರಿಂದ ಈ ಖಂಡದ ಸಸ್ಯಗಳನ್ನೂ ಪ್ರಾಣಿಗಳನ್ನೂ ಇತರ ಖಂಡಗಳ ಸಸ್ಯ ಪ್ರಾಣಿ ಗಳೊಂದಿಗೆ ಹೋಲಿಸಿ ನೋಡಿದರೆ ಅತಿವಿಜಾತೀಯವಾಗಿ ಕಾಣುವುವು. ಯೂರೊ ಪಿಯನ್ನರು ಈ ಖಂಡಕ್ಕೆ ಮೊದಲು ಬಂದಾಗ (1788ರಲ್ಲಿ) ತಮಗೆ ಪರಿಚಿತ ವಾದ ಗೋಧಿ ಮೊದಲಾದ ಧಾನ್ಯಗಳಾಗಲಿ, ಓಕ್, ಬೀಚ್ ಮೊದಲಾದ ಕಾಡು ಮರಗಳಾಗಲಿ, ಕರಡಿ, ತೋಳವೇ ಮೊದಲಾದ ದುಷ್ಟಮೃಗಗಳಾಗಲಿ, ಹಸು, ಕುರಿ ಮೊದಲಾದ ಸಾಧುಪ್ರಾಣಿಗಳಾಗಲಿ ಇಲ್ಲದಿದ್ದುದನ್ನೂ ಇಲ್ಲಿನ ಪ್ರಾಣಿಗಳೂ ಸಸ್ಯಗಳೂ ವಿಜಾತೀಯವಾಗಿದ್ದುದನ್ನೂ ನೋಡಿ ಅತ್ಯಾಶ್ಚರ್ಯಪಟ್ಟರು.

ಯೂರೊಪಿಯನ್ನರು ಬರುವುದಕ್ಕೆ ಮುಂಚೆ ಈ ಖಂಡದಲ್ಲಿ ಭೂಮಿ ಯನ್ನು ವ್ಯವಸಾಯ ಮಾಡುತ್ತಿರಲಿಲ್ಲವಾದುದರಿಂದ ಎಲ್ಲೆಲ್ಲೂ ಕಾಡುಗಳಿದ್ದುವು. ಮಳೆಯು ಕಡಿಮೆಯಾದ ಸ್ಥಳಗಳಲ್ಲಿ ಮುಳ್ಳುಗಿಡಗಳ ಪೊದೆಗಳಿದ್ದುವು. ಈ ಕಾಡುಗಳಲ್ಲಿ ತಾಳೆ, ಬೆಯಾಬಾಬ್, ಯೂಕಲಿಪ್ಟಸ್ ಎಂಬ ಮರಗಳೂ ಜಾಯಿ ಕಾಯಿ ಮೊದಲಾದುವೂ ತಾವಾಗಿಯೇ ಬೆಳೆಯುತ್ತಿದ್ದುವು.

ಯೂಕಲಿಪ್ಟಸ್ ಎಂಬುದು ಈ ಖಂಡದ ಎಲ್ಲಾ ಭಾಗಗಳಲ್ಲೂ ಬೆಳೆಯು ವುದು. ಇದು ಕೊಂಬೆಗಳನ್ನು ಬಿಟ್ಟು ಅಗಲವಾಗಿ ಹರಡದೆ ಎತ್ತರವಾಗಿ ಬೆಳೆ ಯುವುದು. ಕೆಲವು ಮರಗಳು 400 ಅಡಿಗಳಷ್ಟು ಎತ್ತರವಾಗಿರುವುವು. ಇದರ ಎಲೆಗಳು ಸೂರ್ಯನ ಕಡೆಗೆ ತಮ್ಮ ಅಂಚುಗಳನ್ನು ತಿರುಗಿಸಿಕೊಂಡಿರುವುದರಿಂದ ಬಿಸಿಲಿನಿಂದ ಒಣಗಿ ಹೋಗುವುದಿಲ್ಲ. ಈ ಮರದ ತೊಗಟೆಯು ದಪ್ಪವಾಗಿರು ವುದು. ಇತರ ವೃಕ್ಷಗಳಲ್ಲಿ ಎಲೆಗಳು ಉದುರುವ ಹಾಗೆ ಇದರಲ್ಲಿ ತೊಗಟೆಯೂ ಉದುರುವುದು. ಈ ಮರದಿಂದ ತೊಲೆಗಳೂ ಔಷಧಿಗೆ ಉಪಯೋಗವಾದ ಯೂಕಲಿಪ್ಟಸ್ ಎಣ್ಣೆಯೂ ಸಿಕ್ಕುವುವು. ಈ ಮರಗಳ ಮೇಲೆ ಬೀಸುವ ಗಾಳಿಯು ಜ್ವರಹರಿಯೆಂದು ಈಚೆಗೆ ಇತರ ಖಂಡಗಳಲ್ಲಿ ಮಲೇರಿಯ ರೋಗ ವಿರುವ ಪ್ರದೇಶಗಳಲ್ಲಿ ಇವುಗಳನ್ನು ಬೆಳೆಯಿಸುತ್ತಿರುವರು.

ಈ ಖಂಡದ ಮರಳುಭೂಮಿಗಳಲ್ಲಿ ಮುಳ್ಳುಗಿಡಗಳು ವಿಶೇಷವಾಗಿರುವುವು. ಇವುಗಳಲ್ಲಿ ಕೆಲವು ಜಾತಿಯ ಗಿಡಗಳಲ್ಲಿ ಬೇಸಗೆಯಲ್ಲಿಯೂ ನೀರಿರುವುದು; ಈ ನೀರನ್ನು ತೆಗೆದು ಕಾಡುಜನರು ಕುಡಿಯುತ್ತಾರೆ.

ಯೂರೊಪಿಯನ್ನರು ಈ ದೇಶಕ್ಕೆ ಬಂದನಂತರ ಕಾಡುಗಳನ್ನೆಲ್ಲಾ ಕಡಿ ಯುತ್ತಿರುವರು. ಈಗ ಬೆಟ್ಟಗಳ ಕವಲುಗಳಲ್ಲಿ ವಿನಾ ಕಾಡುಮರಗಳು ಕಡಿಮೆ.

ಫಲವತ್ತಾದ ಪೂರ್ವತೀರದ ಮೈದಾನದಲ್ಲಿ ಇತರ ಖಂಡಗಳ ಸಸ್ಯಗಳನ್ನು ತಂದು ಬೆಳೆಸಿರುವರು. ಈ ಮೈದಾನದ ಉತ್ತರಭಾಗದಲ್ಲಿ ಸೆಕೆಯೂ ಮಳೆಯೂ ಹೆಚ್ಚಾಗಿರುವುದರಿಂದ ಕಬ್ಬು, ಭತ್ತ, ಬಾಳೆ ಮೊದಲಾದ ಉಷ್ಣವಲಯದ ಸಸ್ಯಗಳೂ ಬೆಳೆಯುವುವು. ಸೆಕೆ ಸ್ವಲ್ಪ ಕಡಿಮೆಯಾಗಿರುವ ಮಧ್ಯಭಾಗದಲ್ಲಿ ಮೆಕ್ಕೆಜೋಳ, ಹೊಗೆಸೊಪ್ಪು, ಕಿತ್ತಿಲೆಹಣ್ಣು ಮೊದಲಾದುವೂ ಮೆಡಿಟರೇನಿಯನ್ ಹವವುಳ್ಳ ದಕ್ಷಿಣಭಾಗದಲ್ಲಿ ಗೋಧಿ, ದ್ರಾಕ್ಷಿ, ಸೇಬು ಮೊದಲಾದುವೂ ಬೆಳೆಯುವುವು.

ಪೂರ್ವಭಾಗದ ಪ್ರಸ್ಥಭೂಮಿಯ ಪಶ್ಚಿಮದ ತಪ್ಪಲುಗಳಲ್ಲಿ ಹುಲ್ಲುಗಾವಲುಗಳಿರುವುವು. ಇವುಗಳಲ್ಲಿ ದನಗಳನ್ನೂ ಕುದುರೆಗಳನ್ನೂ ಮೇಯಿಸುವರು. ಅಲ್ಲಲ್ಲಿ ನದಿಗಳ ಕಾಲುವೆಗಳ ಅಥವಾ ಆಳವಾದ ಭಾವಿಗಳ ಸಹಾಯದಿಂದ ಗೋಧಿಯನ್ನೂ, ಕಿತ್ತಿಲೆ, ದ್ರಾಕ್ಷಿ ಹಣ್ಣುಗಳನ್ನೂ ಬೆಳೆಯುತ್ತಿರುವರು. ಆಸ್ಟ್ರೇಲಿಯದ ಕಿತ್ತಿಲೆಹಣ್ಣು ಬಹಳ ದೊಡ್ಡದು; ಇದರಲ್ಲಿ ಬೀಜಗಳಿಲ್ಲ.

ಈ ದ್ವೀಪದ ಮಧ್ಯಭಾಗದ ಮೈದಾನದಲ್ಲಿ ಮಳೆಯಿಲ್ಲದೆ ಮುಳ್ಳುಗಿಡಗಳ ಪೊದೆಗಳು ಬೆಳೆದಿದ್ದವು; ಈಚೆಗೆ ಇವುಗಳನ್ನು ಕಡಿದು ಹುಲ್ಲುಗಳನ್ನು ಬೆಳೆಸಿ ಆಳವಾದ ಭಾವಿಗಳನ್ನು ತೋಡಿ ಕುಡಿಯುವುದಕ್ಕೆ ನೀರನ್ನು ಒದಗಿಸಿಕೊಂಡು ಕುರಿಗಳನ್ನು ಮೇಯಿಸುತ್ತಿರುವರು.

ಈ ದ್ವೀಪದ ಪಶ್ಚಿಮ ಉತ್ತರ ಭಾಗಗಳಲ್ಲಿ ಮುಳ್ಳುಗಿಡಗಳ ಪೊದೆಗಳೂ ಕಾಡುಗಳೂ ವಿಶೇಷವಾಗಿರುವುವು; ತೀರಪ್ರದೇಶಗಳಲ್ಲಿ ಮಾತ್ರ ಅಲ್ಲಲ್ಲಿ ವ್ಯವಸಾಯವು ನಡೆಯುತ್ತಿರುವುದು.

**ಪ್ರಾಣಿಗಳು.**—ಈ ದ್ವೀಪದ ಸಸ್ಯಗಳು ಹೇಗೆ ವಿಜಾತೀಯವಾದುವೋ ಹಾಗೆಯೇ ಪ್ರಾಣಿಗಳೂ ವಿಜಾತೀಯವಾದುವಾಗಿವೆ. 'ಕಾಂಗರೂ' ಎಂಬ ಪ್ರಾಣಿಯು ಮರಿಯನ್ನು ತನ್ನ ದೇಹಕ್ಕೆ ಸೇರಿದ ಚೀಲದಲ್ಲಿಟ್ಟುಕೊಂಡು ಕಾಪಾಡುತ್ತದೆ. ಇದರ ಹಿಂದಿನ ಕಾಲುಗಳು ಬಹಳ ಎತ್ತರವಾಗಿಯೂ, ಮುಂದಿನ ಕಾಲುಗಳು ಬಹಳ ಗಿಡ್ಡಾಗಿಯೂ ಇವೆ. ಇದು ಹಿಂದಿನ ಎರಡು ಕಾಲುಗಳ ಮತ್ತು ಬಾಲದ ಸಹಾಯದಿಂದ ಹಾರಿ ಹಾರಿ ಓಡುತ್ತದೆ.

ಮಾಂಸಾಹಾರಿಗಳಾದ ದುಷ್ಟಮೃಗಗಳು ಈ ಖಂಡದಲ್ಲಿ ವಿರಳ. ಇವುಗಳಲ್ಲಿ 'ಡಿಂಗೊ' ಎಂಬ ಸಣ್ಣ ಕಾಡುನಾಯಿಯು ಮುಖ್ಯವಾದುದು. ಇದು ಕುರಿಯ ಮರಿಗಳನ್ನು ಕೊಲ್ಲುವುದರಿಂದ ಕುರುಬರು ಇದನ್ನು ಕೊಲ್ಲುತ್ತಾರೆ. ಕಾಂಗರೂ ಮೊದಲಾದ ಪ್ರಾಣಿಗಳು ಹುಲ್ಲನ್ನು ತಿಂದು ಹಾಳುಮಾಡುವುದರಿಂದ ಕೊಲ್ಲಲ್ಪಡುತ್ತಿರುವುವು. ಈ ಖಂಡದ ಹಕ್ಕಿಗಳು ಗಾನಮಾಡುವುದಿಲ್ಲ; ಅಸಹ್ಯವಾದ ಶಬ್ದವನ್ನು ಮಾಡುವುದು ಹೆಚ್ಚು. ಒಂದು ಬಗೆಯ ನಗುವ ಪಕ್ಷಿಯು ಮನುಷ್ಯನ ನಗುವಿನಂತೆ ಕೂಗುವುದು. 'ಎಮು' ಎಂಬುದು ಪಕ್ಷಿ ಜಾತಿಗೆ ಸೇರಿದ್ದರೂ ಓಡಬಲ್ಲದೇ ಹೊರತು ಹಾರಲಾರದು. ಇದು ಆಫ್ರಿಕಾ ಖಂಡದ

ಉಷ್ಟ್ರಪಕ್ಷಿಯಂತಿರುವುದು, ಆದರೆ ಚಿಕ್ಕದು. ಅನೇಕ ವಿಧವಾದ ವಿಷದ ಹಾವುಗಳೂ ಹುಳುಗಳೂ ಈ ದ್ವೀಪದಲ್ಲಿರುವುವು.

ಉತ್ತರದಲ್ಲಿರುವ ಸಮುದ್ರಗಳಲ್ಲಿ ಆಮೆಗಳೂ ಮುತ್ತಿನಚಿಪ್ಪಿನ ಹುಳುಗಳೂ ಸ್ಪಂಜಿನ ಹುಳುಗಳೂ ವಿಶೇಷವಾಗಿರುವುವು.

ಯೂರೋಪಿನ ಜನರು ಈ ದ್ವೀಪಕ್ಕೆ ಕುರಿ, ದನ, ಕುದುರೆಗಳನ್ನು ತಂದರು. ಈಗ ಇವು ಹುಲ್ಲುಗಾವಲುಗಳಲ್ಲಿ ಅಸಂಖ್ಯಾಕವಾಗಿರುವುವು. ಇಲ್ಲಿಯ ಮರುಭೂಮಿಗಳಲ್ಲಿ ಒಂಟೆಯು ಬಹಳ ಉಪಯೋಗಕರವಾಗಬಹುದು; ಆದರೆ ಆ ಪ್ರಾಣಿಯನ್ನು ಸಾಕುವುದು ಇಲ್ಲಿನ ಜನಗಳಿಗೆ ಚೆನ್ನಾಗಿ ತಿಳಿದಿಲ್ಲ.

ಮಳೆಯು ತಕ್ಕಮಟ್ಟಿಗೆ ಚೆನ್ನಾಗಿ ಬಿದ್ದು ಹುಲ್ಲು ಉದ್ದವಾಗಿ ಬೆಳೆಯುವ ಪೂರ್ವತೀರದ ಮೈದಾನಗಳಲ್ಲಿ ದನಗಳೂ ಕುದುರೆಗಳೂ ಹೆಚ್ಚಾಗಿವೆ. ಒಬ್ಬೊಬ್ಬ ಪಶುಪಾಲಕನೂ ಸಾವಿರಾರು ದನಗಳಿಗೆ ಅಥವಾ ನೂರಾರು ಕುದುರೆಗಳಿಗೆ ಯಜಮಾನನಾಗಿರುವನು. ಒಬ್ಬೊಬ್ಬನಿಗೂ ಅತಿವಿಶಾಲವಾದ ಹುಲ್ಲುಗಾವಲುಗಳು ಸೇರಿರುವುವು. ಇವುಗಳ ಸುತ್ತಲೂ ತಂತಿಯ ಬೇಲಿಯನ್ನು ಹಾಕಿರುವರು. ಏಕೆಂದರೆ ಮೊಲಗಳ ಮತ್ತು ಕಾಡುನಾಯಿಗಳ ತೊಂದರೆ ಹೆಚ್ಚು. ಬಲೆಗಳ ಹಾಗಿರುವ ತಂತಿಯ ಬೇಲಿಯು ಮೊಲಗಳು ಹೋಗಲಿಕ್ಕೆ ಅವಕಾಶಕೊಡುವುದಿಲ್ಲ. ಪ್ರತಿಯೊಬ್ಬ ಯಜಮಾನನೂ ತನಗೆ ಸೇರಿರುವ ಹುಲ್ಲುಗಾವಲನ್ನು ಸಣ್ಣ ಸಣ್ಣ ತುಕಡಿಗಳಾಗಿ ವಿಂಗಡಿಸಿಕೊಂಡು ತುಕಡಿಗಳಿಗೆ ಮಧ್ಯದಲ್ಲಿ ಬೇಲಿಯನ್ನು ಹಾಕಿ ಬಾಗಿಲನ್ನು ಮಾಡಿರುವನು. ಪ್ರಾಣಿಗಳನ್ನು ಮೊದಲು ಒಂದು ತುಕಡಿಯಲ್ಲಿ ಕೂಡುವನು; ಅಲ್ಲಿ ಹುಲ್ಲು ಮುಗಿದ ಮೇಲೆ ಅವನ್ನು ಇನ್ನೊಂದು ತುಕಡಿಗೆ ಬಿಡುವನು. ಈ ಪ್ರಾಣಿಗಳನ್ನು ನೋಡಿಕೊಳ್ಳುವುದಕ್ಕೂ ಲೆಕ್ಕಮಾಡುವುದಕ್ಕೂ ಬೇಕಾದಾಗ ಅವುಗಳನ್ನು ಹಿಡಿದು ಸೇರಿಸುವುದಕ್ಕೂ ಕುದುರೆಯ ಮೇಲೆ ತಿರುಗುತ್ತಿರುವ ಪಶುಪಾಲಕರಿರುವರು. ಮಾರಬೇಕಾದಾಗ, ಮಾರಬೇಕಾದವುಗಳನ್ನು ಹಿಡಿದು ದೊಡ್ಡ ಕೊಟ್ಟಿಗೆಗಳಿಗೆ ತೆಗೆದುಕೊಂಡು ಹೋಗಿ ಕೂಡಿ ಅಲ್ಲಿ ಪಳಗಿಸಿ ಮಾರುವರು. ದನಗಳನ್ನು ಕೊಂದು ಮಾಂಸವನ್ನೂ ತೊಗಲನ್ನೂ ರಫ್ತುಮಾಡುವುದೂ ಉಂಟು. ಗಿಣ್ಣನ್ನೂ ಬೆಣ್ಣೆಯನ್ನೂ ಈಚೆಗೆ ವಿಶೇಷವಾಗಿ ರಫ್ತುಮಾಡುತ್ತಿರುವರು. ಆಸ್ಟ್ರೇಲಿಯದ ಕುದುರೆಗಳು ಗಾತ್ರದಲ್ಲಿಯೂ ಬಲದಲ್ಲಿಯೂ ಬಹಳ ಪ್ರಸಿದ್ಧವಾದುವು.

ಆಸ್ಟ್ರೇಲಿಯದಲ್ಲಿ ಈಗ ಮುಖ್ಯವಾದ ಸಾಧುಪ್ರಾಣಿಯು ಕುರಿಯು. ಇಲ್ಲಿ ಕುರಿಗಳು 9 ಕೋಟಿಗಳಿಗಿಂತ ಹೆಚ್ಚಾಗಿರುವುವು. ಇವುಗಳ ಉಣ್ಣೆಯನ್ನೂ ಮಾಂಸವನ್ನೂ ತೊಗಲನ್ನೂ ರಫ್ತುಮಾಡುವುದು ಈ ಖಂಡದ ಜನಗಳ ಮುಖ್ಯೋದ್ಯೋಗವಾಗಿದೆ. ಪ್ರಪಂಚದಲ್ಲಿ ಉಣ್ಣೆಯು ಸಿಕ್ಕುವ ಪ್ರದೇಶ

ಗಳಲ್ಲೆಲ್ಲಾ ಆಸ್ಟ್ರೇಲಿಯವು ಮೊದಲನೆಯದು. ಮಳೆಯು ಹೆಚ್ಚಾಗಿ ಬರದೆ ಕುರುಚುಹುಲ್ಲು ಬೆಳೆದಿರುವ ಮಧ್ಯಭಾಗದ ಮೈದಾನದಲ್ಲಿಯೂ ಪೂರ್ವಭಾಗದ ಪ್ರಸ್ಥಭೂಮಿಯ ಪಶ್ಚಿಮಭಾಗಗಳಲ್ಲಿಯೂ ಕುರಿಗಳು ವಿಶೇಷವಾಗಿವೆ. ಕುರಿಗಳು ಮೇಯುವ ಹುಲ್ಲುಗಾವಲುಗಳು ದನಗಳು ಮೇಯುವ ಹುಲ್ಲುಗಾವಲುಗಳಿಗಿಂತಲೂ ವಿಶಾಲವಾದುವು; ಇವುಗಳನ್ನೂ ದನಗಳ ಮಂದೆಗಳನ್ನು ಸಾಕುವ ತೆರದಲ್ಲಿಯೇ ಸಾಕುವರು. ಆದರೆ ಇವುಗಳು ಮೇಯುವ ಹುಲ್ಲುಗಾವಲುಗಳಲ್ಲಿ ನೀರಿನ ತೊಂದರೆಯು ಹೆಚ್ಚು. ಹುಲ್ಲು ಮುಗಿದುಹೋದರೆ 'ಉಪ್ಪಿನಗಿಡ'ವನ್ನು ಕುರಿಗಳು ತಿನ್ನುವುವು. ಆದರೆ ನೀರಿಲ್ಲದಿದ್ದರೆ ಸಾವಿರಾರು ಕುರಿಗಳು ಸತ್ತುಹೋಗುವುವು; ಅದಕ್ಕೋಸ್ಕರ ಬಹು ದ್ರವ್ಯವನ್ನು ವೆಚ್ಚಮಾಡಿ ಆಳವಾದ ಭಾವಿಗಳನ್ನು ತೋಡಿರುವರು. ಆದರೂ ಒಂದೊಂದು ವೇಳೆ ಬೇಸಗೆಯಲ್ಲಿ ನೀರಿನ ಬರ ಬಂದು ಸಾವಿರಾರು ಕುರಿಗಳು ಸಾಯುವುದುಂಟು.

**ಖನಿಜಗಳು.**—ಈ ಖಂಡದಲ್ಲಿ ಖನಿಜಗಳು ಪುಷ್ಕಳವಾಗಿವೆ. ಆದರೆ ಬಹಳ ಭಾಗವು ಬೆಂಗಾಡಾಗಿರುವುದರಿಂದ ಗಣಿಗಳಲ್ಲಿ ಕೆಲಸ ಮಾಡುವುದು ಕಷ್ಟ. ಜನಸಂಖ್ಯೆಯು ಕಡಿಮೆಯಾಗಿರುವುದರಿಂದ ಕೂಲಿಗಳು ಸುಲಭವಾಗಿ ಸಿಕ್ಕುವುದಿಲ್ಲ. ಚಿನ್ನ, ತಾಮ್ರ, ಕಲ್ಲಿದ್ದಲು, ಕಬ್ಬಿಣ, ತವರ, ಸೀಸ ಇವು ಇಲ್ಲಿ ಸಿಕ್ಕುವ ಮುಖ್ಯವಾದ ಖನಿಜಗಳಾಗಿವೆ. ಇವುಗಳಲ್ಲಿ ಚಿನ್ನವೂ ತಾಮ್ರವೂ ಬಹಳ ಹೆಚ್ಚಾಗಿ ಸಿಕ್ಕುವುವು.

ಸಾಮಾನ್ಯವಾಗಿ ಪಶ್ಚಿಮಭಾಗದ ಬೆಟ್ಟಗಳಲ್ಲಿಯೂ ಪೂರ್ವಭಾಗದ ಪರ್ವತಗಳಲ್ಲಿಯೂ ಚಿನ್ನವು ಹೇರಳವಾಗಿ ಸಿಕ್ಕುವುದು. ಪಶ್ಚಿಮ ಆಸ್ಟ್ರೇಲಿಯದ ದಕ್ಷಿಣಭಾಗದ ಮರುಭೂಮಿಯಲ್ಲಿ ಅನೇಕ ಚಿನ್ನದ ಗಣಿಗಳಿರುವುವು. ಈ ಗಣಿಗಳಲ್ಲಿ ಚಿನ್ನವು ಬಹಳ ಹೆಚ್ಚಾಗಿ ಸಿಕ್ಕುವುದು. ಆದರೆ ಇವು ಸಮುದ್ರ ತೀರಕ್ಕೆ 400 ಮೈಲಿಗಳ ದೂರದಲ್ಲಿ ನೀರಿಲ್ಲದ ಮರಳುಕಾಡಿನ ಮಧ್ಯದಲ್ಲಿವೆ. ಇಲ್ಲಿಗೆ ನೀರನ್ನು ಸರಬರಾಯಿ ಮಾಡುವುದಕ್ಕೋಸ್ಕರ 'ಹೆಲಿನಾ' ಎಂಬ ನದಿಗೆ ಪರ್ತ್ ಪಟ್ಟಣದ ಸಮೀಪದಲ್ಲಿ ಅಣೆಕಟ್ಟು ಕಟ್ಟಿ ದೊಡ್ಡ ಕೆರೆಯನ್ನು ಮಾಡಿ ಅಲ್ಲಿಂದ 300 ಮೈಲಿಗಳ ದೂರ ಕೊಳವಿಗಳಲ್ಲಿ ನೀರನ್ನು ತಂದಿರುವರು. ಚಿನ್ನವನ್ನು ರಫ್ತುಮಾಡುವುದಕ್ಕೋಸ್ಕರ ಗಣಿಗಳಿಂದ ಫ್ರೀಮೂಂಟಿಲ್ ರೇವುಪಟ್ಟಣದ ವರೆಗೂ ರೈಲುಮಾರ್ಗವನ್ನು ಮಾಡಿರುವರು. ಈ ಗಣಿಗಳ ಡಿಸ್ಟ್ರಿಕ್ಟಿನಲ್ಲಿ ಮುಖ್ಯವಾದ ಪಟ್ಟಣಗಳು ಕೂಲ್‌ಗಾಡಿ ಮತ್ತು ಕಾಲ್‌ಗೂರ್ಲಿ ಎಂಬುವು. ವಿಕ್ಟೋರಿಯ ಕಾಲೊನಿಯ ಮಧ್ಯದಲ್ಲಿರುವ ಬಲಾರಟ್ ಮತ್ತು ಬೆಂಡಿಗೊ ಎಂಬ ಸ್ಥಳಗಳಲ್ಲಿ ಚಿನ್ನವು ವಿಶೇಷವಾಗಿ ಸಿಕ್ಕುವುದು. ನ್ಯೂಸೌತ್‌ವೇಲ್ಸ್, ಕ್ವೀನ್ಸ್ಲೆಂಡುಗಳಲ್ಲಿ ಬೆಟ್ಟಗಳ ತಪ್ಪಲುಗಳಲ್ಲಿ ಚಿನ್ನವು ಸಿಕ್ಕುವುದು. ನ್ಯೂಸೌತ್‌ವೇಲ್ಸಿನಲ್ಲಿ ಬ್ರೋಕನ್

ಹಿಲ್ ಎಂಬ ಸ್ಥಳದಲ್ಲಿ ಬೆಳ್ಳಿಯೂ ಸೀಸವೂ ಸತುವೂ ಸಿಕ್ಕುವುವು. ಕಬ್ಬಿಣ ಕಲ್ಲಿದ್ದಲುಗಳು ಅಲ್ಲಲ್ಲಿ ಸಿಕ್ಕುವುವು. ಇವುಗಳನ್ನು ಹೆಚ್ಚಾಗಿ ತೆಗೆಯುತ್ತಿಲ್ಲ. ನ್ಯೂಸೌತ್‌ವೇಲ್ಸಿನಲ್ಲಿರುವ ನ್ಯೂಕ್ಯಾಸಲ್ ಬಳಿ ಕಲ್ಲಿದ್ದಲನ್ನು ತೆಗೆಯುತ್ತಿರುವರು. ಕಬ್ಬಿಣ ಕಲ್ಲಿದ್ದಲುಗಳು ಒಂದಕ್ಕೊಂದು ಸಮೀಪದಲ್ಲಿ ದೊರೆಯದಿರುವುದು ಒಂದು ಕೊರತೆಯಾಗಿದೆ.

**ಜನಗಳು ಮತ್ತು ಅವರ ಉದ್ಯೋಗಗಳು.**—ಆಸ್ಟ್ರೇಲಿಯದ ಪೂರ್ವ ನಿವಾಸಿಗಳು ಅತ್ಯಂತ ಅನಾಗರಿಕರು. ಅವರು ಬೇಟೆಯಿಂದಲೂ ಗೆಡ್ಡೆ ಗೆಣಸುಗಳನ್ನು ಅಗೆದು ತಿನ್ನುವುದರಿಂದಲೂ ಜೀವನ ಮಾಡುತ್ತಿದ್ದರು. ಯೂರೋಪಿಯನ್ನರು ಬರುವುದಕ್ಕೆ ಮೊದಲು ಕಲ್ಲಿನಿಂದ ಮಾಡಿದ ಕೊಡಲಿ ಮೊದಲಾದ ಆಯುಧಗಳನ್ನು ಉಪಯೋಗಿಸುತ್ತಿದ್ದರು. ಇವರು ಆಕಾರದಲ್ಲಿ ಕುಳ್ಳಾಗಿಯೂ ಕೃಷ್ಣವರ್ಣದವರಾಗಿಯೂ ಮೈಮೇಲೆಲ್ಲಾ ಕೂದಲುಳ್ಳವರಾಗಿಯೂ ಇರುವರು. ಈ ಜನಗಳು ಮೊದಲು ಇಂಗ್ಲಿಷರಿಗೆ ಹಿಂಸೆಯನ್ನು ಕೊಡುತ್ತಿದ್ದರು; ಆದರೆ ಈಗ ಬಹಳಮಟ್ಟಿಗೆ ನಾಶವಾಗಿ ಇವರ ಸಂಖ್ಯೆಯು ಕಡಿಮೆಯಾಗಿದೆ. ಉಳಿದಿರುವ ಕೆಲವು ಜನರು ಮರುಭೂಮಿಯ ಅಂಚಿನಲ್ಲಿ ಬೇಟೆಯಿಂದ ಆಹಾರವನ್ನೂ 'ನೀರಿನ ಗಿಡ'ಗಳಿಂದ ನೀರನ್ನೂ ಸಂಪಾದಿಸಿ ಜೀವನ ಮಾಡುತ್ತಿರುವರು. ಟಾಸ್ಮೇನಿಯ ದ್ವೀಪದಲ್ಲಿ ಈಗ ಪೂರ್ವ ನಿವಾಸಿಗಳ ಸೆಲೆಯೇ ಇಲ್ಲ.

ಈ ದ್ವೀಪದ ಜನರೆಲ್ಲರೂ ಈಗ ಸಾಮಾನ್ಯವಾಗಿ ಬ್ರಿಟಿಷ್ ಜನರೇ ಆಗಿರುವರು. ಆದರೆ ಈ ದ್ವೀಪದಲ್ಲಿ ಜನಸಂಖ್ಯೆಯು ಬಹಳ ಕಡಿಮೆಯಾಗಿರುವುದು; ವಿಸ್ತೀರ್ಣದಲ್ಲಿ ಇಂಡಿಯಾದೇಶಕ್ಕೆ ಎರಡರಷ್ಟಕ್ಕಿಂತಲೂ ಹೆಚ್ಚಾಗಿದ್ದರೂ ಜನಸಂಖ್ಯೆಯಲ್ಲಿ $\frac{1}{೧೦೦}$ ಪಾಲಿನಷ್ಟು ಮಾತ್ರವಿರುವುದು. ಇಲ್ಲಿ ಸುಮಾರು 35 ಲಕ್ಷ ಜನಗಳು ವಾಸವಾಗಿರುವರು.

ಹಿತಕರವಾದ ವಾಯುಗುಣವುಳ್ಳ ವಿಕ್ಟೋರಿಯ, ನ್ಯೂಸೌತ್‌ವೇಲ್ಸ್‌ಗಳ ತೀರಪ್ರದೇಶಗಳಲ್ಲಿ ಜನಸಾಂದ್ರತೆಯು ಹೆಚ್ಚಾಗಿರುವುದು. ಇತರ ಭಾಗಗಳಲ್ಲಿ ವಾಯುಗುಣವು ಹಿತಕರವಾಗಿಲ್ಲ, ಇಲ್ಲದಿದ್ದರೆ ಮಳೆಯಿಲ್ಲ. ಆದುದರಿಂದ ಜನಸಾಂದ್ರತೆಯು ಬಹಳ ಕಡಿಮೆ.

ಇಲ್ಲಿನ ಜನಗಳ ಮುಖ್ಯೋದ್ಯೋಗವು ಪಶುಪಾಲನೆಯು. ಎಲ್ಲೆಲ್ಲೂ ಕುರುಚಲು ಹುಲ್ಲುಗಾವಲುಗಳಿರುವುದರಿಂದ ಕುರಿಗಳನ್ನು ಮೇಯಿಸುವುದು ಮುಖ್ಯವಾದ ಉದ್ಯೋಗವಾಗಿದೆ. ಗಣಿಗಳಲ್ಲಿ ಕೆಲಸಮಾಡುವುದು ಎರಡನೆಯ ಉದ್ಯೋಗವು. ಕೃಷಿಯಿಂದಲೂ ಕೆಲವರು ಜೀವನ ಮಾಡುವರು. ಗೋಧಿಯಿಂದ ಹಿಟ್ಟನ್ನೂ ದ್ರಾಕ್ಷಿಯಿಂದ ದ್ರಾಕ್ಷಾರಸವನ್ನೂ ಮಾಡಿ ರಫ್ತುಮಾಡುವರು. ಇಲ್ಲಿ ಕೈಗಾರಿಕೆಗಳು ಬಹಳ ಕಡಿಮೆ; ದೊಡ್ಡ ಪಟ್ಟಣಗಳಲ್ಲಿ ಮಾತ್ರ ಉಣ್ಣೆಯ ಬಟ್ಟೆಗಳನ್ನು ನೇಯುವುದು, ಚರ್ಮವನ್ನು ಹದಮಾಡುವುದು, ಹಡಗು

ಗಳನ್ನು ಕಟ್ಟುವುದು ಮೊದಲಾದ ಕೈಗಾರಿಕೆಗಳು ಸ್ವಲ್ಪಮಟ್ಟಿಗೆ ನಡೆಯುವುವು. ಆದರೆ ಕಲ್ಲಿದ್ದಲು, ಕಬ್ಬಿಣಗಳು ಈ ದ್ವೀಪದಲ್ಲಿ ಒಂದಕ್ಕೊಂದು ದೂರವಾಗಿದ್ದರೂ ಹೇರಳವಾಗಿರುವುದರಿಂದ ಮುಂದೆ ಜನಸಂಖ್ಯೆಯು ಹೆಚ್ಚಿದಹಾಗೆ ಕೈಗಾರಿಕೆಗಳು ಹೆಚ್ಚಲು ಅವಕಾಶವಿದೆ. ಜನಸಂಖ್ಯೆಯು ಕಡಮೆಯಾದುದರಿಂದ ಒಳದೇಶದ ವ್ಯಾಪಾರವು ಕಡಿಮೆಯಾಗಿದೆ.

ತೀರಪ್ರದೇಶಗಳಲ್ಲಿ ಮಾತ್ರ ರೈಲುಮಾರ್ಗಗಳನ್ನು ಮಾಡಿರುವರು. ಈ ದ್ವೀಪದಲ್ಲಿ ನದೀಮಾರ್ಗಗಳ ಸೌಕರ್ಯವು ಬಹು ಕಡಿಮೆ. ಉಣ್ಣೆ, ಮಾಂಸ, ತೊಗಲು, ಬೆಣ್ಣೆ, ಲೋಹಗಳು ಮೊದಲಾದ ಪದಾರ್ಥಗಳನ್ನು ಇತರ ದೇಶಗಳಿಗೆ ರಫ್ತು ಮಾಡುವರು. ಇತರ ದೇಶಗಳಿಂದ ತಮಗೆ ಬೇಕಾದ ಹತ್ತಿಯಬಟ್ಟೆ, ಯಂತ್ರ ಮೊದಲಾದ ಸಾಮಾನುಗಳನ್ನು ತರಿಸಿಕೊಳ್ಳುವರು. ಇಲ್ಲಿನ ಪರದೇಶದ ವ್ಯಾಪಾರವು ಮುಖ್ಯವಾಗಿ ಬ್ರಿಟಿಷ್ ದ್ವೀಪದೊಂದಿಗೆ ನಡೆಯುವುದು.

**ರಾಜಕೀಯ ವಿಭಾಗಗಳು ಮತ್ತು ಮುಖ್ಯ ಪಟ್ಟಣಗಳು.**—ಈ ದ್ವೀಪವು ಕ್ವೀನ್‌ಸ್ಲೆಂಡ್, ನ್ಯೂಸೌತ್‌ವೇಲ್ಸ್, ವಿಕ್ಟೋರಿಯ, ದಕ್ಷಿಣ ಆಸ್ಟ್ರೇಲಿಯ, ಪಶ್ಚಿಮ ಆಸ್ಟ್ರೇಲಿಯ ಎಂಬ ಐದು ಕಾಲೊನಿಗಳಾಗಿ ವಿಭಾಗವಾಗಿದೆ. ಈ ಕಾಲೊನಿಗಳೆಲ್ಲವೂ ಈಗ ಒಟ್ಟುಗೂಡಿ ಆಸ್ಟ್ರೇಲಿಯ ಪ್ರಜಾಪ್ರಭುತ್ವವೆನಿಸಿಕೊಂಡಿದೆ. ಈ ಪ್ರಭುತ್ವವು ಬ್ರಿಟಿಷ್ ಚಕ್ರಾಧಿಪತ್ಯದ ಒಂದು ಭಾಗವಾಗಿದೆ. ಇಂಗ್ಲೆಂಡಿನ ದೊರೆಗಳಿಂದ ನಿಯಮಿಸಲ್ಪಟ್ಟ ಒಬ್ಬ ಗೌರ್ನರ್ ಜನರಲ್‌ರವರು ಇಲ್ಲಿರುವರು. ಇವರು ಪ್ರಜೆಗಳಿಂದ ಚುನಾಯಿಸಲ್ಪಟ್ಟ ಎರಡು ಸಭೆಗಳ ಅನುಮತಿಯ ಪ್ರಕಾರವೂ, ಈ ಸಭೆಯಲ್ಲಿ ಮುಖಂಡರಾದವರನ್ನೇ ಮಂತ್ರಿಗಳನ್ನಾಗಿಟ್ಟುಕೊಂಡು ಅವರ ಸಹಾಯದಿಂದಲೂ ರಾಜ್ಯಭಾರ ಮಾಡುವರು.

**ಕ್ವೀನ್ಸ್ಲೆಂಡ್.**—ಈ ಕಾಲೊನಿಯಲ್ಲಿ ಸೆಕೆಯೂ ಮಳೆಯೂ ಹೆಚ್ಚಾಗಿರುವುದರಿಂದ ಇದರ ಹವ ಹಿತಕರವಾಗಿಲ್ಲ; ಆದುದರಿಂದ ವಿಸ್ತೀರ್ಣದಲ್ಲಿ ದೊಡ್ಡದಾದರೂ ಇದರಲ್ಲಿ ಜನಸಂಖ್ಯೆಯು ಬಹಳ ಕಡಿಮೆ. 7 ಲಕ್ಷ ಜನರಿರುವರು.

**ಬ್ರಿಸ್ಬೇನ್.**—ಇದು ಕ್ವೀನ್‌ಸ್ಲೆಂಡಿನ ಮುಖ್ಯ ಪಟ್ಟಣವು. ಇದೂ **ರಾಕ್‌ಹಾಂಪ್ಟನ್** ಎಂಬುದೂ ಪೂರ್ವತೀರದಲ್ಲಿರುವ ರೇವುಪಟ್ಟಣಗಳಾಗಿವೆ. ರಾಕ್‌ಹಾಂಪ್ಟನ್ನಿನ ಬಂದರು ಉತ್ತಮವಾದುದು. ಇದರ ಸಮೀಪದ ಬೆಟ್ಟಗಳಿಂದ ಬರುವ ಚಿನ್ನವೂ, ಫಿಟ್ಸ್‌ರಾಯ್ ನದಿಯ ಮೈದಾನದಿಂದ ಬರುವ ಉಣ್ಣೆ, ಮಾಂಸ, ಬೆಣ್ಣೆ, ಸಕ್ಕರೆಗಳೂ ಇಲ್ಲಿಂದ ರಫ್ತಾಗುವುವು.

**ನ್ಯೂಸೌತ್‌ವೇಲ್ಸ್.**—ಕ್ವೀನ್‌ಸ್ಲೆಂಡಿಗೆ ದಕ್ಷಿಣದಲ್ಲಿರುವ ಈ ಕಾಲೊನಿಯು ಜನಸಂಖ್ಯೆಯಲ್ಲಿ ಉಳಿದ ಕಾಲೊನಿಗಳನ್ನು ಮೀರಿಸಿರುವುದು; ಇಲ್ಲಿ 15 ಲಕ್ಷ ಜನರಿರುವರು. ಆದರೆ ಜನಸಾಂದ್ರತೆಯು ಹೆಚ್ಚಾಗಿಲ್ಲ.

**ಸಿಡ್ನಿ.**—ಈ ಪಟ್ಟಣವು 100 ಮೈಲಿಗಳಷ್ಟು ಅಗಲವಾದ ಒಂದು ಕೊಲ್ಲಿಯ ತೀರದಲ್ಲಿದೆ. ಇದರ ಬಂದರು ಪೃಥ್ವಿಯಲ್ಲೆಲ್ಲಾ ಅತ್ಯುತ್ತಮವಾದ ಬಂದರುಗಳಲ್ಲಿ ಒಂದಾಗಿದೆ. ಇದು ಆಸ್ಟ್ರೇಲಿಯದಲ್ಲೆಲ್ಲಾ ಮೊದಲು ಬೆಳೆದ ಪಟ್ಟಣವು. ಇದಕ್ಕೆ ಸಮೀಪದಲ್ಲಿ ಕಲ್ಲಿದ್ದಲಿನ ಗಣಿಗಳಿವೆ. ಇದು ನ್ಯೂಸೌತ್‌ವೇಲ್ಸಿನ ಮುಖ್ಯ ಪಟ್ಟಣವು ಮತ್ತು ವಿಶ್ವವಿದ್ಯಾಲಯವಿರುವ ಸ್ಥಳವು. ಉಣ್ಣೆಯೂ, ಚಿನ್ನವೂ, ಹಣ್ಣುಗಳೂ ಇಲ್ಲಿಂದ ವಿಶೇಷವಾಗಿ ರಫ್ತಾಗುವುವು.

**ವಿಕ್ಟೋರಿಯ.**—ಆಗ್ನೇಯದಲ್ಲಿರುವ ಈ ಕಾಲೊನಿಯು ಆಸ್ಟ್ರೇಲಿಯದಲ್ಲೆಲ್ಲಾ ಅತ್ಯಂತ ಚಿಕ್ಕ ಕಾಲೊನಿಯು; ಆದರೆ ಜನಸಾಂದ್ರತೆಯಲ್ಲಿಯೂ, ಐಶ್ವರ್ಯದಲ್ಲಿಯೂ ಇದು ಇತರ ಕಾಲೊನಿಗಳನ್ನು ಮೀರಿಸಿದೆ. ಹಿತಕರವಾದ ವಾಯುಗುಣವೂ ಚಿನ್ನ ಸಿಕ್ಕುವುದೂ ಇದಕ್ಕೆ ಮುಖ್ಯ ಕಾರಣಗಳಾಗಿವೆ. ಮಳೆಯೂ ಸಾಕಾದಷ್ಟು ಬೀಳುವುದರಿಂದ ಕೃಷಿ ಪಶುಪಾಲನೆಗಳೂ ಹೆಚ್ಚಾಗಿ ನಡೆಯುವುವು. **ಮೆಲ್ಬೋರ್ನ್** ಎಂಬುದು ರೇವುಪಟ್ಟಣವಾಗಿಯೂ ಮುಖ್ಯಪಟ್ಟಣವಾಗಿಯೂ ಇದೆ. ಈ ಪಟ್ಟಣವು 14 ಮೈಲಿ ಉದ್ದವಾಗಿಯೂ 10 ಮೈಲಿ ಅಗಲವಾಗಿಯೂ ಇರುವುದು. ಇಲ್ಲಿ 5 ಲಕ್ಷ ಜನರು ವಾಸಮಾಡುವರು. ಆಸ್ಟ್ರೇಲಿಯದಲ್ಲಿ ಇದೇ ದೊಡ್ಡ ಪಟ್ಟಣ. ಉಣ್ಣೆಯೂ, ದ್ರಾಕ್ಷೆ, ಅಂಜೂರ ಮೊದಲಾದ ಹಣ್ಣುಗಳೂ ಇಲ್ಲಿಂದ ರಫ್ತಾಗುವುವು. ಕೈಗಾರಿಕೆಗಳು ಸ್ವಲ್ಪ ಮಟ್ಟಿಗೆ ನಡೆಯುವುವು; ರೈಲುಮಾರ್ಗಗಳು ಇಲ್ಲಿಂದ ಅನೇಕ ಕಡೆಗಳಿಗೆ ಹೋಗುವುವು.

**ದಕ್ಷಿಣ ಆಸ್ಟ್ರೇಲಿಯ.**—ಈ ದ್ವೀಪದ ಮಧ್ಯಭಾಗದಲ್ಲಿರುವ ಈ ಕಾಲೊನಿಯಲ್ಲಿ ಬೇಸಗೆಯಲ್ಲಿ ಬಿಸಿಲು ಬಹಳ ಹೆಚ್ಚು, ಮಳೆಯಿಲ್ಲ, ಮರಳಿನಿಂದ ಕೂಡಿದ ಬಹಳ ಶಾಖವಾದ ಮಾರುತಗಳು ಬೀಸುತ್ತವೆ. ಆದುದರಿಂದ ಇಲ್ಲಿ ಜನಸಂಖ್ಯೆಯು ಬಹಳ ಕಡಿಮೆ. ಆಗ್ನೇಯ ಭಾಗದಲ್ಲಿ ಮರ್ರೇ ನದಿಯ ಸಹಾಯದಿಂದ ಗೋಧಿಯನ್ನೂ ದ್ರಾಕ್ಷೆಯನ್ನೂ ಬೆಳೆಯುವರು. ಕುರಿಗಳನ್ನು ಸ್ವಲ್ಪ ಮಟ್ಟಿಗೆ ಮೇಯಿಸುವರು. **ಆಡಿಲೇಡ್** ಎಂಬುದು ಸೆಂಟ್‌ವಿನ್‌ಸೆಂಟ್ ಸಮುದ್ರಶಾಖೆಯ ತೀರದಲ್ಲಿದೆ. ಇದು ಈ ಕಾಲೊನಿಯ ಮುಖ್ಯಪಟ್ಟಣವು. ದಕ್ಷಿಣ ಆಸ್ಟ್ರೇಲಿಯದ ಉತ್ತರ ಭಾಗವನ್ನು ಉತ್ತರಸೀಮೆಯೆಂದೂ ಕರೆಯುವರು. ಈ ಪ್ರದೇಶವು ಮರುಭೂಮಿಗಳಿಂದ ತುಂಬಿರುವುದರಿಂದ 150 ಚ. ಮೈಲಿಗಳಿಗೆ 1ರಂತೆಯೂ ಜನಸಂಖ್ಯೆಯಿಲ್ಲ. ಉತ್ತರ ತೀರದಲ್ಲಿರುವ ಪಾಲ್ಮರ್‌ಸ್ಟನ್ ಎಂಬ ಪಟ್ಟಣವು ಉತ್ತಮವಾದ ಬಂದರನ್ನು ಹೊಂದಿದೆ; ಆದರೆ ಹವಾ ಚೆನ್ನಾಗಿಲ್ಲ. ಆಡಿಲೇಡಿನಿಂದ ಈ ಪಟ್ಟಣದವರೆಗೂ ಖಂಡದ ಉದ್ದಕ್ಕೂ ಟೆಲಿಗ್ರಾಫ್ ತಂತಿಗಳನ್ನು ಹಾಕಿರುವರು. ಇಲ್ಲಿಂದ ಇತರ ದೇಶಗಳಿಗೆ ಸಮುದ್ರದಲ್ಲಿ ಕೇಬಿಲ್‌ಗಳು ಹೊರಟಿವೆ

**ಪಶ್ಚಿಮ ಆಸ್ಟ್ರೇಲಿಯ.**—ಇದು ಈ ದ್ವೀಪದ $\frac{1}{3}$ ಭಾಗವನ್ನು ಆಕ್ರಮಿಸಿರುವುದು. ತೀರಪ್ರದೇಶದಲ್ಲಿ ವಿನಾ ಎತ್ತರವಾದ ಬೆಟ್ಟಗುಡ್ಡಗಳಿರುವುವು. ಉತ್ತರ ದಕ್ಷಿಣ ಭಾಗದಲ್ಲಿ ಸ್ವಲ್ಪಮಟ್ಟಿಗೆ ಜನರು ವಾಸವಾಗಿರುವರು. ಮಧ್ಯಭಾಗದಲ್ಲೆಲ್ಲಾ ಮಳೆ ಕಡಿಮೆ, ಸೆಕೆ ಹೆಚ್ಚು, ಜನರಹಿತವಾದ ಮರಳುಕಾಡುಗಳಿರುವುವು. ಸ್ವಾನ್ ನದಿಯ ತೀರದಲ್ಲಿರುವ ಫರ್ತ್ ಎಂಬುದು ಈ ಕಾಲೊನಿಯ ಮುಖ್ಯ ಪಟ್ಟಣವು. ಕಾಲ್‌ಗೂರ್ಲಿ ಚಿನ್ನದ ಗಣಿಗಳಿಗೆ ಇಲ್ಲಿಂದ ರೈಲುಮಾರ್ಗವು ಹೋಗುತ್ತದೆ. ಫ್ರೀಮಾಂಟಲ್ ಎಂಬುದು ಇದರ ರೇವುಪಟ್ಟಣವು.

---

## ಟಾಸ್ಮೇನಿಯ

ವಿಕ್ಟೋರಿಯಕ್ಕೆ ದಕ್ಷಿಣದಲ್ಲಿರುವ ಈ ದ್ವೀಪವು ಆಸ್ಟ್ರೇಲಿಯ ಸಂಯುಕ್ತ ಪ್ರಭುತ್ವಕ್ಕೆ ಸೇರಿದ ಒಂದು ಕಾಲೊನಿಯಾಗಿದೆ. ಇದು ವಿಸ್ತೀರ್ಣದಲ್ಲಿ ಸ್ಕಾಟ್ಲೆಂಡಿನಷ್ಟಿರುವುದು. ಆ ದೇಶದಂತೆಯೇ ಬೆಟ್ಟಗಳಿಂದ ತುಂಬಿದೆ. ರಮಣೀಯವಾದ ಸರೋವರಗಳೂ ಪರ್ವತದ ಝರಿಗಳೂ ಇರುವುವು. ವಾಯುಗುಣವು ಹಿತಕರವಾಗಿದೆ. ಪಶ್ಚಿಮ ಮಾರುತಗಳಿಂದ ಮಳೆಯು ಚೆನ್ನಾಗಿ ಬರುವುದು. ಪಶುಪಾಲನೆಯೇ ಮುಖ್ಯೋದ್ಯೋಗವು. ಸೇಬಿನ ಹಣ್ಣನ್ನು ಬೆಳೆದು ರಫ್ತು ಮಾಡುವುದರಿಂದಲೂ ಮರಗಳನ್ನು ಕಡಿದು ತೊಲೆಗಳನ್ನು ರಫ್ತುಮಾಡುವುದರಿಂದಲೂ ಅನೇಕರು ಜೀವಿಸುವರು. ತವರ, ಚಿನ್ನ, ಕಲ್ಲಿದ್ದಲುಗಳು ಇಲ್ಲಿ ಸಿಕ್ಕುವುವು.

**ಹೊಬಾರ್ಟ್.**—ಇದು ಪೂರ್ವತೀರದಲ್ಲಿ ಡರ್ವೆಂಟ್ ನದಿಯ ಮುಖದ ಬಳಿ ಇದೆ. ಉತ್ತಮವಾದ ಬಂದರು ಮತ್ತು ಮುಖ್ಯಪಟ್ಟಣ. ಇಲ್ಲಿ ಹಿಟ್ಟಿನ ಕಾರ್ಖಾನೆಗಳೂ, ಕಬ್ಬಿಣದ ಕಾರ್ಖಾನೆಗಳೂ ಇವೆ. ಇಲ್ಲಿನ ಹವವು ಹಿತಕರವಾಗಿರುವುದರಿಂದ ಆಸ್ಟ್ರೇಲಿಯದಲ್ಲಿ ಬೇಸಗೆಯಾದಾಗ ಎಂದರೆ ಕ್ರಿಸ್‌ಮಸ್ ಹಬ್ಬದ ಕಾಲದಲ್ಲಿ, ಅಲ್ಲಿಂದ ಅನೇಕ ಜನಗಳು ಹವಾಕ್ಕೋಸ್ಕರ ಇಲ್ಲಿಗೆ ಬರುವರು.

---

## ನ್ಯೂಗಿನಿ

ನ್ಯೂಗಿನಿ ಅಥವಾ ಪಾಪುವ ದ್ವೀಪವು ಆಸ್ಟ್ರೇಲಿಯಕ್ಕೆ ಉತ್ತರದಲ್ಲಿದೆ. ಇದು ಎತ್ತರವಾದ ಬೆಟ್ಟದ ಸೀಮೆಯು. ಇಲ್ಲಿ ಸೆಕೆಯೂ ಮಳೆಯೂ ಹೆಚ್ಚು. ಇಲ್ಲಿನ ಉತ್ಪನ್ನಗಳು ಉಷ್ಣವಲಯದವಾಗಿವೆ. ಕಾಡುಗಳಲ್ಲಿ ಗಂಧದಮರ, ಕರೀಮರ, ಬಿದಿರು ಮೊದಲಾದ ಮರಗಳೂ ಸಾಗುವಳಿಯ ಪ್ರದೇಶಗಳಲ್ಲಿ ತೆಂಗು, ಬಾಳೆ, ಮುಡಿಗೆಣಸು ಮೊದಲಾದುವೂ ಬೆಳೆಯುವುವು. ಯೂರೋಪಿಯನ್

ಪ್ಲಾಂಟರುಗಳು ರಬ್ಬರನ್ನೂ ಕಬ್ಬನ್ನೂ ಬೆಳೆಯುತ್ತಿರುವರು. ಈ ದ್ವೀಪದ ಪಶ್ಚಿಮ ಭಾಗವು ಡಚ್ಚರಿಗೂ ಉಳಿದ ಭಾಗವು ಬ್ರಿಟಿಷರಿಗೂ ಸೇರಿವೆ. ಬ್ರಿಟಿಷರಿಗೆ ಸೇರಿದ ಭಾಗದಲ್ಲಿ ಮೊರೆಸ್ಬಿ ಎಂಬುದು ಮುಖ್ಯ ಪಟ್ಟಣವು. ಈ ರೇವುಪಟ್ಟಣದಿಂದ ಗಂಧದಮರವೂ, ಕರೀಮರವೂ, ರಬ್ಬರೂ ರಫ್ತಾಗುತ್ತವೆ. ಬ್ರಿಟಿಷ್ ನ್ಯೂಗಿನಿಯು ಆಸ್ಟ್ರೇಲಿಯ ಸಂಯುಕ್ತ ಪ್ರಭುತ್ವಕ್ಕೆ ಸೇರಿದೆ.

## ನ್ಯೂಜೀಲೆಂಡ್

ಆಸ್ಟ್ರೇಲಿಯಕ್ಕೆ ಆಗ್ನೇಯದಲ್ಲಿ 1,200 ಮೈಲಿಗಳ ಆಚೆ ಈ ದ್ವೀಪಸ್ತೋಮವು ಪ್ರಸರಿಸಿರುವುದು. ಈ ದ್ವೀಪಸ್ತೋಮದಲ್ಲಿ ಉತ್ತರ ದ್ವೀಪ, ದಕ್ಷಿಣ ದ್ವೀಪವೆಂಬುವು ದೊಡ್ಡ ದ್ವೀಪಗಳು. ಈ ಎರಡು ದ್ವೀಪಗಳು ಒಟ್ಟು 500 ಮೈಲಿಗಳಷ್ಟು ಉದ್ದವಾಗಿರುವುವು; ಆದರೆ ಅಗಲ ಕಡಿಮೆ. ಇವುಗಳ ಮಧ್ಯೆ ಕುಕ್ ಎಂಬ ಜಲಸಂಧಿ ಇರುವುದು. ಉತ್ತರ ದ್ವೀಪದ ಪೂರ್ವ ಭಾಗದಲ್ಲಿಯೂ ದಕ್ಷಿಣ ದ್ವೀಪದ ಪಶ್ಚಿಮ ಭಾಗದಲ್ಲಿಯೂ ಎತ್ತರವಾದ ಪರ್ವತಗಳಿರುವುವು. ಉತ್ತರ ದ್ವೀಪದಲ್ಲಿ ಕೆಲವು ಜ್ವಾಲಾಮುಖಿಗಳಿರುವುವು. ಈ ದ್ವೀಪದ ಮಧ್ಯದಲ್ಲಿ ಅನೇಕ ಬಿಸಿನೀರಿನ ಊಟೆಗಳಿರುವುವು. ಇವುಗಳಲ್ಲೊಂದು ಕುದಿಯುವ ನೀರನ್ನೂ ಮಣ್ಣು ಕಲ್ಲುಗಳನ್ನೂ 1,500 ಅಡಿಗಳಷ್ಟು ಎತ್ತರಕ್ಕೆ ಒಗೆಯುತ್ತದೆ. ಈ ಊಟೆಗಳಲ್ಲಿ ಗಂಧಕವು ವಿಶೇಷವಾಗಿ ಸೇರಿರುವುದರಿಂದ ಇದರ ಸುತ್ತಲೂ ಹಚ್ಚಗೆ ಗಂಧಕದ ಮಣ್ಣು ಕಾಣುವುದು. ಸಣ್ಣಸಣ್ಣ ಊಟೆಗಳ ಸಹಾಯದಿಂದ ಸೌದೆಗಳ ಖರ್ಚಿಲ್ಲದೆ ಅಡಿಗೆಯನ್ನು ಮಾಡುವರು; ಆದರೆ ಗಂಧಕದ ವಾಸನೆಯು ಅಡಿಗೆಯ ಪದಾರ್ಥಗಳಿಗೆ ವ್ಯಾಪಿಸುವುದು. ಈ ಭಾಗದಲ್ಲಿರುವ ನದಿಗಳಲ್ಲಿಯೂ ಸರೋವರಗಳಲ್ಲಿಯೂ ಕುದಿಯುವ ನೀರು ತುಂಬಿರುವುದು.

ಈ ದ್ವೀಪಗಳ ವಾಯುಗುಣವು ಹಿತಕರವಾಗಿದೆ. ಪಶ್ಚಿಮ ಮಾರುತಗಳಿಂದ ಮಳೆಯು ಹೆಚ್ಚಾಗಿ ಬರುವುದು. ಆದರೆ ದಕ್ಷಿಣ ದ್ವೀಪದ ಪಶ್ಚಿಮದಲ್ಲಿ ಪರ್ವತಗಳಿರುವುದರಿಂದ ಅದರ ಪೂರ್ವಭಾಗದಲ್ಲಿ ಮಳೆ ಕಡಿಮೆ. ಇಲ್ಲಿರುವ ಕಾಂಟರ್‌ಬರಿ ಎಂಬ ದೊಡ್ಡ ಮೈದಾನದಲ್ಲಿ ಕುರಿಗಳನ್ನು ಮೇಯಿಸುವುದಕ್ಕೆ ಯೋಗ್ಯವಾದ ಹುಲ್ಲುಗಾವಲುಗಳಿವೆ. ಬೆಟ್ಟಗಳಮೇಲೆ ಮಳೆಯು ಹೆಚ್ಚಾಗಿ ಬೀಳುವುದರಿಂದ ನದಿಗಳು ವಿಶೇಷವಾಗಿರುವುವು; ಆದರೆ ದ್ವೀಪದ ಅಗಲ ಕಡಿಮೆಯಾದುದರಿಂದ ಇವು ಸಣ್ಣವು ಮತ್ತು ಬಹು ಜೋರಾಗಿ ಹರಿಯುವುವು. ರಮಣೀಯವಾದ ಸರೋವರಗಳೂ ವಿಶೇಷವಾಗಿರುವುವು.

ಈ ದ್ವೀಪದ ಕಾಡುಗಳಲ್ಲಿ ಕೌರಿಪೈನ್ ಎಂಬ ದೊಡ್ಡ ಮರವು ವಿಶೇಷವಾಗಿ ಬೆಳೆಯುವುದು. ಇದರಿಂದ ತೊಲೆಗಳೂ ಉತ್ತಮವಾದ ಗೋಂದೂ ಸಿಕ್ಕುವುವು.

ತೀರದ ಮೈದಾನಗಳಲ್ಲಿ ಗೋಧಿಯನ್ನೂ ಮೆಡಿಟರೇನಿಯನ್ ತೀರದ ಹಣ್ಣು ಗಳನ್ನೂ ಬೆಳೆಯುವರು. ಆಸ್ಟ್ರೇಲಿಯದ ಪ್ರಾಣಿಗಳಾವುವೂ ಇಲ್ಲಿ ಇಲ್ಲ. ಯೂರೊಪಿಯನ್ನರು ಕುರಿಗಳನ್ನು ವಿಶೇಷವಾಗಿ ಮೇಯಿಸುತ್ತಿರುವರು; ಹಂದಿಗಳೂ ವಿಶೇಷವಾಗಿವೆ. ಇಲ್ಲಿ ಚಿನ್ನವೂ ಕಲ್ಲಿದ್ದಲೂ ವಿಶೇಷವಾಗಿ ಸಿಕ್ಕುತ್ತವೆ.

ಈ ದ್ವೀಪದಲ್ಲಿ ಮೋಯರಿಗಳೆಂಬ ಪೂರ್ವದ ಜನಗಳೂ ಬ್ರಿಟಿಷರೂ ಇದ್ದಾರೆ. ಮೋಯರಿಗಳು ಎತ್ತರವಾಗಿಯೂ ಸ್ಫುರದ್ರೂಪಿಗಳಾಗಿಯೂ ಕಪಿಲವರ್ಣದವರಾಗಿಯೂ ಇರುವರು. ಇವರು ಈಚೆಗೆ ಕ್ರೈಸ್ತ ಮತಕ್ಕೆ ಸೇರಿ ನಾಗರಿಕರಾಗಿರುವರು. ಆದರೆ ಇವರ ಜನಸಂಖ್ಯೆಯು ಕ್ಷೀಣವಾಗುತ್ತಿದೆ. ಈಗ ಸುಮಾರು 40,000 ಜನರಿರುವರು.

1840ರಲ್ಲಿ ಇಂಗ್ಲಿಷರು ಈ ದ್ವೀಪಗಳಲ್ಲಿ ಮೊದಲು ನೆಲೆಗೊಂಡರು. ಈಗ ಸುಮಾರು 8 ಲಕ್ಷ ಜನರಿರುವರು. ಈ ಕಾಲೊನಿಯು ಆಸ್ಟ್ರೇಲಿಯ, ಕನಡಾ ಗಳಂತೆ ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಸೇರಿದ ಸ್ವರಾಜ್ಯವುಳ್ಳ ಕಾಲೊನಿಯಾಗಿದೆ. ಇಂಗ್ಲೆಂಡಿನ ರಾಜರಿಂದ ನಿಯಮಿಸಲ್ಪಟ್ಟ ಒಬ್ಬ ಗೌರ್ನರು ಇಲ್ಲಿರುವರು.

ಆಸ್ಟ್ರೇಲಿಯದಂತೆಯೇ ಇಲ್ಲಿಯೂ ಪಶುಪಾಲನೆಯೇ ಮುಖ್ಯೋ ದ್ಯೋಗವು. ಮಾಂಸ, ಉಣ್ಣೆ, ತೊಲೆಗಳು, ಗೋಂದು ಇಲ್ಲಿಂದ ರಫ್ತಾಗು ವುವು. ಕಬ್ಬಿಣ, ಕಲ್ಲಿದ್ದಲುಗಳು ಇಲ್ಲಿ ವಿಶೇಷವಾಗಿರುವುದರಿಂದಲೂ ನದಿಗಳಿಂದ ವಿದ್ಯುಚ್ಛಕ್ತಿಯನ್ನು ಸುಲಭವಾಗಿ ಪಡೆಯಬಹುದಾದುದರಿಂದಲೂ ಈ ದ್ವೀಪ ಗಳಲ್ಲಿ ಕೈಗಾರಿಕೆಗಳು ಹೆಚ್ಚಲು ವಿಶೇಷವಾಗಿ ಅವಕಾಶವಿದೆ.

**ಆಕ್ಲೆಂಡ್.**—ಇದು ಉತ್ತರ ದ್ವೀಪದ ಈಶಾನ್ಯದಲ್ಲಿರುವ ರೇವುಪಟ್ಟಣವು. ಈ ಪಟ್ಟಣಕ್ಕೆ ಎರಡು ಕಡೆಗಳಲ್ಲಿ ಉತ್ತಮವಾದ ಬಂದರುಗಳಿರುವುವು. ಇದು ಈ ದ್ವೀಪಗಳಲ್ಲಿ ಮುಖ್ಯವಾದ ವ್ಯಾಪಾರಸ್ಥಳವು.

**ವೆಲ್ಲಿಂಗ್ಟನ್.**—ಇದು ಉತ್ತರ ದ್ವೀಪದ ದಕ್ಷಿಣದ ಕೊನೆಯಲ್ಲಿರುವ ತೀರ ಪಟ್ಟಣವು. ಇದು ರಾಜಧಾನಿಯು. ಇಲ್ಲಿ ಭೂಕಂಪದ ಭಯದಿಂದ ಮನೆಗಳನ್ನು ಮರದಿಂದ ಕಟ್ಟಿದ್ದಾರೆ.

---

## ಪಾಲಿನೇಷಿಯ

ಈ ದ್ವೀಪಗಳೆಲ್ಲವೂ ಉಷ್ಣವಲಯದಲ್ಲಿಯೇ ಇರುವುವು. ಸುತ್ತಲೂ ಸಾಗರವಿರುವುದರಿಂದ ಮಳೆಯು ಹೆಚ್ಚಾಗಿ ಬೀಳುವುದು. ಸೂರ್ಯನ ಕಿರಣ ಗಳು ತೀಕ್ಷ್ಣವಾಗಿರುವುವು; ಆದರೆ ಸಾಗರದ ಮಾರುತಗಳು ಉಷ್ಣವನ್ನು ಸ್ವಲ್ಪ ಮಟ್ಟಿಗೆ ಶಮನಮಾಡುವುವು. ಈ ದ್ವೀಪಗಳಲ್ಲಿ ಕೆಲವು ಜ್ವಾಲಾಮುಖಿ

ಗಳಿಂದ ಹುಟ್ಟಿದುವು, ಕೆಲವು ಕಾರಲ್ ಹುಳುಗಳಿಂದ ನಿರ್ಮಿತವಾದುವು. ಇವುಗಳಲ್ಲೆಲ್ಲಾ ನೆಲವು ಫಲವತ್ತಾಗಿರುವುದು. ಮಳೆ ಶಾಖ ಕ್ಷೇತ್ರಗಳು ಅನುಕೂಲವಾಗಿರುವುದರಿಂದ ಈ ದ್ವೀಪಗಳಲ್ಲಿ ಉಷ್ಣವಲಯದ ಕಾಡುಮರಗಳೂ ಇತರ ಸಸ್ಯಗಳೂ ಬೆಳೆಯುವುವು. ಈ ದ್ವೀಪಗಳಲ್ಲಿರುವ ಜನರು ಸಮುದ್ರ ಪ್ರಯಾಣದಲ್ಲಿ ನಿಪುಣರು; ಕೃಷಿಯೇ ಇವರ ಮುಖ್ಯೋದ್ಯೋಗವು. ಜನರು ಬಹಳ ಅನಾಗರಿಕರಾಗಿದ್ದರು. ನರಮಾಂಸ ಭಕ್ಷಣೆಯು ಅನೇಕ ದ್ವೀಪಗಳಲ್ಲಿ ರೂಢಿಯಾಗಿತ್ತು. ಯುದ್ಧದಲ್ಲಿ ಸೋತವರನ್ನೂ ಮುದುಕರನ್ನೂ ಕೊಂದು ತಿನ್ನುತ್ತಿದ್ದರು. ಈಚೆಗೆ ಕ್ರೈಸ್ತ ಪಾದ್ರಿಗಳ ಬೋಧನೆಯಿಂದ ಈ ಕೆಟ್ಟ ಪದ್ಧತಿಗಳು ತಪ್ಪಿ ನಾಗರಿಕತೆಯು ಹೆಚ್ಚುತ್ತಿರುವುದು.

ಈ ದ್ವೀಪಗಳಲ್ಲಿ ಮುಖ್ಯವಾದುವು ಆವುವೆಂದರೆ:—

**ನವೀನ ಕೇಲಿಡೋನಿಯ.**—ಫ್ರೆಂಚರಿಗೆ ಸೇರಿರುವ ಈ ದ್ವೀಪಸ್ತೋಮವು ಕ್ವೀನ್ಸ್‌ಲೆಂಡಿಗೆ ಪೂರ್ವದಲ್ಲಿದೆ. ಇದು ಬೆಟ್ಟಗಳಿಂದ ತುಂಬಿದೆ. ಇಲ್ಲಿ ನಿಕ್ಕಲ್ ಲೋಹವು ಹೆಚ್ಚಾಗಿ ಸಿಕ್ಕುವುದು. ಫ್ರಾನ್ಸ್ ದೇಶದಿಂದ ಗಡೀಪಾರಾದ ಖೈದಿಗಳನ್ನು ಇಲ್ಲಿಟ್ಟಿರುವರು.

**ನವೀನ ಹೆಬ್ರಡೀಸ್.**—ಈ ದ್ವೀಪಸ್ತೋಮವು ಬ್ರಿಟಿಷರಿಗೂ ಫ್ರೆಂಚರಿಗೂ ಸೇರಿದೆ. ಕಾಡುಗಳು ಹೆಚ್ಚಾಗಿವೆ.

**ಸಾಲೊಮನ್ ದ್ವೀಪಗಳು.**—ಇಲ್ಲಿಯ ಜನರು ಯುದ್ಧಪ್ರಿಯರು. ದೋಣಿಗಳನ್ನು ಕಟ್ಟುವುದರಲ್ಲಿ ನಿಪುಣರು. ಇವರೂ ನವೀನ ಹೆಬ್ರಡೀಸಿನ ಜನರೂ ಪೂರ್ವದಲ್ಲಿ ಯುದ್ಧದಲ್ಲಿ ಸೋತವರ ಮಾಂಸವನ್ನು ತಿನ್ನುತ್ತಿದ್ದರು; ಈಚೆಗೆ ನಾಗರಿಕರಾಗಿದಾರೆ. ಈ ದ್ವೀಪಗಳು ಬ್ರಿಟಿಷರಿಗೆ ಸೇರಿವೆ. ಹಿಂದೆ ಉತ್ತರ ಭಾಗವು ಜರ್ಮನಿಯವರಿಗೆ ಸೇರಿದ್ದಿತು.

**ಫಿಜೀ ದ್ವೀಪಗಳು.**—ಬ್ರಿಟಿಷರಿಗೆ ಸೇರಿರುವ ಈ ದ್ವೀಪಸ್ತೋಮವು ನವೀನ ಹೆಬ್ರಡೀಸಿಗೆ ಪೂರ್ವದಲ್ಲಿ ಇದೆ. ಈ ದ್ವೀಪಸ್ತೋಮವು 150 ದ್ವೀಪಗಳನ್ನೊಳಗೊಂಡಿದೆ. ಈ ದ್ವೀಪಗಳೆಲ್ಲಾ ತೆಂಗು, ತಾಳೆ ಮೊದಲಾದ ಮರಗಳಿಂದ ನೋಡುವುದಕ್ಕೆ ರಮಣೀಯವಾಗಿರುವುವು. ಸಕ್ಕರೆಯನ್ನೂ ಕಬ್ಬನ್ನೂ ರಫ್ತು ಮಾಡುತ್ತಾರೆ. ಇಲ್ಲಿನ ಜನರು ಎತ್ತರವಾಗಿಯೂ ನೋಡುವುದಕ್ಕೆ ಸುಂದರವಾಗಿಯೂ ಇರುವರು; ಇವರು ಧೈರ್ಯಶಾಲಿಗಳು. ಪೂರ್ವದಲ್ಲಿ ನರಮಾಂಸವನ್ನು ತಿನ್ನುತ್ತಿದ್ದರು. ಈಚೆಗೆ ನಾಗರಿಕರಾಗಿದಾರೆ; ಪಾದರಿಗಳ ಸ್ಕೂಲುಗಳಿಗೆ ಹೋಗಿ ವಿದ್ಯೆಯನ್ನು ಕಲಿಯುತಲಿದಾರೆ. ಕೃಷಿಯಲ್ಲಿಯೂ ದೋಣಿಗಳನ್ನು ಕಟ್ಟುವುದರಲ್ಲಿಯೂ ಕುಶಲರಾಗಿದಾರೆ. ಈ ದ್ವೀಪಗಳಲ್ಲಿ

1 ಲಕ್ಷ ಜನಗಳಿರುವರು. ಅವರಲ್ಲಿ 4,000 ಜನರು ಯೂರೋಪಿಯನ್ನರು. ಈಚೆಗೆ ಅನೇಕ ಜನ ಇಂಡಿಯಾದೇಶದ ಕೂಲಿಗಳು ಇಲ್ಲಿ ಕೆಲಸ ಮಾಡು ತ್ತಿರುವರು. ಉತ್ತರ ಅಮೆರಿಕ ಖಂಡದಿಂದ ಆಸ್ಟ್ರೇಲಿಯಕ್ಕೆ ಮಾರ್ಗವು ಈ ದ್ವೀಪಗಳ ಮೇಲೆ ಹಾದುಹೋಗುವುದು. ಸುವಾ ಎಂಬುದು ಮುಖ್ಯ ಪಟ್ಟಣವು. ಒಳ್ಳೆಯ ಬಂದರನ್ನು ಹೊಂದಿದೆ.

**ಟೌಂಗ ಅಥವಾ ಫ್ರೆಂಡ್ಲಿ ದ್ವೀಪಗಳು.**—ಬ್ರಿಟಿಷರಿಗೆ ಸೇರಿರುವ ಈ ದ್ವೀಪಗಳು ಫಿಜೀ ದ್ವೀಪಗಳಿಗೆ ಆಗ್ನೇಯದಲ್ಲಿವೆ. ಇಲ್ಲಿಯ ಜನಗಳು ಈ ಭಾಗದ ದ್ವೀಪಗಳವರಲ್ಲೆಲ್ಲಾ ಅತ್ಯಂತ ಬುದ್ಧಿಶಾಲಿಗಳು; ಮನೆಯನ್ನು ಕಟ್ಟುವುದ ರಲ್ಲಿಯೂ ದೋಣಿಗಳನ್ನು ಮಾಡುವುದರಲ್ಲಿಯೂ ಹಡಗುಗಳನ್ನು ನಡೆಸುವುದ ರಲ್ಲಿಯೂ ನಿಪುಣರು. ಈಚೆಗೆ ಕ್ರೈಸ್ತ ಮತಕ್ಕೆ ಸೇರಿ ಯೂರೋಪಿಯನ್ನರಂತೆ ಉಡಿಗೆ ತೊಡಿಗೆಗಳನ್ನು ಧರಿಸಿ ವಿದ್ಯಾಭ್ಯಾಸವನ್ನು ಹೊಂದುತ್ತಿರುವರು.

**ಸೊಸೈಟಿ ದ್ವೀಪಗಳು.**—ಇವು ಟೌಂಗಾ ದ್ವೀಪಗಳಿಗೆ ಪೂರ್ವದಲ್ಲಿವೆ. ಇವು ಫ್ರೆಂಚರಿಗೆ ಸೇರಿವೆ. ಇಲ್ಲಿಯ ಬೆಟ್ಟಗಳು ಸುಂದರವಾದ ವನಗಳಿಂದಲೂ ಆಳವಾದ ಕಣಿವೆಗಳಿಂದಲೂ ವೇಗವಾಗಿ ಹರಿಯುವ ನದಿಗಳಿಂದಲೂ ನೋಡು ವುದಕ್ಕೆ ರಮಣೀಯವಾಗಿವೆ. ಆದುದರಿಂದ ಈ ದ್ವೀಪಗಳನ್ನು 'ಪೆಸಿಫಿಕ್ ಸಾಗರದ ಉದ್ಯಾನವನ'ವೆಂದು ಕರೆಯುವರು.

**ಸಾಂಡ್‌ವಿಚ್ ದ್ವೀಪಗಳು.**—ಇವು ನ್ಯೂಜೀಲೆಂಡಿಗೆ ಉತ್ತರದಲ್ಲಿ ಸುಮಾರು 4,000 ಮೈಲಿಗಳ ಆಚೆ ಇರುವುವು. ಇವು ಅಮೆರಿಕದ ಸಂಯುಕ್ತ ಸಂಸ್ಥಾನಗಳಿಗೆ ಸೇರಿವೆ. ಉತ್ತರ ಅಮೆರಿಕ, ಜಪಾನ್, ನ್ಯೂಜೀಲೆಂಡ್‌ಗಳ ಸಾಗರ ಮಾರ್ಗಗಳು ಇಲ್ಲಿ ಸಂಧಿಸುವುವು. ವ್ಯಾಪಾರವು ವಿಶೇಷವಾಗಿ ನಡೆ ಯುತ್ತಿದೆ. ಹೊನಲೂಲು ಎಂಬುದು ಮುಖ್ಯ ಪಟ್ಟಣ ಮತ್ತು ರೇವುಪಟ್ಟಣವು. ವಾಂಕುವರ್, ಸಾನ್‌ಫ್ರಾನ್‌ಸಿಸ್ಕೊ, ಯಾಕೊಹಾಮ, ಆಕ್ಲೆಂಡ್ ರೇವುಪಟ್ಟಣ ಗಳಿಂದ ಅನೇಕ ಹಡಗುಗಳು ಇಲ್ಲಿಗೆ ಬರುವುವು. ಈ ದ್ವೀಪಗಳಲ್ಲಿ ವಿಶೇಷ ವಾಗಿ ಬೆಳೆಯುವ ಕಬ್ಬಿನಿಂದ ಮಾಡಲ್ಪಟ್ಟ ಸಕ್ಕರೆಯು ರಫ್ತಾಗುತ್ತದೆ.

ಸಂಪೂರ್ಣ



959—28. ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ.